# ಪತ್ರಮಾಲೆ



ಪ್ರಕಾಶಕರು :

ಶ್ರೀರಾಮಕೃಷ್ಣಾಶ್ರಮ

ಮೈಸೂರು.



ಶ್ರೀ ವಿವೇಕಾನಂದ ಸ್ವಾಮಿಗಳವರು

" ತ್ಯಾಗ ಮತ್ತು ಸೇವೆ, ಇವೇ ಭರತಖಂಡದ ಹುಟ್ಟು ಆದರ್ಶಗಳು "

# ಮುನ್ನುಡಿ

ಸ್ವಾಮಿ ವಿವೇಕಾನಂದರ ಸಾಹಿತ್ಯ ನಿಧಿಯಲ್ಲಿ ಅವರ ಪತ್ರಗಳಿಗೆ ಒಂದು ಪ್ರತ್ಯೇಕ ಸ್ಥಾನವಿದೆ. ಹೃದಯವನ್ನು ಸೂರೆಗೊಳ್ಳುವ ಅವರ ಉಪನ್ಯಾಸಗಳನ್ನು ಕೇಳುವುದಕ್ಕೆ ಸಹಸ್ರಾರು ಮಂದಿ ಪೌರ್ವ ಮತ್ತು ಪಾಶ್ಚಾತ್ಯ ದೇಶಗಳಲ್ಲಿ ಸೇರುತ್ತಿದ್ದರು. ಅವರು ಬರೆದ ಪುಸ್ತಕಗಳನ್ನು ಅಷ್ಟೇ ಜನ ಕುತೂಹಲದಿಂದ ಓದಲು ಕಾಯುತ್ತಿದ್ದರು. ಇವರು ಪತ್ರವನ್ನು ಬರೆದದ್ದು ಅಂದಿನ ಕೆಲವರು ಆಪ್ತಸ್ನೇಹಿತರು ಮತ್ತು ಶಿಷ್ಯರಿಗೆ. ಸಹಸ್ರಾರು ಜನ ನೆರೆದ ಸಭೆಯ ಮುಂದೆ ನಿಂತು ಕೊಡುವ ಬಹಿರಂಗ ಉಪನ್ಯಾಸದಂತಿಲ್ಲ ಇಲ್ಲಿಯ ವಾತಾವರಣ. ನಿರ್ಜನಪ್ರದೇಶದಲ್ಲಿ ಗುರು ತನ್ನ ಆಪ್ತ ಶಿಷ್ಯನಿಗೆ ಕೊಡುವ ಮಂತ್ರೋಪದೇಶದಂತಿದೆ ಈ ಪತ್ರಗಳು. ಇವರ ಪತ್ರಗಳು ಒಂದು ಶಕ್ತಿ ಸಂಜೀವಿನಿ. ತಮ್ಮ ಶಿಷ್ಯರೆದೆಯಲ್ಲಿ ಬಿತ್ತಿದ ಉಜ್ವಲ ದೇಶಪ್ರೇಮದ ಬೀಜಗಳಿವು. ದೀನರ, ಪದದಳಿತರ, ದುಃಖಿಗಳ, ನಿರ್ಭಾಗ್ಯರ ಸ್ಥಿತಿಗೆ ಮನಮರುಗುವಂತೆ ಮಾಡಿದ ನುಡಿಗಳಿವು. ತಮ್ಮ ಸ್ವಂತ ಸುಖಕ್ಕೆ ತಿಲಾತರ್ಪಣ ಕೊಟ್ಟು ಅವರನ್ನು ದೀನರ ಸೇವೆಗಾಗಿ ಸೊಂಟಕಟ್ಟಿ ನಿಲ್ಲುವಂತೆ ಪ್ರೇರೇಪಿಸಿದ ಮಹಾ ವಾಕ್ಯಗಳಿವು.

ಸ್ವಾಮಿ ವಿವೇಕಾನಂದರು ತಮ್ಮ ಪತ್ರಗಳಲ್ಲಿ ಭಾರತೀಯರ ಹಿತಕ್ಕಾಗಿ ವಿಚಾರಿಸದ ಸಮಸ್ಯೆಯೇ ಇಲ್ಲವೆನ್ನಬಹುದು. ಪಾಶ್ಚಾತ್ಯ ದೇಶಗಳು ಇನ್ನೂ ಅನಾಗರಿಕರಾಗಿ, ಕಾಡುಮೇಡುಗಳಲ್ಲಿ, ಮೃಗಗಳಂತೆ ಗುಹೆ ಪೊದೆಗಳಲ್ಲಿ ವಾಸಮಾಡುತ್ತಿದ್ದ ಕಾಲದಲ್ಲೇ ಭಾರತ ವರ್ಷದಲ್ಲಿ, ಇಪ್ಪತ್ತನೆಯ ಶತಮಾನದ ನಾಗರಿಕತೆಯನ್ನೂ ಕೂಡ ಅಣಕಿಸುವಂತಹ ಒಂದು ನಾಗರಿಕತೆ ಇತ್ತು. ಇಲ್ಲಿಯ ಧರ್ಮ, ಇಲ್ಲಿಯ ತತ್ವಶಾಸ್ತ್ರ, ಇಲ್ಲಿಯ ಋಷಿಗಳು ಹಾಡಿದ ಉಪನಿಷತ್ತು ಮತ್ತು ಗೀತೆ ಇವುಗಳನ್ನು ಮೀರಿಸಬಲ್ಲುದು ಆವುದಿತ್ತು ಅಂದು? ಆದರೆ ಎಲ್ಲಾ ಗತವೈಭವವಾಗಿದೆ ಇಂದು. ಕಳೆದ ಸವಿದಿನಗಳನ್ನು ಮೆಲುಕು ಹಾಕುವುದೇ ನಮಗೆ ಉಳಿದಿರುವುದು. ಭಾರತವರ್ಷ ಇಂಥ ಜಗದ ಕಸದ ಬುಟ್ಟಿಯೊಳಗೆ ಇರುವುದು. ಇಂತಹ ಅಧೋಗತಿಗೆ ಕಾರಣಗಳೇನು ಎಂದು ಕೂಲಂ

ಕುಶವಾಗಿ ವಿಚಾರಿಸಿರುವರು; ಮತ್ತೊಮ್ಮೆ ಭಾರತವರ್ಷ ಉಳಿದ ಜನಾಂಗಗಳೆದುರಿಗೆ ತಲೆ ಎತ್ತಿ ನಿಲ್ಲಬೇಕಾದರೆ ನಮ್ಮ ಕುಂದುಕೊರತೆ ಹೇಗೆ ಸರಿಮಾಡಿಕೊಳ್ಳಬೇಕು ಎಂಬುದನ್ನು ತಿಳಿಸಿರುವರು.

ಸ್ವಾಮಿ ವಿವೇಕಾನಂದರು ತಮ್ಮ ಮುಕ್ತಿಗೋಸುಗವಾಗಿ ಜಗತ್ತಿಗೆ ಬಂದವರಲ್ಲ. ಬ್ರಹ್ಮಾನಂದದ ಅಮಲಿನಲ್ಲಿ ಮಾಯೆಯಲ್ಲಿರುವ ದುಃಖವನ್ನು ಮರೆತವರಲ್ಲ. ಎಲ್ಲಿಯವರೆವಿಗೂ ಜಗದಲ್ಲಿ ಜೀವವೊಂದು ಬಂಧನದಲ್ಲಿ ನರಳುತ್ತಿರುವುದೋ ಅಲ್ಲಿಯವರೆವಿಗೂ ಪುನಃ ಪುನಃ ಜನ್ಮವೆತ್ತಿ ಬರುತ್ತೇನೆಂದು ತಮ್ಮ ಮುಕ್ತಿಯನ್ನು ಕೂಡ ಜಗದ ಕಲ್ಯಾಣಕ್ಕಾಗಿ ಈಡಾಡಿದ ಮಹಾ ಪುರುಷರವರು. ಅವರು ಬರಿಯ ದೇಶಭಕ್ತರಲ್ಲ. ಮನೆಗಿಂತ ದೇಶ ದೊಡ್ಡದೇನೋ ನಿಜ, ಆದರೆ ದೇಶಕ್ಕಿಂತ ಜಗತ್ತು ದೊಡ್ಡದು. ಅವರ ಪ್ರೇಮಕ್ಕೆ ದೇಶದ ಮೇರೆ ಇಲ್ಲ. ಜಾತಿಯ ಮೇರೆ ಇಲ್ಲ. ವರ್ಣದ ಮೇರೆ ಇಲ್ಲ. ವಿಶ್ವಕ್ಕೇ ಅನುಕಂಪಪಡುವ ಹೃದಯ ಅವರದು. "ಪುನಃ ಪುನಃ ಜನ್ಮವೆತ್ತಿ ಬರಲು ಇಚ್ಛಿಸುವೆನು. ಸಾವಿರಾರು ಕಷ್ಟನಷ್ಟಗಳನ್ನು ಅನುಭವಿಸಲು ಸಿದ್ಧನಾಗಿರುವೆನು. ಇದರಿಂದ ಇರುವ ಒಬ್ಬನೇ ದೇವನನ್ನು, ನಾನು ನಂಬುವ ಒಬ್ಬನೇ ದೇವನನ್ನು, ಎಲ್ಲ ಜೀವಿಗಳ ಮೊತ್ತವನ್ನು ಪೂಜೆಮಾಡುವ—ಎಲ್ಲಕ್ಕಿಂತ ಹೆಚ್ಚಾಗಿ ದುರುಳನಾದ ನನ್ನ ದೇವನನ್ನು, ದುಃಖಿಯಾದ ನನ್ನ ದೇವನನ್ನು, ಎಲ್ಲಾ ಜನಾಂಗದ, ಎಲ್ಲಾ ಜಾತಿಯ, ದೀನರಾದ ನನ್ನ ದೇವರನ್ನು ಪೂಜಿಸಬೇಕೆಂಬುವೇ ನನ್ನ ಪ್ರಾರ್ಥನೆಯ ಗುರಿ." ಇದರಿಂದ ಅವರ ಪ್ರೇಮದ ಮೇರೆ ಎಷ್ಟು ವಿಶಾಲವಾದುದೆಂದು ಗೊತ್ತಾಗುವುದು.

ಅವರ ಹೃದಯ ದೇವಭಕ್ತಿ, ವಿಶ್ವಪ್ರೀತಿ, ದೇಶ ಪ್ರೀತಿಗಳೆಂಬ ತ್ರಿವೇಣೀ ಸಂಗಮ ಸ್ಥಳ. ಅವರ ಭಾಷೆ ನೇರವಾಗಿ ಹೃದಯದಿಂದ ಬಂದುದು. ನೇರವಾಗಿ ಹೃದಯಕ್ಕೇ ತಾಕುವುದು. ಪ್ರಜ್ವಲಿಸುವ ಭಾವಾಗ್ನಿ ಕುಂಡದಿಂದ ಸಿಡಿದ ಕಿಡಿಗಳಂತಿವೆ ಇವರ ಬರವಣಿಗೆ. ಅಲ್ಲಿ ದೇವಭಕ್ತಿ, ವಿಶ್ವಪ್ರೀತಿ, ದೇಶಭಕ್ತಿ ತುಂಬಿ ತುಳುಕಾಡುತ್ತಿವೆ. ಯಾರು ಅದನ್ನು ಓದುವರೋ ಅವರಿಗೆ ಇದರ ಕಾವು ತಟ್ಟದೆ ಇರದು. ಅವರ ಮನಸ್ಸಿನ ಮೇಲೆ ಪರಿಣಾಮವನ್ನು ಮಾಡದೆ ಇರದು.

ಪ್ರಕಾಶಕರು.

## (೧)

### ಜಯ ಭಗವಾನ್

ಬಾಗ್ ಬಜಾರ್, ಕಲ್ಕತ್ತಾ,
೪ ನೇ ಜುಲೈ, ೧೮೮೯.

ಪೂಜ್ಯರಾದ ಮಹಾಶಯ ನೆನ್ನೆ ನಿಮ್ಮ ಪತ್ರದಲ್ಲಿನ ವಿಷಯವೆಲ್ಲ ತಿಳಿದು ಬಹಳ ಸಂತೋಷವಾಯಿತು. ಗ....ನು ನಿಮಗೆ ಕಾಗದ ಬರೆಯುವಂತೆ ಅವನಿಗೆ ತಿಳಿಸೆಂದು ನೀವು ಹೇಳಿರುವಿರಿ. ಆದರೆ ಅದು ಸಾಧ್ಯವಾಗುವಂತೆ ಕಾಣುವುದಿಲ್ಲ. ಅವರೇನೊ ನಮಗೆ ಪತ್ರವನ್ನು ಕಳುಹಿಸುತ್ತಿದ್ದರೂ, ಒಂದು ಸ್ಥಳದಲ್ಲಿ ಎರಡು ಮೂರು ದಿನಗಳಿಗಿಂತ ಹೆಚ್ಚು ನಿಲ್ಲದೆ ಇರುವುದರಿಂದ ನಮ್ಮ ಪತ್ರಗಳಾವುವೂ ಅವರಿಗೆ ಸೇರುವಂತೆ ಕಾಣುವುದಿಲ್ಲ.

ನನ್ನ ಪೂರ್ವಾಶ್ರಮದ ಬಂಧುವೊಬ್ಬನು ಸಿಮೂಲತಲದಲ್ಲಿ [ವೈದ್ಯನಾಥದ ಹತ್ತಿರ] ಒಂದು ಬಂಗಲೆಯನ್ನು ಕೊಂಡಿರುವನು. ಅದು ಆರೋಗ್ಯ ಸ್ಥಳವೆಂದು ಪ್ರಖ್ಯಾತಿಯಾದುದರಿಂದ ಅಲ್ಲಿ ನಾನು ಕೆಲವು ದಿನಗಳು ಇದ್ದೆನು. ಬೇಸಗೆ ಕಾಲದ ತಾಪ ಹೆಚ್ಚಾದುದರಿಂದ ನನಗೆ ಅತಿಸಾರದ ಬಾಧೆ ತಗಲಿತು. ಅದಕ್ಕೋಸುಗ ನಾನು ಆ ಊರನ್ನು ಬಿಟ್ಟಿರುವೆನು.

ಕಾಶಿಗೆ ಹೋಗಬೇಕು; ಅಲ್ಲಿ ತಮ್ಮನ್ನು ಕಂಡು ಪುಣ್ಯವಿಷಯಗಳನ್ನು ಕುರಿತು ಮಾತನಾಡಿ ಪುನೀತನಾಗಬೇಕು ಎಂಬ ಬಯಕೆ ನನ್ನ ಹೃದಯದಲ್ಲಿ ಎಷ್ಟು ಇದೆ ಎಂದು ಬರೆಯಲು ಅಸದಳ. ಆದರೆ ಎಲ್ಲಾ ಈಶ್ವರೇಚ್ಛೆ. ಪೂರ್ವಜನ್ಮದ ಹೃದಯ ಸಂಬಂಧ ನಮ್ಮಿಬ್ಬರಲ್ಲಿ ಪಸಿದೆಯೊ ನನಗೇ ಆಶ್ಚರ್ಯವಾಗುತ್ತದೆ! ಕಲ್ಕತ್ತಾ ನಗರಿಯಲ್ಲಿ ಅನೇಕ ಶ್ರೀಮಂತರ ಪದವೀಧರರ ಪ್ರೀತಿವಿಶ್ವಾಸಗಳಿಗೆ ಪಾತ್ರನಾಗಿದ್ದರೂ, ಅವರ ಸಂಗದಿಂದ ಬೇಜಾರು ಹಿಡಿಯುವುದು. ಆದರೆ ನಿಮ್ಮ ಕೇವಲ ಒಂದು ದಿನದ ಪರಿಚಯದಿಂದಲೇ ನನ್ನ ಹೃದಯಕ್ಕೆ ಅತ್ಯಾನಂದವಾಯಿತು. ನಿಮ್ಮನ್ನು ನನ್ನ ಜೀವನದ ನಿಕಟಬಂಧುವೆಂದೂ ಗೆಳೆಯನೆಂದೂ ಭಾವಿಸುವೆನು! ಅದಕ್ಕೆ ಮೊದಲನೆ ಕಾರಣ ನೀವು ದೇವರ ಪ್ರಿಯಭಕ್ತರು. ಎರಡನೆಯದ್ದೋ, ಬಹುಶಃ ಕಾಳಿದಾಸನು ಹೇಳಿದಂತೆ.

ತಚ್ಚೇತಸಾ ಸ್ಮರತಿ ನೂನಮಬೋಧಪೂರ್ವಂ
ಭಾವಸ್ಥಿರಾಣಿ ಜನನಾಂತರಸೌಹೃದಾನಿ.
—ಕಾಳಿದಾಸ, ಶಕುಂತಲ v. 6-7.

[ಗೋಚರವಿಲ್ಲದೆ ನೆನಪಿಗೆ ಬಂದ ಪೂರ್ವಜನ್ಮಗಳ ಅತಿನಿಕಟ ಸಂಬಂಧವಿರಬಹುದು.]

ನೀವು ಕೊಡುವ ಬುದ್ಧಿವಾದ, ಅನುಭವ ಮತ್ತು ಆಧ್ಯಾತ್ಮಿಕ ಅನುಷ್ಠಾನ ಬಲದಿಂದ ಬಂದವುಗಳು. ಅದಕ್ಕೆ ನಾನು ಚಿರಋಣಿಯಾಗಿರುವೆನು. ತಲೆಯಲ್ಲಿ ಯಾವು ಯಾವುದೋ ಅಭಿನವ ಆಲೋಚನೆಗಳನ್ನು ತುಂಬಿಕೊಂಡಿರುವುದರಿಂದ ಕೆಲವು ಸಮಯಗಳಲ್ಲಿ ಅದರಿಂದ ದುಃಖಿಸಬೇಕೆಂಬುದೇನೋ ನಿಜ. ನನಗೂ ಹಾಗೆಯೇ ತೋರುತ್ತದೆ.

ಆದರೆ ನನ್ನ ಈಗಿನ ಬಾಧೆ ಬೇರೆಯ ವಿಧವು. ಕರುಣಾಮಯನ ಇರವಿನಲ್ಲಿ ನೆಚ್ಚುಗೆಗೆಟ್ಟಿಲ್ಲ. ಅದು ಎಂದಿಗೂ ಕೆಡುವಂತೆಯೂ ಇಲ್ಲ. ಶಾಸ್ತ್ರಗಳಲ್ಲಿ ನನಗೆ ಇರುವ ನಂಬಿಕೆ ಅಚಲವಾದುದು. ಆದರೆ ದೈವೇಚ್ಛೆಯಂತೆ ನನ್ನ ಜೀವನ ಕಳೆದ ಆರೇಳು ವರ್ಷಗಳಿಂದಲೂ ಹಲವು ವಿಧದ ಅಡ್ಡಿ ಆತಂಕಗಳಿಂದ ತುಂಬಿದೆ. ನನ್ನ ಪಾಲಿಗೆ ಆದರ್ಶಶಾಸ್ತ್ರ ದೊರಕಿದೆ. ಆದರ್ಶ ಪುರುಷನನ್ನು ನೋಡಿದ ಭಾಗ್ಯ ನನ್ನದಾಗಿದೆ. ಆದರೂ ಇವುಗಳೊಂದಿಗೆ ನನ್ನ ಜೀವನದ ಪರಮಗುರಿಯನ್ನು ಸೇರಲು ಸೋತಿರುವೆನು. ಇದೇ ನನಗೆ ಪರಮದುಃಖ.

ಅದರಲ್ಲಿಯೂ ಕಲ್ಕತ್ತೆಯು ಹತ್ತಿರವಿದ್ದರೆ ನನ್ನ ಉದ್ಯಮದಲ್ಲಿ ಉತ್ತೀರ್ಣನಾಗುವಂತೆ ಇಲ್ಲ. ಕಲ್ಕತ್ತೆಯಲ್ಲಿ ನನ್ನ ತಾಯಿಯವರು ಮತ್ತು ಇಬ್ಬರು ಸಹೋದರರು ವಾಸಿಸುತ್ತಿರುವರು. ನಾನೇ ಹಿರಿಯ ಮಗ. ಎರಡನೆಯವನು ಮೊದಲನೇ ಆರ್ಟ್ಸ್ ಪರೀಕ್ಷೆಗೆ ಓದುತ್ತಿರುವನು. ಮೂರನೆಯವನು ಸಣ್ಣವನು.

ಅವರು ಮೊದಲು ಸಮೃದ್ಧಿಯಾಗಿದ್ದರು. ನಮ್ಮ ತಂದೆಯ ಕಾಲಾನಂತರ ಅವರಿಗೆ ಬಹಳ ಕಷ್ಟವಾಗಿದೆ. ಕೆಲವು ವೇಳೆ ಅವರು ಉಪವಾಸವೂ ಮಾಡಬೇಕಾಗಿದೆ. ಈ ಕಷ್ಟದಲ್ಲಿರುವುದು ಸಾಲದೆ ಅದರಲ್ಲಿ ಪರಮಾವಧಿ ಮುಟ್ಟಿಸಲು, ಕೆಲವು ಬಂಧುಗಳು ಅವರು ತೊಂದರೆಯಲ್ಲಿರುವುದೇ

ಒಳ್ಳೆಯ ಅವಕಾಶವೆಂದು ತಿಳಿದು, ಅವರನ್ನು ಪಿತ್ರಾರ್ಜಿತದ ಮನೆಯಿಂದಲೂ ಓಡಿಸಿರುವರು. ಮುನ್ಸಿಫ್ ನ್ಯಾಯಾಸ್ಥಾನದಲ್ಲಿ ದಾವಾ ಹಾಕಿ ಮನೆಯ ಒಂದು ಭಾಗವನ್ನು ಪಡೆದುಕೊಂಡರೂ ಬಡತನದ ಹೊರೆ ಅವರ ಮೇಲಿರುವುದು. ವ್ಯಾಜ್ಯ ನ್ಯಾಯಾಸ್ಥಾನದಲ್ಲಿ ನಡೆಯುತ್ತಿರುವುದು.

ಕಲ್ಕತ್ತೆಯ ಹತ್ತಿರ ವಾಸಮಾಡುತ್ತಿರುವುದರಿಂದ ಅವರ ಕಷ್ಟಸ್ಥಿತಿಯನ್ನು ನಾನು ನೋಡಬೇಕಾಗಿರುವುದು. ರಾಜಸಗುಣ ಮೇಲಾಗಿ ನನ್ನ ಅಹಂಕಾರ ಕೆಲವು ವೇಳೆ ಕಾರ್ಯೋನ್ಮುಖನಾಗುವ ಆಸೆಯಲ್ಲಿ ಕೊನೆಗಾಣುವುದು. ಅಂತಹ ಸಮಯದಲ್ಲಿ, ಮನಸ್ಸಿನಲ್ಲಿ ಒಂದು ತುಮುಲಯುದ್ಧವಾಗುವುದು. ಅದಕ್ಕೇ ನನ್ನ ಮನಸ್ಸು ಅತಿಭಯಂಕರವಾಗಿದೆ ಎಂದು ಬರೆದದ್ದು. ಈಗ ನ್ಯಾಯಾಸ್ಥಾನದಲ್ಲಿ ನಡೆಯುತ್ತಿದ್ದ ವ್ಯಾಜ್ಯ ಕೊನೆಗೊಂಡಿದೆ. ಎಲ್ಲಾ ವಿಷಯಗಳನ್ನು ಇತ್ಯರ್ಥಮಾಡುವುದಕ್ಕೆ ಇಲ್ಲಿ ಕೆಲವು ದಿನಗಳು ಇದ್ದು ನಂತರ ಈ ಸ್ಥಳದಿಂದ ಕೊನೆಯಸಾರಿ ಬಿಟ್ಟು ಹೋಗುವಂತೆ ನನಗೆ ಆಶೀರ್ವದಿಸಿ.

ಆಪೂರ್ಯಮಾಣಮಚಲ ಪ್ರತಿಷ್ಠಂ
ಸಮುದ್ರಮಾಪಃ ಪ್ರವಿಶನ್ತಿ ಯದ್ವತ್ ।
ತದ್ವತ್ ಕಾಮಾ ಯಂ ಪ್ರವಿಶನ್ತಿ ಸರ್ವೇ
ಸ ಶಾನ್ತಿಮಾಪ್ನೋತಿ ನ ಕಾಮಕಾಮೀ ॥

[ಪೂರ್ಣವಾದ, ಪ್ರಶಾಂತ ಸಾಗರಕ್ಕೆ ನದಿಗಳು ಸೇರುವಂತೆ ಯಾವ ಮುನಿಯಲ್ಲಿ ಎಲ್ಲಾ ಆಸೆಯ ಪ್ರವಾಹಗಳು ಸೇರಿದರೂ, ಯಾರು ಅಚಲನಾಗಿರುವನೋ ಅಂತಹವನಿಗೆ ಶಾಂತಿ ದೊರಕುವುದು. ಆಸೆಗಳನ್ನು ಅರಸಿ ಹೋಗುವವನಿಗಲ್ಲ.]

ಸರ್ವೋತ್ಕೃಷ್ಟ ದೈವೀಶಕ್ತಿ ಎನ್ನೆಡೆಗೆ ಹರಿದುಬಂದು ಅದನ್ನು ಪೋಷಿಸಿ ಬಲಯುತವನ್ನಾಗಿ ಮಾಡಲಿ. ನನ್ನಿಂದ ಎಲ್ಲಾ ಮಿಥ್ಯವಾದ ಮಾಯಾ ವಿಲಾಸಗಳೂ ದೂರಕ್ಕೆ ಸರಿಯಲಿ, ಎಂದು ಆಶೀರ್ವದಿಸಿ. ಏಕೆಂದರೆ "ಶಿಲುಬೆಯನ್ನು ನಾವು ತೆಗೆದುಕೊಂಡಿರುವೆವು. ನೀನು ಅದನ್ನು ನಮ್ಮ ಕೈಗೆ ಕೊಟ್ಟಿರುವೆ. ಅದನ್ನು ಮರಣಕಾಲದವರೆವಿಗೂ ಸಹಿಸುವಂತೆ ಶಕ್ತಿಯನ್ನು ನೀಡು" [Imitation of Christ]

ನಾನು ಈಗ ಕಲ್ಕತ್ತೆಯಲ್ಲಿರುವೆನು. ನನ್ನ ವಿಳಾಸ "ಬಲರಾಮ ಬಾಬು. ೫೭ ರಾಮಕಾಂತ ಬೋಸ್ ಬೀದಿ, ಬಾಗಬಜಾರ್ ಕಲ್ಕತ್ತ."

ಇತಿ ನಿಮ್ಮ,
ವಿವೇಕಾನಂದ.

(೨)

ಜಯ ಭಗವಾನ್

ಬಾಬು ಸತೀಶ್ ಚಂದ್ರ ಮುಖರ್ಜಿ
ಗೋರಾಬಜಾರ್, ಘಾಜೀಪುರ್
೨೧ ನೆ ಜನವರಿ ೧೮೯೦.

ಪ್ರಿಯ ಮಹಾಶಯರೆ,

ಮೂರು ದಿನಗಳ ಹಿಂದೆ ನಾನು ಘಾಜೀಪುರವನ್ನು ತಲುಪಿದೆನು. ಇಲ್ಲಿ ನಾನು ನನ್ನ ಬಾಲ್ಯ ಸ್ನೇಹಿತನಾದ ಬಾಬು ಸತೀಶ್ ಚಂದ್ರ ಮುಖರ್ಜಿಯವರ ಮನೆಯಲ್ಲಿರುವೆನು. ಸ್ಥಳ ತುಂಬಾ ಚೆನ್ನಾಗಿದೆ. ಹತ್ತಿರದಲ್ಲೇ ಗಂಗಾನದಿ ಹರಿಯುತ್ತಿದೆ. ಆದರೆ ಸ್ನಾನಕ್ಕೆ ತುಂಬಾ ತೊಂದರೆ. ಹೋಗುವುದಕ್ಕೆ ಸರಿಯಾದ ದಾರಿ ಇಲ್ಲ. ಮರಳಿನಲ್ಲಿ ನಡೆದುಕೊಂಡು ಹೋಗುವುದು ಅತಿ ಕಷ್ಟ. ನಾನು ನಿಮಗೆ ಹೇಳಿದ ಆ ದಯಾಳು ಈಶಾನ ಚಂದ್ರ ಮುಖರ್ಜಿಯವರ ತಂದೆ ಇಲ್ಲಿರುವರು. ಇಂದು ಅವರು ಕಾಶಿಗೆ ಹೊರಡುವರು. ಅಲ್ಲಿಂದ ಕಲ್ಕತ್ತೆಗೆ ಪ್ರಯಾಣ ಮಾಡುವರು. ನನಗೂ ಕಾಶಿಗೆ ಹೋಗಬೇಕೆಂಬ ಆಸೆ ತುಂಬಾ ಇತ್ತು. ಆದರೆ ನಾನು ಇಲ್ಲಿಗೆ ಬಂದ ಉದ್ದೇಶ—ಅಂದರೆ ಪವಹರಿ ಬಾಬುಗಳ ದರ್ಶನ ಇನ್ನೂ ಸಿಕ್ಕಿಲ್ಲ. ಆದಕಾರಣವೆ ಕೆಲವು ದಿನಗಳ ತಡ ಅನಿವಾರ್ಯವಾಗುವುದು. ಇಲ್ಲಿ ಎಲ್ಲಾ ಚೆನ್ನಾಗಿರುವುದು. ಜನ ಒಳ್ಳೆಯ ಸ್ವಭಾವದವರು, ಆದರೆ ಹೆಚ್ಚು ಪಾಶ್ಚಾತ್ಯ ಜನರನ್ನು ಅನುಕರಿಸುವರು. ಇದೊಂದು ದುಃಖದ ಸಂಗತಿ, ಎಲ್ಲಾ ಪಾಶ್ಚಾತ್ಯಾನುಕರಣೆಯನ್ನೂ ನಾನು ವಿರೋಧಿಸುತ್ತೇನೆ. ಆದರೆ ನನ್ನ ಸ್ನೇಹಿತ

ಇನ್ನೂ ಅದಕ್ಕೆ ಗಮನ ಕೊಟ್ಟಿಲ್ಲ. ಎಂತಹ ಥಳಕಿನ ನಾಗರೀಕತೆಯನ್ನು ಹೊರಗಿನವರು ತಂದಿರುವರು! ಎಂತಹ ಒಂದು ಚಾರ್ವಾಕ ಭ್ರಾಂತಿಯನ್ನು ಅವರು ಸೃಷ್ಟಿಸಿರುವರು!

(೩)

ಜೈ ಭಗವಾನ್ ಶ್ರೀ ರಾಮಕೃಷ್ಣ!

ಘಾಜಿಪುರ,
ಫೆಬ್ರವರಿ, ೧೮೯೦

ಪ್ರಿಯ ಅಖಂಡಾನಂದ

ನಿನ್ನ ಕಾಗದ ನನಗೆ ಸೇರಿ ಅತಿ ಸಂತೋಷವಾಯಿತು. ನೀನು ಟಿಬೆಟ್ಟಿನ ವಿಚಾರವಾಗಿ ಬರೆದಿರುವುದು ಚಿತ್ತಾಕರ್ಷಕವಾಗಿದೆ. ನಾನು ಒಮ್ಮೆ ಅಲ್ಲಿಗೆ ಹೋಗಲು ಯತ್ನಿಸುವೆನು. ಸಂಸ್ಕೃತದಲ್ಲಿ ಟಿಬೆಟ್ಟಿಗೆ ಉತ್ತರ ಕುರುವರ್ಷವೆಂದು ಹೆಸರು. ಅದು ಮ್ಲೇಚ್ಛರ ದೇಶವಲ್ಲ. ಪ್ರಪಂಚದಲ್ಲಿ ಬಹಳ ಎತ್ತರವಾದ ಪ್ರಸ್ಥಭೂಮಿಯಾದುದರಿಂದ ಅಲ್ಲಿ ವಿಪರೀತ ಛಳಿ. ಆದರೆ ಕ್ರಮೇಣ ಮನುಷ್ಯನಿಗೆ ಅದೇ ರೂಢಿಯಾಗುತ್ತದೆ. ಅವರ ನಡೆ ನುಡಿ, ಆಚಾರ ವ್ಯವಹಾರಗಳ ವಿಚಾರವಾಗಿ ನೀನು ಏನನ್ನೂ ಬರೆದಿಲ್ಲ. ಅವರು ಅಷ್ಟು ಅತಿಥಿಸತ್ಕಾರಪರರಾದರೆ, ನಿನ್ನನ್ನು ಮುಂದುವರೆಯಲು ಏತಕ್ಕೆ ಬಿಡಲಿಲ್ಲ? ಒಂದು ದೊಡ್ಡ ಪತ್ರದಲ್ಲಿ ಎಲ್ಲವನ್ನೂ ವಿಶದವಾಗಿ ಬರೆ. ನಿನಗೆ ಇಲ್ಲಿಗೆ ಬರುವುದಕ್ಕೆ ಸಾಧ್ಯವಾಗುವುದಿಲ್ಲವೆಂದು ಕೇಳಿ ನನಗೆ ವ್ಯಥೆಯಾಯಿತು. ಏಕೆಂದರೆ ನಾನು ನಿನ್ನನ್ನು ನೋಡಬೇಕೆಂದು ಬಯಸಿದ್ದೆ. ನಾನು ನಿನ್ನನ್ನು ಉಳಿದೆಲ್ಲರಿಗಿಂತಲೂ ಹೆಚ್ಚಾಗಿ ಪ್ರೀತಿಸುವಂತೆ ಕಾಣುವುದು. ಹೇಗಾದರೂ ಆಗಲಿ ನಾನು ಈ ಮಾಯೆಯಿಂದ ಪಾರಾಗಲು ಯತ್ನಿಸುತ್ತೇನೆ.

ನೀನು ಹೇಳಿರುವ ಟಿಬೆಟ್ಟಿನ ಜನಾಂಗದ ತಂತ್ರ ಆಚರಣೆಗಳೆಲ್ಲವೂ ಬೌದ್ಧ ಧರ್ಮದ ಕ್ಷೀಣ ಕಾಲದಲ್ಲಿ ಇಂಡಿಯಾ ದೇಶದಲ್ಲಿಯೇ ತಲೆ ಎತ್ತಿತು. ಈಗ ಪ್ರಚಾರದಲ್ಲಿರುವ ತಂತ್ರ ಆಚರಣೆಗಳೆಲ್ಲವೂ

ಬೌದ್ಧರಿಂದಲೇ ನಿರ್ಮಾಣವಾದುದೆಂದು ನನ್ನ ನಂಬಿಕೆ. ನಮ್ಮ ವಾಮಾಚಾರದ ಸಿದ್ಧಾಂತಕ್ಕಿಂತಲೂ ಈ ತಾಂತ್ರಿಕ ಆಚಾರಗಳು ಅಸಹ್ಯಕರವಾಗಿವೆ. ಅದರಲ್ಲಿ ವ್ಯಭಿಚಾರಕ್ಕೆ ತಡೆಯೇ ಇಲ್ಲ. ಬೌದ್ಧರು ಹೀಗೆ ದುರಾಚಾರ ಪಾರಾಯಣರಾದಾಗಲೇ ಕುಮಾರಿಲಭಟ್ಟನಿಂದ ಓಡಿಸಲ್ಪಟ್ಟರು. ಕೆಲವು ಸನ್ಯಾಸಿಗಳು ಶಂಕರಾಚಾರ್ಯ ಅಥವಾ ಚೈತನ್ಯ ಪಂಗಡಕ್ಕೆ ಸೇರಿದ ಬಾವುಲರನ್ನು ಅವರು ಅಂತರ್ಯದಲ್ಲಿ ಸುಖಾಭಿಲಾಷಿಗಳೆಂದೂ, ಸುರಾಪಾನ ಮತ್ತರೆಂದೂ ಅನೇಕ ಹೀನಾಚಾರ ಆಸಕ್ತರೆಂದೂ ಹೇಳುವಂತೆ—ಈಗಿನ ತಾಂತ್ರಿಕಾಚಾರದ ಬೌದ್ಧರೂ ಕೂಡ, ಬುದ್ಧದೇವನನ್ನು ಪಕ್ಕಾ ವಾಮಾಚಾರಿಯೆಂದೂ, ಪ್ರಜ್ಞಾಪಾರಮಿತದಲ್ಲಿ ಉಕ್ತವಾದ ತತ್ವಗಾಥಾ ಮುಂತಾದ ಸುಂದರ ಪ್ರಸಂಗಗಳಿಗೆ ಅತಿವಿಚಿತ್ರವಾದ ಹೀನವಾದ ಟೀಕೆಯನ್ನು ಕೊಡುವರು. ಇದರ ಪರಿಣಾಮವಾಗಿ, ಬೌದ್ಧರಲ್ಲಿ ಇಂದು ಎರಡು ಪಂಗಡಗಳಾಗಿವೆ. ಬರ್ಮಾಯರು ಮತ್ತು ಸಿಂಹಳ ದ್ವೀಪವಾಸಿಗಳು ಸಾಧಾರಣವಾಗಿ ತಂತ್ರವನ್ನು ಮೂಲೆಗೊತ್ತಿರುವರು. ಹಾಗೆಯೇ ಅನೇಕ ಹಿಂದೂ ದೇವದೇವತೆಗಳನ್ನು ಕೂಡ ಅಲ್ಲಿಂದ ಹೊರಗಟ್ಟಿರುವರು; ಮತ್ತು ಉತ್ತರ ಬೌದ್ಧರಲ್ಲಿ ಅತ್ಯಂತ ಪೂಜಾರ್ಹನಾದ ಅಮಿತಾಭ ಬುದ್ಧದೇವನನ್ನು ಹೊರಗೆಸೆದಿರುವರು. ಈ ಭಿನ್ನಾಭಿಪ್ರಾಯಗಳ ಪರಿಣಾಮ ವೇನಾಯಿತೆಂದರೆ ಉತ್ತರ ಬೌದ್ಧಾನುಯಾಯಿಗಳು ಪೂಜಿಸುವ "ಅಮಿತಾಭ ಬುದ್ಧ" ಮತ್ತು ಇನ್ನೂ ಇತರ ದೇವರುಗಳನ್ನು ಪ್ರಜ್ಞಾಪಾರಮಿತ ಮತ್ತು ಇತರ ಗ್ರಂಥಗಳಲ್ಲಿ ಹೇಳಲೇ ಇಲ್ಲ. ಆದರೆ ಪೂಜೆಗೆ ಬೇರೆ ದೇವ ದೇವಿಯರನ್ನು ಸಲುಹಿಕೊಡುವರು. ದಾಕ್ಷಿಣಾತ್ಯರು ಶಾಸ್ತ್ರವನ್ನು ಬೇಕೆಂತಲೇ ಉಲ್ಲಂಘಿಸಿ ಅನೇಕ ದೇವ ದೇವಿಯರನ್ನು ಬಿಟ್ಟಿರುವರು. ಟಿಬೆಟ್ಟಿನಲ್ಲಿ ನೀನು ನೋಡಿರುವ ಮತ್ತು ಇಂದು ಪ್ರಚಾರದಲ್ಲಿರುವ "ಎಲ್ಲವೂ ಇತರರಿಗೆ" ಎಂಬ ಸಿದ್ಧಾಂತ ಆಧುನಿಕ ಯೂರೋಪ್ ದೇಶವನ್ನು ಆಕರ್ಷಿಸಿರುವುದು. ಆ ಸಿದ್ಧಾಂತದ ವಿಷಯವಾಗಿ ನಾನು ಹೇಳಬೇಕಾದ್ದು ಬಹಳವಿದೆ. ಆದರೆ ಈ ಪತ್ರದಲ್ಲಿ ಅದನ್ನೆಲ್ಲ ಬರೆಯುವುದು ಕಷ್ಟ. ಬುದ್ಧ ಮಾಡಿದುದು ಏನೆಂದರೆ, ಉಪನಿಷತ್ತಿನಲ್ಲಿ ಯಾವುದೋ ಒಂದು ಪಂಗಡಕ್ಕೆ ಮಾತ್ರ ಅಧಿಕಾರವಿದ್ದ ಧರ್ಮದ ಬಾಗಿಲನ್ನು ಒಡೆದು ಸರ್ವರಿಗೂ

ತೆರೆದನು. ನಿರ್ವಾಣಸಿದ್ಧಾಂತ ಆತನ ಯಾವ ಒಂದು ಅಪೂರ್ವ ದೊಡ್ಡಸ್ತಿಕೆಯನ್ನು ತೋರುವುದು? ಆತನ ಮಹತ್ತ್ವವಿರುವುದು ಅವನ ಆ ಅತುಲನೀಯ ಸಹಾನುಭೂತಿಯಲ್ಲಿ. ಅವನ ಧರ್ಮಕ್ಕೆ ಕಳೆಕೊಡುವ ಮೇಲಿನ ದರ್ಜೆಯ ಸಮಾಧಿ ಮುಂತಾದುವುಗಳಲ್ಲಿ ಹೆಚ್ಚು ಭಾಗ ಆಗಲೇ ವೇದದಲ್ಲಿ ಇರುವುದು. ಅಲ್ಲಿಲ್ಲದಿರುವುದೇ ಬುದ್ಧನ ತೀಕ್ಷ್ಣಮತಿ ಮತ್ತು ವಿಶಾಲ ಸಹಾನುಭೂತಿ. ಇದಕ್ಕೆ ಉಪಮಾನವಾದ ಉದಾಹರಣೆ ಇಡೀ ವಿಶ್ವಚಾರಿತ್ರದಲ್ಲೇ ಇಲ್ಲ.

ವೇದದಲ್ಲಿರುವ ಕರ್ಮಸಿದ್ಧಾಂತ ಯಹೂದ್ಯರಲ್ಲಿ ಮತ್ತು ಇತರ ಧರ್ಮಗಳಲ್ಲಿ ಇರುವ ಸಿದ್ಧಾಂತದಂತೆಯೇ ಇದೆ— ಅಂದರೆ ಬಾಹ್ಯಾಚಾರ ನಿಯಮಗಳಿಂದ ಮನಸ್ಸನ್ನು ಶುದ್ಧಮಾಡುವುದು. ಇದನ್ನು ವಿರೋಧಿಸಿದವರಲ್ಲಿ ಬುದ್ಧ ಮೊದಲನೆಯವನು. ಆಂತರಿಕ ಮುಖ್ಯಾಂಶಗಳು ಹಿಂದಿನಂತೆಯೇ ಇದ್ದುವು. ಅವನು ಬೋಧಿಸಿದ ಮಾನಸಿಕ ಸಾಧನೆಯ ಸಿದ್ಧಾಂತ, ವೇದದ ಬದಲು ಸೂತ್ರದಲ್ಲಿ ನಂಬಿಕೆ ಇಡಬೇಕೆಂದು ವಿಧಿಸುವುದು. ಇವನ್ನೆಲ್ಲ ನೋಡು. ಜಾತಿಕೂಡ ಹಿಂದಿನಂತೆಯೇ ಇದ್ದಿತು. (ಜಾತಿಯು ಬುದ್ಧನ ಕಾಲದಲ್ಲಿ ಸಂಪೂರ್ಣ ಅನಿವಾರ್ಯವಾಗಿರಲಿಲ್ಲ). ವ್ಯಕ್ತಿಯ ಗುಣದಿಂದ ಅದನ್ನು ನಿಷ್ಕರ್ಷಿಸುತ್ತಿದ್ದರು. ಯಾರು ಅವನ ಧರ್ಮದಲ್ಲಿ ನಂಬುತ್ತಿರಲಿಲ್ಲವೋ ಅವನನ್ನು ಪಾಷಂಡಿ ಎಂದು ಹಿಂದಿನಂತೆಯೆ ಕರೆಯುತ್ತಿದ್ದರು. ಬೌದ್ಧರಲ್ಲಿ ಪಾಷಂಡನೆಂಬುದು ಬಹಳ ಪುರಾತನ ಪದ. ಆದರೆ ಅವರೆಂದಿಗೂ ಬಲಾತ್ಕಾರವನ್ನು ಪ್ರಯೋಗಿಸಲಿಲ್ಲ. (ಒಳ್ಳೆಯ ಜನ!) ಅವರಲ್ಲಿ ಹೆಚ್ಚು ಅನ್ಯಧರ್ಮ ಸಹಿಷ್ಣುತಾ ಶಕ್ತಿ ಇತ್ತು. ತರ್ಕದಿಂದ ವೇದವನ್ನು ಸೋಲಿಸಿದನು. ಆದರೆ ನಿನ್ನ ಧರ್ಮದ ಸತ್ಯಕ್ಕೆ ಪ್ರಮಾಣವೇನು? ಹೌದು, ಅದರಲ್ಲಿ ವಿಶ್ವಾಸವಿಡು! ಎಲ್ಲಾ ಧರ್ಮಗಳಾದಂತೆಯೆ! ಆ ಕಾಲಕ್ಕೆ ಅದು ಅತ್ಯವಶ್ಯಕವಾಗಿ ಬೇಕಾಗಿತ್ತು. ಅವನು ಅವತಾರ ಮಾಡಿದುದಕ್ಕೆ ಅದೇ ಕಾರಣ. ಅವನ ಸಿದ್ಧಾಂತ ಕಪಿಲನ ಸಿದ್ಧಾಂತದಂತೆ. ಆದರೆ ಶಂಕರನದಾದರೋ ಅದಕ್ಕಿಂತ ಎಷ್ಟು ಉತ್ತಮವಾಗಿದೆ ಮತ್ತು ಯುಕ್ತಿಯುತವಾಗಿದೆ. ಬುದ್ಧ ಮತ್ತು ಕಪಿಲರು ಯಾವಾಗಲೂ ಹೇಳುವುದೇ ಹೀಗೆ: ಪ್ರಪಂಚವೆಲ್ಲ ದುಃಖ

ಮಯ; ಅದರಲ್ಲಿ ಮತ್ತೇನೂ ಇಲ್ಲ; ಅದರಿಂದ ಪಾರಾಗಿ; ಬೇಗ ಓಡಿ ನಿಮ್ಮ ಜೀವವನ್ನು ಉಳಿಸಿಕೊಳ್ಳುವುದಕ್ಕೆ! ಏನು ಇಲ್ಲಿ ಕಿಂಚಿತ್ತಾದರೂ ಸೌಖ್ಯವಿಲ್ಲವೆ? ಪ್ರಪಂಚವೆಲ್ಲವೂ ಸುಖಮಯ! ಎಂದು ಬ್ರಹ್ಮಸಮಾಜ ದವರು ಹೇಳುವ ಪಲ್ಲವಿಯಂತೆ ಇದೆ ಇದು. ದುಃಖವೇನೊ ಇದೆ. ಆದರೆ ಏನು ಮಾಡಬೇಕು. ಬಹುಶಃ ಕೆಲವರು ಪ್ರತಿದಿನವೂ ಅನುಭವಿಸಿ ಅಭ್ಯಾಸವಾದ ಮೇಲೆ ದುಃಖವೇ ಸುಖದಂತೆ ತೋರುತ್ತದೆಂದು ವಾದಿಸ ಬಹುದು. ಶಂಕರನು ಈ ವಾದಸರಣಿಯನ್ನು ಅನುಸರಿಸುವುದಿಲ್ಲ. ಅವನು ಹೇಳುವುದೆ: ಪ್ರಪಂಚವು ಇದೆ ಮತ್ತು ಇಲ್ಲ. ಅನಂತವಾಗಿದೆ ಮತ್ತು ಏಕವಾಗಿದೆ. ಅದರ ಗುಟ್ಟನ್ನು ನಾನು ಒಡೆಯುತ್ತೇನೆ. ಅಲ್ಲಿ ದುಃಖವಿದೆಯೇ ಅಥವಾ ಮತ್ತೇನಾದರೂ ಇದೆಯೇ ಎಂಬುದನ್ನು ಪರೀಕ್ಷಿಸುತ್ತೇನೆ. ಒಂದು ಅನಿಷ್ಟದಿಂದ ಓಡಿಹೋಗುವಂತೆ ನಾನು ಓಡಿಹೋಗುವುದಿಲ್ಲ. ನಾನೆಲ್ಲವನ್ನೂ ಸಮಗ್ರವಾಗಿ ತಿಳಿಯುತ್ತೇನೆ. ಅದರ ಅನ್ವೇಷಣೆಯಲ್ಲಿ ಅನಿವಾರ್ಯವಾಗಿ ವಿಪರೀತ ಕಷ್ಟ ಬರುತ್ತದೆ. ಆಗಲಿ, ಅದೆಲ್ಲವನ್ನೂ ನಾನು ಸಂಪೂರ್ಣವಾಗಿ ಸ್ವೀಕರಿಸುವೆನು. ಕೇವಲ ಇಂದ್ರಿಯ ಜನ್ಯವಾದ ಸುಖ, ದುಃಖ, ಜರಾ ಮರಣ ಮುಂತಾದುವು ಗಳಿಂದ ನಮ್ಮನ್ನು ಹೆದರಿಸುವುದಕ್ಕೆ ನಾವೇನು ಮೃಗವೆ? ಅದರ ಗುಟ್ಟನ್ನು ಅರಿಯುತ್ತೇನೆ; ಅದಕ್ಕಾಗಿ ಪ್ರಾಣಾರ್ಪಣೆ ಮಾಡುತ್ತೇನೆ. ಈ ಜಗತ್ತಿನಲ್ಲಿರುವ ವಸ್ತುವಿನ ವಿಚಾರದಲ್ಲಿ ತಿಳಿದುಕೊಳ್ಳಬೇಕಾದ್ದು ಏನೂ ಇಲ್ಲ. ಕಾರ್ಯಕಾರಣ ಪ್ರಪಂಚದಾಚೆ ಏನಾದರೂ ಇದ್ದರೆ ಭಗವಾನ್ ಬುದ್ಧನು ಹೇಳುವ ಪ್ರಜ್ಞಾಪಾರಂ—ಅತೀಂದ್ರಿಯವಸ್ತು—ಇವುಗಳೇನಾದರೂ ಇದ್ದರೆ ಅದೇ ನನಗೆ ಬೇಕು. ಆದುದರಿಂದ ಸುಖ ನನ್ನ ಪಾಲಿಗೆ ಬರುವುದೋ ದುಃಖ ನನ್ನ ಪಾಲಿಗೆ ಬರುವುದೋ ಅದೊಂದರ ಹಂಗೂ ನನಗಿಲ್ಲ. ಎಂತಹ ಉಚ್ಚವಾದ ಆದರ್ಶ! ಎಷ್ಟು ಭವ್ಯವಾಗಿದೆ! ಉಪನಿಷತ್ತಿನಿಂದಲೇ ಬೌದ್ಧಧರ್ಮ ಬೆಳೆದಿರುವುದು. ಅದೇ ಶಂಕರನ ತತ್ತ್ವ ಶಾಸ್ತ್ರಕ್ಕೂ ಮೂಲ. ಆದರೆ ಶಂಕರನಿಗೆ ಬುದ್ಧ ನಷ್ಟು ವಿಶಾಲವಾದ ಅನುಕಂಪ ಹೃದಯವಿರಲಿಲ್ಲ. ಬರಿಯ ಬುದ್ಧಿಯ ಒಣ ಪಾಂಡಿತ್ಯ, ತಂತ್ರಕ್ಕೆ, ಜನಸಮುದಾಯಕ್ಕೆ ಅಂಜಿ, ಒಂದು ಕುರು

ವನ್ನು ಗುಣಮಾಡಲು ಹೋಗಿ ಆದಿದ್ದ ಕೈಯ್ಯನ್ನೇ ಕತ್ತರಿಸಿದನು. ಅವುಗಳ ಮೇಲೆ ಏನಾದರೂ ಬರೆಯಬೇಕಾದರೆ ಒಂದು ದೊಡ್ಡ ಗ್ರಂಥವೇ ಬೇಕು. ಆದರೆ ಅದನ್ನು ಬರೆಯಲು ಬೇಕಾದ ಪಾಂಡಿತ್ಯವಾಗಲೀ ಅವಕಾಶವಾಗಲೀ ನನಗೆ ಇಲ್ಲ.

ಭಗವಾನ್ ಬುದ್ಧನು ನನ್ನ ಇಷ್ಟ; ಅವನೇ ನನ್ನ ದೇವರು. ಅವನು ದೇವರ ವಿಚಾರವಾಗಿ ಯಾವ ಸಿದ್ಧಾಂತವನ್ನೂ ಬೋಧಿಸಲಿಲ್ಲ. ಅವನೇ ದೇವರಾಗಿದ್ದನು. ಇದನ್ನು ನಾನು ಸಂಪೂರ್ಣ ನಂಬುವೆನು. ದೇವನ ಅನಂತ ಮಹಿಮೆಗೆ ಮೇರೆಯನ್ನು ಕಲ್ಪಿಸಲು ಯಾರಿಗೂ ಅಧಿಕಾರವಿಲ್ಲ. ತನಗೆ ತಾನೆ ಮೇರೆಯನ್ನು ಕಲ್ಪಿಸಲು ದೇವರಿಗೂ ಸಾಧ್ಯವಿಲ್ಲ. ಸುತ್ತನಿಪಾತದಿಂದ ನೀನು ಮಾಡಿದ ಗಂಧಾರ ಸುತ್ತದ ಭಾಷಾಂತರವು ಚೆನ್ನಾಗಿದೆ. ಅದೇ ಸುತ್ತದಲ್ಲಿ ಅದೇ ಅಭಿಪ್ರಾಯವನ್ನು ಕೊಡುವ ಧನಿಯ ಸುತ್ತ ಎಂಬ ಮತ್ತೊಂದು ಸುತ್ತವಿದೆ. ಅದೇ ಅಭಿಪ್ರಾಯವನ್ನು ತೋರುವ ಅನೇಕ ಶ್ಲೋಕಗಳು ಧರ್ಮಪದದಲ್ಲೂ ಇವೆ. ಆದರೆ ಅದೆಲ್ಲ ಸಾಧನೆಯ ತುತ್ತತುದಿಯಲ್ಲಿ ಯಾವನು ಜ್ಞಾನ ಸಾಕ್ಷಾತ್ಕಾರದಿಂದ ತೃಪ್ತನಾಗಿರುವನೋ, ಎಲ್ಲಾ ಸನ್ನಿವೇಶದಲ್ಲಿ ಏಕರೀತಿಯಾಗಿ ವ್ಯವಹರಿಸುವನೋ, ತನ್ನ ಇಂದ್ರಿಯಗಳ ಮೇಲೆ ಸಂಪೂರ್ಣ ಅಧಿಕಾರವನ್ನು ಸ್ಥಾಪಿಸಿರುವನೋ ಅಂತಹವನಿಗೆ ಮಾತ್ರ; "ಜ್ಞಾನವಿಜ್ಞಾನ ತೃಪ್ತಾತ್ಮ ಕೂಟಸ್ಥೋ ವಿಜಿತೇಂದ್ರಿಯಃ" ಯಾರಿಗೆ ತನ್ನ ದೇಹದ ಮೇಲೆ ಇದನ್ನು ನಾವು ಕಾಪಾಡಬೇಕಾದ ವಸ್ತು ಎಂಬುವ ಲಕ್ಷ್ಯವು ಸ್ವಲ್ಪವೂ ಇಲ್ಲವೋ, ಅವನು ಮಾತ್ರ ಉನ್ಮತ್ತ ಆನೆಯಂತೆ ಯಾರ ಹಂಗೂ ಇಲ್ಲದೆ, ಸ್ವತಂತ್ರವಾಗಿ ತನ್ನ ಮನ ಬಂದಂತೆ ತಿರುಗಾಡಬಹುದು. ನನ್ನಂತಹ ಅಲ್ಪ ಜೀವಿಯಾದರೊ ತನಗೆ ಸಿದ್ಧಿ ಪ್ರಾಪ್ತವಾಗುವವರೆಗೆ ಒಂದೆಡೆಯಲ್ಲಿ ಕುಳಿತು ಸಾಧನೆ ಮಾಡಬೇಕು. ನಂತರ ಮಾತ್ರ ಅವನು ಹಾಗೆ ಆಚರಿಸಬಹುದು. ಆದರೆ ಇದು ಬಹಳ ದೂರದ ಪ್ರಶ್ನೆ ನಿಜವಾಗಿಯೂ ಬಹಳ ದೂರದ್ದು.

ಚಿಂತಾಶೂನ್ಯಮದೈನ್ಯಭೈಕ್ಷ್ಯಮಶನಂ ಪಾನಂ ಸರಿದ್ವಾರಿಷು
ಸ್ವಾತಂತ್ರ್ಯೇಣ ನಿರಂಕುಶಾ ಸ್ಥಿತಿರಭೀರ್ನಿದ್ರಾ ಶ್ಮಶಾನೇ ವನೇ |

ವಸ್ತ್ರಂ ಕ್ಷಾಲನಶೋಷಣಾದಿರಹಿತಂ ದಿಗ್ವಾಸ್ತು ಶಯ್ಯಾ ಮಹೀ
ಸಂಚಾರೋ ನಿಗಮಾಂತವೀಥೀಷು ವಿದಾಂ ಕ್ರೀಡಾ ಪರೇ ಬ್ರಹ್ಮಣಿ ॥
ವಿಮಾನಮಾಲಂಬ್ಯ ಶರೀರಮೇತದ್
ಭುನಕ್ತ್ಯಶೇಷಾನ್ ವಿಷಯಾನುಪಸ್ಥಿತಾನ್ ।
ಪರೇಚ್ಛಯಾ ಬಾಲವದ್ ಆತ್ಮವೇತ್ತಾ
ಯೋ ಅವ್ಯಕ್ತಲಿಂಗೋ ಅನನುಷಕ್ತಬಾಹ್ಯಃ ॥
ದಿಗಂಬರೋ ವಾಪಿ ಚ ಸಾಂಬರೋ ವಾ
ತ್ವಗಂಬರೋ ವಾಪಿ ಚಿದಂಬರಸ್ಥಃ ।
ಉನ್ಮತ್ತವದ್ವಾಪಿ ಚ ಬಾಲವದ್ವಾ
ಪಿಶಾಚವದ್ವಾಪಿ ಚರತ್ಯವನ್ಯಾಮ್ ॥

ಬ್ರಹ್ಮಸಾಕ್ಷಾತ್ಕಾರವಾದವನಿಗೆ ಸ್ವಪ್ರಯತ್ನವಿಲ್ಲದೆ ಆಹಾರ ಬರುವುದು. ಎಲ್ಲಿ ಸಿಕ್ಕಿದರೆ ಜಲವನ್ನು ಅಲ್ಲಿ ಪಾನಮಾಡುವನು. ತನ್ನ ಇಚ್ಛೆ ಬಂದಂತೆ ಎಲ್ಲೆಡೆಯಲ್ಲಿ ತಿರುಗಾಡುವನು. ನಿರ್ಭಯನವನು. ಕೆಲವು ಸಲ ಕಾಡಿನಲ್ಲಿ ಮಲಗುವನು. ಕೆಲವು ಸಲ ಸ್ಮಶಾನದಲ್ಲಿ. ಯಾವ ದಾರಿಯಲ್ಲಿ ವೇದಗಳು ನಡೆದವೋ, ಆದರೆ, ದಾರಿಯ ಅಂತ್ಯ ಗುರಿಯನ್ನು ಕಾಣವೋ ಆ ದಾರಿಯಲ್ಲಿ ಇವನು ಪ್ರಯಾಣ ಮಾಡುವನು. ಅವನ ದೇಹ ಆಕಾಶದಂತೆ; ಬೇರೆಯವರ ಇಚ್ಛೆಯಂತೆ ಮಗುವಿನೋಪಾದಿಯಲ್ಲಿ ನಡೆದುಕೊಳ್ಳುವನು. ಕೆಲವು ವೇಳೆ ಅವನು ದಿಗಂಬರನಾಗುವನು. ಕೆಲವು ವೇಳೆ ಅತ್ಯಂತ ಆಕರ್ಷಕವಾದ ಉಡುಪನ್ನು ತೊಡುವನು. ಕೆಲವು ವೇಳೆ ಕೇವಲ ಜ್ಞಾನವನ್ನೇ ಬಟ್ಟೆಯಾಗಿ ಹೊಂದಿರುವನು. ಕೆಲವು ವೇಳೆ ಏನೂ ಅರಿಯದ ಹಸುಳೆಯಂತೆ, ಕೆಲವು ವೇಳೆ ಹುಚ್ಚನಂತೆ ಶುಚಿ ನೈರ್ಮಲ್ಯಗಳಿಗೆ ಸ್ವಲ್ಪವೂ ಗಮನಕೊಡದೆ ಪಿಶಾಚಿಯಂತೆ ವ್ಯವಹರಿಸುವನು.

ನಿನಗೆ ಅಂತಹ ಸ್ಥಿತಿ ಪ್ರಾಪ್ತವಾಗಲೆಂದೂ, ನಿರಂಕುಶ ವಿಹ್ಯಾ ಮೃಗದಂತೆ ನೀನೂ ಸಂಚರಿಸಬೇಕೆಂದೂ, ನನ್ನ ಪೂಜ್ಯ ಗುರುದೇವನ ಅಡಿದಾವರೆಯಲ್ಲಿ ಬೇಡುವೆನು.

ವಿಶ್ವಾಸಪೂರ್ವಕ,
ನಿನ್ನ ವಿವೇಕಾನಂದ.

(೪)

## ಜಯ ಶ್ರೀ ರಾಮಕೃಷ್ಣ

ಘಾಜಿಪುರ,
೧೫ ನೇ ಮಾರ್ಚ ೧೮೯೦

ಪೂಜ್ಯ ಮಹಾಶಯರೆ,

ನೆನ್ನೆ ನಿಮ್ಮ ಪ್ರೀತಿಯ ಕಾಗದ ತಲುಪಿತು. ಸುರೇಶ ಬಾಬುವಿನ ರೋಗ ಬಹಳ ಭೀತಿದಾಯಕವಾಗಿದೆ ಎಂದು ತಿಳಿಯಲು ಬಹಳ ದುಃಖವಾಯಿತು. ಏನು ಬರಬೇಕೊ ಅದು ಬಂದೇ ಬರುವುದು. ನೀವು ಕೂಡ ಖಾಯಿಲೆ ಬಿದ್ದಿರುವುದು ಅತಿ ವ್ಯಸನಕರ. ಎಲ್ಲಿಯವರೆವಿಗೂ ನಮ್ಮಲ್ಲಿ ನಾನು ಎಂಬ ಅಹಂಕಾರವಿರುವುದೋ ಅಲ್ಲಿಯವರೆವಿಗೂ ನಾವು ಚಿಕಿತ್ಸಾಕ್ರಮವನ್ನು ಮುರಿಯುವುದು ಸೋಮಾರಿತನವೆನ್ನಬೇಕಾಗುತ್ತದೆ. ಇದು ಒಂದು ತಪ್ಪು, ದೋಷ ಮತ್ತು ಅಪರಾಧ. ಯಾರಲ್ಲಿ ಅಹಂಕಾರ ನಾಶವಾಗಿದೆಯೋ ಅವರಿಗೆ ಸಹಿಸುವುದು ಒಂದೇ ಮಾರ್ಗ. ಈ ದೇಹ ಜೀವಾತ್ಮನು ವಾಸಿಸುವ ಸ್ಥಳ; ಕರ್ಮವನ್ನು ಮಾಡುವುದು ಇದರ ಮೂಲಕವಾಗಿಯೆ. ಯಾರು ಇದನ್ನು ಒಂದು ನರಕಕುಂಡವನ್ನಾಗಿ ಮಾಡುತ್ತಾರೊ ಅವರು ದೋಷಿಗಳು ಮತ್ತು ಯಾರು ಇದನ್ನು ತಿರಸ್ಕರಿಸುವರೊ ಅವರನ್ನೂ ದೂರಬೇಕಾಗಿದೆ. ರೋಗ ರುಜಿನಗಳು ಬರುವಾಗ ಸ್ವಲ್ಪವೂ ಅನುಮಾನವಿಲ್ಲದೆ ಪರಿಸ್ಥಿತಿಗೆ ತಕ್ಕಂತೆ ನಡೆದುಕೊಳ್ಳಿ.

ನಾಭಿನಂದೇತ ಮರಣಂ ನಾಭಿನಂದೇತ ಜೀವಿತಂ
ಕಾಲಮೇವ ಪ್ರತೀಕ್ಷೇತ ನಿಯಮಂ ಭೃತಕೋ ಯಥಾ ॥

ಜನನ ಮರಣಗಳಾವುದನ್ನೂ ಗಮನಕ್ಕೆ ತಾರದೆ, ಯಾವ ಕೆಲಸವನ್ನಾದರೂ ಮಾಡಲು ಸಿದ್ಧವಾದ ಸೇವಕನಂತೆ ತನ್ನ ಕೈಲಾದ ಅಲ್ಪವನ್ನು ಮಾಡುವುದೇ ಜೀವನದ ಪರಮನಿಯಮ.

ಇಂಫ್ಲೂಯಂಜಾ ಖಾಯಿಲೆಯು ಈಗ ಕಾಶಿಯಲ್ಲಿ ಭಯಂಕರ ರೂಪತಾಳಿದೆ. ಪ್ರ—ಅಲಹಾಬಾದಿಗೆ ಹೋಗಿರುವರು. ಬಾ—ಅಕ

ಸ್ವಾತ್ ಇಲ್ಲಿಗೆ ಬಂದಿರುವನು. ಅವನಿಗೆ ಜ್ವರ ಬಂದಿದೆ. ಇಂತಹ ಸ್ಥಿತಿಯಲ್ಲಿ ಅವನು ಹೊರಟದ್ದು ತಪ್ಪು. ನಾನು ನಾಳೆ ಈ ಸ್ಥಳವನ್ನು ಬಿಡುತ್ತೇನೆ. ಪಾಠಕಗೆ ನನ್ನ ಅನಂತ ನಮಸ್ಕಾರಗಳು. ಸಮದೃಷ್ಟಿ ಬರಲಿ; ಹುಟ್ಟುತ್ತಲೇ ಮಾನವನ ಜನ್ಮಕ್ಕೆ ಸಿದ್ಧವಾಗಿ ಕಾಯುತ್ತಿರುವ ಈ ಬಂಧನದಿಂದ ತಪ್ಪಿಸಿಕೊಳ್ಳಲಿ; ಸ್ವಯಂಕೃತ ಬಂಧನದಲ್ಲಿ ಮತ್ತೊಮ್ಮೆ ಸಿಕ್ಕಿ ಬೀಳದೆ ಇರಲಿ ಎಂದು ನೀವೆಲ್ಲರೂ ನನಗೆ ಆಶೀರ್ವದಿಸಿ. ಶುಭವನ್ನು ಮಾಡುವವನು ಯಾರಾದರೂ ಇದ್ದರೆ ಅವನಿಗೆ ಮಾಡುವುದಕ್ಕೆ ಶಕ್ತಿ ಇದ್ದರೆ, ಅದಕ್ಕೆ ಸಮಯ ಒದಗಿದರೆ ಆತನು ನಿಮಗೆಲ್ಲರಿಗೂ ಅತ್ಯುತ್ತಮವಾದ ಆಶೀರ್ವಾದಗಳನ್ನು ಕರುಣಿಸಲಿ. ನಿಮ್ಮ, ವಿಶ್ವಾಸಪೂರ್ವಕ ವಿವೇಕಾನಂದ.

(೫)

ಜೈ ಭಗವಾನ್

ಘಾಜಿಪುರ್
೩ ನೆ ಮಾರ್ಚ್ ೧೮೯೦

ಪ್ರಿಯ ಮಹಾಶಯರೆ,

ನಿಮ್ಮ ಪ್ರೀತಿಯ ಪತ್ರ ಈಗತಾನೆ ತಲುಪಿತು. ನಿಮಗೆ ತಿಳಿಯದು ಸ್ವಾಮಿ, ನಿರ್ದಾಕ್ಷಿಣ್ಯ ವೇದಾಂತ ದೃಷ್ಟಿ ನನ್ನದಾದರೂ ಅತಿ ಮೃದು ಹೃದಯದವನು. ಇದೇ ನನ್ನ ದುರ್ಬಲತೆ. ಸ್ವಲ್ಪ ಹೃದಯ ಮುಟ್ಟಿದರೆ ಸಾಕು ನಾನು ಸೋಲುವೆನು. ನನ್ನ ವಿಷಯವನ್ನೇ ಆಲೋಚಿಸುವುದಕ್ಕೆ ನಾನು ಎಷ್ಟು ಪ್ರಯತ್ನಪಟ್ಟರೂ ನನ್ನ ಅರಿವಿಲ್ಲದೆ ಇತರ ಹಿತದ ದೃಷ್ಟಿ ನನ್ನ ಜೀವನವನ್ನು ಆಕ್ರಮಿಸುವುದು. ಈ ವೇಳೆ ನನ್ನ ಶ್ರೇಯಸ್ಸನ್ನು ಮಾತ್ರ ಅನುಸರಿಸುವೆನೆಂಬ ಶಪಥದಿಂದ ಹೊರಟೆ. ಆದರೆ ಅಲಹಾಬಾದಿನಲ್ಲಿದ್ದ ನನ್ನ ಗುರುಭಾಯಿಯೊಬ್ಬನ ಅಸ್ವಸ್ಥತೆಯನ್ನು ಕೇಳಿದೊಡನೆಯೆ ಅಲ್ಲಿಗೆ ಓಡಬೇಕಾಯಿತು. ಈಗ ಹೃಷೀಕೇಶದಿಂದ ಸಮಾಚಾರ ಬಂದಿತು. ತಕ್ಷಣವೇ ನನ್ನ ಮನಸ್ಸು ಅಲ್ಲಿಗೆ ಓಡಿದೆ. ಶ—ಗೆ ತಂತಿಯನ್ನು ಕಳುಹಿಸಿರುವೆನು. ಆದರೆ ಇನ್ನೂ ಉತ್ತರವೇ ಇಲ್ಲ.

ಅದೊಳ್ಳೆಯ ಸ್ಥಳ. ತಂತಿಯನ್ನು ಕೂಡ ತಡಮಾಡುವುದು! ಸೊಂಟ ನೋವು ಬಿಡಲೇ ಒಲ್ಲದು. ಅತಿದಾರುಣ ಯಾತನೆ. ಕಳೆದ ಕೆಲವು ದಿನ ದಿಂದ ನಾನು ಪವಹಾರಿಬಾಬಾಯವರ ದರ್ಶನಕ್ಕೆ ಹೋಗಲು ಆಗಲಿಲ್ಲ. ಆದರೆ ಅವರೇ ದಯೆಯಿಂದ ಪ್ರೀತಿಯಿಂದ ಪ್ರತಿದಿನವೂ ನನ್ನ ವಿಷಯವನ್ನು ತಿಳಿದುಕೊಳ್ಳುತ್ತಿರುವರು. ಈಗ ನೋಡಿದರೆ ವಿಷಯ ತಲೆಕೆಳಗಾಗಿರು ವುದು. ನಾನೆ ಭಿಕ್ಷುಕನಂತೆ ಅವರ ಬಾಗಿಲಿಗೆ ಬಂದಿದ್ದರೂ ಆತ ಹಿಂತಿರುಗಿ ನನ್ನ ವಿಷಯವನ್ನು ತಿಳಿದುಕೊಳ್ಳಲು ಯತ್ನಿಸುವನು. ಬಹುಶಃ ಈ ಸಾಧು ಇನ್ನೂ ಪೂರ್ಣತೆಯನ್ನು ಪಡೆದಿಲ್ಲವೇನೋ—ತುಂಬಾ ಕರ್ಮ, ವ್ರತನಿಯಮ, ರಹಸ್ಯ; ಪೂರ್ಣ ಸಾಗರ ದಡದ ಮೇರೆಯಲ್ಲಿ ಇರಲಾರನೆಂದು ನಾನು ಭಾವಿಸುತ್ತೇನೆ. ಸುಮ್ಮನೆ ಈ ಸಾಧುವಿಗೆ ತೊಂದರೆ ಕೊಟ್ಟು ಪ್ರಯೋಜನವಿಲ್ಲವೆಂದು ಬಹಳ ಬೇಗ ಅವರಿಂದ ಅಪ್ಪಣೆ ಪಡೆದು ಹೋಗಲು ನಿಶ್ಚಯಿಸಿರುವೆನು. ಆದರೆ ನಿಸ್ಸಹಾಯಕ ನಾಗಿರುವೆನು. ವಿಧಿ ನನ್ನ ಹೃದಯವನ್ನು ಅಷ್ಟು ಮೃದುವಾಗಿ ಕಡಿಸಿತು. —ಬಾಬು ನನಗೆ ಸಮ್ಮತಿ ಕೊಡುವುದಿಲ್ಲ! ತಂತಿಯ ಉತ್ತರದಿಂದ ನಾನು ಈ ಸ್ಥಳವನ್ನು ಬಿಡುತ್ತೇನೆ. ಇಲ್ಲದೇ ಇದ್ದರೆ ಇನ್ನು ಕೆಲವು ದಿವಸ ಗಳಲ್ಲಿ ನಾನು ನಿಮ್ಮನ್ನು ನೋಡಲು ಕಾಶಿಗೆ ಬರುತ್ತೇನೆ. ನಾನು ನಿಮ್ಮನ್ನು ಈ ವೇಳೆ ಸುಮ್ಮನೆ ಬಿಡುವುದಿಲ್ಲ. ನಿಮ್ಮನ್ನು ಹೃಷೀಕೇಶಕ್ಕೆ ಕರೆದುಕೊಂಡು ಹೋಗಬೇಕು. ಯಾವ ಕ್ಷಮೆಯೂ ಇಲ್ಲ. ಆಕ್ಷೇಪ ಣೆಯೂ ಇಲ್ಲ. ಏನು ಅಲ್ಲಿ ಶುಚಿಯಾಗಿರುವುದಕ್ಕೆ ಅಸಾಧ್ಯವೇ? ಬೆಟ್ಟದಲ್ಲಿ ನೀರಿಲ್ಲವೇ, ಅಥವಾ ಸ್ಥಳವಿಲ್ಲವೆ? ತೀರ್ಥ ಮತ್ತು ಕಲಿಯುಗದ ಸಂನ್ಯಾಸಿ ಇವರ ವಿಷಯ ನಿಮಗೆ ಗೊತ್ತಿದೆ. ನೀವು ಹಣ ಎಸೆದರೆ ದೇವರನ್ನಾದರೂ ಪೂಜಾರಿಗಳು ಹೊರಗೆಸೆದು ನಿಮಗೆ ಸ್ಥಳವನ್ನು ಕೊಡುವರು! ನೀವು ಅಲ್ಲಿ ಯಾವ ತೊಂದರೆಗೂ ಈಡಾಗು ವುದಿಲ್ಲವೆಂದು ನಾನು ಹೇಳುತ್ತೇನೆ. ಈಗ ಅಲ್ಲಿ ಬೇಸಗೆ ಉಷ್ಣ ಪ್ರಾರಂಭ ವಿರಬಹುದು. ಆದರೆ ಕಾಶಿಯಷ್ಟು ಇಲ್ಲವೆಂದು ನಾನು ಊಹಿಸುತ್ತೇನೆ. ಇದು ಒಳ್ಳೆಯದೇ ಆಯಿತು. ಅಲ್ಲಿ ರಾತ್ರಿ ಯಾವಾಗಲೂ ತಂಪಾ ಗಿರುವುದು. ಇದರಿಂದ ಸುಖ ನಿದ್ರೆ ನಿಶ್ಚಯ.

ನೀವು ಏತಕ್ಕೆ ಇಷ್ಟು ಅಂಜಿಕೆಪಡುವುದು? ನೀವು ಮನೆಗೆ ಸುಖವಾಗಿ ಹಿಂತಿರುಗಬಹುದು, ನಿಮಗೆ ಯಾವ ತೊಂದರೆಯೂ ಬರುವುದಿಲ್ಲವೆಂದು ಭರವಸೆ ಕೊಡುತ್ತೇನೆ. ಆಂಗ್ಲೇಯರ ಆಳ್ವಿಕೆಯಲ್ಲಿ ಯಾವ ಸಂನ್ಯಾಸಿಯಾಗಲೀ ಗೃಹಸ್ಥನಾಗಲೀ ತೊಂದರೆಗೆ ಈಡಾಗುವುದಿಲ್ಲ, ಇದು ನನ್ನ ಭರವಸೆ ಮತ್ತು ಅನುಭವ.

ನಮ್ಮಿಬ್ಬರಿಗೂ ಯಾವ ಪೂರ್ವಜನ್ಮದ ಸಂಬಂಧವಿರುವುದೋ ಎಂಬುದು ನನ್ನ ಒಂದು ಭ್ರಾಂತಿಯೆ; ನೋಡಿ ನಿಮ್ಮಿಂದ ಒಂದು ಪತ್ರ ನನ್ನ ಶಪಥವನ್ನೆಲ್ಲಾ ಮುರಿದಿದೆ! ಎಲ್ಲಾ ವಿಚಾರಗಳನ್ನೂ ಹಿಂದೆ ಬಿಟ್ಟು ಕಾಶಿಯ ಕಡೆಗೆ ಬರುತ್ತಿರುವೆನು.

ನಾನು [illegible] ಗ—ಗುರುಭಾಯಿಗೆ ಮತ್ತೆ ಹಿಂತಿರುಗುವಂತೆ ಕಾಗದ ಬರೆದಿರುವೆನು. ಅವನು ಬಂದರೆ ನಿಮ್ಮನ್ನು ನೋಡುವನು. ಈಗ ಕಾಶಿಯ ವಾತಾವರಣ ಹೇಗಿದೆ? ನಾನು ಇಲ್ಲಿ ಇದ್ದುದರಿಂದ ಮಲೇರಿಯಾ ಚಿಹ್ನೆಗಳಿಲ್ಲದರಿಂದ ಪಾರಾಗಿರುವೆನು. ಆದರೆ ಗಂಟಲ ನೋವು ಮಾತ್ರ ನನ್ನನ್ನು ದುರ್ಬಲನನ್ನಾಗಿ ಮಾಡಿದೆ. ಹಗಲೂ ರಾತ್ರಿ ನೋಯುತ್ತದೆ, ತುಂಬಾ ಕಿರುಕುಳ ಕೊಡುತ್ತಿದೆ. ನಾನು ಬೆಟ್ಟವನ್ನು ಹೇಗೆ ಏರುವೆನೋ ತಿಳಿಯದು. ಬಾಬಾಜಿಯಲ್ಲಿ ಅದ್ಭುತ ಸಹನ ಶಕ್ತಿಯನ್ನು ನೋಡುತ್ತೇನೆ. ಅದಕ್ಕೇ ಅವರನ್ನು ಇದಕ್ಕಾಗಿ ಸ್ವಲ್ಪ ಬೇಡುವುದು. ಆದರೆ ಕೊಡುವ ಯೋಚನೆಯೇ ಇಲ್ಲ. ಯಾವಾಗಲೂ ಸ್ವೀಕಾರ, ಸ್ವೀಕಾರ! ಆದಕಾರಣ ನಾನು ಇಲ್ಲಿಂದ ಬಿಟ್ಟು ಓಡುವುದು. ನಿಮ್ಮ ವಿವೇಕಾನಂದ.

ಪಿ. ಸೂ.—ನಾನು ಇನ್ನು ಯಾವ ಮಹಾ ಪುರುಷನ ಹತ್ತಿರವೂ ಹೋಗುವುದಿಲ್ಲ. ಕಮಲಾಕಾಂತ ಹೀಗೆ ಹೇಳುವನು—"ಎಲೆ ಮನಸ್ಸೇ ನಿನ್ನಲ್ಲಿ ನೀನು ನೆಲಸು, ಮತ್ತಾರ ಮನೆಯ ಬಾಗಿಲಿಗೂ ಹೋಗಬೇಡ. ನೀನು ಯಾವುದನ್ನು ಅರಸುವೆಯೋ ಅದು ಸುಮ್ಮನೆ ಕುಳಿತರೆ ಸಿಕ್ಕುವುದು. ಆದರೆ ಅದನ್ನು ನಿನ್ನ ಹೃದಯಾಂತರಾಳದಲ್ಲಿ ಮಾತ್ರ ಅರಸಬೇಕು. ಅಲ್ಲಿ ಪರಮೋತ್ಕೃಷ್ಟ ನಿಧಿ ಇದೆ. ನೀನು ಕೇಳುವುದನ್ನೆಲ್ಲಾ ಅವನು ಕೊಡುವನು. ಎಲೆ ಮನಸ್ಸೇ! ಲೆಕ್ಕವಿಲ್ಲದಷ್ಟು ವಜ್ರವೈಢೂರ್ಯ

ಗಳು ಅವನ ಆಸ್ಥಾನದಲ್ಲಿ ಚಲ್ಲಾಪಿಲ್ಲಿಯಾಗಿರುವುದು. ಅವನು ಕಾಮಧೇನು. ಆಲೋಚಿಸಿದೊಡನೆಯೇ ವರಗಳನ್ನು ಕೊಡುವನು."

ಈಗ ನನ್ನ ದೃಢ ನಿಶ್ಚಯವೇನೆಂದರೆ ಶ್ರೀ ರಾಮಕೃಷ್ಣರಿಗೆ ಸರಿಸಮಾನರಿಲ್ಲ, ನನ್ನ ಕೋಟ್ಯಾಂತರ ಅಪರಾಧಗಳನ್ನೆಲ್ಲಾ ಅವರು ಕ್ಷಮಿಸುವರು. ನನ್ನ ತಾಯಿತಂದೆಗಳೂ ಕೂಡ ನನ್ನನ್ನು ಅಷ್ಟು ಪ್ರೀತಿಸುತ್ತಿರಲಿಲ್ಲ. ಇದು ಅಲಂಕಾರದಲ್ಲಿ ಅತಿಶಯೋಕ್ತಿಯಲ್ಲ. ಇದು ಶುದ್ಧ ಸತ್ಯ. ಅವರ ಶಿಷ್ಯರಿಗೆಲ್ಲಾ ಅದು ಗೊತ್ತು. ಬಹಳ ಅಪಾಯದ ಸಮಯದಲ್ಲಿ, ಪ್ರಲೋಭನ ಸಮಯದಲ್ಲಿ, ದಾರುಣ ದುಃಖದಿಂದ "ಹೇ ದೇವ ನನ್ನನ್ನು ರಕ್ಷಿಸು" ಎಂದು ಕಂಬನಿಯಿಂದ ಬೇಡಿರುವೆನು. ಯಾರಿಂದಲೂ ಇದಕ್ಕೆ ಉತ್ತರ ದೊರೆಯಲಿಲ್ಲ. ಆದರೆ ಈ ಮಹಾ ಪುರುಷನಾದರೋ, ಅವತಾರವೋ, ಅಥವಾ ಇನ್ನು ಯಾರೋ ಈತ ಮಾನವ ಹೃದಯವನ್ನು ತಿಳಿದುಕೊಳ್ಳಬಲ್ಲ. ತನ್ನ ಆಂತರಿಕ ದೃಷ್ಟಿಯಿಂದ ನನ್ನ ದುಃಖವನ್ನೆಲ್ಲಾ ಅರಿತು, ತನ್ನೆಡೆಗೆ ಬರಮಾಡಿಕೊಂಡು, ನಾನು ಇಚ್ಛಿಸದಿದ್ದರೂ, ಅವೆಲ್ಲದರಿಂದ ಪಾರುಮಾಡಿರುವನು. ಆತ್ಮನಿಗೆ ಮರಣವಿಲ್ಲದೇ ಇದ್ದರೆ, ಅವನು ಇನ್ನೂ ಜೀವಿಸಿದ್ದರೆ ಅವನನ್ನು ಪ್ರಾರ್ಥಿಸುವೆನು. "ಹೇ ಭಗವಾನ ಶ್ರೀ ರಾಮಕೃಷ್ಣ, ಅನಂತ ಕೃಪಾಸಿಂಧು, ನನ್ನ ಏಕಮಾತ್ರ ಆಶ್ರಯ, ಸತ್ಪುರುಷನಾದ ನನ್ನ ಗೌರವ ಸ್ನೇಹಿತನ ಬಯಕೆಗಳೆಲ್ಲವನ್ನೂ ಈಡೇರಿಸು. ಯಾರು ಮಾತ್ರ ನನಗೆ ಆ ಹೇತುರಹಿತ ಕೃಪಾಸಿಂಧುವಿನಂತೆ ಇರುವರೋ ಅವರು ನಿಮಗೆ ಸರ್ವಮಂಗಳವನ್ನು ನೀಡಲಿ; ಶಾಂತಿಃ! ಶಾಂತಿಃ! ಶಾಂತಿಃ!"

ದಯವಿಟ್ಟು ಸಕಾಲಕ್ಕೆ ಮಾರುತ್ತರವನ್ನು ಕೊಡಿ.

ಇತಿ

ವಿವೇಕಾನಂದ

(೬)

ಜಯ ಭಗವಾನ್

೫೭ ರಾಮಕಾಂತಬೋಸ್ ರಸ್ತೆ,
ಬಾಗ್ ಬಜಾರ್, ಕಲ್ಕತ್ತ.
೨೬ ನೇ ಮೇ ೧೮೯೦

ಪ್ರಿಯ ಮಹಾಶಯರೆ,

ಅನೇಕ ಅನಿವಾರ್ಯ ಪರಿಸ್ಥಿತಿಗಳು ಮತ್ತು ಮನದ ಕಳವಳ ಇವುಗಳ ಗೊಂದಲದಲ್ಲಿ ಸಿಕ್ಕಿರುವಾಗ ನಿಮಗೆ ಪತ್ರವನ್ನು ಬರೆಯುತ್ತಿರುವೆನು. ವಿಶ್ವನಾಥನಿಗೆ ನಮಿಸಿ ನಾನು ಮುಂದೆ ಬರೆದಿರುವುದು ಯೋಗ್ಯವಾಗಿ ಕಂಡರೆ, ಸಾಧ್ಯವಾದರೆ ದಯವಿಟ್ಟು ನನಗೆ ಉತ್ತರ ಕೊಟ್ಟು ಉಪಕಾರ ಮಾಡಿ.

೧. ನಾನು ಮೊದಲೇ ಹೇಳಿರುವಂತೆ ಶ್ರೀ ರಾಮಕೃಷ್ಣರ ದಾಸ. ನನ್ನ ದೇಹವನ್ನು ಎಳ್ಳು ತುಳಸಿಗಳೊಡನೆ ಆತನ ಪಾದದಲ್ಲಿ ಧಾರೆ ಎರೆದಿರುವೆನು. ಆತನ ಆಜ್ಞೆಯನ್ನು ನಾನು ನಿರಾಕರಿಸಲಾರೆ. ಆ ಮಹಾ ತಪಸ್ವಿ ಜ್ಞಾನ, ಭಕ್ತಿ, ಪ್ರೀತಿ, ಶಕ್ತಿ ಶಿಖರವನ್ನೇರಿ ನಾಲ್ವತ್ತು ವರ್ಷಗಳು ಉಗ್ರತ್ಯಾಗ, ವೈರಾಗ್ಯ, ಪವಿತ್ರತೆ, ಕಠೋರತಮ ಸಾಧನೆಗಳನ್ನು ಅಭ್ಯಾಸಮಾಡಿ ತನ್ನ ಜೀವವನ್ನು ತೊರೆದುದು ನಿಷ್ಪ್ರಯೋಜನವಾದರೆ ಈ ಜಗತ್ತಿನಲ್ಲಿ ನೆಚ್ಚಿಗೆ ಇಡುವ ಆಸರೆ ಮತ್ತಾವುದಿರುವುದು? ಅದಕ್ಕೋಸುಗವೇ ಅವರ ವಾಣಿಯನ್ನು ಸತ್ಯೈಕ್ಯರಾದವರವಾಣಿ ಎಂದು ನಂಬಲೇ ಬೇಕಾಗುವುದು.

೨. ಆತನಿಂದ ಸ್ಥಾಪಿತವಾದ ಸಂಘದಲ್ಲಿರುವ, ಎಲ್ಲವನ್ನೂ ತ್ಯಜಿಸಿದ ಭಕ್ತರ ಸೇವೆಗೆ ಗಮನ ಕೊಡಬೇಕೆಂಬುದು ಅವರು ನನಗೆ ಮಾಡಿದ ಆಜ್ಞೆ. ನಾನು ಇದರಲ್ಲಿ ಎಷ್ಟು ವೇಳೆ ಸೋತರೂ ಮರಳಿ ಯತ್ನವನ್ನು ಮಾಡಲೇ ಬೇಕು. ಇದರಿಂದ ಸ್ವರ್ಗ ಬರಲಿ, ನರಕ ಬರಲಿ, ಮೋಕ್ಷ ಸಿದ್ಧಿಸಲಿ ಅಥವಾ ಇನ್ನೇನೇ ಪ್ರಾಪ್ತವಾಗಲಿ ಎಲ್ಲವನ್ನೂ ಅನುಭವಿಸಲು ಸಿದ್ಧನಾಗಿರಬೇಕು.

೩. ಸರ್ವಸ್ವವನ್ನೂ ತ್ಯಾಗಮಾಡಿದ ಭಕ್ತರೆಲ್ಲರೂ ಒಂದೆಡೆ ಒಟ್ಟಿಗೆ ಸೇರಬೇಕೆನ್ನುವುದು ಅವರ ಆಜ್ಞೆ. ಈ ಕಾರ್ಯವನ್ನು ನನಗೆ ವಹಿಸಿರುವರು. ಯಾವುದಾದರೂ ಸ್ಥಳವನ್ನು ನೋಡುವುದಕ್ಕೆ ನಮ್ಮಲ್ಲಿ ಯಾರಾದರೂ ಹೋಗುವುದಕ್ಕೆ ಅಭ್ಯಂತರವೇನೂ ಇಲ್ಲ. ಆದರೆ ಇದು ತತ್ಕಾಲಕ್ಕೆ ಮಾತ್ರ. ಅವರ ಅಭಿಪ್ರಾಯವೇನೆಂದರೆ ಮನೆಮಠಗಳಿಲ್ಲದೆ ಸರ್ವದಾ ಪರಿವ್ರಾಜಕನಾಗಿ ಅಲೆಯುವುದು ಪೂರ್ಣತೆಯ ಪರಾಕಾಷ್ಠತೆಯನ್ನು ಮುಟ್ಟಿದವನಿಗೆ ಮಾತ್ರ ಸರಿಹೋಗುವುದು. ಆದರೆ ಅದಕ್ಕೆ ಮುಂಚೆ ಎಲ್ಲಿಯಾದರೂ ನಿಂತು ಸಾಧನೆಯಲ್ಲಿ ನಿರತನಾಗುವುದು ಒಳ್ಳೆಯದು. ದೇಹ ಮತ್ತು ಇತರ ಉಪಾಧಿಗಳೆಲ್ಲ ತನಗೆ ತಾವೆ ಕಳಚಿಬಿದ್ದ ಮೇಲೆ ತನಗೆ ಯಾವ ಭಾವ ಬರುವುದೋ ಅದರಂತೆ ನಡೆಯಬಹುದು.

೪. ಅವರ ಆಜ್ಞೆಯ ಪ್ರಕಾರ ಅವರ ಸನ್ಯಾಸಿಗಳ ಸಂಸ್ಥೆಯೊಂದು ಬರಾಹನಗರದಲ್ಲಿರುವ ಒಂದು ಪಾಳುಮನೆಯಲ್ಲಿ ಸ್ಥಾಪಿತವಾಗಿದೆ. ಬಾಬು ಸುರೇಶಚಂದ್ರ ಮಿತ್ರ ಮತ್ತು ಬಾಬು ಬಲರಾಮ ಬೋಸ್ ಇಬ್ಬರು ಗೃಹಸ್ಥಭಕ್ತರು ಇದುವರೆವಿಗೂ ಅವರಿಗೆ ಮನೆ ಬಾಡಿಗೆ ಮತ್ತು ಆಹಾರವನ್ನು ಒದಗಿಸುತ್ತಿರುವರು.

೫. ಅನೇಕ ಕಾರಣಗಳಿಂದ ಭಗವಾನ್ ಶ್ರೀ ರಾಮಕೃಷ್ಣರ ಮೃತ ದೇಹವನ್ನು ದಹಿಸಬೇಕಾಯಿತು. ಇದು ಬಹಳ ನಿಂದಾಸ್ಪದವಾದುದೆಂಬುದರಲ್ಲಿ ಸಂದೇಹವಿಲ್ಲ. ಅವರ ಬೂದಿಯನ್ನು ರಕ್ಷಿಸಿರುವೆವು. ಎಲ್ಲಿಯಾದರೂ ಗಂಗಾ ನದಿಯ ತೀರದಲ್ಲಿ ಅದನ್ನು ಸರಿಯಾಗಿ ಒಂದು ಮಠದಲ್ಲಿ ಸ್ಥಾಪನೆಮಾಡಿದರೆ ನಮ್ಮ ಪಾಪದಿಂದ ಸ್ವಲ್ಪ ಪಾರಾಗಬಹುದೆಂದು ಯೋಚಿಸುತ್ತೇವೆ. ಅವರ ಭಸ್ಮಾವಶೇಷ, ಅವರ ಆಸನ, ಅವರ ಭಾವಚಿತ್ರ ಇವುಗಳನ್ನು ನಮ್ಮ ಮಠದಲ್ಲಿ ಯಥೋಚಿತವಾಗಿ ಪೂಜಿಸುತ್ತಿರುವೆವು. ಬ್ರಾಹ್ಮಣ ಮತಸ್ಥನಾದ ಗುರುಭಾಯಿಯೊಬ್ಬನು ಈ ಕಾರ್ಯದಲ್ಲಿ ಹಗಲುರಾತ್ರಿ ನಿರತನಾಗಿರುವನೆಂಬುದು ನಿಮಗೆ ಗೊತ್ತಿದೆ.

೬. ಈ ವಂಗದೇಶದಲ್ಲಿ, ತಮ್ಮ ಸಾಧನೆಯ ಕಾಲವನ್ನು ಕಳೆದ ಸ್ಥಳದಲ್ಲಿ, ಅವರಿಗೆ ಒಂದು ಸ್ಮಾರಕ ಮಂದಿರವನ್ನು ಕಟ್ಟದೇ ಇರುವುದಕ್ಕಿಂತ ಹೆಚ್ಚು ಪಶ್ಚಾತ್ತಾಪಕರವಾದುದು ಯಾವುದಿರುವುದು? ಅವರು ಇಲ್ಲಿ

ಜನ್ಮವೆತ್ತಿದುದರಿಂದ ವಂಗದೇಶವೇ ಪಾವನವಾಗಿದೆ. ಈ ನಾಡು ಪುಣ್ಯ ಭೂಮಿಯಾಗಿದೆ. ಪಾಶ್ಚಾತ್ಯ ನಾಗರಿಕತೆಯ ಸಮ್ಮೋಹನಾಸ್ತ್ರದಿಂದ ಭಾರತೀಯರನ್ನು ಎಚ್ಚರಿಸುವುದಕ್ಕೆ ಬಂದರು ಅವರು. ಅದಕ್ಕೋಸ್ಕರವೇ ತಮ್ಮ ಸರ್ವಸಂಗ ಪರಿತ್ಯಾಗಮಾಡಿದ ಶಿಷ್ಯರನ್ನು ಪ್ರೌಢ ವಿದ್ಯಾಲಯಗಳಿಂದ ಆರಿಸಿದರು.

೭. ಮೇಲೆ ಹೇಳಿದ ಗೃಹಸ್ಥ ಶಿಷ್ಯರಿಬ್ಬರೂ ಗಂಗಾನದಿಯ ತೀರದಲ್ಲಿ ಸ್ವಲ್ಪ ಜಾಗವನ್ನು ಕೊಳ್ಳಬೇಕೆಂದೂ, ಅಲ್ಲಿ ಅವರ ಅಸ್ಥಿಯನ್ನು ಸಂಚಯಿಸಿ ಒಂದು ಸ್ಮಾರಕ ಮಂದಿರವನ್ನು ಕಟ್ಟಿ, ಅವರ ಶಿಷ್ಯರೆಲ್ಲರೂ ಅಲ್ಲಿ ವಾಸಿಸಬೇಕೆಂಬ ಆಸೆ ಅವರಿಗೆ ಇತ್ತು. ಸುರೇಶಬಾಬು ಆಗಲೇ ಒಂದು ಸಾವಿರ ರೂಪಾಯಿಯನ್ನು ಕೊಟ್ಟಿದ್ದನು. ಇನ್ನೂ ಹೆಚ್ಚನ್ನು ಕೊಡುತ್ತೇನೆಂದೂ ಭರವಸೆ ಇತ್ತಿದ್ದನು. ಅಯ್ಯೋ! ಅವನನ್ನು ದೇವರು ಕೆಲವು ಕಾಲಕಾಲಾಂತರಗಳಿಂದ ನಿನ್ನೆ ಜಗದಿಂದ ಒಯ್ದನು. ಬಲರಾಮ ಬಾಬುವಿನ ಮರಣದ ವಿಷಯ ನಿಮಗೆ ಆಗಲೇ ಗೊತ್ತಿದೆ.

೮. ಈಗ ಅವರ ಶಿಷ್ಯರು, ಅವರ ಪವಿತ್ರ ಭಸ್ಮಾವಶೇಷ, ಮತ್ತು ಪೀಠದೊಂದಿಗೆ ಎಲ್ಲಿ ನಿಲ್ಲುತ್ತಾರೆ ಎಂಬುದು ಗೊತ್ತಿಲ್ಲ. [ವಂಗದೇಶದಲ್ಲಿ ಜನರು ಮಾತಿನಮಲ್ಲರು. ಕಾರ್ಯತಃ ಎಳ್ಳಷ್ಟು ಪ್ರಯೋಜನವಿಲ್ಲವೆಂಬುದು ನಿಮಗೂ ಗೊತ್ತಿದೆ.] ಅವರ ಶಿಷ್ಯರೆಲ್ಲರೂ ಸನ್ಯಾಸಿಗಳು. ಅವರ ದಾರಿ ಎಲ್ಲಿಗೆ ಒಯ್ಯುವುದೋ ಅಲ್ಲಿಗೆ ಹೋಗಲು ಅವರು ಸಿದ್ಧರಾಗಿರುವರು. ಆದರೆ ನಾನು ಅವರ ಸೇವಕ. ಬಹಳ ವ್ಯಥೆಗೆ ಈಡಾಗಿರುವೆನು. ಭಗವಾನ್ ಶ್ರೀ ರಾಮಕೃಷ್ಣರ ಭಸ್ಮಾವಶೇಷವನ್ನು ಇಡಲು ಒಂದು ಸಣ್ಣ ಸ್ಥಳ ಸಿಕ್ಕಲಿಲ್ಲವಲ್ಲ ಎಂದು ನನ್ನ ಹೃದಯ ದುಃಖದಿಂದ ಕರಗುತ್ತಿದೆ.

೯. ಕೇವಲ ಒಂದುಸಾವಿರ ರೂಪಾಯಿನಿಂದ ಸ್ಥಳವನ್ನು ಕೊಂಡು ಒಂದು ಮಂದಿರವನ್ನು ಕಲ್ಕತ್ತೆಯ ಸಮೀಪದಲ್ಲಿ ಕಟ್ಟುವುದು ಸಾಧ್ಯವಿಲ್ಲ. ಅಂತಹ ಸ್ಥಳಕ್ಕೆ ಐದು ಸಾವಿರದಿಂದ ಏಳು ಸಾವಿರದವರೆಗಾದರೂ ಬೇಕಾಗುವುದು.

೧೦. ನೀವು ಒಬ್ಬರೆ ಈಗ ಇರುವ ಶ್ರೀ ರಾಮಕೃಷ್ಣರ ಶಿಷ್ಯರ ಸ್ನೇಹಿತರು, ಮತ್ತು ಉಪಕಾರಿಗಳು. ವಾಯುವ್ಯ ಪ್ರಾಂತ್ಯದಲ್ಲಿ ನಿಮ್ಮ ಕೀರ್ತಿ,

ಅಂತಸ್ತು, ಪರಿಚಿತರಾದವರು ಬಹಳ ಇರುವರು. ನಿಮ್ಮ ಪ್ರಾಂತ್ಯದಲ್ಲಿ ಪರಿಚಿತರಾದ ಕೆಲವು ಶ್ರೀಮಂತ ಧರ್ಮಿಷ್ಠರಿಂದ ಚಂದಾ ಎತ್ತುವಂತೆ ಎನಿಸಿದರೆ, ಅದು ಸೂಕ್ತವಾಗಿ ತೋರಿದರೆ ನೀವು ಅದನ್ನು ದಯವಿಟ್ಟು ವಿಚಾರಮಾಡಿ ನೋಡಿ. ವಂಗದೇಶದಲ್ಲಿ, ಗಂಗಾನದಿಯ ತೀರದಲ್ಲಿ, ಭಗವಾನ್ ಶ್ರೀ ರಾಮಕೃಷ್ಣರಿಗೆ ಮತ್ತು ಅವರ ಶಿಷ್ಯರು ವಾಸಿಸುವುದಕ್ಕೆ ಒಂದು ಸ್ಮಾರಕ ಮಂದಿರವನ್ನು ಕಟ್ಟುವುದು ಸೂಕ್ತವೆಂದು ತೋರಿ ಬಂದರೆ, ನೀವು ನನಗೆ ಅನುಮತಿಕೊಟ್ಟರೆ ನಾನು ಅಲ್ಲಿಗೆ ಬರುವುದಕ್ಕೆ ಸಿದ್ಧನಾಗಿರುವೆನು. ನನ್ನ ಗುರುದೇವನ ಮತ್ತು ಆತನ ಶಿಷ್ಯರ ಮಹಾ ಪವಿತ್ರವಾದ ಆ ಕಾರ್ಯಕ್ಕೆ ಮನೆಯಿಂದ ಮನೆಗೆ ಭಿಕ್ಷವೆತ್ತಲು ಹೋಗು ವುದಕ್ಕೆ ನನಗೆ ಸ್ವಲ್ಪವಾದರೂ ಅವಮಾನವಿಲ್ಲ. ವಿಶ್ವನಾಥನನ್ನು ಧ್ಯಾನಿಸಿ ಈ ಸಲಹೆಗಳ ಮೇಲೆ ದೀರ್ಘಾಲೋಚನೆಮಾಡಿ ನೋಡಿ. ನಿಷ್ಕಪಟಿಗಳಾದ ವಿದ್ಯಾವಂತರು, ಯುವಕರು, ಒಳ್ಳೆಯ ಮನೆತನಗಳಿಂದ ಬಂದ ಸನ್ಯಾಸಿಗಳು, ಕೇವಲ ಇಳಿದುಕೊಳ್ಳುವುದಕ್ಕೆ ಒಂದು ಮನೆ ಮತ್ತು ಇತರ ಸಹಾಯ ಗಳಿಲ್ಲದೆ, ಶ್ರೀ ರಾಮಕೃಷ್ಣರ ಆದರ್ಶಗಳಿಗೆ ಸರಿಯಾಗಿ ಬಾಳಲಿಲ್ಲವೆಂದರೆ ಅದು ನಮ್ಮ ದೇಶದ ದುರ್ದೈವವಷ್ಟೆ.

೧೧. "ನೀವು ಸನ್ಯಾಸಿಗಳು, ಈ ಆಸೆಗಳನ್ನೆಲ್ಲ ಮನಸ್ಸಿಗೆ ಯಾತಕ್ಕೆ ಹಚ್ಚಿಕೊಳ್ಳುತ್ತೀರಿ" ಎಂದು ನೀವು ನನ್ನನ್ನು ಕೇಳಿದರೆ ನಾನು ಹೀಗೆ ಹೇಳುವೆನು—ನಾನು ಶ್ರೀ ರಾಮಕೃಷ್ಣರ ದಾಸ; ಅವರು ಜನ್ಮವೆತ್ತಿ ಸಾಧನೆಮಾಡಿದ ದೇಶದಲ್ಲಿ ಅವರ ಹೆಸರನ್ನು ಸ್ಥಾಪಿಸುವುದಕ್ಕೆ ಅವರ ಆದರ್ಶಗಳನ್ನು ಅನುಷ್ಠಾನಕ್ಕೆ ತರಲು ಪ್ರಯತ್ನಿಸುವ ಶಿಷ್ಯರಿಗೆ ಸ್ವಲ್ಪ ಸಹಾಯಮಾಡುವುದಕ್ಕೆ, ನಾನು ಕಳ್ಳತನ, ದರೋಡೆಯನ್ನು ಮಾಡಲೂ ಕೂಡ ಸಿದ್ಧನಾಗಿರುವೆನು. ನೀವು ನನ್ನ ಬಹಳ ಹತ್ತಿರದ ಬಂಧುಗಳೆಂದು ತಿಳಿದುಕೊಂಡಿರುವೆನು. ಅದಕ್ಕೆ ನನ್ನ ಹೃದಯದಲ್ಲಿರುವ ವಿಷಯಗಳನ್ನು ನಿಮ್ಮ ಮುಂದೆ ಇಡುವೆನು. ಇದಕ್ಕೋಸ್ಕರವಾಗಿಯೆ ನಾನು ಕಲ್ಕತ್ತೆಗೆ ಪುನಃ ಬಂದಿರುವೆನು. ನಾನು ನಿಮ್ಮಲ್ಲಿನಿಂದ ಹೊರಡುವುದಕ್ಕೆ ಮುಂಚೆ ನಿಮಗೆ ಎಲ್ಲವನ್ನೂ ಹೇಳಿರುತ್ತೇನೆ. ಈಗ ನಿಮಗೆ ಯಾವುದು ಸೂಕ್ತ ವೆಂದುತೋರುವುದೋ, ಅದನ್ನು ಮಾಡಲು ಬಿಟ್ಟಿರುವೆನು.

೧೨. ಕಾಶಿ ಮುಂತಾದ ಸ್ಥಳಗಳಲ್ಲಿ ನೀವು ಅದನ್ನು ಸ್ಥಾಪಿಸುವುದು ಉತ್ತಮವೆಂದು ವಾದಿಸಿದರೆ—ಅವರು ಜನ್ಮವೆತ್ತಿದ, ಸಾಧನೆ ಮಾಡಿದ ಸ್ಥಳದಲ್ಲಿ ಸ್ಮಾರಕ ಮಂದಿರವನ್ನು ಕಟ್ಟದೇ ಇದ್ದರೆ ಬಹಳ ಶೋಚನೀಯವಾದ ಸಂಗತಿ ಎಂದು ನಾನು ಹೇಳಬೇಕಾಗುವುದು! ವಂಗದೇಶದ ಸ್ಥಿತಿ ಅತಿ ಶೋಚನೀಯವಾಗಿದೆ. ತ್ಯಾಗವೆಂದರೆ ಅದರ ನಿಜವಾದ ಅರ್ಥವೇನೆಂಬುದನ್ನು ಕೂಡ ಇಲ್ಲಿಯ ಜನರು ಆಲೋಚಿಸಿಲ್ಲ. ಐಶ್ವರ್ಯ ಮತ್ತು ಭೋಗ ಲಾಲಸೆಗಳು ನಮ್ಮ ಜೀವನದ ಸಾರವನ್ನು ನಾಶಮಾಡುತ್ತಿವೆ. ಭಗವಂತನು ತ್ಯಾಗವನ್ನು, ನಿಷ್ಕಾಪಂಚಿಕತೆಯನ್ನು ಇಲ್ಲಿಗೆ ದಯಪಾಲಿಸಲಿ. ಇಲ್ಲಿಯ ಜನಗಳಿಗೆ ಹೊಗಳಿಕೊಳ್ಳುವುದಕ್ಕೆ ಏನೂ ಇಲ್ಲ. ಇಂತಹ ಧರ್ಮಕಾರ್ಯಗಳಲ್ಲಿ ವಾಯವ್ಯ ಪ್ರಾಂತ್ಯದ ಜನರು ಬಹಳ ಉತ್ಸಾಹಿಗಳು. ದಯಪಿಟ್ಟು ನಿಮಗೆ ಯಾವುದು ಉತ್ತಮವೆಂದು ತೋರುತ್ತದೋ ಆ ಉತ್ತರವನ್ನು ಕಳುಹಿಸಿ. ಗ—ಇನ್ನೂ ಬಂದಿಲ್ಲ. ಬಹುಶಃ ನಾಳೆ ಬರಬಹುದು. ಅವನನ್ನು ಪುನಃ ನೋಡಲು ನಾನು ತುಂಬ ಕಾತುರನಾಗಿದ್ದೇನೆ.

ದಯಪಿಟ್ಟು ಮೇಲಿನ ವಿಳಾಸಕ್ಕೆ ಪತ್ರವನ್ನು ಬರೆಯಿರಿ.

ನಿಮ್ಮ
ವಿವೇಕಾನಂದ.

(೭)

ಬಾಗ್ ಬಜಾರ್.
೬ ನೇ ಜುಲೈ ೧೮೯೦.

ಪ್ರಿಯ ಸಾ—ಮತ್ತು ಶ—,

ನಿಮ್ಮ ಪತ್ರಗಳು ಸಕಾಲಕ್ಕೆ ತಲುಪಿತು. ವರುಷದ ಈ ಕಾಲದಲ್ಲಿ ಆಲ್ಮೋರ ಬಹಳ ಆರೋಗ್ಯವೆಂದು ಹೇಳುತ್ತಾರೆ. ಆದರೂ ನೀನು ಖಾಯಿಲೆ ಬಿದ್ದಿರುವೆ! ಇದು ಮಲೇರಿಯಾ ಜ್ವರವಲ್ಲವೆಂದು ಭಾವಿಸಿದ್ದೇನೆ.

ಗ....ನದು ಅದೇ ನಮ್ರ ಸ್ವಭಾವ. ಅವನ ಗಡಿಬಿಡಿಯ ಪ್ರಕೃತಿ ತಿರುಗಾಟದಿಂದ ಸ್ವಲ್ಪ ತಗ್ಗಿ, ನಮಗೂ ನಮ್ಮ ಗುರುದೇವನಿಗೂ ಹೆಚ್ಚು ಪ್ರೇಮವಿರುವಂತೆ ಕಾಣುತ್ತದೆ. ಅವನು ನಿರ್ಭಯನು; ಧೈರ್ಯಶಾಲಿ,

ನಿಷ್ಕಪಟಿ—ಮತ್ತು ನಿಶ್ಚಲನು. ಅವನಿಗೆ ಬೇಕಾಗಿರುವುದೊಂದೇ—ಒಬ್ಬ ದಾರಿ ತೋರುವವರು. ಅಂತಹವರಿಗೆ ಸ್ವಭಾವತಃ ಗೌರವ ತೋರಿ, ಹೇಳಿದಂತೆ ಕೇಳುವನು. ಇದರಿಂದ ಒಬ್ಬ ಉತ್ತಮ ಮಾನವನಾಗುವನು.

ನನಗೆ ಈ ವೇಳೆ ಘಾಜೀಪುರವನ್ನು ಬಿಡಲು ಇಚ್ಛೆ ಇರಲಿಲ್ಲ. ಅದರಲ್ಲೂ ಕಲ್ಕತ್ತೆಗೆ ಬರುವುದಕ್ಕೆ ಮೊದಲೇ ಮನಸ್ಸಿರಲಿಲ್ಲ. ಆದರೆ ಕಾ—ರೋಗದ ಪ್ರಯುಕ್ತ ಕಾಶಿಗೆ ಹೋಗಬೇಕಾಯಿತು. ಬಲರಾಮ ಬಾಬುರ ಆಕಸ್ಮಿಕ ಮರಣದಿಂದ ಕಲ್ಕತ್ತೆಗೆ ಬರುವಂತಾಯಿತು. ಅಂತು ಸುರೇಶಬಾಬು ಮತ್ತು ಬಲರಾಮಬಾಬು ಇಬ್ಬರು ಪರಲೋಕಕ್ಕೆ ಪ್ರಯಾಣ ಮಾಡಿದಂತೆ ಆಯಿತು. ಗಿ.ಚ—ಈಗ ಮಠದ ಖರ್ಚನ್ನು ಕೊಡುತ್ತಿರುವನು. ನನಗೆ ಪ್ರಯಾಣಕ್ಕೆ ಹಣ ಸಿಕ್ಕಿದ ಒಡನೆಯೆ ಅಲ್ಮೋರ, ನಂತರ ಘಾರ್‌ವಾಲ್ ಪ್ರಾಂತ್ಯದಲ್ಲಿ ಗಂಗಾನದೀ ತೀರದಲ್ಲಿ ಯಾವುದಾದರೊಂದು ಹಳ್ಳಿಯಲ್ಲಿ ದೀರ್ಘ ಧ್ಯಾನಕ್ಕೆ ನಿಲ್ಲಬೇಕೆಂದು ಆಸೆ ಇದೆ. ಗ—ನನ್ನೊಂದಿಗೆ ಬರುವನು, ಈ ಉದ್ದೇಶಕ್ಕಾಗಿಯೆ ಆಸೆಪಟ್ಟು ಅವನನ್ನು ಕಾಶ್ಮೀರದಿಂದ ಕರೆದುಕೊಂಡು ಬಂದುದು.

ಕಲ್ಕತ್ತೆಗೆ ಬರುವ ವಿಚಾರವಾಗಿ ನೀವೇನು ಅವಸರ ಪಡಬೇಕಾದುದಿಲ್ಲ. ಇದುವರೆವಿಗೂ ಅಲೆದದ್ದೇನೊ ಆಯಿತು. ಆದರೇನು, ಇನ್ನೊಂದನ್ನು ಮಾಡಿಲ್ಲ. ಅದನ್ನು ಮಾಡಬೇಕು. ಅದೇ ಒಂದು ಸ್ಥಳದಲ್ಲಿ ಕುಳಿತು ಧ್ಯಾನದಲ್ಲಿ ತತ್ಪರನಾಗುವುದು. ಜ್ಞಾನವೆಂದರೆ ನಾವು ಒಬ್ಬ ಹುಡುಗಿಯನ್ನು ಗಾಢ ನಿದ್ರೆಯಿಂದ ಎಬ್ಬಿಸಿ ತಕ್ಷಣವೆ "ಮಗಳೆ, ಏಳು ನಿನಗೆ ಮದುವೆ ಕಾದು ನಿಂತಿದೆ" ಎಂದು ಹೇಳುವಂತೆ ಅಲ್ಲವೆಂದು ತೋರುತ್ತದೆ. ಯಾವ ಯುಗದಲ್ಲಾದರೂ ಕೂಡ ಎಲ್ಲೋ ಅಲ್ಪಮಂದಿ ಜ್ಞಾನವನ್ನು ಪಡೆಯುವರು, ಎಂಬುದು ನನ್ನ ನಿರ್ದಿಷ್ಟಮತ. ಅದಕ್ಕೋಸ್ಕರವೆ ಸಾಧನೆ, ಇದನ್ನು ನಾವು ಸಾಯುವವರೆವಿಗೂ ಮಾಡಬೇಕು. ಇದು ನಾನು ಹೇಳುವ ರೀತಿ ಎಂಬುದು ನಿನಗೆ ಗೊತ್ತೇ ಇದೆ. ಈ ಆಧುನಿಕ ಸನ್ಯಾಸಿಯ ಜ್ಞಾನದ ಠಕ್ಕು ನನಗೆ ಚೆನ್ನಾಗಿ ಗೊತ್ತಿದೆ. ಶಾಂತಿ ಮತ್ತು ಶಕ್ತಿ ನಿನಗೆ ಬರಲಿ.—ರಾ—ವೊಂದಿಗೆ ಬೃಂದಾವನದಲ್ಲಿರುವನು—ಚೆನ್ನ ಮಾಡುವುದನ್ನು ಕಲಿತಿರುವನಂತೆ! ಪಕ್ಕ ಜ್ಞಾನಿಯೆ ಆಗಿರುವ

ನೆಂದು ರಾ—ಕಾಗದ ಬರೆಯುತ್ತಾನೆ! ದೇವರು ಅವನನ್ನು ಆಶೀರ್ವದಿಸಲಿ ಅಂತೆಯೆ ನೀವು ಕೂಡ ಶಾಂತಿಃ ಶಾಂತಿಃ ಎಂದು ಹೇಳಿ.

ಈಗ ನಾನು ಸಂಪೂರ್ಣವಾಗಿ ಆರೋಗ್ಯವಾಗಿರುವೆನು. ಘಾಜಿಪುರದಲ್ಲಿದ್ದಾಗ ಪಡೆದ ಆರೋಗ್ಯ ಲಾಭ ಕೆಲವು ಕಾಲದವರೆವಿಗೂ ಖಂಡಿತ ಇರುತ್ತದೆಂದು ತಿಳಿಯುತ್ತೇನೆ. ಹಿಮಾಲಯಕ್ಕೆ ಒಮ್ಮೆ ಹೋಗಬೇಕೆಂದು ತುಂಬ ಕುತೂಹಲವಿದೆ. ಈ ಬಾರಿ ನಾನು ಪವಹಾರಿ ಬಾಬನ ಬಳಿಗಾದರೂ ಆಗಲಿ ಅಥವಾ ಇನ್ನು ಯಾವ ಮಹಾತ್ಮನ ಬಳಿಗಾದರೂ ಆಗಲಿ ಹೋಗುವುದಿಲ್ಲ. ಅದೆಲ್ಲ ಒಬ್ಬನನ್ನು ಜೀವನದ ಮುಖ್ಯ ಉದ್ದೇಶದಿಂದ ಕದಲಿಸುತ್ತದೆ. ನೇರವಾಗಿ ಹೋಗಬೇಕು.

ಆಲ್ಮೋರದಲ್ಲಿ ಹವಾಗುಣ ಹೇಗಿದೆ? ಸಾ—ಆಗಲೀ, ನೀನಾಗಲಿ ಇಲ್ಲಿಗೆ ಬರಬೇಕಾಗಿಲ್ಲ. ಒಂದೇ ಸ್ಥಳದಲ್ಲಿ ಇಷ್ಟೊಂದು ಮಂದಿ ಕಲೆತು ಆತ್ಮೋನ್ನತಿಗೂ ಅನುಕೂಲವಾಗದೆ ಇದ್ದು ಪ್ರಯೋಜನವೇನು? ಊರಿಂದ ಊರಿಗೆ ಯಾವಾಗಲೂ ಅಲೆದಾಡುತ್ತ ಹುಚ್ಚರಾಗಬೇಡಿ. ಅದೇನೋ ಒಳ್ಳೆಯದೇನೋ ಹೌದು. ಆದರೆ ನೀವು ಧೀರರಾಗಬೇಕು.

ನಿರ್ಮಾನ ಮೋಹಾ ಜಿತಸಂಗ ದೋಷಾ
ಅಧ್ಯಾತ್ಮ ನಿತ್ಯಾ ವಿನಿವೃತ್ತಕಾಮಾಃ ।
ದ್ವಂದ್ವೈರ್ವಿಮುಕ್ತಾ ಸುಖದುಃಖ ಸಂಜ್ಞೈ
ಗಚ್ಛಂತ್ಯಮೂಢಾಃ ಪದಮವ್ಯಯಂ ತತ್ ॥

ಮೋಹದಿಂದ ಪಾರಾಗಿ ಆಸಕ್ತಿಯಿಂದ ದೂರನಾಗಿ ಯಾವಾಗಲೂ ಆತ್ಮನಲ್ಲಿ ಒಂದಾಗಿ, ಆಸೆಗಳಿಂದ ಬಿಡಲ್ಪಟ್ಟವನಾಗಿ ಸುಖದುಃಖಗಳೆಂಬ ಎರಡರಿಂದಲೂ ದೂರನಾಗಿ, ಮೋಹಗೊಳ್ಳದವರು ಶಾಶ್ವತವಾದ ಗುರಿಯನ್ನು ಸೇರುವರು.

ಯಾರು ಬೆಂಕಿಯೊಳಗೆ ಬೀಳು ಎನ್ನುವರು? ಸಾಧನೆಗೆ ಹಿಮಾಲಯ ಒಳ್ಳೆ ಸ್ಥಳವಲ್ಲದೆ ಇದ್ದರೆ ನೀನು ಎಲ್ಲಿಗಾದರೂ ಹೋಗು. ಅನೇಕ ಕೆಲಸಕ್ಕೆ ಬಾರದ ವಿಚಾರಗಳನ್ನು ಕೇಳುವುದು ನಿರ್ಮಲವಾದ ಮನಸ್ಸನ್ನು

ತೋರುವುದು. ಶಕ್ತಿಮಾನ್ ಎದ್ದೇಳು, ವೀರ್ಯವಂತನಾಗು! ಮರಳಿ ಮರಳಿ ಪ್ರಯತ್ನಪಡು. ಮರಳಿ ಮರಳಿ ಹೋರಾಡು. ಹೆಚ್ಚಿಗೆ ಬರೆಯುವುದಕ್ಕೆ ಇನ್ನೇನೂ ವಿಶೇಷವಿಲ್ಲ.

ನಿನ್ನ ವಿಶ್ವಾಸದ, ವಿವೇಕಾನಂದ.

(೮)

ಬೊಂಬಾಯಿ,
೨೦ ನೇ ಸೆಪ್ಟೆಂಬರ್, ೧೮೯೨

ಪ್ರಿಯ ಪಂಡಿತಜಿ ಮಹಾರಾಜರೆ,

ನಿಮ್ಮ ಕಾಗದ ಸಕಾಲದಲ್ಲಿ ತಲುಪಿತು. ನಾನು ನಿಮ್ಮ ಹೊಗಳಿಕೆಗೆ ಪಾತ್ರನಲ್ಲದೆ ಇದ್ದರೂ ನೀವು ನನ್ನನ್ನು ಏತಕ್ಕೆ ಹೊಗಳುತ್ತೀರೊ ತಿಳಿಯದು. ಏಸುಕ್ರಿಸ್ತ ಹೇಳುವಂತೆ "ದೇವರಲ್ಲದೆ ಮತ್ತಾರೂ ಒಳ್ಳೆಯವರಲ್ಲ." ಉಳಿದವರೆಲ್ಲರೂ ಆತನ ಕೈಯಲ್ಲಿರುವ ಯಂತ್ರ ಸದೃಶ (Gloria in Excelsis). "ಪರಮಪೂಜ್ಯಸ್ಥಾನದಲ್ಲಿರುವ ದೇವನಿಗೆ ಜಯವಾಗಲಿ." ಇಂತಹವರು ಮಾತ್ರ ಹೊಗಳಿಕೆಗೆ ಪಾತ್ರರು. ನನ್ನಂತಹ ಅಪಾತ್ರನಲ್ಲ. "ಕೂಲಿಯು ಜೀತಮಾಡುವುದಕ್ಕೆ ಯೋಗ್ಯನಲ್ಲ" ಎಂಬುದನ್ನು ಕೇಳಿ. ಅದರಲ್ಲೂ ಫಕೀರನು ಯಾವ ಸ್ತೋತ್ರಕ್ಕೂ ಅರ್ಹನಲ್ಲ. ನಿಮ್ಮ ಆಳು ಆತನ ಕೆಲಸವನ್ನು ಮಾಡಿದುದಕ್ಕೆ ಅವನನ್ನು ಹೊಗಳುತ್ತೀರೇನು.

ಪಂಡಿತ ಸ—ಮತ್ತು ಪ್ರೊಫೆಸರ್ ನನ್ನನ್ನು ವಿಶ್ವಾಸದಿಂದ ಜ್ಞಾಪಿಸಿಕೊಂಡಿರುವುದಕ್ಕೆ ಅನಂತ ವಂದನೆಗಳು.

ನಾನು ಈಗ ಬೇರೊಂದು ವಿಷಯವನ್ನು ಹೇಳುತ್ತೇನೆ. ಹಿಂದೂವಿನ ಆಲೋಚನೆ ಯಾವಾಗಲೂ ಕೊಟ್ಟ ನಿರ್ಣಯಗಳಿಂದ ಊಹೆಗೆ ಬರುವುದು (Deductive). ಅಲ್ಲಿ ಎಂದಿಗೂ ಊಹೆಗಳಿಂದ ನಿರ್ಣಯಕ್ಕೆ ಬರುವುದಾಗಲೀ (Inductive) ಅಥವಾ ಸಂಯೋಜನ ರೀತಿಯಿಂದಾಗಲೀ (Synthetic) ಇಲ್ಲ. ನಮ್ಮ ತತ್ವಶಾಸ್ತ್ರದಲ್ಲೆಲ್ಲಾ ಬೇಕಾದಷ್ಟು ಸೂಕ್ಷ್ಮ ವಾದಸರಣಿ ಇದೆ. ಅದೆಲ್ಲಾ ಯಾವುದಾದರೊಂದು ಪ್ರಮೇಯದ (Proposition) ಪೂರ್ಣ ನಂಬಿಕೆಯ ಮೇಲಿದೆ. ಆ ಪ್ರಮೇಯವೇ

ಕೆಲಸಕ್ಕೆ ಬಾರದೆ ಇರಬಹುದು. ಈ ಪ್ರಮೇಯಗಳ ಸತ್ಯವನ್ನು ಯಾರೂ ಪ್ರಶ್ನಿಸಲಿಲ್ಲ. ಅಥವಾ ಅದನ್ನು ಹುಡುಕುವುದಕ್ಕೆ ಕಷ್ಟ ತೆಗೆದುಕೊಳ್ಳಲಿಲ್ಲ. ಆದಕಾರಣ ನಾವು ಹೇಳಬಹುದಾದ ಸ್ವತಂತ್ರ ಆಲೋಚನೆಯು ಸ್ವಲ್ಪವೂ ಇಲ್ಲ. ಆದಕ್ಕೋಸ್ಕರವೇ ಸಂಶೋಧನೆ ಮತ್ತು ಸಾಮಾನ್ಯ ವಿಧಾನಕ್ಕೆ ತರುವ ಪರಿಶ್ರಮ ಫಲವಾದ ಭೌತಿಕ ಶಾಸ್ತ್ರಗಳಿಗೆ ನಮ್ಮಲ್ಲಿ ಬಗಾಲ. ಹೀಗೆ ಆಗುವುದಕ್ಕೆ ಕಾರಣವೇನು? ಇದಕ್ಕೆ ಎರಡು ಕಾರಣಗಳಿವೆ. ಈ ದೇಶದ ಅತಿ ಉಷ್ಣ ನಮ್ಮನ್ನು ಚಟುವಟಿಕೆಯ ಪ್ರಕೃತಿಗಿಂತ ಹೆಚ್ಚಾಗಿ ವಿಶ್ರಾಂತಿ ಮತ್ತು ಆಲೋಚನಾ ತತ್ಪರತೆಯನ್ನು ಪ್ರೀತಿಸುವಂತೆ ಬಲಾತ್ಕರಿಸಿರುವುದೊಂದು. ಪುರೋಹಿತ ರಾದ ಬ್ರಾಹ್ಮಣರು ದೂರದೇಶಗಳಿಗೆ ಹೋಗದೆ, ಸಮುದ್ರಯಾನಮಾಡದೆ ಇದ್ದುದೊಂದು ಮತ್ತೊಂದು. ಸಮುದ್ರಯಾನಮಾಡಿದವರು, ದೂರ ದೇಶಗಳಿಗೆ ಹೋದವರು ಕೆಲವರು ಇದ್ದರು. ಆದರೆ ಅವರು ಯಾವಾಗಲೂ ವರ್ತಕರಾಗಿದ್ದರು. ಪುರೋಹಿತರ ಕಾಟ, ಲಾಭದ ಆಸೆ ಇವು ಅವರ ಬುದ್ಧಿಯ ವಿಕಾಸದ ಅವಕಾಶವನ್ನು ಅಪಹರಿಸಿದ್ದುವು. ಆದುದರಿಂದ ಅವರ ಅಭಿಪ್ರಾಯ ಮಾನವನ ಬುದ್ಧಿಯ ವೈಶಾಲ್ಯತೆಯನ್ನು ಹೆಚ್ಚಿಸುವ ಬದಲು ಅದನ್ನು ಕುಲಗೆಡಿಸಿತ್ತು. ಅವರ ಅಭಿಪ್ರಾಯ ಹೀನವಾಗಿತ್ತು. ಹೇಳುವ ರೀತಿಯಲ್ಲಿ ಉತ್ಪ್ರೇಕ್ಷೆ ತುಂಬಿತ್ತು; ವಿಷಯಗಳ ಸಹಜರೀತಿ ಮಾಯವಾಗಿ ಅನೇಕ ವಿಚಿತ್ರ ವೇಷಗಳನ್ನು ಧರಿಸಿದುವು.

ನೀವು ನೋಡಿ, ಆದಕ್ಕೇ ಪ್ರಯಾಣಮಾಡಬೇಕೆನ್ನುವುದು. ದೂರದೇಶಗಳಿಗೆ ಹೋಗಬೇಕು. ಅಲ್ಲಿ ಸಾಮಾಜಿಕ ಯಂತ್ರವು ಹೇಗೆ ಕೆಲಸಮಾಡುತ್ತಿದೆ ಎನ್ನುವುದನ್ನು ನೋಡಬೇಕು. ನಾವು ಇನ್ನೊಮ್ಮೆ ಒಂದು ಜನಾಂಗವಾಗಬೇಕಾದರೆ ಬೇರೆ ದೇಶದವರ ಮನಸ್ಸಿನಲ್ಲಿ ಏನಾಗುತ್ತಿದೆಯೆಂಬುದನ್ನು ತಿಳಿದುಕೊಳ್ಳಲು, ಸ್ವತಂತ್ರವಾದ ಸರಳವಾದ ಸಂಬಂಧವನ್ನು ಕಲ್ಪಿಸಿಕೊಳ್ಳಬೇಕು. ಎಲ್ಲಕ್ಕಿಂತ ಹೆಚ್ಚಾಗಿ ಮತ್ತೊಬ್ಬ ರನ್ನು ಹಿಂಸಿಸುವುದನ್ನು ಬಿಡಬೇಕು. ನಾವು ಎಂತಹ ಹೀನಸ್ಥಿತಿಗೆ ಬಂದಿರುವೆವು. ಏನಾದರೂ ಒಬ್ಬ ಪಂಚಮ ಪರಯನಂತೆ ಬಂದರೆ ಅವನಿಗೆ ಪ್ಲೇಗಿನಂತೆ ಅಂಜಿ ದೂರವಿರಿಸುತ್ತೇವೆ. ಆದರೆ ಪಾದ್ರಿ

ಯೊಬ್ಬನು ಕೆಲವು ಮಂತ್ರಗಳನ್ನು ಗೊಣಗುಟ್ಟಿ, ಒಂದು ಲೋಟ ನೀರನ್ನು ಅವನ ತಲೆಯಮೇಲೆ ಅಭಿಷೇಕ ಮಾಡಿದಮೇಲೆ, ಅವನು ಎಷ್ಟು ಹರಿದುಹೋದ ಅಂಗಿಯನ್ನಾದರೂ ಹಾಕಿಕೊಂಡು ಆಚಾರ ನಿಷ್ಠನಾದ ಹಿಂದೂವಿನ ಕೋಣೆಯೊಳಗೆ ಬಂದರೆ, ಅವನಿಗೆ ಕುಳಿತು ಕೊಳ್ಳುವುದಕ್ಕೆ ಒಂದು ಕುರ್ಚಿಯನ್ನು ಕೊಟ್ಟು, ಕರಲಾಘವವನ್ನು ಕೊಡದ ಧೈರ್ಯವಂತನು ಯಾರೂ ಇಲ್ಲ! ವಿಚಿತ್ರ ಇದಕ್ಕಿಂತ ಹೆಚ್ಚು ಹೋಗಲಾರದು. ದಕ್ಷಿಣದಲ್ಲಿ ಪಾದ್ರಿಗಳು ಏನು ಮಾಡುತ್ತಿರುವರು ಎಂಬುದನ್ನು ಒಂದು ನೋಡಿ. ಲಕ್ಷಗಟ್ಟಲೆ ಕೀಳುಮತದವರನ್ನು ಕ್ರೈಸ್ತ ಸಂಗಡಕ್ಕೆ ಸೇರಿಸುತ್ತಿರುವರು. ಇಂಡಿಯಾ ದೇಶದಲ್ಲಿ ಉಗ್ರ ಪುರೋಹಿತರ ದಬ್ಬಾಳಿಕೆಗೆ ತುತ್ತಾದ ದೇಶ ತಿರುವಾಂಕೂರು. ಅಲ್ಲಿ ಪ್ರತಿಯೊಂದು ಅಂಗುಲದ ಭೂಮಿಯೂ ಬ್ರಾಹ್ಮಣರಿಗೆ ಸೇರಿದೆ. ಅಲ್ಲಿ ಕಾಲುಭಾಗ ಆಗಲೇ ಕ್ರೈಸ್ತಮತಾವಲಂಬಿಗಳಾಗಿರುವರು! ನಾನು ಅವರನ್ನು ದೂರುವುದಿಲ್ಲ. ಡೇವಿಡ್ ಮತ್ತು ಜೀಸಸ್ಸಿನ ಕಾರ್ಯದಲ್ಲಿ ಇವರಿಗೆ ಪಾತ್ರವಿದೆಯೆ? ಎಂದು, ಎಂದು, ಹೇ ದೇವ, ಮಾನವನು ಇನ್ನೊಬ್ಬನಿಗೆ ಸಹೋದರನಾಗುತ್ತಾನೆ?

ನಿಮ್ಮ ವಿವೇಕಾನಂದ.

(೯)

ಖೇತ್ರಿ,
೨೮ ನೇ ಏಪ್ರಿಲ್ ೧೮೯೩

ಡಾಕ್ಟರ್ ಮಹಾಶಯರೆ,

ನಿಮ್ಮ ಪತ್ರ ಈಗತಾನೆ ತಲುಪಿತು. ನನ್ನಂತಹ ಮನುಷ್ಯನ ಮೇಲೆ ನೀವು ಇಷ್ಟು ವಿಶ್ವಾಸವಿಟ್ಟಿರುವುದು ತುಂಬ ಸಂತೋಷ. ಅಯ್ಯೋ ಪಾಪ! ಒ—ತನ್ನ ಮಗನನ್ನು ಕಳೆದುಕೊಂಡನೆಂದು ಕೇಳಿ ವಿಷಾದವಾಗುವುದು. "ದೇವರು ಕೊಟ್ಟ. ದೇವರು ತೆಗೆದುಕೊಂಡ. ಆತನ ನಾಮವೇ ಧನ್ಯವಾಗಲಿ." ಯಾವುದೂ ನಾಶವಾಗಿಲ್ಲ. ಮತ್ತು ನಾಶವಾಗಲಾರದು ಎಂಬುದು ಮಾತ್ರ ನಮಗೆ ಗೊತ್ತು. ಶಾಂತಭಾವ

ದಲ್ಲಿ ಬಂದುದಕ್ಕೆ ತಲೆಬಾಗುವುದೇ ನಮ್ಮ ಕರ್ತವ್ಯ. ಸೇನಾನಾಯಕನು ಯೋಧನನ್ನು ಗುಂಡಿನ ಬಾಯೊಳಗೆ ಹೋಗೆಂದರೆ, ಅವನನ್ನು ದೂರಲು ಅಥವಾ ಅದಕ್ಕೆ ಗೊಣಗುಟ್ಟಲು ಅಧಿಕಾರವೆಲ್ಲಿರುವುದು. ಬ—ನ ದುಃಖ ವನ್ನು ದೇವರೇ ಸಂತಯಿಸಲಿ. ಈ ದುಃಖವೇ ಅವನನ್ನು ಕೃಪಾಮಯನ ಎಡೆಗೆ ಒಯ್ಯಲಿ.

ಹಡಗಿನಲ್ಲಿ ಹೊರಡುವ ವಿಚಾರದಲ್ಲಿ ನಾನಾಗಲೇ ಬೊಂಬಾಯಿ ಯಿಂದ ಅಣಿಮಾಡಿರುವೆನು. ಬ—ಗೆ ರಾಜನಾಗಲಿ, ನನ್ನ ಗುರುಭಾಯಿ ಗಳಾಗಲಿ ಯಾರೂ ಅಡ್ಡಿ ಬರುವುದಿಲ್ಲ, ಎಂಬುದನ್ನು ತಿಳಿಸಿ. ರಾಜಾದೆಗೆ ನನ್ನ ಮೇಲಿರುವ ಪ್ರೇಮಕ್ಕೆ ಮೇರೆ ಇಲ್ಲ. ಸರ್ವಮಂಗಳದಾಯಕನು ನಮ್ಮನ್ನು ಇಹದಲ್ಲಿಯೂ ಪರದಲ್ಲಿಯೂ ಆಶೀರ್ವದಿಸಲಿ ಎಂಬುದೆ ನನ್ನ ಅನವರತ ಪ್ರಾರ್ಥನೆ.

ವಿವೇಕಾನಂದ.

(೧೦)

ಬೊಂಬಾಯಿ,
೨೨ ನೇ ಮೇ ೧೮೯೩.

ದಿವಾನ್ ಸಾಹೇಬ್,

ಬೊಂಬಾಯಿಗೆ ಕೆಲವು ದಿನಗಳ ಹಿಂದೆ ಬಂದೆನು. ಕೆಲವು ದಿನ ಗಳಲ್ಲಿ ಇಲ್ಲಿಂದ ಹೊರಡುವೆನು. ನಿಮ್ಮ ಬನಿಯ ಸ್ನೇಹಿತನಿಗೆ ನಮಗೆ ಇಳಿದುಕೊಳ್ಳುವುದಕ್ಕೆ ಸ್ಥಳಕೊಡಿ ಎಂದು ಬರೆದಿದ್ದಿರಿ; ಆತನು ನಮಗೆ ಆಗಲೇ ಅತಿಥಿಗಳು ಬಹಳವಾಗಿ ಇರುವರು; ಕೆಲವು ರೋಗಿಗಳು ಬೇರೆ ಇರುವರು; ಸ್ಥಳ ಸಂಕೋಚವಾದುದರಿಂದ ಇಳಿದುಕೊಳ್ಳಲು ಸ್ಥಳ ಕೊಡಲು ಆಗುವುದಿಲ್ಲ; ಎಂದು ಹೇಳುವುದಕ್ಕೆ ವಿಷಾದವಾಯಿತೆಂದು ಹೇಳುತ್ತಾನೆ. ಅಂತೂ ನಮಗೆ ಚೆನ್ನಾದ, ತಂಪಾದ ಸ್ಥಳ ಸಿಕ್ಕಿದೆ.

ಖೇತ್ರಿ ಮಹಾರಾಜರ ಆಪ್ತ ಕಾರ್ಯದರ್ಶಿಗಳು, ಮತ್ತು ನಾನು ಒಟ್ಟಿಗೆ ಇರುವೆವು. ನನ್ನ ಮೇಲೆ ಅವರು ಇಟ್ಟಿರುವ ವಿಶ್ವಾಸ ಮತ್ತು ದಯೆಗೆ ನಾನು ಎಷ್ಟು ಕೃತಜ್ಞನೆಂದು ಹೇಳುವುದು ಅಸಾಧ್ಯ. ಆತನನ್ನು

ರಾಜಪುತ್ರ ಸ್ಥಾನದಲ್ಲಿ ತಜಮಿ ಸರದಾರ್ ಎಂದು ಕರೆಯುತ್ತಾರೆ. ಅಂದರೆ ರಾಜರು ತಾವೆ ಎದ್ದು ಬಂದು ಇವರನ್ನು ಸ್ವಾಗತಿಸುವರು. ಆದರೂ ಅವರು ಎಷ್ಟು ಸರಳವಾಗಿರುವರು. ಕೆಲವು ವೇಳೆ ಅವರು ನನಗೆ ಮಾಡುವ ಸೇವೆಗೆ ನನಗೆ ನಾಚಿಕೆಯಾಗುತ್ತದೆ.

ಅನೇಕ ವೇಳೆ ಅತಿ ಸತ್ಪುರುಷರಿಗೂ ಕೂಡ ಕಷ್ಟ ಪ್ರಾಪ್ತವಾಗುವುದು. ಅದರಿಂದ ಅವರು ದುಃಖಪಡುವರು ಎಂಬುದನ್ನು ನಾವು ನೋಡುತ್ತೇವೆ. ಅದಕ್ಕೆ ನಾವು ಕಾರಣಕೊಡಲು ಆಗುವುದಿಲ್ಲ. ಪ್ರಪಂಚದ ಪ್ರತಿಯೊಂದರ ಅಂತರಾಳದಲ್ಲಿಯೂ ಕೂಡ ಒಳ್ಳೆಯತನವಿದೆ ಎನ್ನುವುದು ಕೂಡ ನನ್ನ ನಂಬಿಕೆಯಾಗಿದೆ. ಮೇಲೆ ಎಂತಹ ತರಂಗಗಳಿದ್ದರೂ ಅಂತರಾಳದಲ್ಲಿ ಪ್ರತಿಯೊಂದು ವಸ್ತುವಿನ ಹಿಂದೆ ಅನಂತ ಮಂಗಳ ಪ್ರೀತಿಯ ತಳಹದಿ ಇದೆ. ಆ ತಳಹದಿಯನ್ನು ನಾವು ಎಲ್ಲಿಯವರೆಗೂ ಸೇರುವುದಿಲ್ಲವೋ ಅಲ್ಲಿಯವರೆಗೂ ನಾವು ವ್ಯಥೆಪಡುವೆವು. ಅಂತಹ ಶಾಂತಿಯ ಆವರಣ ನಾವು ಒಮ್ಮೆ ಸೇರಿ ಆದ ಮೇಲೆ, ಬಿರುಗಾಳಿ ಬೀಸಲಿ, ಚಂಡಮಾರುತ ಬರಲಿ ಅನೇಕ ಶತಮಾನಗಳು ಬಂಡೆಯ ಮೇಲೆ ಕಟ್ಟಿದ ಮನೆ ಉರುಳುವುದಿಲ್ಲ.

ಒಳ್ಳೆಯವನು, ಪುಣ್ಯಾತ್ಮನು, ನಿಸ್ವಾರ್ಥನು ಆಗಿ ಇನ್ನೊಬ್ಬರಿಗೆ ಸದಾ ಹಿತವನ್ನು ಮಾಡಲು ಸಿದ್ಧನಾದ ನಿನ್ನಂತಹ ವ್ಯಕ್ತಿ ಗೀತೆಯಲ್ಲಿ ಹೇಳಿರುವ ಬ್ರಾಹ್ಮೀ ಸ್ಥಿತಿಯನ್ನು ಪಡೆದಿರುವೆ ಎಂದು ತಿಳಿಯುತ್ತೇನೆ.

ಪ್ರಪಂಚದಲ್ಲಿ ಪ್ರೀತಿಸಲು ಯೋಗ್ಯವಾದುದು ಒಂದೇ ವಸ್ತು. ಅದೇ ಭಗವಂತ. ನಿನಗೆ ಬಿದ್ದ ದುಃಖದ ಪೆಟ್ಟುಗಳು ಆತನೆಡೆಗೆ ನಿನ್ನನ್ನು ಒಯ್ಯಲಿ. ಭೂತ, ಭವಿಷ್ಯತ್ ವರ್ತಮಾನ ಕಾಲಗಳಲ್ಲಿ ನೀನು ಅವನನ್ನು ಸೇರು. ಇರುವ ಮತ್ತು ಕಳೆದುಹೋದ ಪ್ರತಿಯೊಂದು ವಸ್ತುವನ್ನು ಆತನಲ್ಲಿ ಮಾತ್ರ ನೀನು ಕಾಣಬಹುದು. ಆಶೀರ್ವಾದಗಳು.

ಸ್ನೇಹಪೂರ್ವಕ,
ವಿವೇಕಾನಂದ.

(೧೧)

ಬೊಂಬಾಯಿ,
೨೪ ನೇ ಮೇ, ೧೯೬೯

ಪ್ರಿಯ ತಾಯಿ,

ನಿಮ್ಮ ಮತ್ತು ಪ್ರಿಯ ಹರಿಪದನ ಪತ್ರಗಳು ತಲುಪಿ ಸಂತೋಷ ವಾಯಿತು. ನಾನು ನಿಮಗೆ ಮಧ್ಯೆ ಮಧ್ಯೆ ಕಾಗದ ಬರೆಯುತ್ತಿಲ್ಲವೆಂದು ನೀವು ವ್ಯಥೆಪಡಬೇಡಿ. ನಿಮ್ಮ ಯೋಗಕ್ಷೇಮಕ್ಕೆ ನಾನು ಯಾವಾಗಲೂ ಭಗವಂತನಲ್ಲಿ ಬೇಡುತ್ತ ಇರುತ್ತೇನೆ. ನಾನು ಬರುವ ೩೧ ನೇ ತಾರೀಖು ಅಮೇರಿಕಾಕ್ಕೆ ಹೊರಡುವ ವ್ಯವಸ್ಥೆಮಾಡಿರುವುದರಿಂದ ಸದ್ಯಕ್ಕೆ ನಾನು ಬೆಳಗಾಂವಿಗೆ ಬರುವುದಕ್ಕೆ ಆಗುವುದಿಲ್ಲ. ದೇವರ ಇಚ್ಛೆಯಿದ್ದರೆ ನಾನು ಅಮೇರಿಕಾ ಯೂರೋಪ್ ದೇಶಗಳ ಪ್ರವಾಸವನ್ನು ಪೂರೈಸಿಕೊಂಡು ಬಂದಮೇಲೆ ನಿಮ್ಮನ್ನು ನೋಡುವೆನು. ಭಗವಾನ್ ಶ್ರೀ ಕೃಷ್ಣನಿಗೆ ಸರ್ವದಾ ಶರಣಾಗಿ ನಾವು ಅವನ ಕೈಗೊಂಬೆಗಳು ಎಂಬುದನ್ನು ಯಾವಾಗಲೂ ನೆನಪಿನಲ್ಲಿಡಿ. ಯಾವಾಗಲೂ ಪರಿಶುದ್ಧರಾಗಿರಿ. ಕಾಯೇನ ವಾಚಾ ಮನಸಾ ಕಳಂಕವಾಗದಂತೆ ನೋಡಿಕೊಳ್ಳಿ. ನಿಮ್ಮಲ್ಲಿ ಕೈಲಾದಷ್ಟು ಮಟ್ಟಿಗೆ ಮತ್ತೊಬ್ಬರಿಗೆ ಉಪಕಾರವನ್ನು ಮಾಡಿ. ಸ್ತ್ರೀಯ ಮೊದಲ ಕರ್ತವ್ಯ ತನ್ನ ಪತಿಯನ್ನು ಕಾಯೇನ ವಾಚಾ ಮನಸಾ ಸೇವಿಸುವುದು ಎಂಬುದನ್ನು ನೆನಪಿನಲ್ಲಿಡಿ—ನಿಮಗೆ ಸ್ವಲ್ಪ ವಿರಾಮ ವಾದಂತೆಲ್ಲ ಗೀತೆಯನ್ನು ಓದಿ. ದಾಸಿ ಎಂದು ನೀವು ಏಕೆ ಸಹಿ ಮಾಡಿರುವಿರಿ? ವೈಶ್ಯರು ಮತ್ತು ಶೂದ್ರರು ಮಾತ್ರ ದಾಸ, ದಾಸಿಯೆಂದು ಸಹಿ ಮಾಡಬೇಕು. ಜಾತಿಭೇದ ಮುಂತಾದವುಗಳನ್ನು ಈಗಿನ ಕಾಲದ ಕೃತ್ರಿಮರಾದ ಬ್ರಾಹ್ಮಣರು ಕಂಡುಹಿಡಿದರು. ಯಾರು ಯಾರಿಗೆ ಆಳು? ಪ್ರತಿಯೊಬ್ಬರೂ ಹರಿಯ ದಾಸರು. ಅದಕ್ಕೆ ಸ್ತ್ರೀಯರು ತಮ್ಮ ಪತಿಯ ಉಪನಾಮವನ್ನು ಮಾತ್ರ ಉಪಯೋಗಿಸಬೇಕು. ಉದಾಹರಣೆಗೆ ಪತಿಯ ಹೆಸರ ಕೊನೆಯಲ್ಲಿ ಬರುವ ಮಿತ್ರ ಮುಂತಾದುವುಗಳು. ಇದೇ ನಮ್ಮ ಪುರಾತನ ವೈದಿಕ ಆಚಾರ. ಪ್ರಿಯ ತಾಯೆ, ಹೆಚ್ಚಿಗೆ ನಾನು ಬರೆಯುವುದು ಅನಾವಶ್ಯಕ. ನಿಮ್ಮ ಹಿತಕ್ಕಾಗಿ ನಾನು ಯಾವಾಗಲೂ

ದೇವರನ್ನು ಬೇಡುತ್ತಿರುವೆನು. ಅಮೇರಿಕಾದಿಂದ ಆಗಿಂದಾಗ್ಯೆ ಅಲ್ಲಿಯ ವಿಚಿತ್ರ ಜೀವನದ ವಿಚಾರವಾಗಿ ಕಾಗದ ಬರೆಯುತ್ತೇನೆ. ೩೧ ನೇ ತಾರೀಖಿನ ವರೆವಿಗೂ ನಾನು ಬೊಂಬಾಯಿಯಲ್ಲಿ ಇರುವೆನು. ಖೇತ್ರಿ ಮಹಾರಾಜರ ಆಪ್ತ ಕಾರ್ಯದರ್ಶಿಗಳು ನನ್ನನ್ನು ಬೀಳ್ಕೊಡಲು ಬಂದಿರುವರು.

ನಿಮ್ಮ
ವಿವೇಕಾನಂದ.

(೧೨)

ಪ್ರಿಯ....,

....ನಿನಗೆ ಒಂದು ಮಾತು. ನಿನ್ನನ್ನು ನಾನು ಮತ್ತೊಮ್ಮೆ ನೋಡ ಲಾಗದಿರಬಹುದು ಎನ್ನುವುದನ್ನು ನೆನಪಿನಲ್ಲಿಟ್ಟುಕೊ. ಶುದ್ಧ ಚಾರಿತ್ರದವ ನಾಗು, ಧೈರ್ಯವಂತನಾಗು, ಅಂತಃಕರಣಪೂರಿತನಾಗು, ಖಂಡಿತವಾ ಗಿಯೂನೀತಿವಂತನಾಗಬೇಕು. ಜೀವದ ಹಂಗನ್ನು ತೊರೆದು ಧೈರ್ಯವಂತ ನಾಗಬೇಕು. ಧಾರ್ಮಿಕ ತತ್ವಗಳಿಂದ ನಿನ್ನ ತಲೆಯನ್ನು ಕೆಡಿಸಿಕೊಳ್ಳಬೇಡ. ಹೇಡಿಗಳು ಮಾತ್ರ ಪಾಪಮಾಡುವವರು. ಧೈರ್ಯವಂತರು ತಮ್ಮ ಮನಸ್ಸಿನಲ್ಲಿ ಕೂಡ ಎಂದಿಗೂ ಪಾಪವನ್ನು ಮಾಡುವುದಿಲ್ಲ. ಯಾವ ಭೇದಭಾವವಿಲ್ಲದೆ ಎಲ್ಲರನ್ನೂ ಪ್ರೀತಿಸಲು ಯತ್ನಿಸು. ಪುರುಷಸಿಂಹನಾಗು, ನಿನ್ನ ಯೋಗಕ್ಷೇಮಕ್ಕೆ ಒಳಪಟ್ಟ ರ—, ಕ—, ಇವರುಗಳನ್ನು ನೀತಿವಂತ ರಾಗಿ, ಧೈರ್ಯವಂತರಾಗಿ, ಕಾರುಣಿಕರನ್ನಾಗಿ ಮಾಡಲು ಯತ್ನಿಸು. ನನ್ನ ಮಕ್ಕಳೆ, ನಿಮಗೆ ಯಾವ ಧರ್ಮವೂ ಬೇಡ. ಶುದ್ಧ ಚಾರಿತ್ರ, ಧೈರ್ಯ ಇವೆರಡೇ ಸಾಕು. ಹೇಡಿತನ ಬೇಡ, ಪಾಪ ಬೇಡ, ದುಷ್ಕೃತ್ಯ ಬೇಡ, ನಿರ್ಬಲತೆ ಬೇಡ. ಈ ಹೀನಗುಣಗಳಿಲ್ಲದೆ ಇದ್ದರೆ ಉಳಿದ ಶೀಲಗಳೆಲ್ಲವೂ ಬರುವುವು. ಯಾವಾಗಲೂ ನಿನ್ನೊಂದಿಗೇ ಆಗಲಿ, ಅಥವಾ ಅವನೇ ಆಗಲಿ, ನಾಟಕ ಮತ್ತು ಯಾವುದಾದರೂ, ಉದ್ರೇಕಗೊಳಿಸುವ ನೋಟ ಗಳಿಗೆ ರಾ—ನನ್ನು ಹೋಗಲು ಬಿಡಬೇಡ.

ಪ್ರೀತಿಯ ನಿಮ್ಮ
ವಿವೇಕಾನಂದ.

ಯೋಕೋಹಾಮ,
೧೧ ನೇ ಜುಲೈ, ೧೯೩೬

ಪ್ರಿಯ.....,

ನನ್ನ ಸಂಚಾರದ ವಿಷಯವನ್ನು ಕುರಿತು ತಮಗೆ ನಿನ್ನೆವೂ ತಿಳಿಸದೇ ಇರುವುದಕ್ಕೆ ಕ್ಷಮಾಪಣೆಬೇಡುವೆನು. ಒಬ್ಬನಿಗೆ ಎಷ್ಟೋ ಕೆಲಸ ನಿನ್ನೆವೂ. ಅಂತೂ ನನ್ನ ವಿಷಯದಲ್ಲಿ ವಿಶೇಷ. ಏಕೆಂದರೆ, ಪದಾರ್ಥ ಸಂಗ್ರಹಮಾಡಿ ಅವುಗಳನ್ನು ಕಾಪಾಡುವ ಜೀವನ ನನಗೆ ತೊಸದು. ಅದ ನನ್ನ ಶಕ್ತಿ ಯನ್ನು ಎಷ್ಟು ವ್ಯಯಮಾಡುವುದು. ಇದು ನಿಜವಾಗಿಯೂ ವಿಪರೀತ ತೊಂದರೆ.

ಬೊಂಬಾಯಿಯಿಂದ ಕೊಲಂಬೊ ಮುಟ್ಟಿದೆವು. ನಮ್ಮ ಜಹಜು ಸುಮಾರು ಹಗಲೆಲ್ಲ ಬಂದರಿನಲ್ಲಿತ್ತು. ಈ ಸಮಯದಲ್ಲಿ ಪಟ್ಟಣವನ್ನು ನೋಡುವುದಕ್ಕೆ ಹೊರಟೆವು. ಗಾಡಿ ಮಾಡಿಕೊಂಡು ರಸ್ತೆಯಲ್ಲಿ ಹೊರಟೆವು. ಒಂದು ಮಂದಿರ. ಅದರಲ್ಲಿ ದೊಡ್ಡಬುದ್ಧನ ವಿಗ್ರಹ. ಒರಗಿ ಕೊಂಡು ನಿರ್ವಾಣಸ್ಥಿತಿಯಲ್ಲಿದೆ. ಇದೊಂದೇ ನನಗೆ ಜ್ಞಾಪಕದಲ್ಲಿರುವುದು.

ಮುಂದಿನ ನಿಲ್ದಾಣವೇ ಪಿನಾಂಗ್. ಇದು ಮಲಯ ಪರ್ಯಾಯ ದ್ವೀಪಕ್ಕೆ ಸೇರಿ ಸಮುದ್ರ ಕರೆಗೆ ಅಂಟಿಕೊಂಡಿರುವ ಭೂಪ್ರದೇಶ. ಮಲಯವಾಸಿಗಳೆಲ್ಲರೂ ಮಹಮದೀಯರು. ಹಿಂದಿನ ಕಾಲದಲ್ಲಿ ಅವ ರೆಲ್ಲರೂ ಸಮುದ್ರದ ಕಳ್ಳರಾಗಿದ್ದರು. ವ್ಯಾಪಾರದ ಹಡಗುಗಳಿಗೆ ಒಂದು ಗಂಡಾಂತರವಾಗಿದ್ದರು. ಆದರೆ ಈಗಿನ ಕಾಲದ ಅನೇಕ ಅಂತಸ್ತು ಗಳುಳ್ಳ ಯುದ್ಧದ ಹಡಗುಗಳ ಭಾರಿ ಫಿರಂಗಿಗಳು ಮಲಯರನ್ನು ಶಾಂತ ಜೀವನೋಪಾಯವನ್ನು ಹುಡುಕುವಂತೆ ಬಲಾತ್ಕರಿಸಿದೆ. ಪಿನಾಂಗಿನಿಂದ ಸಿಂಗಪುರಕ್ಕೆ ಹೋಗುವ ದಾರಿಯಲ್ಲಿ ಎತ್ತರವಾದ ಬೆಟ್ಟಗಳಿಂದ ಕೂಡಿದ ಸುಮಾತ್ರದ್ವೀಪ ಕೊಂಚ ಕೊಂಚ ಕಾಣುತ್ತಿತ್ತು. ಜಹಜಿನ ನಾಯಕನು ಅನೇಕ ಸ್ಥಳಗಳನ್ನು ತೋರಿಸಿ ಅವುಗಳು ಹಿಂದೆ ಸಮುದ್ರ ಕಳ್ಳರ ವಾಸ ಸ್ಥಾನವಾಗಿತ್ತೆಂದು ಹೇಳಿದನು. ಸ್ಟ್ರೈಟ್ಸ್ ಸೆಟ್ಲಮೆಂಟಿಗೆ [Straits Settlements] ಸಿಂಗಪುರ ರಾಜಧಾನಿ. ಇಲ್ಲಿ ತಾಳೆ ಜಾತಿಗೆ ಸೇರಿದ

ಅನೇಕ ವಿಧದ ಮರಗಳನ್ನೊಳಗೊಂಡ ಸುಂದರ ವನಸ್ಪತಿಯ ಉದ್ಯಾನ ವನವಿದೆ. "ಯಾತ್ರಿಕರ ತಾಳೆ" ಎಂದು ಕರೆಯುವ ಸುಂದರವಾದ ಬೀಸಣಿಗೆಯಂತಿರುವ ಮರ ಇಲ್ಲಿ ಯಥೇಚ್ಛವಾಗಿ ಬೆಳೆಯುವುದು. ಎಲ್ಲೆಲ್ಲಿಯೂ ಬ್ರೆಡ್ ಫ್ರೂಟ್ ಮರ ಬೆಳೆಯುವುದು. ಪ್ರಖ್ಯಾತವಾದ ಮ್ಯಾಂಗೋಸ್ಟೀನ್ ಎಂಬುದು ಇಲ್ಲಿ ಮದ್ರಾಸಿನ ಮಾವಿನ ಗಿಡದಂತೆ ಅಧಿಕ. ಆದರೆ ಮಾವಿನ ಸಮಾನವಾದುದಿಲ್ಲ. ಇಲ್ಲಿಯ ಜನರು ವಿಷುವದ್ರೇಖೆ ಸಮೀಪದಲ್ಲಿದ್ದರೂ ಮದ್ರಾಸಿನ ಜನರ ಅರ್ಧದಷ್ಟು ಕೂಡ ಕಪ್ಪಾಗಿಲ್ಲ. ಸಿಂಗಪುರದಲ್ಲಿ ಒಂದು ಸೊಗಸಾದ ಸರ್ವವಸ್ತು ಪ್ರದರ್ಶನ ಶಾಲೆಯೂ ಇದೆ.

ಮುಂದೆ ಹಾಂಕಾಂಗ್. ಮನಸ್ಸಿಗೆ ಚೈನಾವನ್ನು ಮುಟ್ಟಿದಂತೆಯೇ ಕಾಣುತ್ತದೆ. ಇಲ್ಲಿ ಚೀಣಾರು ತುಂಬ ಪ್ರಾಬಲ್ಯದಲ್ಲಿರುವರು. ಉದ್ಯೋಗ, ವ್ಯಾಪಾರಗಳೆರಡೂ ಇವರ ಕೈಯಲ್ಲಿರುವಂತೆ ಕಾಣುತ್ತದೆ. ಹಾಂಕಾಂಗ್ ಸಿಬಪಾಗಿಯೂ ಚೀಣ. ಹಡಗು ಲಂಗರ್ ಹಾಕಿದೊಡನೆಯೆ ನೂರಾರು ಚೀಣ ದೋಣಿಯವರು ಕರೆಗೆ ಒಯ್ಯಲು ಮುತ್ತುವರು. ಎರಡು ಚುಕ್ಕಾಣಿ [Helms] ಗಳುಳ್ಳ ದೋಣಿಗಳು ಬಹು ವಿಚಿತ್ರವಾಗಿವೆ. ದೋಣಿಯವನು ಸಂಸಾರ ಸಮೇತ ದೋಣಿಯಲ್ಲಿ ವಾಸಮಾಡುವನು. ಸಾಮಾನ್ಯವಾಗಿ ಹೆಂಡತಿಯು ಯಾವಾಗಲೂ ಚುಕ್ಕಾಣಿಯ ಹತ್ತಿರ ಕೆಲಸ ಮಾಡುವಳು. ಒಂದನ್ನು ಕೈಯಿಂದಲೂ ಮತ್ತೊಂದನ್ನು ಕಾಲಿನಿಂದಲೂ ನಡೆಸುವಳು. ಶೇಕಡ ತೊಂಬತ್ತು ಮಂದಿ ಹೆಂಗಸರು ಬೆನ್ನಿಗೆ ಕೈಕಾಲುಗಳನ್ನು ಇಳಿಬಿಟ್ಟಿರುವ ಮಗುವನ್ನು ಕಟ್ಟಿಕೊಂಡಿರುವರು. ತಾಯಿ ಭಾರವಾದ ಮೂಟೆಯನ್ನು ತನ್ನ ಬಲವನ್ನೆಲ್ಲ ಬಿಟ್ಟು ನೂಕುವಾಗಲೂ, ದೋಣಿಯಿಂದ ದೋಣಿಗೆ ಆಶ್ಚರ್ಯಕರವಾಗಿ ಹಾರುವಾಗಲೂ, ಆಕೆಯ ಬೆನ್ನಿಗೆ ಪುಟ್ಟ ಚೀಣ ಹುಡುಗನು ತಗಲಿಕೊಂಡಿರುವುದು ಒಂದು ವಿಚಿತ್ರವಾದ ನೋಟ. ಬರುತ್ತಲೂ, ಹೋಗುತ್ತಲೂ ಇರುವ ದೋಣಿಗಳ ಮತ್ತು ಜಹಜುಗಳ ಸಂಘಟ್ಟನೆಷ್ಟು! ಪುಟ್ಟ ಚೀಣೀಯನ ತಲೆ ಎರಡು ಪಕ್ಕದಲ್ಲೂ ಇರುವ ಜಡೆ ಸಹಿತ ಪ್ರತಿಕ್ಷಣವೂ ನುಚ್ಚುನೂರಾಗುವ ಅಪಾಯವಿದೆ. ಆದರೂ ಅದನ್ನು ಅವನು ಲಕ್ಷಿಸುವುದೇ ಇಲ್ಲ. ಈ

ಗಡಿಬಿಡಿಯ ಜೀವನಕ್ಕೆ ಅವನು ಮನಸನ್ನು ಕೊಡುವಂತೆ ಇಲ್ಲ. ಹುಚ್ಚು ಹಿಡಿದಂತೆ ಕೆಲಸಮಾಡುವ ತಾಯಿಯು ಮಗುವಿಗೆ ಆಗಿಂದಾಗ್ಗೆ ಕೊಡುವ ಅಕ್ಕಿರೊಟ್ಟಿಯ ರುಚಿಯನ್ನು ವಿಭಜನೆ ಮಾಡುವುದರಲ್ಲಿಯೆ ಅದಕ್ಕೆ ತೃಪ್ತಿ. ಚೀನೀಯ ಮಗು ತತ್ವಜ್ಞಾನಿ; ಇಂಡಿಯಾ ದೇಶದಲ್ಲಿ ಮಗು ಅಂಬೆಗಾಲಿಡುವ ವಯಸ್ಸಿನಲ್ಲೇ ಅದು ಕೆಲಸಕ್ಕೆ ಹೋಗುವುದು. ದಾರಿದ್ರ್ಯದ ತತ್ವವನ್ನು ಚೆನ್ನಾಗಿ ಅರಿತ ಕೂಸದು. ಚೀನಾ ದೇಶದವರು ಮತ್ತು ಇಂಡಿಯಾ ದೇಶದವರು ಇನ್ನೂ ಅರ್ಧ ನಾಗರಿಕ ಸ್ಥಿತಿಯಲ್ಲಿ ಉಳಿದಿರುವುದಕ್ಕೆ ಅವರ ಬಡತನವೇ ಕಾರಣ. ಸಾಧಾರಣ ಹಿಂದೂ ಮತ್ತು ಚೀನೀ ದೇಶೀಯರಿಗೆ ಪ್ರತಿದಿನದ ಜೀವನದ ಅಗತ್ಯ ಉಳಿದ ಎಲ್ಲಾ ವಿಷಯಗಳನ್ನೂ ಹಿಂದಕ್ಕೆ ತಳ್ಳುವಷ್ಟು ಘೋರವಾಗಿದೆ.

ಹಾಂಕಾಂಗ್ ಬಹಳ ಸುಂದರವಾದ ನಗರ. ಬೆಟ್ಟದ ಇಳಿಜಾರಿನ ಮೇಲೆ, ತಂಪಾಗಿರುವ ಶಿಖರದ ಮೇಲೆ ಪಟ್ಟಣ ಹಬ್ಬಿರುವುದು. ತಂತಿಯ ಹಗ್ಗದಿಂದಲೂ, ಉಗಿಯ ಯಂತ್ರದಿಂದಲೂ ಬೆಟ್ಟದ ತಳದಿಂದ ಹಿಡಿದು ಶಿಖರದ ವರೆಗೆ, ಸುಮಾರು ನೇರವಾಗಿ ಹೋಗುವ ಟ್ರಾಂ ಕಾರುಗಳಿವೆ.

ಹಾಂಕಾಂಗ್‌ನಲ್ಲಿ ಮೂರು ದಿನಗಳಿದ್ದೆವು. ನಂತರ ನದಿಯ ಮೇಲೆ ಎಂಭತ್ತು ಮೈಲಿ ದೂರದಲ್ಲಿರುವ ಕ್ಯಾಂಟನ್ ನಗರವನ್ನು ನೋಡಲು ಹೋದೆವು. ಎಷ್ಟು ಗದ್ದಲ ಮತ್ತು ಜನಸಂದಣಿಯ ದೃಶ್ಯ! ನದಿಯ ನೀರೆಲ್ಲವನ್ನೂ ಮುಚ್ಚಿಕೊಂಡಂತೆ ಕಾಣುವ ಅಸಂಖ್ಯಾತ ದೋಣಿ ಗಳೆಷ್ಟು! ವ್ಯಾಪಾರಕ್ಕೆ ಸಂಬಂಧಪಟ್ಟ ದೋಣಿಗಳು ಮಾತ್ರವಲ್ಲ. ನೂರಾರು ವಾಸಮಾಡುವುದಕ್ಕೆ ತಕ್ಕ ಮನೆಗಳಂತಿವೆ ದೋಣಿಗಳು! ಅನೇಕ ದೋಣಿಗಳು ಸುಂದರವಾಗಿ ವಿಶಾಲವಾಗಿವೆ. ಎರಡು-ಮೂರು ಅಂತಸ್ತುಗಳುಳ್ಳ ದೊಡ್ಡ ಮನೆಗಳು ಆ ದೋಣಿಗಳು. ಸುತ್ತಲೂ ವರಾಂಡದ ಮಧ್ಯೆ ರಸ್ತೆ. ಎಲ್ಲ ಕೆಪ್ಪೋತ್ಸವವೆ.

ಚೀನಾ ಸರ್ಕಾರವು ಪರದೇಶೀಯರ ವಾಸಕ್ಕೆ ಕೊಟ್ಟ ಸ್ಥಳದ ಮೇಲೆ ಕಾಲಿಟ್ಟೆವು. ನಮ್ಮ ಸುತ್ತಲೂ ನದಿಯ ಎರಡು ದಡಗಳ ಮೇಲೆ ಅನೇಕ ಮೈಲಿಗಳಷ್ಟು ವಿಸ್ತಾರವಾಗಿ ಹಬ್ಬಿರುವುದು ಆ ದೊಡ್ಡ ನಗರ! ಅಬ್ಬ ಅದು ಏನು ನೂಕಾಟ! ಏನು ಹೋರಾಟ! ಏನು ಎಳೆದಾಟ!

ಏನು ಕೂಗಾಟ! ಇವುಗಳಿಂದ ಅಲ್ಲೋಲಕಲ್ಲೋಲವಾದ ದೊಡ್ಡ ಪಟ್ಟಣ ಇದು. ಅಷ್ಟು ಜನಸಂದಣಿ ಇದ್ದರೂ ಅಷ್ಟು ಉದ್ಯೋಗವಿದ್ದರೂ ನಾನು ನೋಡಿದ ಪಟ್ಟಣಗಳಲ್ಲೆಲ್ಲಾ ಅತಿಹೊಲಸು ಪಟ್ಟಣ. ಇಂಡಿಯಾ ದೇಶದಲ್ಲಿ ಗಲೀಜು ಎಂದು ಹೇಳುವ ದೃಷ್ಟಿಯಂತೆ ಅಲ್ಲ. ಆ ದೃಷ್ಟಿಯಿಂದ ನೋಡಿದರೆ ಅವರು ಒಂದು ಚೂರು ಕಸವನ್ನು ಪೋಲುಮಾಡುವಂತೆ ಇಲ್ಲ. ಆದರೆ ಚೈನಾ ದೇಶೀಯರು ನಾವು ಸ್ನಾನಮಾಡುವುದಿಲ್ಲ ಎಂಬ ಒಂದು ಶಪಥವನ್ನು ಮಾಡಿದಂತೆ ತೋರುವುದು! ಪ್ರತಿಯೊಂದು ಮನೆಯೂ ಒಂದು ಅಂಗಡಿ. ಮಹಡಿಯ ಮೇಲೆ ಮಾತ್ರ ಮನೆಯವರು ವಾಸಮಾಡುವರು. ರಸ್ತೆಗಳು ಬಲು ಇಕ್ಕಟ್ಟು. ಆದುದರಿಂದ ನಾವು ಹೋಗುವಾಗ ಎದುರುಬದುರಿಗಿರುವ ಅಂಗಡಿಯನ್ನು ಮುಟ್ಟಿಕೊಂಡು ಹೋದಂತೆ ಕಾಣುವುದು. ಪ್ರತಿ ಹತ್ತು ಹೆಜ್ಜೆಗೂ ಒಂದೊಂದು ಮಾಂಸದ ಅಂಗಡಿ. ಬೆಕ್ಕು, ನಾಯಿಗಳ ಮಾಂಸವನ್ನು ಕೂಡ ಮಾರುವ ಅಂಗಡಿಗಳಿವೆ. ಆದರೆ ಅತಿ ಬಡವರಾದ ಚೀಣರು ಮಾತ್ರ ಬೆಕ್ಕು, ನಾಯಿಗಳ ಮಾಂಸವನ್ನು ತಿನ್ನುತ್ತಾರೆ. ಚೀಣೀಯರ ಹೆಂಗಸರನ್ನು ಯಾವ ಸಮಯದಲ್ಲೂ ನೋಡಲಾಗುವುದಿಲ್ಲ. ಉತ್ತರ ಹಿಂದೂಸ್ಥಾನದಷ್ಟೆ ಘೋಷಪದ್ಧತಿ, ಇಲ್ಲಿ ಕಟ್ಟುನಿಟ್ಟು. ಕೂಲಿಯ ಹೆಂಗಸರನ್ನು ಮಾತ್ರ ನೋಡಬಹುದು. ಅವರಲ್ಲಿಯೂ ಕೂಡ ಕೆಲವುವೇಳೆ ನಮ್ಮ ಸಣ್ಣ ಮಗುವಿಗಿಂತಲೂ ಕೂಡ ಚಿಕ್ಕದಾದ ಪಾದಗಳುಳ್ಳ ಹೆಂಗಸರನ್ನು ನೋಡಬಹುದು. ಅವರನ್ನು ನಡೆಯುತ್ತಾರೆ ಎಂದು ಹೇಳಲಾಗುವುದಿಲ್ಲ. ಕುಂಟುವರು ಎನ್ನಬಹುದು.

ಅನೇಕ ಚೀಣರ ದೇವಾಲಯಗಳನ್ನು ನೋಡಲು ಹೋದೆನು. ಅವುಗಳಲ್ಲಿ ದೊಡ್ಡದಾದುದು ಮೊದಲನೆ ಬೌದ್ಧ ಚಕ್ರವರ್ತಿ ಮತ್ತು ಬೌದ್ಧ ಮತವನ್ನವಲಂಬಿಸಿದ ಮೊದಲ ಐದುನೂರು ಶಿಷ್ಯರ ಜ್ಞಾಪಕಾರ್ಥವಾಗಿ ಕಟ್ಟಿರುವುದು. ಅದರಲ್ಲಿ ಮುಖ್ಯವಾದ ವಿಗ್ರಹವೇನೋ ಬುದ್ಧನದು. ಅವನ ಕೆಳಗೆ ಚಕ್ರವರ್ತಿಯದು. ಎರಡು ಪಕ್ಕದಲ್ಲಿಯೂ ಶಿಷ್ಯರದು. ಎಲ್ಲವೂ ಮರದಿಂದ ಚೆನ್ನಾಗಿ ಕೆತ್ತಿದ ವಿಗ್ರಹಗಳು.

ಕ್ಯಾಂಟನ್‌ನಿಂದ ಪುನಃ ಹಾಂಕಾಂಗ್‌ಗೆ ಬಂದೆವು. ಅಲ್ಲಿಂದ ಜಪಾನಿಗೆ ಹೋದೆವು. ನಾವು ಸೇರಿದ ಮೊದಲನೆಯ ರೇವುಪಟ್ಟಣವೆ ನಾಗಾಸಾಕಿ. ಕೆಲವು ಘಂಟೆಗಳ ಕಾಲ ಅಲ್ಲಿಳಿದು ಪಟ್ಟಣವನ್ನು ನೋಡಲು ಗಾಡಿಯಲ್ಲಿ ಹೊರಟೆವು. ಏನು ಸ್ವಚ್ಛತ್ವ! ಜಪಾನೀಯರು ಜಗತ್ತಿನಲ್ಲಿ ಅತ್ಯಂತ ಶುಚಿಯಾದ ಜನಾಂಗದಲ್ಲಿ ಒಬ್ಬರು. ಇಲ್ಲಿ ಪ್ರತಿಯೊಂದೂ ಶುಚಿಯಾಗಿದೆ, ಚೊಕ್ಕಟವಾಗಿದೆ. ಅಲ್ಲಿರುವ ರಸ್ತೆಗಳು ಮುಕ್ಕಾಲು ಪಾಲೆಲ್ಲ ವಿಶಾಲವಾಗಿವೆ, ನೇರವಾಗಿವೆ. ಮೇಲೆ ಕಲ್ಲು ಹಾಸಿವೆ. ಅವರ ಸಣ್ಣ ಮನೆಗಳು ಹಕ್ಕಿಯ ಪಂಜರದಂತಿವೆ. ಯಾವಾಗಲೂ ಹಸುರಾಗಿರುವ ದೇವದಾರು ಮರಗಳು, ನಿಬಿಡವಾದ ಬೆಟ್ಟಗಳು ಸಾಮಾನ್ಯವಾಗಿ ಪ್ರತಿಯೊಂದು ಹಳ್ಳಿಯ ಮತ್ತು ಊರಿನ ಹಿನ್ನೆಲೆಯಾಗಿವೆ. ಜಪಾನರು ಕುಳ್ಳರು. ಅವರ ದೇಹದ ಬಣ್ಣ ಸುಂದರವಾಗಿದೆ. ಉಟ್ಟಬಟ್ಟೆ ಒಂದು ವಿಚಿತ್ರವಾಗಿದೆ. ಅವರ ನಡೆನುಡಿಗಳು, ಹಾವಭಾವಗಳು ಎಲ್ಲ ಒಂದು ವಿಚಿತ್ರವಾಗಿ ತೋರುತ್ತವೆ! ಜಪಾನ್ ದೇಶವೇ ಒಂದು ಸುಂದರ ವಿಚಿತ್ರ ದೃಶ್ಯಗಳ ತವರೂರು. ಪ್ರತಿಯೊಂದು ಮನೆಯ ಹಿಂದೆಯೂ ಒಂದು ಸುಂದರ ತೋಟವಿದೆ. ಜಪಾನೀಯರ ರೀತಿಯಂತೆ ಅಲ್ಲಿ ಸಣ್ಣ ಗಿಡಗಳು, ಹುಲ್ಲು ಮಡಿಗಳು, ಕೃತಕ ಜಲಾಶಯಗಳು, ಅದರ ಮೇಲೆ ಸಣ್ಣ ಕಲ್ಲಿನ ಸೇತುವೆಗಳು ಇವುಗಳಿಂದ ಅಲಂಕರಿಸಿರುವರು.

ನಾಗಸಾಕಿಯಿಂದ ಕೋಬಿಗೆ ಹೋದೆವು. ಇಲ್ಲಿ ನಾನು ಜಹಜನ್ನು ಬಿಟ್ಟು ಜಪಾನ್ ದೇಶದ ಒಳಭಾಗವನ್ನು ನೋಡಬೇಕೆಂದು ಯೋಕೋಹಾಮಕ್ಕೆ ಭೂ ಮಾರ್ಗವನ್ನು ಹಿಡಿದೆನು.

ಒಳಸೀಮೆಯಲ್ಲಿ ಮೂರು ದೊಡ್ಡ ಪಟ್ಟಣಗಳನ್ನು ನೋಡಿದೆನು. ಒಸಾಕಾ ದೊಡ್ಡ ಕೈಗಾರಿಕೆಯ ಸ್ಥಳ. ಕಿಯೋಟೋ ಹಿಂದೆ ರಾಜಧಾನಿಯಾಗಿತ್ತು. ಟೋಕಿಯೋ ಇಂದಿನ ರಾಜಧಾನಿ. ಕಲ್ಕತ್ತೆಗೆ ಎರಡರಷ್ಟು ವಿಸ್ತಾರವಾಗಿದೆ ಟೋಕಿಯೋ. ಜನಸಂಖ್ಯೆಯು ಅಲ್ಲಿಗೆ ಎರಡರಷ್ಟು ಇದೆ.

ರಹದಾರಿಯಿಲ್ಲದೆ ಯಾವ ಪರದೇಶೀಯರಿಗೂ ದೇಶದ ಒಳಗೆ ಸಂಚಾರಮಾಡಲು ಅವಕಾಶವಿಲ್ಲ.

ಜಪಾನೀಯರು ಆಧುನಿಕ ಕಾಲದ ಆವಶ್ಯಕತೆಗೆ ಸಂಪೂರ್ಣ

ಜಾಗ್ರತರಾಗಿರುವರು. ಈಗ ಅವರಿಗೆ ಒಂದು ಸುಶಿಕ್ಷಿತ ಸೈನ್ಯವಿದೆ. ಅವರ ಒಬ್ಬ ಸೈನ್ಯಾಧಿಕಾರಿಯೇ ಕಂಡುಹಿಡಿದ ಫಿರಂಗಿಗಳಿಂದ ಸಜ್ಜಿತರಾಗಿರುವರು. ಇದು ಯಾವ ಪರದೇಶೀಯ ನಿರ್ಮಾಣಕ್ಕೂ ಕೀಳಲ್ಲ. ಅವರು ತಮ್ಮ ನೌಕಾಪಡೆಯನ್ನು ಕ್ರಮೇಣ ಹೆಚ್ಚಿಸುತ್ತಲೇ ಇರುವರು. ಒಬ್ಬ ಜಪಾನ್ ಶಿಲ್ಪಜ್ಞನೇ ಕೊರೆದ ಒಂದು ಮೈಲಿ ದೂರವುಳ್ಳ ಒಂದು ಸುರಂಗವನ್ನು ನೋಡಿದೆನು.

ಬೆಂಕಿ ಕಡ್ಡಿಯ ಕಾರ್ಖಾನೆಗಳು ನೋಟಕ್ಕೆ ಒಂದು ಹಬ್ಬ. ತಮಗೆ ಬೇಕಾಗುವ ಸಾಮಾನೆಲ್ಲವನ್ನೂ ತಮ್ಮ ದೇಶದಲ್ಲೇ ತಯಾರಿಸುತ್ತೇವೆಂದು ಹಟತೊಟ್ಟಿರುವರು. ಚೀಣ ಮತ್ತು ಜಪಾನುಗಳ ನಡುವೆ ಆಗಲೇ ಜಪಾನಿನ ಹಡಗುಗಳ ಸಾಲು ಓಡುತ್ತಿದೆ. ಶೀಘ್ರದಲ್ಲಿಯೇ ಯೋಕೋಹಾಮ ಮತ್ತು ಬೊಂಬಾಯಿಗಳಿಗೆ ವಿಸ್ತರಿಸುವ ಯೋಚನೆ ಇದೆ.

ಇಲ್ಲಿ ಅನೇಕ ಗುಡಿಗಳನ್ನು ನಾನು ನೋಡಿದೆನು. ಪ್ರತಿಯೊಂದು ಗುಡಿಯಲ್ಲೂ ಹಳೆಯ ಬಂಗಾಳಿ ಲಿಪಿಯಿಂದ ಬರೆದ ಸಂಸ್ಕೃತ ಮಂತ್ರಗಳಿವೆ. ಎಲ್ಲಿಯೋ ಕೆಲವು ಪೂಜಾರಿಗಳಿಗೆ ಮಾತ್ರ ಇಲ್ಲಿ ಸಂಸ್ಕೃತ ಗೊತ್ತಿದೆ. ಆದರೂ ಅವರು ಬಹಳ ಬುದ್ಧಿಶಾಲಿಗಳು. ಮುಂದುವರಿಯಬೇಕೆಂಬ ಉತ್ಸಾಹ ಪೂಜಾರಿಗಳಿಗೂ ಹಿಡಿದಿರುವುದು. ಜಪಾನೀಯರ ವಿಷಯದಲ್ಲಿ ನನ್ನ ಅಭಿಪ್ರಾಯವನ್ನೆಲ್ಲ ಒಂದು ಸಣ್ಣ ಪತ್ರದಲ್ಲಿ ಬರೆಯುವುದಕ್ಕೆ ಆಗುವುದಿಲ್ಲ. ನಮ್ಮ ದೇಶದ ಹಲವು ಯುವಕರು ಜಪಾನಿಗೆ ಪ್ರತಿ ವರ್ಷವೂ ಭೇಟಿಕೊಡಬೇಕೆಂಬುದೇ ನನ್ನ ಆಸೆ. ಉತ್ತಮವೂ, ಭವ್ಯವೂ ಆದ ಆದರ್ಶಗಳಿಗೆ ಭಾರತ ತವರೂರು ಎಂದು ಅವರು ಇನ್ನೂ ತಿಳಿದಿರುವರು. ಆದರೆ ನೀವು ಏನಾಗಿದ್ದೀರಿ? ಬಣಹರಟೆಯಲ್ಲಿ ಜೀವನವನ್ನೆಲ್ಲ ಕಳೆಯುವಿರಿ. ಬರಿಯ ಮಾತಾಳಿಗಳು ನೀವು. ಬನ್ನಿ, ಈ ಜನರನ್ನು ನೋಡಿ; ನಿಮ್ಮ ದೇಶಕ್ಕೆ ಹಿಂತಿರುಗಿ ನಾಚಿಕೆಯಿಂದ ಮುಖ ಮುಚ್ಚಿಕೊಳ್ಳಿ. ನೀವೆಲ್ಲರೂ ಅರಳುಮರುಳು ಮುದುಕರು. ಹೊರಗೆ ಬಂದರೆ ಜಾತಿ ಕೆಡುವುದು! ನೂರಾರು ವರ್ಷಗಳಿಂದ ಎಡೆಬಿಡದೆ ಹೆಚ್ಚಿ ಬೆಳೆದು ಕಲ್ಲಾದ ಮೂಢನಂಬಿಕೆಯ ಹೊರೆಯನ್ನು ತಲೆಯಮೇಲೆ ಹೊತ್ತಿರುವಿರಿ. ನೂರಾರು

ವರುಷಗಳಿಂದಲೂ ಈ ಆಹಾರ ಮುಟ್ಟಲು ಯೋಗ್ಯವೋ, ಆ ಆಹಾರ ಮುಟ್ಟಲು ಯೋಗ್ಯವೋ ಎಂಬ ಘನ ವಿಚಾರವನ್ನು ವಿಮರ್ಶಿಸುವುದರಲ್ಲೇ ನಿಮ್ಮ ಬುದ್ಧಿವಂತಿಕೆಯನ್ನು ವ್ಯಯಮಾಡಿರುವಿರಿ. ಅನೇಕ ಶತಮಾನಗಳಿಂದ ಸಮಾಜವನ್ನು ಸಂತತವೂ ಪೀಡಿಸುವುದರಲ್ಲಿ, ನಿಮ್ಮ ಪುರುಷತ್ವವೆಲ್ಲವೂ ವ್ಯಯವಾಗಿದೆ. ನೀವು ಈಗ ಏನಾಗಿದ್ದೀರಿ? ಯಾವ ಮಹಾ ಕಾರ್ಯವನ್ನು ಮಾಡುತ್ತಿದ್ದೀರಿ? ಪುಸ್ತಕವನ್ನು ಕೈಯಲ್ಲಿ ಹಿಡಿದುಕೊಂಡು ಸಮುದ್ರದ ದಡದ ಮೇಲೆ ಓಡಾಡುವುದು—ಐರೋಪ್ಯರು ಬರೆದ ಕೆಲವು ವಿಷಯಗಳನ್ನು ಓದುವುದು, ಅದನ್ನು ಅರಗಿಸಿಕೊಳ್ಳದೇ ಅದನ್ನೇ ಗಿಳಿಯಂತೆ ಮಾತಾಡುವಿರಿ. ಮೂವತ್ತು ರೂಪಾಯಿ ಸಂಬಳದ ಗುಮಾಸ್ತನ ಚಾಕರಿಗೆ ಶಿಫಾರಿಮಾಡುವುದು, ಹೆಚ್ಚು ಎಂದರೆ ಒಬ್ಬ ವಕೀಲನಾಗುವುದು ಇವುಗಳಲ್ಲೇ ನಿಮ್ಮ ಬಾಳು ಮುಗಿಯುತ್ತದೆ. ಇದೇ ಆಧುನಿಕ ಭಾರತದ ಆಕಾಂಕ್ಷೆಯ ಪರಮಾವಧಿ. ಹೊಟ್ಟೆಗಿಲ್ಲದೆ ಅಳುತ್ತ, ಹಿಟ್ಟಿಗೆ ಕಾಡುವ ಮಕ್ಕಳ ಪಡೆ, ಪ್ರತಿಯೊಬ್ಬ ವಿದ್ಯಾರ್ಥಿಯ ಹಿಂದೆ! ನಿಮ್ಮನ್ನು, ನಿಮ್ಮ ಪುಸ್ತಕಗಳನ್ನು, ಗೌರವದ ನಿಲುವಂಗಿಯನ್ನು (University Gowns) ನಿಮ್ಮ ಯೋಗ್ಯತಾ ಪತ್ರಗಳನ್ನು ಮುಳುಗಿಸುವಷ್ಟು ನೀರಿಲ್ಲವೆ ಕಡಲಲ್ಲಿ!

ಮುಂದೆ ಬನ್ನಿ. ಪುರುಷಸಿಂಹರಾಗಿ! ಪುರೋಭಿವೃದ್ಧಿಗೆ ಯಾವಾಗಲೂ ಕಂಟಕ ಪ್ರಾಯರಾದ ಪುರೋಹಿತರನ್ನು ಹೊಡೆದು ಅಟ್ಟಿ. ಅವರೆಂದಿಗೂ ತಿದ್ದಿಕೊಳ್ಳಲಾರರು. ಅವರ ಹೃದಯ ವಿಶಾಲವಾಗಲಾರದು. ಅನೇಕ ಶತಮಾನಗಳಿಂದ ಬಂದ ಮೂಢನಂಬಿಕೆ ಮತ್ತು ಕಿರುಕುಳದ ಮಕ್ಕಳವರು. ಮೊದಲು ಅವರನ್ನು ಆಚೆಗೆ ಅಟ್ಟಿ. ಬನ್ನಿ ಮುಂದೆ, ಧೀರರಾಗಿ, ಸಣ್ಣ ಬಿಲಗಳಿಂದ ಹೊರಗೆ ಬನ್ನಿ. ವಿಶಾಲವಾದ ಜಗತ್ತನ್ನು ಸುತ್ತಲೂ ನೋಡಿ. ಇತರ ಜನಾಂಗಗಳು ಹೇಗೆ ಮುಂದುವರಿಯುತ್ತಿವೆ ಎಂಬುದನ್ನು ನೋಡಿ. ನೀವು ಮಾನವರನ್ನು ಪ್ರೀತಿಸುವಿರೇನು? ನಿಮ್ಮ ದೇಶವನ್ನು ಪ್ರೀತಿಸುವಿರೇನು? ಹಾಗಾದರೆ ಬನ್ನಿ, ಉತ್ತಮವಾದ ಭವ್ಯ ಜೀವನಗಳ ಆದರ್ಶಗಳಿಗೆ ಹೋರಾಡುವ. ನಿಮ್ಮ ಪ್ರಿಯ ಸ್ನೇಹಿತರು,

ಹತ್ತಿರದ ಬಂಧುಗಳು ಕಂಬನಿಗರೆದರೂ ತಿರುಗಿ ನೋಡದಿರಿ. ಎಂದಿಗೂ ಹಿಂತಿರುಗದಿರಿ. ಯಾವಾಗಲೂ ಮುಂದೆ! ಮುಂದೆ!

ಭಾರತಮಾತೆಗೆ ಕನಿಷ್ಠಪಕ್ಷ ಒಂದುಸಾವಿರ ಯುವಕರ ಬಲಿ ಯಾದರೂ ಬೇಕು. ಪುರುಷಸಿಂಹರು! ಮೂರ್ಖರಲ್ಲ! ಮನಸ್ಸಿನಲ್ಲಿಡಿ. ಪುರೋಗಮನ ವಿರುದ್ಧವಾದ ನಿಮ್ಮ ಸಂಸ್ಕೃತಿಯನ್ನು ಒಡೆಯಲು ಒಂದು ಆಯುಧವಾಗಿ ಆಂಗ್ಲ ಸರ್ಕಾರವನ್ನು ದೇವರೇ ಭರತ ಖಂಡಕ್ಕೆ ತಂದಿರುವನು. ಆಂಗ್ಲೇಯರು ಒಂದು ನಿಲ್ಲುವುದಕ್ಕೆ ಮೊಟ್ಟಮೊದಲು ಸಹಾಯಮಾಡಿದ ಜನರನ್ನು ಮದ್ರಾಸು ಒದಗಿಸಿರುವುದು. ಬಡವರಲ್ಲಿ ಅನುತಾಪವನ್ನೂ, ಹಸಿದ ಹೊಟ್ಟೆಗೆ ಹಿಟ್ಟನ್ನೂ, ಜನಸಾಮಾನ್ಯಕ್ಕೆ ತಿಳುವಳಿಕೆಯನ್ನೂ ಕೊಡುವಂತಹ ನೂತನ ಸಂಸ್ಥೆಯನ್ನು ಉಂಟು ಮಾಡುವುದಕ್ಕಾಗಿಯೂ, ನಿಮ್ಮ ಪೂರ್ವೀಕರ ಕಿರುಕುಳದಿಂದ ಪಶು ಸಮಾನಕ್ಕೆ ಇಳಿದವರನ್ನು ಮಾನವರನ್ನಾಗಿ ಮಾಡುವುದಕ್ಕಾಗಿಯೂ, ಪ್ರಾಣಹೋಗುವವರೆವಿಗೂ ಹಿಂಜರಿಯದೆ, ಹೋರಾಡುವ, ಸ್ವಾರ್ಥ ತ್ಯಾಗಿಗಳಾದ ಯುವಕರನ್ನು ಎಷ್ಟು ಮಂದಿ ಈಗ ಮದ್ರಾಸು ಕೊಡುವುದು?

ನಿಮ್ಮ....

ವಿವೇಕಾನಂದ.

(೧೪)

ಬ್ರೀಜಿ ಮೆಡೋಸ್, ಮೆಟ್‌ಕಾಫ್, ಮಸಾಚುಸೆಟ್ಸ್,

೨೦ ನೇ ಆಗಸ್ಟ್, ೧೮೯೩

ಪ್ರಿಯ—,

ನೆನ್ನೆ ನಿನ್ನ ಪತ್ರವು ತಲುಪಿತು. ಬಹುಶಃ ಇಷ್ಟು ಹೊತ್ತಿಗೆ ನಾನು ಜಪಾನಿನಿಂದ ನಿನಗೆ ಬರೆದ ಕಾಗದ ಸೇರಿರಬಹುದು. ಜಪಾನಿನಿಂದ ವಾಂಕೂವರಿಗೆ ಬಂದೆನು. ಮಾರ್ಗ ಉತ್ತರ ಶಾಂತಸಾಗರದ ಮೂಲಕ. ಇಲ್ಲಿ ಬಹಳ ಚಳಿಯಾಗಿತ್ತು. ಕಾಬಿನಾದ ಬಟ್ಟೆಗಳಿಲ್ಲದೆ ನಾನು ಬಹಳ

ಕಷ್ಟಪಡಬೇಕಾಯಿತು. ಅಂತೂ ಹೇಗೋ ವಾಂಕೂವರಿಗೆ ಮುಟ್ಟಿ, ಅಲ್ಲಿಂದ ಕೆನಡಾ ದೇಶದ ಮಾರ್ಗವಾಗಿ, ಚಿಕಾಗೊ ಸೇರಿದೆನು. ಚಿಕಾಗೋವಿನಲ್ಲಿ ಹನ್ನೆರಡು ದಿನಗಳಿದ್ದೆ. ಪ್ರತಿ ದಿನವೂ ಉತ್ಸವವನ್ನು ನೋಡುವುದಕ್ಕೆ ಹೋಗುತ್ತಿದ್ದೆನು. ಇದು ಒಂದು ಅದ್ಭುತ ವ್ಯಾಪಾರ! ಅದನ್ನು ಸುತ್ತಿ ಬರಬೇಕಾದರೆ ಒಬ್ಬನಿಗೆ ಕನಿಷ್ಟಪಕ್ಷ ಹತ್ತು ದಿನಗಳಾದರೂ ಬೇಕು. ನ— ಪರಿಚಯಮಾಡಿಕೊಟ್ಟ ಮಹಿಳೆ ಮತ್ತು ಅವರ ಯಜಮಾನರು, ಚಿಕಾಗೊ ಸಮಾಜದಲ್ಲಿ ಗಣ್ಯರು. ನನ್ನನ್ನು ಬಹಳ ವಿಶ್ವಾಸದಿಂದ ಕಂಡರು. ಚಿಕಾಗೋವಿನಿಂದ ಬಾಸ್ಟನ್ನಿಗೆ ಬಂದೆನು. ಬಾಸ್ಟನ್ ವರೆವಿಗೂ ಲಾ— ನನ್ನೊಂದಿಗೆ ಇದ್ದನು. ಅವನು ನನ್ನನ್ನು ವಿಶ್ವಾಸದಿಂದ ಕಂಡನು.

ಇಲ್ಲಿ ನನ್ನ ಖರ್ಚು ಬಹಳ ದುಬಾರಿಯಾಗಿರುವುದು. ಸುಮಾರು ದಿನಕ್ಕೆ ಒಂದು ಪೌಂಡಿನಂತೆ ನನಗೆ ವೆಚ್ಚವಾಗುತ್ತಿದೆ. ಇಲ್ಲಿ ಒಂದು ಚುಟ್ಟಕ್ಕೆ ನಮ್ಮ ದುಡ್ಡಿನಲ್ಲಿ ಎಂಟು ಆಣೆಗಳು. ಅಮೇರಿಕಾದವರು ಬಹಳ ಶ್ರೀಮಂತರು. ನೀರಿನಂತೆ ಹಣವನ್ನು ವೆಚ್ಚಮಾಡುವರು. ಪ್ರತಿಯೊಬ್ಬ ಸಾಧಾರಣ ಕೂಲಿಯವನು ಒಂಭತ್ತರಿಂದ ಹತ್ತು ರೂಪಾಯಿಗಳ ವರೆವಿಗೂ ಸಂಪಾದಿಸುತ್ತಾನೆ. ಮತ್ತು ಅಷ್ಟನ್ನೇ ಖರ್ಚುಮಾಡುತ್ತಾನೆ. ನಾನು ಇಂಡಿಯಾದಿಂದ ಹೊರಡುವುದಕ್ಕೆ ಮುಂಚೆ ಕಟ್ಟಿದ ಸವಿಗನಸುಗಳೆಲ್ಲ ಈಗ ಮಾಯವಾಗಿವೆ. ನನ್ನನ್ನು ಎದುರಿಸುವ ಯಥಾರ್ಥ ಸ್ಥಿತಿಯೊಂದಿಗೆ ಈಗ ನಾನು ಹೋರಾಡಬೇಕಾಗಿದೆ. ಈ ದೇಶವನ್ನು ಬಿಟ್ಟು ಇಂಡಿಯಾ ದೇಶಕ್ಕೆ ಹಿಂತಿರುಗಬೇಕೆಂದು ನೂರು ಸಲ ಮನಸ್ಸುಮಾಡಿದೆನು. ಈಗ ಹೋಗುವುದಿಲ್ಲವೆಂದು ಶಪಥಮಾಡಿರುವೆನು. ದೇವರೆ ನನಗೆ ಅಪ್ಪಣೆ ಮಾಡಿರುವನು. ನನಗೆ ದಾರಿಕಾಣದೆ ಇರಬಹುದು. ಆದರೆ ಆತನ ಕಣ್ಣಿಗೆ ಎಲ್ಲ ಕಾಣುತ್ತದೆ. ಸಾಯಲಿ, ಬದುಕಲಿ ಹಿಡಿದುದನ್ನು ಬಿಡುವುದಿಲ್ಲ.

ಈಗ ಸದ್ಯಕ್ಕೆ ಬಾಸ್ಟನ್ನಿಗೆ ಸಮೀಪದ ಹಳ್ಳಿಯಲ್ಲಿರುವ ಒಬ್ಬ ವೃದ್ಧಸ್ತ್ರೀಯ ಅತಿಥಿಯಾಗಿರುವೆನು. ರೈಲ್ವೆ ಬಂಡಿಯಲ್ಲಿ ಅಕಸ್ಮಾತ್ ಆಕೆಯ ಪರಿಚಯವನ್ನು ಮಾಡಿಕೊಂಡೆನು. ಆಕೆಯ ಮನೆಯಲ್ಲಿ ಬಂದಿರಬಹುದೆಂದು ನನಗೆ ಆಮಂತ್ರಣಕೊಟ್ಟಳು. ಆಕೆಯೊಂದಿಗೆ ವಾಸಮಾಡುವುದರಿಂದ ನನಗೆ ಒಂದು ಅನುಕೂಲವಿದೆ. ಅದು ಪ್ರತಿದಿನವೂ ವೆಚ್ಚ

ಮಾಡುವ ಒಂದು ಪೌಂಡು ಉಳಿಯುವುದು. ಆಕೆಗೂ ಒಂದು ಅನುಕೂಲವಿದೆ. ತನ್ನ ಸ್ನೇಹಿತರೆಲ್ಲರನ್ನೂ ಕರೆದು ಇಂಡಿಯಾದಿಂದ ಬಂದ ಅಪೂರ್ವವ್ಯಕ್ತಿಯನ್ನು ಅವರ ಮುಂದೆ ಪ್ರದರ್ಶಿಸುವುದು! ಇದೆಲ್ಲವನ್ನೂ ಸಹಿಸಬೇಕಾಗಿದೆ. ಉಪವಾಸ, ಚಳಿ, ನನ್ನ ವಿಚಿತ್ರ ಬಟ್ಟೆಯನ್ನು ನೋಡಿ ಅವರು ರಸ್ತೆಯಲ್ಲಿ ಮಾಡುವ ಹಾಸ್ಯ, ಇವುಗಳೆಲ್ಲದರೊಡನೆ ನಾನು ಹೋರಾಡಬೇಕಾಗಿದೆ. ನನ್ನ ಪ್ರಿಯ ಹುಡುಗನೆ, ಹೆಚ್ಚು ಶ್ರಮವಿಲ್ಲದೆ ಯಾವ ಮಹಾ ಕಾರ್ಯವನ್ನು ಇದುವರೆಗೆ ಸಾಧಿಸಿರುವರು.

ಇದು ಕ್ರೈಸ್ತರ ದೇಶವೆಂಬುದನ್ನು ಜ್ಞಾಪಕದಲ್ಲಿಡು. ಇದಲ್ಲದೆ ಬೇರೆ ಯಾವ ಒಂದು ಪ್ರಭಾವವೂ ಇದರಲ್ಲಿಲ್ಲ. ಜಗತ್ತಿನಲ್ಲಿ ಯಾವ ಸಂಪ್ರದಾಯದವರ ದ್ವೇಷವನ್ನೂ ನಾನು ಲೆಕ್ಕಿಸುವುದಿಲ್ಲ. ಮೇರಿಯ ಮಕ್ಕಳೊಂದಿಗೆ ನಾನಿಲ್ಲಿರುವೆನು. ಯೇಸುಕ್ರಿಸ್ತನೇ ನನಗೆ ಸಹಾಯ ಮಾಡುವನು. ಹಿಂದೂ ಧರ್ಮದ ವಿಶಾಲದೃಷ್ಟಿ ಮತ್ತು ನನಗೆ ಕ್ರೈಸ್ತನ ಮೇಲೆ ಇರುವ ಗೌರವ ಇವುಗಳನ್ನು ಅವರು ಪ್ರೀತಿಸುವರು. ನಾನು ಕ್ರೈಸ್ತನಿಗೆ ವಿರೋಧವಾಗಿ ಏನನ್ನೂ ಬೋಧಿಸುವುದಿಲ್ಲವೆಂದು ಹೇಳುತ್ತೇನೆ. ಇಂಡಿಯಾ ದೇಶದ ಮಹಾ ವ್ಯಕ್ತಿಗಳನ್ನು ಕ್ರೈಸ್ತನೊಂದಿಗೆ ಸನ್ಮಾನಿಸಿ ಎಂದು ಕೇಳಿಕೊಳ್ಳುತ್ತೇನೆ. ಅವರಿಗೆ ಇದು ಚೆನ್ನಾಗಿ ಗೊತ್ತಿದೆ.

ಚಳಿಗಾಲ ಸಮೀಪಿಸುತ್ತಿದೆ. ಎಲ್ಲಾ ವಿಧದ ಬೆಚ್ಚಗಿರುವ ಬಟ್ಟೆಗಳೂ ಬೇಕಾಗಿವೆ. ಇಲ್ಲಿರುವ ಜನರಿಗಿಂತ ನಮಗೆ ಹೆಚ್ಚು ಬೇಕು. ಮಗು! ನೇರವಾಗಿ ನೋಡು! ಧೈರ್ಯವನ್ನು ತಾಳು! ಇಂಡಿಯಾ ದೇಶದಲ್ಲಿ ನಾವು ಮಹಾ ಕಾರ್ಯವನ್ನು ಮಾಡಬೇಕೆಂಬುದು ದೈವೇಚ್ಛೆ. ಶ್ರದ್ಧೆಯಿಡು, ನಾವು ಸಾಧಿಸುತ್ತೇವೆ. ದರಿದ್ರರೂ, ನಿರಾಶ್ರಿತರಾದ ನಾವೇ ಇನ್ನೊಬ್ಬರಿಗೆ ಮರುಗುವುದು, ಉಳಿದವರಲ್ಲ.

ಕೆಲವು ದಿನಗಳ ಹಿಂದೆ ಇಲ್ಲಿ ಒಂದು ತಮಾಷೆ ನಡೆಯಿತು. ಕ—ರಾಜರು ಇಲ್ಲಿದ್ದರು. ಚಿಕಾಗೊ ಸಮಾಜದ ಕೆಲವರು ಇವರನ್ನು ಬಹಳ ಗೌರವಿಸುತ್ತಿದ್ದರು. ಉತ್ಸವದ ಸಮಯದಲ್ಲಿ ನಾನು ಅವರನ್ನು ನೋಡಿದೆನು. ಆದರೆ ನನ್ನಂತಹ ದರಿದ್ರ ಭಿಕಾರಿಯೊಂದಿಗೆ ಅವರಿಗೆ

ಮಾತನಾಡಲು ಮನಸ್ಸು ಬರಲಿಲ್ಲ. ಪಂಜೆ ಉಟ್ಟುಕೊಂಡು ಖಯಾಲಿಯಂತೆ ತೋರುವ ಒಬ್ಬ ಮಹಾರಾಷ್ಟ್ರ ಬ್ರಾಹ್ಮಣನು ಉಗುರಿನಿಂದ ಬರೆದ ಚಿತ್ರಗಳನ್ನು ಇಲ್ಲಿ ಮಾರುತ್ತಿದ್ದ. ಈ ವ್ಯಕ್ತಿಯು ಪತ್ರಿಕೆಯ ಸುದ್ದಿಕಾರನೊಂದಿಗೆ ರಾಜರಿಗೆ ವಿರೋಧವಾಗಿ ಏನೇನೋ ಹೇಳಿದನು— "ರಾಜರು ಕೀಳುಜಾತಿಯವನು; ಇಂತಹ ರಾಜರು ನಿಜವಾಗಿ ರಾಜರಲ್ಲ, ಗುಲಾಮರು. ಅವರು ಸಾಮಾನ್ಯವಾಗಿ ವ್ಯಭಿಚಾರಿಗಳು" ಮುಂತಾಗಿ. ಪತ್ರಿಕೆಯ ಈ ಸತ್ಯ ಸಂಪಾದಕರಿರುವರಲ್ಲ, (ಅಮೇರಿಕ ಇದಕ್ಕೆ ಪ್ರಖ್ಯಾತವಾಗಿದೆ) ಅವರು ಈ ಮಾತಿಗೆ ಸ್ವಲ್ಪ ಗೌರವಕೊಟ್ಟು, ಮರುದಿವಸ ತಮ್ಮ ಪತ್ರಿಕೆಯಲ್ಲಿ, ಇಂಡಿಯಾದಿಂದ ಬಂದ ಜ್ಞಾನಿಯೋರ್ವನನ್ನು, ಅಂದರೆ ನನ್ನನ್ನು ವಿವರಿಸಿ, ಅತಿಯಾಗಿ ಹೊಗಳಿ, ನಾನು ಕನಸಿನಲ್ಲಿಯೂ ಕೂಡ ಹೇಳದ ಮಾತುಗಳು, ನನ್ನ ಬಾಯಿಯಿಂದ ಹೊರಟವೆಂದು ದೊಡ್ಡ ಲೇಖನವನ್ನು ಪ್ರಕಟಿಸಿದರು. ಅಲ್ಲದೆ ರಾಜರ ವಿಷಯವಾಗಿ ಮಹಾರಾಷ್ಟ್ರ ಬ್ರಾಹ್ಮಣನು ಹೇಳಿದ ಮಾತೆಲ್ಲ ನನ್ನ ಬಾಯಿಂದ ಹೊರಟವೆಂದು ತಿಳಿಸಿದರು. ಇದರಿಂದ ರಾಜನ ಮುಖಕ್ಕೆ ಮಸಿ ಬಳಿದಂತೆ ಆಗಿ, ಬೇಗ ರಾಜನನ್ನು ಚಿಕಾಗೊ ಸಮಾಜ ತಿರಸ್ಕರಿಸಿತು. ನನ್ನ ದೇಶದವನನ್ನು ಹೀಯಾಳಿಸುವುದಕ್ಕೆ ಇಲ್ಲಿಯ ಜನರು ನನ್ನನ್ನುಪಯೋಗಿಸಿದರು. ಈ ದೇಶದಲ್ಲಿ ಐಶ್ವರ್ಯ ಬಿರುದು ಇವುಗಳೆಲ್ಲಕ್ಕಿಂತ ಬುದ್ಧಿ ಪ್ರಧಾನವೆಂದು ಸೂಚಿಸುತ್ತದೆ.

ನೆನ್ನೆ ಇಲ್ಲಿ ಹೆಂಗಸರ ಕಾರಾಗೃಹದ ಸ್ತ್ರೀವಿಚಾರಣಕರ್ತಳು ಬಂದಿದ್ದಳು. ಇಲ್ಲಿ ಅದನ್ನು ಸೆರೆಮನೆ ಎಂದು ಕರೆಯುವುದಿಲ್ಲ. ಅದನ್ನು ದೋಷನಿವೃತ್ತಿ ಆಲಯ [Reformatory] ಎಂದು ಕರೆಯುತ್ತಾರೆ. ನಾನು ಅಮೇರಿಕದಲ್ಲಿ ನೋಡಿದವುಗಳಲ್ಲೆಲ್ಲ ಬಹು ಉತ್ತಮವಾದದು ಇದು. ಪ್ರೀತಿಯಿಂದ ಅಲ್ಲಿರುವವರೆಲ್ಲರನ್ನೂ ನೋಡಿಕೊಳ್ಳುತ್ತಾರೆ. ಅವರ ಶೀಲವನ್ನು ತಿದ್ದುತ್ತಾರೆ. ಸಮಾಜಕ್ಕೆ ಉಪಯುಕ್ತರಾದ ಜನರನ್ನು ಮಾಡಿ ಪುನಃ ಕಳುಹಿಸಿಕೊಡುತ್ತಾರೆ. ಅದು ಎಷ್ಟು ಚಮತ್ಕಾರವಾಗಿದೆ. ಎಷ್ಟು ಸುಂದರವಾಗಿದೆ! ನೋಡಿದಲ್ಲದೆ ಅದನ್ನು ನಂಬಲಾಗುವುದಿಲ್ಲ! ಭರತಖಂಡದಲ್ಲಿ ದರಿದ್ರರನ್ನು, ದೀನರನ್ನು ನಾವು ಯಾವ

ರೀತಿಯಿಂದ ನೋಡುತ್ತೇವೆ ಎಂದು ಆಲೋಚಿಸಿದಾಗ ನನ್ನ ಎದೆ ಕರಗಿತು. ಅವರಿಗೆ ಸಮಾಜದಲ್ಲಿ ಮೇಲೇರುವುದಕ್ಕೆ ಅವಕಾಶವಿಲ್ಲ. ತಾವಿರುವ ಕಷ್ಟದಿಂದ ತಪ್ಪಿಸಿಕೊಳ್ಳಲು ದಾರಿಯಿಲ್ಲ. ಭರತಖಂಡದಲ್ಲಿ ದೀನರಿಗೆ ದರಿದ್ರರಿಗೆ, ಪಾಪಿಗಳಿಗೆ ಸ್ನೇಹಿತರಿಲ್ಲ. ಅವರಿಗೆ ಸಹಾಯಕರಿಲ್ಲ. ತಾವು ಎಷ್ಟು ಪ್ರಯತ್ನಪಟ್ಟರೂ, ಅವರು ಮೇಲೇರಲಾರರು. ಪ್ರತಿದಿನವೂ ಅವರು ಅಧಃ ಪಾತಾಳಕ್ಕೆ ಹೋಗುವರು. ಕ್ರೂರಸಮಾಜದಿಂದ ಬೀಳುವ ಪೆಟ್ಟಿನ ಸುರಿಮಳೆಯನ್ನು ಅವರು ಅನುಭವಿಸುವರು. ಯಾವ ಕಡೆಯಿಂದ ಪೆಟ್ಟು ಬೀಳುತ್ತಿದೆ ಎನ್ನುವುದು ಅವರಿಗೆ ತಿಳಿಯದು. ತಾವು ಮಾನವವರ್ಗಕ್ಕೆ ಸೇರಿದವರು ಎಂಬುದನ್ನು ಅವರು ಮರೆತಿರುವರು. ಇದರ ಪರಿಣಾಮವೇ ಗುಲಾಮಗಿರಿ. ಕಳೆದ ಕೆಲವು ವರುಷಗಳಿಂದ ಆಲೋಚನಾಪರರು ಇದನ್ನು ನೋಡಿರುವರು. ಆದರೆ ದುರದೃಷ್ಟವಶ ದಿಂದ ತಪ್ಪೆಲ್ಲವನ್ನೂ ಹಿಂದೂಧರ್ಮದಮೇಲೆ ಹೊರಿಸಿರುವರು. ಅವರಿಗೆ ಸ್ಥಿತಿಯನ್ನು ಉತ್ತಮ ಪಡಿಸಬೇಕಾದರೆ ಒಂದೇ ಮಾರ್ಗ ತೋರುವುದು. ಅದೇ ಜಗತ್ತಿನಲ್ಲೆಲ್ಲ ಅತ್ಯಂತ ಉತ್ತಮವಾದ ಧರ್ಮವನ್ನು ನಾಶಮಾಡು ವುದರಿಂದ. ನನ್ನ ಸ್ನೇಹಿತನೆ ಕೇಳು; ದೇವರ ದಯೆಯಿಂದ ನನಗೆ ಇದರ ಗುಟ್ಟು ಗೊತ್ತಾಗಿದೆ. ತಪ್ಪು ಧರ್ಮದಲ್ಲಿಲ್ಲ. ನೀನೊಬ್ಬನೇ ಅನೇಕ ವಾಗಿ ಸರ್ವ ಭೂತಗಳಲ್ಲಿಯೂ ನೀನಿರುವಿ ಎಂದು ನಿಮ್ಮ ಧರ್ಮ ಸಾರುವುದು. ಆದರೆ ಇದನ್ನು ಅನುಷ್ಠಾನಕ್ಕೆ ತರಲಿಲ್ಲ. ಸಹಾನು ಭೂತಿಯನ್ನು ತೋರಲಿಲ್ಲ. ದಯೆ ಬೀರಲಿಲ್ಲ. ಇದು ನಮ್ಮ ತಪ್ಪು. ದೇವರು ಮತ್ತೊಮ್ಮೆ ಬುದ್ಧನಂತೆ ಬಂದು ದರಿದ್ರರೊಂದಿಗೆ, ದುಃಖಿ ಗಳೊಂದಿಗೆ, ಪಾಪಿಗಳೊಂದಿಗೆ ಹೇಗೆ ಅನುಕಂಪ ತೋರಬೇಕು, ಹೇಗೆ ಮನಕರಗಬೇಕು ಎಂಬುದನ್ನು ತೋರಿದನು. ಆದರೆ ಅದನ್ನು ನೀವು ಲಕ್ಷಿಸಲಿಲ್ಲ. ರಾಕ್ಷಸರನ್ನು ತಪ್ಪುಮಾರ್ಗದಿಂದ ಎಳೆಯಬೇಕೆಂದು, ದೇವರೇ ಈ ರೂಪತಾಳಿ ಬಂದನೆಂದು ಸುಳ್ಳುಕಥೆಯನ್ನು ನಿಮ್ಮ ಪುರೋಹಿತರು ಜಾರಿಗೆ ತಂದರು! ಅದೇನೊ ನಿಜ, ನಾವು ರಾಕ್ಷಸರು; ಯಾರು ಅವನನ್ನು ಕೇಳಿದರೋ ಅವರಲ್ಲ. ಯೇಸುಕ್ರಿಸ್ತನನ್ನು ಯಹೂದ್ಯರು ನಿರಾಕರಿಸಿದರು; ಅಂದಿನಿಂದ ಜಗತ್ತಿನಲ್ಲಿ ಒಂದೆಡೆ

ನಿಲ್ಲಲು ಸ್ಥಳವಿಲ್ಲದೆ, ಎಲ್ಲರಿಂದಲೂ ಕಷ್ಟವನ್ನು ಅನುಭವಿಸುತ್ತಿರುವರು. ಅಂತೆಯೆ ನೀವೂ ಕೂಡ, ನಿಮ್ಮನ್ನು ಆಳುವುದರಿಂದ ಸ್ವಲ್ಪ ಪ್ರಯೋಜನವಿದೆ ಎಂದು ತಿಳಿದುಬರುವ ಎಲ್ಲಾ ಜನಾಂಗದ ಗುಲಾಮರು ನೀವು. ಅಯ್ಯೋ ಅತ್ಯಾಚಾರಿಗಳೆ! ನಿಮಗೆ ತಿಳಿಯದು. ಅತ್ಯಾಚಾರ ಗುಲಾಮಗಿರಿ ಎರಡೂ ಒಂದೇ ವಸ್ತುವಿನ ಎರಡುಕಡೆಗಳು. ಎರಡೂ ಸಮಾನ ಶಬ್ದಗಳು.

ಬಾ — ಮತ್ತು ಬಿ — ಅವರು ಒಂದುದಿನ ಪಾಂಡುಚೆರಿಯಲ್ಲಿ ಸಾಯಂಕಾಲ ಸಮುದ್ರಪ್ರಯಾಣದ ವಿಚಾರವಾಗಿ ಒಬ್ಬ ಪಂಡಿತನೊಂದಿಗೆ ಮಾತನಾಡುತ್ತಿದ್ದುದನ್ನು ಜ್ಞಾಪಕದಲ್ಲಿಟ್ಟುಕೊಂಡಿರಬಹುದು. ಅವನು ಆಗ ಗಂಟುಮುಖ ಹಾಕಿಕೊಂಡು ಹೇಳುತ್ತಿದ್ದ "ಕದಾಪಿನ" (ಎಂದಿಗೂ ಇಲ್ಲ) ಎಂಬುದನ್ನು ನಾನು ಎಂದಿಗೂ ಮರೆಯುವುದಿಲ್ಲ. ಭೂಮಿಯಲ್ಲಿ ಭರತ ಖಂಡವೆಂಬುದು ಅತ್ಯಲ್ಪಪ್ರದೇಶವೆಂಬುದು ಅವರಿಗೆ ಗೊತ್ತಿಲ್ಲ. ಪಾಪ! ಮೂವತ್ತುಕೋಟಿ ಮಾನವರು ಕೀಟಗಳಂತೆ ಸುಂದರ ತಿರೆಯಮೇಲೆ ತೆವಳಾಡುತ್ತ, ಒಂದನ್ನೊಂದು ಹಿಂಸಿಸುತ್ತ ಇರುವುದನ್ನು ಇಡೀ ಜಗತ್ತು ತುಚ್ಛರೀತಿಯಿಂದ ಕಾಣುತ್ತಿದೆ ಎಂಬುದು ಅವರು ಅರಿಯರು. ಇಂದಿನ ಹೀನಸ್ಥಿತಿಯನ್ನು ನಾವು ಹೋಗಲಾಡಿಸಬೇಕು. ಧರ್ಮವನ್ನು ನಾಶಮಾಡುವುದರಿಂದ ಅಲ್ಲ. ಹಿಂದೂಧರ್ಮದ ಉದಾತ್ತ ಉಪದೇಶಗಳನ್ನು ಅನುಷ್ಠಾನಕ್ಕೆ ತರುವುದರಿಂದ. ಹಿಂದೂಧರ್ಮವು ಸ್ವಾಭಾವಿಕ ರೀತಿಯಲ್ಲಿ ಪರಿಪೂರ್ಣತೆಯನ್ನು ಹೊಂದಿರುವ ಬೌದ್ಧಧರ್ಮದ ಅದ್ಭುತ ಸಹಾನುಭೂತಿಯನ್ನು ಮಿಶ್ರಮಾಡಬೇಕು. ಚಿತ್ತಶುದ್ಧಿಯಿಂದ ಹುಟ್ಟುವ ಉತ್ಸಾಹದಿಂದ ಅನುಕಂಪಹೃದಯರಾಗಿ, ಭಗವಂತನಲ್ಲಿ ಅಚಲಭಕ್ತಿಯುತರಾಗಿ, ದರಿದ್ರರಲ್ಲಿಯೂ, ಪತಿತರಲ್ಲಿಯೂ, ಜಗತ್ತಿನಲ್ಲಿ ಕೆಳಗೆ ತುಳಿಯಲ್ಪಟ್ಟ ಜನರಮೇಲೆ ಅನುಕಂಪತಾಳಿ, ಸಿಂಹಪ್ರತಾಪವನ್ನು ಹೊಂದಿದ ಲಕ್ಷಾಂತರ ಸ್ತ್ರೀಯರು, ಪುರುಷರು, ಭಾರತದ ಎಲ್ಲಾ ಕಡೆಯಲ್ಲಿಯೂ "ಸಕಲರಿಗೂ ವಿಮೋಚನ ಉಂಟು. ಸರ್ವರಿಗೂ ಸಹಾಯ ಉಂಟು, ಸಮಾಜಕ್ಕೆ ಏಳಿಗೆಯುಂಟು" ಎಂಬುದನ್ನೂ ಸರ್ವಸಮತ್ವ ಸಿದ್ಧಾಂತವನ್ನೂ ಉಪದೇಶಿಸಬೇಕು.

ಹಿಂದೂಧರ್ಮದಷ್ಟು ಮಾನವನ ಉತ್ಕೃಷ್ಟತೆಯನ್ನು, ಮಹಿಮೆಯನ್ನು ಉಚ್ಚ ರೀತಿಯಲ್ಲಿ ಹೇಳುವಂತೆ ಮತ್ಯಾವ ಧರ್ಮವೂ ಹೇಳುವುದಿಲ್ಲ. ಆದರೆ ಹಿಂದೂ ಧರ್ಮದಲ್ಲಿ ದರಿದ್ರರನ್ನು, ದೀನರನ್ನು ತುಳಿಯುವಂತೆ ಮತ್ಯಾವ ಧರ್ಮದಲ್ಲಿಯೂ ಇಲ್ಲ. ಇದು ಧರ್ಮದ ತಪ್ಪಲ್ಲವೆಂದು ದೇವರು ನನಗೆ ತೋರಿರುವನು. ಹಿಂದೂಧರ್ಮದಲ್ಲಿ ವ್ಯಾವಹಾರಿಕ, ಪಾರಮಾರ್ಥಿಕ ಎಂಬ ನಾನಾ ಹಿಂಸೆಗಳನ್ನು ಕೊಡುವ ಸಿದ್ಧಾಂತಗಳನ್ನು ಪ್ರಚಾರಕ್ಕೆ ತಂದ ಕಪಟಿಗಳು ಮತ್ತು ಅಹಾಧಘೂತಿಗಳು ಅಪರಾಧಿಗಳು.

ನಿರಾಶನಾಗದಿರು. 'ಕೆಲಸಮಾಡುವುದಕ್ಕೆ ನಿನಗೆ ಅಧಿಕಾರವಿದೆ. ಅದರಿಂದ ಬರುವ ಫಲಗಳಿಗಲ್ಲ' ಎಂದು ಶ್ರೀಕೃಷ್ಣನು ಗೀತೆಯಲ್ಲಿ ಸಾರುತ್ತಾನೆ. ನನ್ನ ಮಗು! ಸೊಂಟಕಟ್ಟಿ ನಿಲ್ಲು, ಸಿದ್ಧನಾಗು. ಈ ಮಹಾಕಾರ್ಯಕ್ಕೆ ದೇವರು ನನ್ನನ್ನು ಕರೆದಿರುವುದು. ಕಷ್ಟನಷ್ಟಗಳ ಕಣೆವೆಯಲ್ಲಿ ನಾನು ಇಡೀ ಜೀವನವೆಲ್ಲ ನಡೆದಿರುವೆನು. ಬಹಳ ಹತ್ತಿರದ ಬಂಧುಗಳು, ಪ್ರಿಯತಮರು, ಉಪವಾಸದಿಂದ ನರಳಿಸಾಯುವುದನ್ನು ಕಣ್ಣಾರೆ ನೋಡಿರುವೆನು. ಯಾರು ನನ್ನನ್ನು ದೂರುತ್ತಾರೊ ಅವರ ಮೇಲೆ ನನಗೆ ಇರುವ ಅನುತಾಪಕ್ಕಾಗಿ ಅಣಕಿಸಿರುವರು. ನನ್ನ ಮೇಲೆ ನಂಬಿಕೆ ಕಳೆದುಕೊಂಡಿರುವರು. ನನ್ನ ಅನುತಾಪಕ್ಕೆ ನಾನೇ ಕಷ್ಟಪಟ್ಟಿರುವೆನು. ಎಲೈ ವತ್ಸ, ಇದು ಒಂದು ದುಃಖದ ಶಿಕ್ಷಾಲಯ. ದಯೆ, ಸಹನೆ ಎಲ್ಲಕ್ಕೂ ಮೇಲಾಗಿ ನಮ್ಮ ಕಾಲಿನಕೆಳಗೆ ಪೃಥ್ವಿಯೆ ಪುಡಿಪುಡಿಯಾದರೂ ಅಂಜದಿರುವ ಪಜ್ರೋಪಮ ದೃಢಸಂಕಲ್ಪ ಇಂತಹ ಶೀಲಗಳನ್ನು ಪೋಷಿಸುವ ಮಹಾವ್ಯಕ್ತಿಗಳ ಶಿಕ್ಷಾಲಯ ಈ ಜಗತ್ತು. ನನ್ನನ್ನು ದೂರುವವರಿಗೆ ದಯೆ ತೋರುತ್ತೇನೆ. ಇದು ಅವರ ತಪ್ಪಲ್ಲ. ಅವರು ಮಕ್ಕಳು. ಇನ್ನೂ ಎಳೆ ಹಸುಳೆಗಳು. ಸಮಾಜದಲ್ಲಿ ಉನ್ನತ ಪದವಿಯಲ್ಲಿದ್ದರೇನು, ತಮ್ಮ ಮುಂದಿರುವ ಕೆಲವು ಅಡಿಗಳಲ್ಲದೆ ಅವರಿಗೆ ಮತ್ತೇನೂ ಕಾಣದು. ಊಟಮಾಡುವುದು, ಕುಡಿಯುವುದು ದ್ರವ್ಯಾರ್ಜನೆಮಾಡುವುದು, ಮಕ್ಕಳನ್ನು ಪಡೆಯುವುದು, ಇದೇ ಬಂದಾದಮೇಲೊಂದು ಲೆಕ್ಕಾಚಾರದಂತೆ ಬರುವುದು. ಇದರಲ್ಲೆ ಅವರ ದಿನಚರಿ

ಕೊನೆಗಾಣುವುದು. ಇದಕ್ಕಿಂತ ಮೇಲಿರುವುದನ್ನು ಅವರು ಕಾಣರು. ಪಾಪ! ಸುಖಾಭಿಲಾಷಿತರಾದ ಅಲ್ಪ ಜೀವಿಗಳು! ಅವರ ನಿದ್ರೆಗೆ ಎಂದಿಗೂ ಭಂಗವಿಲ್ಲ. ಅನೇಕ ಶತಮಾನದ ಕಿರುಕುಳದ ಪರಿಣಾಮವಾಗಿ ದುಃಖಾತ್ಮರ, ಪತಿತರ, ದೀನರ ಗೋಳು ಭರತಖಂಡವೆಲ್ಲವನ್ನೂ ಆವರಿಸಿದ್ದರೂ, ಆ ಸುಖಜೀವಿಗಳ ಸ್ವರ್ಣಸ್ವಪ್ನ ಭಂಗವಾಗಿಲ್ಲ. ಅನೇಕ ಶತಮಾನಗಳಿಂದಲೂ ಕೊಟ್ಟ ದೈಹಿಕ, ಮಾನಸಿಕ, ನೈತಿಕ ಕಿರುಕುಳಗಳಿಂದ ದೇವರ ಪ್ರತಿಬಿಂಬದಂತೆ ಇದ್ದ ಮಾನವನನ್ನು ಹೊರೆಹೊರುವ ಮೃಗಕ್ಕೆ ಸಮನಾಗಿ ಮಾಡಿರುವರು. ಜಗನ್ಮಾಯಿ ಸಾದೃಶ್ಯರಾದ ಸ್ತ್ರೀಯರನ್ನು, ಮಕ್ಕಳನ್ನು ಹೆರುವ ದಾಸಿಯರನ್ನಾಗಿ ಮಾಡಿರುವರು. ಮಾನವನ ಬಾಳನ್ನು ಒಂದು ಶಾಪದಂತೆ ಮಾಡಿರುವರು. ಇದು ಅವರಿಗೆ ಸ್ವಲ್ಪವೂ ಹೊಳೆಯುವುದಿಲ್ಲ. ಆದರೆ ಮತ್ತೆ ಕೆಲವರು ಇರುವರು. ಅವರು ಇದನ್ನೆಲ್ಲ ನೋಡಿರುವರು. ಅವರಿಗೆ ವ್ಯಥೆಪಡುವರು. ದುಃಖಾಶ್ರುಗಳನ್ನು ಹೃದಯದಲ್ಲಿ ಕರೆಯುವರು. ಈ ಘೋರ ಸ್ಥಿತಿಗೆ ಚಿಕಿತ್ಸೆಯೊಂದಿದೆ ಎಂದು ಆಲೋಚಿಸುವರು. ತಮ್ಮ ಪ್ರಾಣವನ್ನಾದರೂ ಬಲಿಗೊಟ್ಟು ಈ ಚಿಕಿತ್ಸೆಯನ್ನು ಅವರು ಪ್ರಯೋಗಿಸುವುದಕ್ಕೆ ಸಿದ್ಧರಾಗಿರುವರು. "ಸ್ವರ್ಗವೆಂಬುದು ಅವರಿರುವ ನಾಡು;" ಆ ಮಹಾಪುರುಷರು ತಾವು ಇರುವ ಸ್ಥಳದಿಂದ ಪ್ರತಿನಿಮಿಷವೂ ವಿಷಕಾರಲು ಸಿದ್ಧರಾಗಿರುವ ಈ ಕ್ಷುದ್ರ ಜೀವಿಗಳನ್ನು ನಿಕೃಷ್ಟ ದೃಷ್ಟಿಯಿಂದ ನೋಡಲು ತಾನೆ ಅವರಿಗೆ ಸಮಯವೆಲ್ಲಿರುವುದು?

ಶ್ರೀಮಂತರು ಎನಿಸಿಕೊಳ್ಳುವವರನ್ನು ಎಂದಿಗೂ ನೆಚ್ಚಬೇಡಿ. ಬದುಕಿರುವುದಕ್ಕಿಂತ ಹೆಚ್ಚಾಗಿ ಅವರು ಸತ್ತಿರುವರು. ಸಾಧುವೂ, ನಮ್ರನೂ ಆದರೂ ಪ್ರಾಮಾಣಿಕನಾದ ನಿನ್ನಂತಹವರಲ್ಲಿ ನನಗೆ ಹೆಚ್ಚು ವಿಶ್ವಾಸವಿರುವುದು. ಭಗವಂತನಲ್ಲಿ ಭಕ್ತಿ ಇಡು. ಮತ್ತಾವ ಕುಶಲತೆಯೂ ಇದಕ್ಕೆ ಬೇಕಾಗಿಲ್ಲ. ದೀನರಿಗೆ ಮರುಕರಾಗಿ ದೇವರ ಸಹಾಯಕ್ಕೆ ಕಾದುನಿಂತರೆ ಅದು ಬಂದೇ ಬರುವುದು. ಹೃದಯದಲ್ಲಿ ಈ ಹೊರೆಯನ್ನು, ತಲೆಯಲ್ಲಿ ಈ ಆಲೋಚನೆಯನ್ನು ಹೊತ್ತು ಹನ್ನೆರಡು ವರುಷಗಳು ಅಲೆದಾಡಿರುವೆನು. ಶ್ರೀಮಂತರು, ದೊಡ್ಡವರು ಎಂಬುವರ ಮನೆಯಿಂದ

ಮನೆಗೆ ತಿರುಗಿ ಸಾಕಾಯಿತು. ಈ ಹೃದಯ ಯಾತನೆಯಿಂದ ಅರ್ಧ ಪ್ರಪಂಚವನ್ನು ದಾಟಿ, ಈ ಅಪರಿಚಿತದೇಶಕ್ಕೆ ಸಹಾಯವನ್ನು ಕೇಳಲು ಬಂದಿರುವೆನು. ದೇವರು ದೊಡ್ಡವನು. ಅವನು ನನಗೆ ಸಹಾಯ ಮಾಡುತ್ತಾನೆಂದು ಗೊತ್ತಿದೆ. ಚಳಿಯಿಂದ, ಹಸಿವಿನ ಬಾಧೆಯಿಂದ ನಾನು ಇಲ್ಲಿ ನಾಶವಾಗಬಹುದು. ತರುಣರೇ, ದೀನರನ್ನು, ಮೂಢರನ್ನು, ಪದದಳಿತರನ್ನು ಮೇಲಕ್ಕೆತರುವ ಪ್ರಯತ್ನ, ಅವರಿಗೆ ಎದೆಕರಗುವ ಮರುಕ, ಇವೇ ನಾನು ನಿಮಗೆ ಬಿಡುವ ಆಸ್ತಿ. ಈ ಕ್ಷಣವೆ ನೀನು ಪಾರ್ಥಸಾರಥಿಗುಡಿಗೆಹೋಗು. ದೀನರೂ, ಆರ್ತರೂ ಆದ ಗೋಕುಲದ ಗೋಪಾಲರ ಬಂಧುವಾತ. ರಾಮಾವತಾರದಲ್ಲಿ ಚಂಡಾಲ ಗುಹನನ್ನು ಕೂಡ ಆಲಿಂಗನಮಾಡಿಕೊಳ್ಳಲಿಕ್ಕೆ ಹಿಂಜರಿಯಲಿಲ್ಲ. ಅನೇಕ ರಾಜ ಪುತ್ರರ ಆಹ್ವಾನವನ್ನು ಕೂಡ ನಿರಾಕರಿಸಿ. ವೈಶ್ಯಾಂಗನೆಯ ಸತ್ಕಾರ ವನ್ನು ಸ್ವೀಕರಿಸಿ, ಬುದ್ಧಾವತಾರದಲ್ಲಿ ಅವಳನ್ನು ಉದ್ಧಾರಮಾಡಿದನು. ಆತನ ಮುಂದೆ ಸಾಷ್ಟಾಂಗ ಪ್ರಣಾಮವನ್ನು ಮಾಡು. ಮಹಾತ್ಯಾಗ ಮಾಡು. ಯಾರ ಉದ್ಧಾರಕ್ಕೆ ಅನೇಕವೇಳೆ ಜನ್ಮವೆತ್ತಿಬಂದನೋ, ಯಾರು ಎಲ್ಲರಿಗಿಂತ ಹೆಚ್ಚಾಗಿ, ದೀನರನ್ನು, ನಮ್ರರನ್ನು, ದಳಿತರನ್ನು ಪ್ರೀತಿಸಿದನೊ, ಅವರ ಉದ್ಧಾರಕ್ಕೆ ನಿನ್ನ ಜೀವನವನ್ನು ನಿವೇದಿಸು. ಪ್ರತಿದಿನವೂ ಅಧಃಪಾತಾಳಕ್ಕೆ ಹೋಗುತ್ತಿರುವ ಮೂವತ್ತು ಕೋಟಿ ಮಾನವರ ಉದ್ಧಾರಕ್ಕೆ ಆಯುಷ್ಯವೆಲ್ಲವನ್ನೂ ವಿನಿಯೋಗಿಸುತ್ತೇನೆಂದು ಶಪಥಮಾಡು, ಬದ್ಧ ಕಂಕಣನಾಗು.

ಇದು ಒಂದು ದಿನದಲ್ಲಿ ಆಗುವ ಕಾರ್ಯವಲ್ಲ. ದಾರಿಯಲ್ಲಿ ಅತ್ಯಂತ ಭಯಂಕರವಾದ ಮುಳ್ಳುಗಳಿವೆ. ಪಾರ್ಥಸಾರಥಿಯು ನಮ್ಮ ಸಾರಥಿ ಯಾಗುವುದಕ್ಕೆ ಸಿದ್ಧನಾಗಿರುವನು. ಅದು ನಮಗೆ ಗೊತ್ತಿದೆ. ಆತನ ಹೆಸರನ್ನು ಹಿಡಿದು, ಆತನಲ್ಲಿ ಅನಂತ ವಿಶ್ವಾಸವಿಟ್ಟು, ಅನೇಕ ಶತಮಾನ ಗಳಿಂದ ಮೇಲೆ ಮೇಲೆ ಮುತ್ತಿಕೊಂಡಿರುವ ಪಾಪದ ಬೆಟ್ಟಕ್ಕೆ ಕಿಚ್ಚನ್ನು ಇಡುವ. ಅದು ಭಸ್ಮೀಭೂತವಾಗಿಬಿಡುವುದು. ಹಾಗಾದರೆ ಬನ್ನಿ. ಪ್ರತ್ಯಕ್ಷವಾಗಿ ನೋಡಿ. ಇದು ಪವಿತ್ರಕಾರ್ಯ. ನಾವು ಹೀನಸ್ಥಿತಿ ಯಲ್ಲಿರುವೆವು, ಆದರೇನು, ಜ್ಞಾನದ ಸಂತಾನರು ನಾವು. ದೇವರ

ಮಕ್ಕಳು ನಾವು. ಭಗವಂತನಿಗೆ ಜಯವಾಗಲಿ. ನಾವು ಜಯಶೀಲರಾಗಿಯೇ ಆಗುವೆವು. ನೂರಾರು ಜನ ಸಾಯುವರು ಈ ಹೋರಾಟದಲ್ಲಿ. ಮತ್ತೆ ನೂರಾರು ಜನ ಅವರ ಸ್ಥಳವನ್ನು ತೆಗೆದುಕೊಳ್ಳಲು ಸಿದ್ಧರಾಗಿರುವರು. ನಾನು ಜಯಶೀಲನಾಗದೆ ಸಾಯಬಹುದು. ಮತ್ತೊಬ್ಬನು ಈ ಕಾರ್ಯಕ್ಕೆ ಕೈಹಾಕುವನು. ನಿನಗೆ ರೋಗದಸ್ಥಿತಿ ಗೊತ್ತಿದೆ. ಅದಕ್ಕೆ ಚಿಕಿತ್ಸೆಗೊತ್ತಿದೆ ದೇವರಲ್ಲಿ ನಂಬಿಕೆಯನ್ನು ಮಾತ್ರ ಇಡು. ಹಣವಂತರಿಗೆ, ದೊಡ್ಡವರಿಗೆ ಕಾದು ಕುಳಿತುಕೊಳ್ಳಬೇಡ. ನಿರ್ಭಯರಾದ ಬುದ್ಧಿವಂತರಾದ ಬರಹಗಾರರು ವರ್ತಮಾನ ಪತ್ರಿಕೆಗಳಲ್ಲಿ ಬರೆಯುವ ನಿಸ್ತೇಜವಾದ ಪ್ರಬಂಧಗಳಿಗೆ ಲೆಕ್ಕಿಸಬೇಡ. ವಿಶ್ವಾಸ, ಸಹಾನುಭೂತಿ. ಅಗ್ನಿಮಯ ವಿಶ್ವಾಸ, ಅಗ್ನಿಮಯ ಸಹಾನುಭೂತಿ! ಈ ಬಾಳೇನು! ಸಾವೇನು! ಹಸಿವೇನು! ಚಳಿಯೇನು! ಜಯಭಗವಾನ್! ಮುಂದಿಡು ಹೆಜ್ಜೆಯನ್ನು. ದೇವರೇ ನಮ್ಮ ಸೇನಾನಾಯಕನು. ಯಾರು ಬಿದ್ದರೆಂದು ನೋಡಲು ಹಿಂತಿರುಗಬೇಡಿ. ಮುಂದೆ, ನುಗ್ಗಿ ನಡೆ ಮುಂದೆ. ಈ ರೀತಿಯಲ್ಲಿ ಮುಂದುವರಿಯೋಣ. ಒಬ್ಬನು ಬೀಳುವನು, ಮತ್ತೊಬ್ಬನು ಅವನ ಸ್ಥಳಕ್ಕೆ ಬರುವನು.

ಈ ಗ್ರಾಮದಿಂದ ನಾಳೆ ಬಾಸ್ಟನ್ನಿಗೆ ಹೋಗುತ್ತೇನೆ. ರಮಾಬಾಯಿಗೆ ಸಹಾಯಮಾಡುವ ಇಲ್ಲಿ ಒಂದು ಸ್ತ್ರೀ ಸಮಾಜದಲ್ಲಿ ನಾನು ನಾಳೆ ಮಾತನಾಡುತ್ತೇನೆ. ಮೊದಲು ನಾನು ಬಾಸ್ಟನ್ನಿಗೆ ಹೋಗಿ ಕೆಲವು ಉಡುಪನ್ನು ಕೊಳ್ಳಬೇಕು. ನಾನು ಇಲ್ಲಿ ಹೆಚ್ಚು ಕಾಲವಿರಬೇಕಾದರೆ ನನ್ನ ವಿಜಾತೀಯ ಉಡುಪು ಸರಿಹೋಗುವುದಿಲ್ಲ. ಬೀದಿಯಲ್ಲಿ ನೂರಾರು ಜನರು ನನ್ನನ್ನು ನೋಡುವುದಕ್ಕೆ ನೆರೆಯುತ್ತಾರೆ. ಅದಕ್ಕೇ ನಾನು ಈಗ ಕಪ್ಪು ನಿಲುವಂಗಿಯೊಂದನ್ನು ಹಾಕಿಕೊಳ್ಳಬೇಕೆಂದಿರುವೆನು. ಉಪನ್ಯಾಸಮಾಡುವ ಸಮಯದಲ್ಲಿ ಧರಿಸುವುದಕ್ಕೆ ಒಂದು ಕಾಷಾಯದ ಕೋಟವನ್ನು ಇಡಬೇಕೆಂದೂ ಮಾಡಿರುವೆನು. ಹೀಗೆ ಮಾಡಬೇಕೆಂದು ನನಗೆ ಇಲ್ಲಿನವರು ಹೇಳುತ್ತಾರೆ. ಏನಾದರೂ ಇಲ್ಲಿ ಸ್ವಲ್ಪ ಪರಿಚಯವನ್ನು ಹೊಂದಬೇಕಾದರೆ ಸ್ವಲ್ಪ ಕಾಲ ನಿಲ್ಲಬೇಕು.

ಕೆನಡಾ ದೇಶವನ್ನು ಬಿಟ್ಟರೆ ಅಮೇರಿಕಾ ದೇಶದ ರೈಲುಗಳಲ್ಲಿ ತರಗತಿಗಳಿಲ್ಲ. ಅಲ್ಲಿರುವುದು ಮೊದಲನೆ ತರಗತಿ ಮಾತ್ರ. ಅದಕ್ಕೆ ನಾನು ಯಾವಾಗಲೂ ಅದರಲ್ಲೇ ಹೋಗಬೇಕಾಗಿರುವುದು. ಫುಲ್‌ಮಾನ್ ತರಗತಿಯಲ್ಲಿ ಪ್ರಯಾಣಮಾಡುವ ತಂಟೆಗೇ ಹೋಗುವುದಿಲ್ಲ. ಅವುಗಳೇನೊ ಬಹಳ ಸೌಕರ್ಯವಾಗಿವೆ. ಒಬ್ಬನು ಹೋಟೇಲಿನಲ್ಲಿ ಇದ್ದಂತೆ ಮಲಗಬಹುದು, ಊಟಮಾಡಬಹುದು, ಕುಡಿಯಬಹುದು, ಸ್ನಾನವನ್ನು ಕೂಡ ಮಾಡಬಹುದು. ಆದರೆ ವೆಚ್ಚ ಬಹಳ ಹೆಚ್ಚು.

ಸಮಾಜದಲ್ಲಿ ಕಲೆತು ನಾವು ಹೇಳುವುದನ್ನು ಕೇಳುವಂತೆ ಮಾಡುವುದು ಬಹಳ ಶ್ರಮಸಾಧ್ಯವಾದ ಕೆಲಸ. ಈಗ ಯಾರೂ ಪಟ್ಟಣಗಳಲ್ಲಿ ಇಲ್ಲ. ಎಲ್ಲ ಬೇಸಗೆ ಕಳೆಯುವ ಸ್ಥಳಗಳಿಗೆ ಹೋಗಿರುವರು. ಚಳಿಗಾಲಕ್ಕೆ ಎಲ್ಲಾ ಹಿಂತಿರುಗುವರು. ಆದಕ್ಕೋಸ್ಕರವೇ ನಾನು ಅದುವರೆವಿಗೆ ಕಾಯಬೇಕು. ಇಷ್ಟು ಅನುಭವಿಸಿದ ಮೇಲೆ ನಾನು ಸುಲಭವಾಗಿ ಬಿಡುವುದಿಲ್ಲ. ರೋಮ್ ನಗರ ಒಂದು ದಿನದಲ್ಲಿ ನಿರ್ಮಿತವಾಗಲಿಲ್ಲ. ನೀವು ನನಗೆ ಆರು ತಿಂಗಳಾದರೂ ಇರುವುದಕ್ಕೆ ಹಣ ಕಳುಹಿಸಿದರೆ ನಂತರ ಎಲ್ಲಾ ಸರಿಹೋಗುತ್ತದೆಂದು ಎಣಿಸುತ್ತೇನೆ. ಅಲ್ಲಿಯ ವರೆವಿಗೂ ಯಾವ ಆಧಾರದ ಮೇಲಾದರೂ ಜೀವಿಸುವುದಕ್ಕೆ ಪ್ರಯತ್ನಿಸುವೆನು.

ಈಗಲೂ ಕೂಡ ನ್ಯೂ ಇಂಗ್ಲೆಂಡಿನಲ್ಲಿ ಚಳಿ ಬಹಳ. ಪ್ರತಿದಿನವೂ ರಾತ್ರಿ ಬೆಳಗ್ಗೆ ಬೆಂಕಿ ಉರಿಯುತ್ತಲೇ ಇರುವುದು. ಕೆನಡಾ ದೇಶದಲ್ಲಿ ಇದಕ್ಕಿಂತ ಚಳಿ ಹೆಚ್ಚು. ಇಷ್ಟು ಸಣ್ಣ ಬೆಟ್ಟಗಳ ಮೇಲೆ ಮಂಜು ಇರುವುದನ್ನು ನಾನು ಇನ್ನೆಲ್ಲಿಯೂ ನೋಡಿಲ್ಲ.

ನಾನು ಕ್ರಮೇಣ ದಾರಿಮಾಡಿಕೊಳ್ಳಬೇಕಾಗಿರುವುದು. ಅಂದರೆ ನಾನು ಹೆಚ್ಚು ಕಾಲ ಅತಿವೆಚ್ಚದ ದೇಶದಲ್ಲಿ ವಾಸಿಸಬೇಕು. ಈಗತಾನೇ ಭರತಖಂಡದಲ್ಲಿ ರೂಪಾಯಿ ಬೆಲೆ ಹೆಚ್ಚಿರುವುದು, ಇಲ್ಲಿಯ ಜನರಿಗೆ ಒಂದು ಭಯವನ್ನು ಉಂಟುಮಾಡಿದೆ. ಅನೇಕ ಮಿಲ್ಲುಗಳು ಮುಚ್ಚಿವೆ. ನಾನು ಕಾಯಬೇಕು.

ಕೊನೆಯವರೆವಿಗೂ ನಾನು ಪ್ರಯತ್ನಪಡಬೇಕು. ಚಳಿಯಿಂದ, ಉಪವಾಸದಿಂದ ಮತ್ತೆ ಮತ್ತೆ ಯಾವುದಾದರೂ ಖಾಯಿಲೆಯಿಂದ

ನಾನು ಕಾಲವಾದರೂ ನೀವು ಆ ಕೆಲಸವನ್ನು ಮುಂದುವರಿಸಿ. ಶ್ರದ್ಧೆ, ಪರಿಶುದ್ಧತೆ, ಸತ್ಯಸಂಧತೆ ಇವುಗಳಿರಲಿ. ನಾನು ಮೊದಲು ಅಮೇರಿಕಾ ದೇಶದಲ್ಲಿ ಪ್ರಯತ್ನಪಡುವೆನು. ಇಲ್ಲಿ ನಿರಾಶನಾದರೆ ಇಂಗ್ಲೆಂಡಿನಲ್ಲಿ ಪ್ರಯತ್ನಿಸುವೆನು. ಅಲ್ಲಿಯೂ ಸೋತರೆ ಇಂಡಿಯಾ ದೇಶಕ್ಕೆ ಹಿಂತಿರುಗಿ, ಭಗವಂತನ ಪ್ರೇರಣೆಗೆ ಕಾಯುವೆನು.

ನಿಮ್ಮ.....,
ವಿವೇಕಾನಂದ.

(೧೫)

ಚಿಕಾಗೊ,
೨ ನೇ ನವೆಂಬರ್, ೧೮೯೩

ಪ್ರಿಯ—,

ಕ್ಷಣಕಾಲದ ನನ್ನ ದೌರ್ಬಲ್ಯದಿಂದ ನಿನಗೆ ಅಷ್ಟು ತೊಂದರೆ ಯಾಯಿತೆಂದು ತಿಳಿಯಲು ವಿಷಾದಿಸುತ್ತೇನೆ. ಆ ಸಮಯದಲ್ಲಿ ನನ್ನ ಜೇಬಿನಲ್ಲಿ ಕಾಸಿರಲಿಲ್ಲ. ನಂತರ ದೇವರು ನನಗೆ ಸ್ನೇಹಿತರನ್ನು ಕಳುಹಿಸು ತ್ತಿರುವನು. ಬಾಸ್ಟನ್ನಿಗೆ ಸಮೀಪದ ಒಂದು ಹಳ್ಳಿಯಲ್ಲಿ ಹಾರವರ್ಡ್ ವಿಶ್ವವಿದ್ಯಾನಿಲಯದಲ್ಲಿ ಗ್ರೀಕ್ ಭಾಷೆಯ ಅಧ್ಯಾಪಕರಾದ ಡಾಕ್ಟರ್ ರೈಟ್ ಎನ್ನುವರ ಪರಿಚಯವಾಯಿತು. ಅವರು ನನಗೆ ಬಹಳ ಸಹಾನು ಭೂತಿಯನ್ನು ತೋರಿದರು. ಅಮೇರಿಕಾ ದೇಶಕ್ಕೆ ನನ್ನನ್ನು ಪರಿಚಯ ಮಾಡಿಕೊಡಲು ಅನುಕೂಲಿಸುವ ವಿಶ್ವಧರ್ಮ ಸಮ್ಮೇಳನಕ್ಕೆ ಹೋಗುವ ಆವಶ್ಯಕತೆಯನ್ನು ಅವರು ನನಗೆ ಒತ್ತಿ ಹೇಳಿದರು. ನನಗೆ ಯಾರ ಪರಿಚಯವೂ ಇಲ್ಲದೆ ಇದ್ದುದರಿಂದ ಅಧ್ಯಾಪಕರೆ ಸಕಲವನ್ನೂ ನನಗೆ ಅಣಿಮಾಡಿಕೊಡುವ ಭಾರವನ್ನು ವಹಿಸಿದರು. ನಂತರ ನಾನು ಚಿಕಾಗೊ ನಗರಕ್ಕೆ ಬಂದೆನು. ನಾನು ಮತ್ತು ವಿಶ್ವಧರ್ಮ ಸಮ್ಮೇಳನಕ್ಕೆ ಪಾಶ್ಚಾತ್ಯ ಮತ್ತು ಪೌರಾತ್ಯ ದೇಶಗಳಿಂದ ಬಂದ ಇತರ ಪ್ರತಿನಿಧಿಗಳೆಲ್ಲರೂ ಒಬ್ಬ ಸಭ್ಯನ ಮನೆಯಲ್ಲಿ ಇಳಿದಿದ್ದೆವು.

ಮಹಾ ಸಭೆಯ ಪ್ರಾರಂಭದ ಬೆಳಿಗ್ಗೆ ಆರ್ಟ್ ಪ್ಯಾಲೇಸ್ ಎಂಬ ಭವನದಲ್ಲಿ ಸದಸ್ಯರೆಲ್ಲರೂ ನೆರೆದರು. ಅಲ್ಲಿನ ಸಭೆಗೋಸುಗವಾಗಿ ಒಂದು

ವಿಶಾಲವಾದ ಪ್ರಾಂಗಣ, ಹಲವು ಕಿರಿಯ ತಾತ್ಕಾಲಿಕ ಕೋಣೆಗಳು ಇದ್ದುವು. ಎಲ್ಲಾ ದೇಶದ ಜನಾಂಗಗಳೂ ಅಲ್ಲಿದ್ದುವು. ಭರತ ಖಂಡದಿಂದ ಬ್ರಹ್ಮ ಸಮಾಜದ ಮಜುಮ್‌ದಾರರು, ಬೊಂಬಾಯಿನಿಂದ ಬಂದ ನಗರ್ ಕರ್, ಜೈನರ ಪ್ರತಿನಿಧಿಯಾದ ಗಾಂಧಿ, ಥಿಯೋಸಫಿ ಪ್ರತಿನಿಧಿಯಾಗಿ ಶ್ರೀಮತಿ ಆನಿಬೆಸೆಂಟ್ ಮತ್ತು ಅವರೊಂದಿಗೆ ಬಂದ ಚಕ್ರವರ್ತಿ ಇವರು ಇದ್ದರು. ಇವರಲ್ಲಿ ಮಜುಮ್‌ದಾರರೂ ಮತ್ತು ನಾನೂ ಹಳೆಯ ಸ್ನೇಹಿತರಾಗಿದ್ದೆವು. ಮತ್ತು ಚಕ್ರವರ್ತಿಯು ನನ್ನ ಹೆಸರನ್ನು ಮಾತ್ರ ಕೇಳಿದ್ದನು. ನಮ್ಮನ್ನು ಒಂದು ದೊಡ್ಡ ಮೆರವಣಿಗೆಯಲ್ಲಿ ಕರೆದುಕೊಂಡು ಹೋಗಿ ಗದ್ದುಗೆಯ ಮೇಲೆ ಕೂಡಿಸಿದರು. ಕೆಳಗೆ ಒಂದು ದೊಡ್ಡ ಪ್ರಾಂಗಣ. ಮೇಲೆ ದೊಡ್ಡ ಗ್ಯಾಲರಿ. ನೀವೇ ಕಲ್ಪನೆಮಾಡಿಕೊಳ್ಳಿ. ಆರು ಏಳುಸಾವಿರ ಮಂದಿ ಸುಶಿಕ್ಷಿತರಾದ ಗಂಡಸರು, ಹೆಂಗಸರು ಕಿಕ್ಕಿರಿದು ನೆರೆದಿರುವರು. ಗದ್ದುಗೆಯ ಮಧ್ಯದ ಮೇಲೆ ಜಗತ್ತಿನಲ್ಲಿರುವ ಎಲ್ಲಾ ಜನಾಂಗದ ವಿದ್ವಾಂಸರು. ಹುಟ್ಟಿದಾರಭ್ಯ ಬಹಿರಂಗ ಸಭೆಯಲ್ಲಿ ಮಾತನಾಡದ ನಾನು, ಈ ವಿದ್ವತ್ ಮಂಡಲಿ ಎದುರಿಗೆ ಉಪನ್ಯಾಸಕೊಡುವುದೆಂದರೇನು! ಸಂಗೀತ ಸಂಭಾಷಣೆಗಳಿಂದ ಮಹಾಸಭೆ ಆರಂಭವಾಯಿತು. ನಂತರ ಸದಸ್ಯರನ್ನು ಒಬ್ಬೊಬ್ಬರನ್ನಾಗಿ ಸಭೆಗೆ ಪರಿಚಯಮಾಡಿ ಕೊಟ್ಟರು. ಅವರು ಮುಂದೆ ಬಂದು ಭಾಷಣ ಮಾಡಿದರು. ನನ್ನ ಎದೆ ಕಂಪಿಸುತ್ತಿತ್ತು. ನಾಲಗೆ ಒಣಗಿತು. ನನಗೇನೋ ಅಂಜಿಕೆಯಾಯಿತು. ಬೆಳಗ್ಗೆ ಮಾತನಾಡಲು ಧೈರ್ಯವಿರಲಿಲ್ಲ. ಮಜುಂದಾರರು ಒಂದು ಸುಂದರ ಭಾಷಣವನ್ನು ಮಾಡಿದರು. ಚಕ್ರವರ್ತಿಯವರದು ಸುಂದರವಾಗಿತ್ತು. ಪ್ರೇಕ್ಷಕರು ಅದನ್ನು ಕೊಂಡಾಡಿದರು. ಅವರೆಲ್ಲರೂ ಸಿದ್ಧರಾಗಿ ಆಗಲೇ ಅಣಿಮಾಡಿದ ಭಾಷಣದೊಂದಿಗೆ ಬಂದಿದ್ದರು. ನಾನೇ ಹುಚ್ಚ. ನನ್ನ ಹತ್ತಿರ ಏನೂ ಇರಲಿಲ್ಲ. ಶಾರದೆಗೆ ನಮಿಸಿ ಮುಂದೆ ಬಂದೆ. ಡಾಕ್ಟರ್ ಬ್ಯಾರೋಸ್‌ರು ಸಭೆಗೆ ನನ್ನನ್ನು ಪರಿಚಯಮಾಡಿಕೊಟ್ಟರು. ನಾನು ಸಣ್ಣ ಭಾಷಣವನ್ನು ಮಾಡಿದೆ. "ಅಮೆರಿಕಾದ ಸಹೋದರ ಸಹೋದರಿಯರೆ" ಎಂದು ನಾನು ಸಂಬೋಧಿಸಿದೆ. ಕಿವಿ ಕಿವುಡಾಗುವಂತೆ ಎರಡು ನಿಮಿಷ ಕರತಾಡನವಾಯಿತು, ಇದು ನಿಂತಮೇಲೆ ನನ್ನ ಭಾಷಣ ಮೊದಲಾಯಿತು.

ಅದು ಮುಗಿದಮೇಲೆ ಉದ್ವೇಗದಿಂದ ಸಾಕಾಗಿ ಕುಳಿತುಬಿಟ್ಟೆ. ಮಾರನೆ ದಿನ ಎಲ್ಲ ವೃತ್ತಪತ್ರಿಕೆಗಳೂ ನನ್ನ ಭಾಷಣವೇ ಎಲ್ಲಕ್ಕಿಂತಲೂ ಉತ್ತಮವಾದುದೆಂದು ಕೊಂಡಾಡಿದುವು. "ಮೂಕಂ ಕರೋತಿ ವಾಚಾಲಂ" (ಮೂಗನನ್ನು ಕೂಡ ವಾಚಾಳಿಯನ್ನಾಗಿ ಮಾಡುವೆ) ಎಂದು ಶ್ರೀಧರನು ತನ್ನ ಭಾಷ್ಯದಲ್ಲಿ ಹೇಳಿರುವುದು ನಿಜವಾಗಿಯೂ ಸತ್ಯ. ಹೇ ದೇವ, ನಿನ್ನ ನಾಮಕ್ಕೆ ಜಯವಾಗಲಿ! ಅಂದಿನಿಂದ ನಾನು ಪ್ರಖ್ಯಾತನಾದೆನು. ಹಿಂದೂ ಧರ್ಮದ ಮೇಲೆ ಲೇಖನವನ್ನು ಓದಿದ ದಿನ ಹಿಂದೆ ಎಲ್ಲೂ ಇಲ್ಲದಷ್ಟು ಜನರು ನೆರೆದಿದ್ದರು. ಒಂದು ವರ್ತಮಾನಪತ್ರಿಕೆಯಿಂತು ಬರೆದಿರುವುದನ್ನು ಉದಹರಿಸುತ್ತೇನೆ: "ಪ್ರತಿಯೊಂದು ಸ್ಥಳದಲ್ಲಿಯೂ, ಪ್ರತಿಯೊಂದು ಮೂಲೆಯಲ್ಲಿಯೂ ಹೆಂಗಸರು! ಹೆಂಗಸರು! ಹೆಂಗಸರು! ಮುಂಚೆ ಮಾಡಿದ ಭಾಷಣಗಳನ್ನೆಲ್ಲ ಸಹನೆಯಿಂದ ಕೇಳುತ್ತಿದ್ದರು ಕೊನೆಗೆ ವಿವೇಕಾನಂದನನ್ನು ಕೇಳುವುದಕ್ಕೆ ಇತ್ಯಾದಿ, ಇತ್ಯಾದಿ." ವರ್ತಮಾನ ಪತ್ರಿಕೆಗಳು ನನ್ನ ವಿಷಯವಾಗಿ ಬರೆದಿರುವುದನ್ನು ನಿನಗೆ ಕತ್ತರಿಸಿ ಕಳುಹಿಸಿದರೆ ನೀನು ಅದನ್ನು ನೋಡಿದಾಗ ಆಶ್ಚರ್ಯಪಡಬಹುದು. ಆದರೆ ನನಗೆ ಖ್ಯಾತಿಯನ್ನು ಗಳಿಸಬೇಕೆಂಬ ಆಸೆಇಲ್ಲ ಎನ್ನುವುದು ನಿನಗೆ ಆಗಲೇ ಗೊತ್ತಿದೆ. ಇಷ್ಟು ಹೇಳಿದರೆ ಸಾಕು; ನಾನು ಯಾವಾಗ ವೇದಿಕೆಯ ಮೇಲೆ ಮಾತನಾಡುವುದಕ್ಕೆ ಹೋದರೂ ನನಗೋಸುಗ ಕಿವಿ ಕಿವುಡಾಗುವಂತೆ ಒಂದು ದೊಡ್ಡ ಕರತಾಡನವಾಗುತ್ತಿತ್ತು.

ಮುಕ್ಕಾಲು ಪತ್ರಿಕೆಗಳೆಲ್ಲ ನನ್ನನ್ನು ಪ್ರಶಂಸೆಮಾಡಿರುವುವು. ಅತಿ ಸ್ವಾಭಿಮಾನ ಪತ್ರಿಕೆಗಳೂ ಕೂಡ ಇಷ್ಟನ್ನಾದರೂ ಒಪ್ಪಲೇ ಬೇಕಾಯಿತು: "ಸುಂದರ ಮುಖ, ಚಿತ್ತಾಕರ್ಷಕ ವ್ಯಕ್ತಿ, ಅಮೋಘವಾದ ವಾಕ್‌ಚಾತುರ್ಯವುಳ್ಳ ಈ ವ್ಯಕ್ತಿ ಮಹಾಸಭೆಯಲ್ಲಿ ಅಗ್ರಗಣ್ಯ."

ಅವರ ಪ್ರೀತಿಯನ್ನು ಹೇಗೆ ಕೊಂಡಾಡುವುದು! ನನಗೆ ಈಗ ಯಾವ ಕೊರತೆಯೂ ಇಲ್ಲ. ಸುಖದಿಂದ ಇರುವೆನು. ಯೂರೋಪ್ ದೇಶಕ್ಕೆ ಹೋಗಲು ಬೇಕಾಗುವ ದುಡ್ಡು ಇಲ್ಲೇ ಸಿಕ್ಕುತ್ತದೆ.—ಆಚಾರ್ಯ ಎಂಬ ಒಬ್ಬ ಹುಡುಗನು ನಮ್ಮಲ್ಲಿ ಬಂದಿರುವನು. ಕಳೆದ ಮೂರು ವರುಷಗಳಿಂದಲೂ ಅವನು ಬೀದಿಯಲ್ಲಿ ಅಲೆದಾಡುತ್ತಿರುವನು. ಅಲೆಯಲಿ,

ಅಲೆಯದಿರಲಿ, ನಾನು ಅವನನ್ನು ಪ್ರೀತಿಸುತ್ತೇನೆ. ಅವನ ವಿಚಾರವಾಗಿ ನಿಮಗೆ ಏನಾದರೂ ಗೊತ್ತಿದ್ದರೆ ಎಲ್ಲವನ್ನೂ ವಿಶದವಾಗಿ ದಯವಿಟ್ಟು ತಿಳಿಸಿ. ಅವನಿಗೆ ನಿಮ್ಮ ಪರಿಚಯವಿದೆ. ಯೂರೋಪಿಗೆ ಪ್ಯಾರಿಸ್ಸಿನಲ್ಲಿ ಸರ್ವವಸ್ತುಪ್ರದರ್ಶನವಾದ ವರುಷ ಬಂದಿದ್ದನು.

ನನಗೆ ಈಗ ಯಾವ ಕೊರತೆಯೂ ಇಲ್ಲ. ಅನೇಕ ಸುಂದರ ಗೃಹಗಳು ಈಗ ನನಗಾಗಿ ತೆರೆದಿವೆ. ಯಾವಾಗಲೂ, ಯಾರಾದರೊಬ್ಬರ ಅತಿಥಿಯಾಗಿರುವೆನು. ಜಗದ ಇನ್ನಾವ ಜನಾಂಗದಲ್ಲಿಯೂ ಕಾಣದ ಒಂದು ಉತ್ಸಾಹ ಇವರಲ್ಲಿದೆ. ಅವರು ಎಲ್ಲವನ್ನೂ ತಿಳಿಯಬೇಕೆಂದು ಬಯಸುವರು. ಅವರ ಸ್ತ್ರೀಯರಾದರೊ ಜಗತ್ತಿನಲ್ಲಿ ಬಹಳ ಮುಂದುವರಿದವರು. ಸಾಧಾರಣ ಅಮೇರಿಕಾದ ಸ್ತ್ರೀಯು ಸಾಧಾರಣ ಅಮೆರಿಕದ ಪುರುಷನಿಗಿಂತ ಸುಸಂಸ್ಕೃತಳು. ಪುರುಷರು ತಮ್ಮ ಜೀವನವನ್ನೆಲ್ಲ ದ್ರವ್ಯಾರ್ಜನೆಯಲ್ಲಿ ಕಳೆಯುವರು. ಹೆಂಗಸರಾದರೊ ತಮ್ಮ ಏಳಿಗೆಗೆ ಒದಗುವ ಪ್ರತಿಯೊಂದು ಅವಕಾಶವನ್ನೂ ಉಪಯೋಗಿಸುವರು. ಅವರು ಸಹೃದಯರು. ನಿಷ್ಕಪಟಿಗಳು. ಬೋಧನೆಮಾಡಬೇಕೆಂದು ಹುಚ್ಚುಹಿಡಿದ ಪ್ರತಿಯೊಬ್ಬನೂ ಇಲ್ಲಿಗೆ ಬರುವನು. ಅವರಲ್ಲಿ ಅನೇಕರಿಗೆ ಬುದ್ಧಿಸ್ಥಿಮಿತ ಇಲ್ಲವೆಂದು ಹೇಳಲು ವ್ಯಸನವಾಗುತ್ತದೆ. ಅಮೇರಿಕಾ ದೇಶೀಯರಲ್ಲಿಯೂ ಲೋಪದೋಷಗಳಿವೆ. ಯಾವ ಜನಾಂಗದಲ್ಲಿ ಇಲ್ಲ? ಅವರ ವಿಷಯವಾಗಿ ನನ್ನ ಸಾರಾಂಶವಿದು. ನಾಗರಿಕತೆಯ ಬೀಜವನ್ನು ಏಷ್ಯಾ ಬಿತ್ತಿತು. ಯೂರೋಪ್ ಪಿಂಡವು ಮಾನವನ ಬೆಳವಣಿಗೆಗೆ ಸಹಾಯಮಾಡಿತು. ಅಮೆರಿಕದೇಶ ಸ್ತ್ರೀಯರನ್ನು ಮತ್ತು ಸಾಮಾನ್ಯ ಜನರನ್ನು ಮೇಲ್ಮೆಗೆ ತರುತ್ತಿದೆ. ಹೆಂಗಸರ ಮತ್ತು ಕೂಲಿಯವರ ಸ್ವರ್ಗವಿದು. ಅಮೆರಿಕದ ಜನಸಾಮಾನ್ಯರನ್ನು ಮತ್ತು ಇಲ್ಲಿ ಹೆಂಗಸರನ್ನು ನಮ್ಮ ದೇಶದವರೊಂದಿಗೆ ಹೋಲಿಸಿ ನೋಡಿ. ಆಗ ಗೊತ್ತಾಗುತ್ತದೆ ವ್ಯತ್ಯಾಸ. ಅಮೆರಿಕಾದವರು ಶೀಘ್ರವಾಗಿ ಉದಾರ ಭಾವದವರಾಗುತ್ತಿರುವರು. ಇಂಡಿಯಾದಲ್ಲಿ ನಮಗೆ ಕಾಣುವ ಓಡು ಮುಚ್ಚಿದ ಸಂಕುಚಿತ, (Hard shelled) ಕ್ರೈಸ್ತರನ್ನು ನೋಡುವ ದೃಷ್ಟಿಯಿಂದ ಇವರನ್ನು ನೋಡಬೇಡಿ. ಅಂತಹವರು ಇಲ್ಲಿಯೂ ಇರುವರು. ಆದರೆ ಅವರ ಸಂಖ್ಯೆ ಕ್ರಮೇಣ ಕ್ಷೀಣಿಸು

ತ್ತಿದೆ. ಹಿಂದೂ ಹೆಮ್ಮೆಕೊಚ್ಚಿಕೊಳ್ಳುವ ಆಧ್ಯಾತ್ಮಿಕ ಆದರ್ಶದ ಕಡೆ ಈ ದೇಶ ಬೇಗ ಮುಂದುವರಿಯುತ್ತಿದೆ.

ಹಿಂದೂ ತನ್ನ ಧರ್ಮವನ್ನು ಎಂದಿಗೂ ಬಿಡಕೂಡದು. ಆದರೆ ಧರ್ಮವನ್ನು ಸರಿಯಾದ ಕಟ್ಟುಸಿಟ್ಟಿನಲ್ಲಿಟ್ಟು, ಸಮಾಜದ ಅಭಿವೃದ್ಧಿಗೆ ಅವಕಾಶವನ್ನು ಕೊಡಬೇಕು. ಭಾರತವರ್ಷದಲ್ಲಿ ಎಲ್ಲಾ ಪುರೋಹಿತರ ಅತ್ಯಾಚಾರಕ್ಕೂ, ದೇಶದ ಹೀನಸ್ಥಿತಿಗೂ ಧರ್ಮವೇ ಕಾರಣವೆಂದು ಎಲ್ಲಾ ಸಮಾಜ ಸುಧಾರಕರು ತಪ್ಪು ತಿಳಿದು, ಎಂದಿಗೂ ಚ್ಯುತವಾಗದ ಧರ್ಮದ ತಳಹದಿಯನ್ನೇ ಕೀಳಲು ಪ್ರಯತ್ನಪಟ್ಟರು. ಇದರ ಫಲಿತಾಂಶವೇನಾಯಿತು? ಉದ್ದೇಶದ ಅಪಜಯ! ಬುದ್ಧನಿಂದ ಹಿಡಿದು ರಾಮಮೋಹನರಾಯನವರೆವಿಗೂ, ಜಾತಿಭೇದವನ್ನು ಧಾರ್ಮಿಕಸಂಬಂಧವಾದುದೆಂದು ತಪ್ಪು ತಿಳಿದು, ಧರ್ಮ ಮತ್ತು ಜಾತಿ ಸಂಗಡಗಳೆರಡನ್ನೂ ನಾಶಮಾಡಲು ಪ್ರಯತ್ನಪಟ್ಟರು. ಆದರೆ ತಮ್ಮ ಪ್ರಯತ್ನದಲ್ಲಿ ವಿಫಲರಾದರು. ಪುರೋಹಿತರು ಎಷ್ಟು ಕೂಗಾಡಿದರೇನು? ಜಾತಿ ಎಂಬುದು ಸಮಾಜದಲ್ಲಿ ಒಂದು ಆಂತರಿಕ ವಿಭಾಗ. [ಹಿಂದೆ ಅದು ವಿಕಾಸವಾಗುತ್ತಿತ್ತು] ಈಗ ಅದು ಘನೀಭೂತವಾಗಿರುವುದು. ಈ ಕಟ್ಟಿನ ಕೆಲಸ ಮುಗಿದು, ಅದರ ದುರ್ಗಂಧದಿಂದ ಭಾರತದ ವಾತಾವರಣವೆಲ್ಲ ತುಂಬಿದೆ. ಜನರು ಕಳೆದುಕೊಂಡ ಸಾಮಾಜಿಕ ವ್ಯಕ್ತಿತ್ವವನ್ನು ಅವರಿಗೆ ಮರಳಿಕೊಡುವುದರಿಂದ ಈ ಕಟ್ಟು ತಾನೆ ಮಾಯವಾಗುವುದು. ಅಮೇರಿಕಾದೇಶದಲ್ಲಿ ಹುಟ್ಟಿದ ಪ್ರತಿಯೊಬ್ಬನಿಗೂ ತಾನು ಮನುಷ್ಯನೆಂಬುದು ಗೊತ್ತು. ಇಂಡಿಯಾದೇಶದಲ್ಲಿ ಹುಟ್ಟಿದ ಪ್ರತಿಯೊಂದು ವ್ಯಕ್ತಿಯೂ ತಾನು ಸಮಾಜದ ಗುಲಾಮನೆಂದು ತಿಳಿದುಕೊಂಡಿರುವನು. ಬೆಳವಣಿಗೆಗೆ ಬೇಕಾಗಿರುವುದು ಮುಖ್ಯವಾಗಿ ಸ್ವಾತಂತ್ರ್ಯ. ಅದು ಮಾಯವಾದರೆ ಅವನತಿಯೆ ಫಲ. ಆಧುನಿಕ ಸ್ಪರ್ಧೆ ಬಂದಾಗಿನಿಂದ ಜಾತಿಭೇದಗಳು ಹೇಗೆ ಮಾಯವಾಗುತ್ತಿವೆ ನೋಡಿ! ಈಗ ಅದನ್ನು ಧ್ವಂಸಮಾಡಲು ಯಾವ ಧರ್ಮವೂ ಬೇಕಿಲ್ಲ. ಉತ್ತರ ಹಿಂದೂಸ್ಥಾನದಲ್ಲಿ ಬ್ರಾಹ್ಮಣ ವರ್ತಕ, ಬ್ರಾಹ್ಮಣ ಚಮ್ಮಾರ, ಬ್ರಾಹ್ಮಣ ಸಾರಾಯಿ ಇಳಿಸುವವನು ಸಾಧಾರಣವಾಗಿದೆ. ಅದೆಲ್ಲ ಏತಕ್ಕೆ? ಪರಸ್ಪರ ಸ್ಪರ್ಧೆಯ ಪರಿಣಾಮ. ಇಂದಿನ ಸರ್ಕಾರದ ಕೆಳಗೆ

ಪ್ರತಿಯೊಬ್ಬ ಪ್ರಜೆಯೂ ತನ್ನ ಜೀವನೋಪಾಯಕ್ಕೆ ಯಾವ ಕಸಬನ್ನು ಬೇಕಾದರೂ ಮಾಡಬಹುದು. ಅದನ್ನು ವಿರೋಧಿಸುವುದಿಲ್ಲ. ಪರಸ್ಪರ ಪೋಟಾಪೋಟಿಯಲ್ಲಿ ಇದು ಕೊನೆಗೊಂಡಿದೆ. ಸಾವಿರಾರು ಜನರು ಸಮಾಜದ ಕೆಳಗೆ ಸಿಕ್ಕಿ ನರಳುವುದಕ್ಕಿಂತ ಅಭಿವೃದ್ಧಿಗೆ ಅವಕಾಶವನ್ನು ಹುಡುಕುತ್ತಿರುವರು. ತಮ್ಮ ಯೋಗ್ಯತೆಗೆ ತಕ್ಕ ಪದವಿಗಳಿಗೆ ಬರುತ್ತಿರುವರು.

ಚಳಿಗಾಲ ಮುಗಿಯುವವರೆಗಾದರೂ ನಾನು ಈ ದೇಶದಲ್ಲಿದ್ದು ನಂತರ ಯೂರೋಪಿಗೆ ಪ್ರಯಾಣಮಾಡಬೇಕು. ದೇವರೆ ನನಗೆ ಎಲ್ಲವನ್ನೂ ಒದಗಿಸುವನು. ನೀವು ಆ ವಿಚಾರದಲ್ಲಿ ತೊಂದರೆ ತೆಗೆದುಕೊಳ್ಳಬೇಕಾಗಿಲ್ಲ. ನಿಮಗೆ ನನ್ನ ಮೇಲಿರುವ ಪ್ರೀತಿಯನ್ನು ಸಾಕಷ್ಟು ಕೊಂಡಾಡಲಾರೆ. ಪ್ರತಿದಿನವೂ ದೇವರು ನನ್ನಲ್ಲಿರುವನೆಂದು ಭಾವಿಸುವೆನು. ಅವನ ಇಚ್ಛೆ ನೆರವೇರುವುದು. ಜಗದ ಹಿತಕ್ಕೆ ಮಹಾಕಾರ್ಯಗಳನ್ನು ಮಾಡುವೆವು; ಹೆಸರು ಕೀರ್ತಿಗಳಿಸಬೇಕೆಂಬ ಆಸೆಯಿಂದಲ್ಲ: ಕೇವಲ ಒಳ್ಳೆಯುದನ್ನು ಮಾಡಬೇಕೆಂಬ ಉದ್ದೇಶದಿಂದ ಮಾತ್ರ.

"ಏಕೆಂದು ಪ್ರಶ್ನೆಮಾಡುವುದು ನಮ್ಮ ಕೆಲಸವಲ್ಲ. ಮಾಡಿ ಮಡಿಯುವುದು ನಮ್ಮ ಕೆಲಸ." ಸಂತೋಷದಿಂದಿರು. ಮಹಾಕಾರ್ಯಗಳನ್ನು ಮಾಡುವುದಕ್ಕೆ ದೇವರು ನಮ್ಮನ್ನು ಆರಿಸಿರುವನು. ನಾವು ಅದನ್ನು ಸಾಧಿಸಿಯೆ ಸಾಧಿಸುವೆವು. ಯಾವಾಗಲೂ ಸಿದ್ಧರಾಗಿ, ಅಂದರೆ ಅಂತರಂಗ ಶುದ್ಧವಾಗಿರಲಿ. ಪ್ರೀತಿಗೋಸುಗ ಪ್ರೀತಿಸಿ. ದೀನರನ್ನು ದುಃಖಿಗಳನ್ನು ಪದದಳಿತರನ್ನು ಪ್ರೀತಿಸಿ. ದೇವರು ನಿಮ್ಮನ್ನು ಆಶೀರ್ವದಿಸುವನು.

ಆಗಿಂದಾಗ್ಗೆ ರಾ— ಮುಂತಾದವರನ್ನು ನೋಡಿ. ಭಾರತವರ್ಷದ ಪ್ರಜೆಗಳಲ್ಲಿ ಸಹಾನುಭೂತಿ ತೋರುವಂತೆ ಪ್ರೇರೇಪಿಸಿ. ದೀನರ ತಲೆಯ ಮೇಲೆ ಅವರು ಹೇಗೆ ನಿಂತಿರುವರು ಎಂಬುದನ್ನು ಹೇಳಿ. ಅವರನ್ನು ಮೇಲಕ್ಕೆ ಎತ್ತದೆ ಇದ್ದರೆ ಇವರನ್ನು ಮಾನವರೆಂದು ಹೇಳುವುದಕ್ಕೆ ಆಗುವುದಿಲ್ಲ. ನಿರ್ಭಯರಾಗಿ. ದೇವರು ನಿಮ್ಮೊಡನೆ ಇರುವನು. ಹಸಿವಿನಿಂದ, ಮೌಢ್ಯದಿಂದ, ನರಳುವ ಕೋಟ್ಯಾನುಕೋಟಿ ಭಾರತೀಯರನ್ನು ಅವನು ಉದ್ಧಾರ ಮಾಡುವನು. ಇಲ್ಲಿ ರೈಲ್ವೆಯ ಕೂಲಿಯು ಅನೇಕ

ನಮ್ಮ ಯುವಕರಿಗಿಂತಲೂ, ರಾಜರ ಮಕ್ಕಳಿಗಿಂತಲೂ ಹೆಚ್ಚು ವಿದ್ಯಾವಂತನಾಗಿರುವನು. ಪ್ರತಿಯೊಬ್ಬ ಅಮೇರಿಕಾದ ನಾರಿಯೂ ಕೂಡ, ಸಾಧಾರಣ ಭಾರತೀಯ ನಾರಿಗಿಂತ ಹೆಚ್ಚು ಸುಶಿಕ್ಷಿತಳು. ಅಂತಹ ವಿದ್ಯೆಯು ನಮಗೂ ಏಕೆ ಇರಬಾರದು? ನಮಗೂ ಅದು ಬೇಕು.

ಬಡವರೆಂದು ನೀವು ಯೋಚಿಸಬೇಡಿ. ಹಣವಲ್ಲ ಶಕ್ತಿ. ಒಳ್ಳೆಯತನ, ಪವಿತ್ರತೆ ಇವು ಶಕ್ತಿ. ಜಗದ ಎಲ್ಲಾ ಕಡೆಯಲ್ಲೂ ಇರುವುದು ಹೀಗೆ ಎಂಬುದನ್ನು ಬಂದು ನೋಡಿ. ನಿಮ್ಮ...., ವಿವೇಕಾನಂದ.

ಪಿ. ಎಸ್.—ಇದು ಒಂದು ಆಪ್ತಮಾತು. ಅವನ ಲೇಖನ ನಾನು ನೋಡಿದುದರಲ್ಲೆಲ್ಲ ಬಹಳ ವಿಚಿತ್ರವಾದುದು. ಅದು ವ್ಯಾಪಾರದ ಸರಕಿನ ಪಟ್ಟಿಯಂತೆ ಇತ್ತು. ಸಭೆಯ ಮುಂದೆ ಓದಲು ಯೋಗ್ಯವಲ್ಲ. ಅದಕ್ಕೇ ನ—ಪಕ್ಕದ ಕೋಣೆಯಲ್ಲಿ ಲೇಖನದಿಂದ ಕೆಲವು ಭಾಗಗಳನ್ನು ಓದಿದನು. ಯಾರಿಗೂ ಒಂದಕ್ಷರವೂ ಗೊತ್ತಾಗಲಿಲ್ಲ. ಅವನಿಗೆ ಇದನ್ನು ಹೇಳಬೇಡ. ಹೆಚ್ಚು ಭಾವಗಳನ್ನು ಸಾಧ್ಯವಾದಷ್ಟು ಕಡಿಮೆ ಪದಗಳಲ್ಲಿ ಅಡಗಿಸುವುದು ಒಂದು ಕಲಾವಿದ್ಯೆ.

........ನ ಲೇಖನವನ್ನು ಕೂಡ ಕಡಿಮೆಮಾಡಬೇಕಾಯಿತು. ಸಾವಿರಕ್ಕಿಂತ ಹೆಚ್ಚು ಲೇಖನಗಳನ್ನು ಓದಿದರು. ಅಂತಹ ಹುಚ್ಚು ಕೂಗಾಟಕ್ಕೆ ಸಮಯವೆಲ್ಲಿ ಸಿಕ್ಕುವುದು. ಸಾಧಾರಣ ಎಲ್ಲರಿಗೂ ಕೊಡುವ ಅರ್ಧಗಂಟೆಗಿಂತ ನನಗೆ ಜಾಸ್ತಿಕೊಟ್ಟಿದ್ದರು. ಸಭಿಕರನ್ನು ಕೊನೆಯವರೆವಿಗೂ ಕೂಡಿಸುವುದಕ್ಕೆ ಮನೋರಂಜಕವಾಗಿ ಮಾತನಾಡುವವರನ್ನು ಕೊನೆಗೆ ಇರಿಸುತ್ತಿದ್ದರು. ದೇವರು ಅವರಿಗೆ ಒಳ್ಳೆಯದು ಮಾಡಲಿ. ಅವರದು ಎಷ್ಟು ಸಹಾನುಭೂತಿ! ಎಷ್ಟು ಕರುಣೆ! ಬೆಳಿಗ್ಗೆ ಹತ್ತುಗಂಟೆಯಿಂದ ಹಿಡಿದು ರಾತ್ರಿ ಹತ್ತುಗಂಟೆಯವರೆವಿಗೆ ಕುಳಿತು ಕೊಳ್ಳುವರು. ಮಧ್ಯೆ ಅರ್ಧಗಂಟೆ ಮಾತ್ರ ಊಟಕ್ಕೆ ವಿರಾಮ. ಈ ಮಧ್ಯೆ ಪ್ರಬಂಧಗಳಮೇಲೆ ಪ್ರಬಂಧಗಳ ಪಠಣಗಳಾಗುವುದು. ಅನೇಕವು ಕೆಲಸಕ್ಕೆ ಬಾರದವು. ಆದರೂ ತಮ್ಮ ಪ್ರೀತಿಗೆ ಪಾತ್ರರಾದವರು ಮಾತನಾಡುವುದನ್ನು ಕೇಳುವುದಕ್ಕೆ ಕೊನೆಯವರೆವಿಗೂ ಕುಳಿತುಕೊಳ್ಳುವರು.

ಸಿಂಹಳದ್ವೀಪದ ಧರ್ಮಪಾಲರು ಸಭೆಯ ಆದರಣೆಗೆ ಪಾತ್ರರಾದವರಲ್ಲಿ ಒಬ್ಬರು. ಅವರು ಬಹಳ ಉದಾರ ಸ್ವಭಾವ ಉಳ್ಳವರು. ಸಮ್ಮೇಳನದ ಕಾಲದಲ್ಲಿ ನಾವು ದೊಡ್ಡ ಸ್ನೇಹಿತರಾಗಿದ್ದೆವು.

ಪೂನಾದಿಂದ ಬಂದ ಕ್ರೈಸ್ತಮಹಿಳೆ ಸೊರಾಬ್ಜಿ ಎಂಬಾಕೆ ಮತ್ತು ಜೈನಧರ್ಮದ ಪ್ರತಿನಿಧಿ ಗಾಂಧಿ ಎಂಬುವರು ಈ ದೇಶದಲ್ಲಿ ಇನ್ನೂ ಕೆಲವು ಕಾಲವಿದ್ದು ನಂತರ ಉಪನ್ಯಾಸ ಸಂಚಾರಕ್ಕೆ ಹೊರಡುವರು. ಅವರು ಜಯಶೀಲರಾಗಲೆಂಬುದೇ ನನ್ನ ಹಾರೈಕೆ. ಇಲ್ಲಿ ಉಪನ್ಯಾಸ ಮಾಡುವುದೊಂದು ಲಾಭದಾಯಕವಾದ ಕಸಬು. ಕೆಲವುವೇಳೆ ಅದರಿಂದ ಹೆಚ್ಚಾಗಿ ಸಂಪಾದನೆಯಾಗುವುದು.

ಶ್ರೀಮಾನ್ ಇಂಗರ್ ಸೋಲ್‍ರು ತಮ್ಮ ಒಂದು ಉಪನ್ಯಾಸಕ್ಕೆ ಐದುನೂರು ಆರುನೂರು ಡಾಲರ್ ವರೆವಿಗೂ ಸಂಪಾದಿಸುತ್ತಾರೆ. ಈ ದೇಶದಲ್ಲಿ ಅತಿ ಪ್ರಖ್ಯಾತನಾದ ವಾಗ್ಮಿ.

ಇತಿ, ವಿ—

(೧೬)

**C/o ಜಾರ್ಜ್, ಡಬ್ಲ್ಯು. ಹೇಲ್,**
**೫೪೧, ಡಿಯರ್ ಬಾರ್ನ್ ಅವೆನ್ಯು, ಚಿಕಾಗೊ.**
**೨೮ ನೇ ಡಿಸೆಂಬರ್, ೧೮೯೩**

ಪ್ರಿಯ ಅ—

ನನ್ನ ಚಿಕಾಗೊ ಭಾಷಣದ ಸುದ್ದಿ ಇಂಡಿಯಾ ಪತ್ರಿಕೆಗಳಲ್ಲಿ ಪ್ರಕಟವಾಗಿರುವುದು ಒಂದು ಸೋಜಿಗವಾಗಿದೆ. ಏಕೆಂದರೆ ನಾನು ಏನು ಮಾಡಿದರೂ ಪ್ರಸಿದ್ಧಿಗೆ ಬರಬಾರದೆಂದು ಪ್ರಯತ್ನಿಸುತ್ತೇನೆ. ಇಲ್ಲಿ ಅನೇಕ ಸಂಗತಿಗಳು ನನ್ನನ್ನು ಆಕರ್ಷಿಸುತ್ತವೆ. ಈ ದೇಶದಲ್ಲಿ ಬಡತನವೆನ್ನುವುದು ಇಲ್ಲವೇ ಇಲ್ಲವೆಂದು ಹೇಳಬಹುದು. ಇಲ್ಲಿಯ ಸ್ತ್ರೀಯರಷ್ಟು ಸುಸಂಸ್ಕೃತರಾಗಿ, ವಿದ್ಯಾವಂತರಾಗಿರುವವರನ್ನು ನಾನು ಬೇರೆಡೆ ನೋಡಿಲ್ಲ. ನಮ್ಮ ದೇಶದಲ್ಲಿ ವಿದ್ಯಾವಂತರೇನೊ ಹೆಚ್ಚುಮಂದಿ ಇರುವರು. ಆದರೆ ಇಲ್ಲಿಯ ಸ್ತ್ರೀಯರಂತಹವರನ್ನು ಕಾಣುವುದು ಅತಿವಿರಳ.

ಸದ್ಗೃಹಸ್ಥರ ಮನೆಗಳಲ್ಲಿ ದೇವಿಯರು ನೆಲಸಿರುತ್ತಾರೆ ಎಂಬುದು ನಿಜವಾಗಿ ಸತ್ಯ. ಹಿಮದಷ್ಟು ಶುಭ್ರವಾಗಿ, ಕಳಂಕಹೀನರಾದ ಸಾವಿರಾರು ಜನ ನಾರಿಯರನ್ನು ನಾನು ಇಲ್ಲಿ ನೋಡಿರುವೆನು. ಅಬ್ಬ! ಅವರು ಎಷ್ಟು ಸ್ವತಂತ್ರರಾಗಿರುವರು. ಸಮಾಜದ ಮತ್ತು ಪೌರನೀತಿಯ ಜೀವನವನ್ನು ನೋಡಿಕೊಳ್ಳುವವರು ಸ್ತ್ರೀಯರೆ. ಆದರೆ ನಮ್ಮ ದೇಶದಲ್ಲಿ ಅವರು ಸುರಕ್ಷಿತವಾಗಿ ದಾರಿಯಲ್ಲಿ ಕೂಡ ನಡೆಯಲು ಅವಕಾಶವಿಲ್ಲ. ನನ್ನ ಮೇಲೆ ಅವರಿಗೆ ಇರುವ ದಯೆಗೆ ಪಾರವಿಲ್ಲ. ನಾನು ಇಲ್ಲಿಗೆ ಬಂದಾಗಿನಿಂದಲೂ ಅವರ ಮನೆಗಳಲ್ಲಿ ನನ್ನನ್ನು ಸತ್ಕರಿಸುವರು. ಅವರು ನನಗೆ ಆಹಾರವನ್ನು ಕೊಡುವರು. ಉಪನ್ಯಾಸಕ್ಕೆ ಅಣಿಮಾಡುವರು. ಅಂಗಡಿಗೆ ಕರೆದುಕೊಂಡು ಹೋಗುವರು. ನನ್ನ ಸುಖ ಮತ್ತು ಅನುಕೂಲವೆಲ್ಲವನ್ನೂ ನೋಡಿಕೊಳ್ಳುತ್ತಿರುವರು. ನಾನು ಅವರ ಋಣವನ್ನು ಸ್ವಲ್ಪವೂ ಕೂಡ ತೀರಿಸಲಾರೆ.

ಯಾರು ನಿಜವಾಗಿ ಶಕ್ತಿಯ ಆರಾಧಕರು ಗೊತ್ತಿದೆಯೆ ನಿನಗೆ? ಪ್ರಪಂಚದಲ್ಲಿ ಭಗವಂತನೆ ಸರ್ವಾಂತರ್ಯಾಮಿಯಾದ ಶಕ್ತಿಯೆಂದು ತಿಳಿದು, ಆ ಮಹಾಶಕ್ತಿ ಸ್ತ್ರೀಯಲ್ಲಿ ಆವಿರ್ಭೂತವಾಗಿರುವುದನ್ನು ಯಾರು ಕಾಣುವರೋ ಅವರು. ಅನೇಕ ಪುರುಷರು ಸ್ತ್ರೀಯರನ್ನು ಈ ದೃಷ್ಟಿಯಿಂದ ನೋಡುತ್ತಾರೆ. ಎಲ್ಲಿ ಹೆಂಗಸರನ್ನು ಗೌರವದಿಂದ ಪುರಸ್ಕರಿಸುವರೊ, ಎಲ್ಲಿ ಅವರು ಸಂತೋಷದಿಂದ ಇರುವರೊ, ಅವರ ವಂಶವನ್ನು ದೇವರು ಹರಸುವನೆಂದು ಮನುವು ಸಾರಿ ಹೇಳಿರುವನು. ಸಾಧ್ಯವಾದಷ್ಟು ಉತ್ತಮವಾಗಿ ಇಲ್ಲಿಯ ಸ್ತ್ರೀಯರನ್ನು ಪುರುಷರು ಸನ್ಮಾನಿಸುವರು. ಅದಕ್ಕೇ ಅವರು ಅಷ್ಟು ಮುಂದುವರಿದಿರುವುದು, ವಿದ್ಯಾವಂತರಾಗಿರುವುದು, ಸ್ವತಂತ್ರರಾಗಿರುವುದು ಮತ್ತು ಉತ್ಸಾಹಪೂರಿತರಾಗಿರುವುದು. ಆದರೆ ನಾವೇಕೆ ಗುಲಾಮರಂತೆ ಇರುವುದು. ದುಃಖದಲ್ಲಿ ನರಳುವುದು, ಸತ್ತಂತೆ ತೋರುವುದು. ಇದಕ್ಕೆ ಉತ್ತರ ಸ್ಪಷ್ಟವಾಗಿಯೆ ಇದೆ.

ಹೆಂಗಸರು ಎಷ್ಟು ಪರಿಶುದ್ಧರಾಗಿ, ಪತಿವ್ರತೆಯರಾಗಿ ಇರುವರು ಇಲ್ಲಿ. ಇಪ್ಪತ್ತು, ಇಪ್ಪತ್ತೈದು ವರುಷಕ್ಕೆ ಮುಂಚೆ ಮದುವೆಮಾಡಿಕೊಳ್ಳುವುದು ಅಪರೂಪ. ಆಕಾಶದಲ್ಲಿ ಹಾರುವ ಹಕ್ಕಿಯಂತೆ ಸ್ವತಂತ್ರ

ರಾಗಿರುವರು. ಅವರು ಅಂಗಡಿಗೆ ಹೋಗುವರು. ಸ್ಕೂಲಿಗೆ ಹೋಗುವರು. ಕಾಲೇಜಿಗೆ ಹೋಗುವರು. ಹಣ ಸಂಪಾದಿಸುವರು. ಉಳಿದ ಎಲ್ಲಾ ಕೆಲಸಗಳನ್ನೂ ಮಾಡುವರು. ಯಾರು ಶ್ರೀಮಂತರಾಗಿರುವರೋ ಅವರು ತಮ್ಮ ವಿರಾಮಕಾಲದಲ್ಲಿ ಇತರರಿಗೆ ಸಹಾಯಮಾಡುವರು. ನಾವು ಏನು ಮಾಡುತ್ತಿರುವೆವು? ಹನ್ನೊಂದು ವಯಸ್ಸಿಗೆ ಸರಿಯಾಗಿ ನಮ್ಮ ಹುಡುಗಿಯರಿಗೆ ಮದುವೆ ಮಾಡುವುದರಲ್ಲಿ ತಪ್ಪುವುದಿಲ್ಲ. ಇಲ್ಲದೆ ಇದ್ದರೆ ಎಲ್ಲಿ ನೀತಿಬಾಹಿರರಾಗುತ್ತಾರೋ ಎಂಬ ಭಯ! ಮನು ಏನು ಹೇಳಿರುವನು: "ಗಂಡುಮಕ್ಕಳಂತೆಯೆ ಹೆಣ್ಣುಮಕ್ಕಳನ್ನು ಸಂರಕ್ಷಿಸಿ ವಿದ್ಯಾವಂತೆಯರನ್ನಾಗಿ ಮಾಡಬೇಕು." ಮೂವತ್ತು ವರುಷದವರೆವಿಗೂ ಬ್ರಹ್ಮಚರ್ಯವ್ರತವನ್ನು ಪರಿಪಾಲನೆ ಮಾಡಿದಮೇಲೆ ಗಂಡುಮಕ್ಕಳಿಗೆ ಮದುವೆ ಮಾಡುವಂತೆ ಹೆಣ್ಣುಮಕ್ಕಳು ಕೂಡ ಬ್ರಹ್ಮಚರ್ಯವ್ರತವನ್ನು ಪರಿಪಾಲನೆ ಮಾಡಬೇಕು. ಆ ಕಾಲದಲ್ಲಿ ಹುಡುಗಿಯರು ಮಾತಾಪಿತೃಗಳಿಂದ ಸುಶಿಕ್ಷಿತರಾಗಬೇಕು. ಆದರೆ ನಾವು ನಿಜವಾಗಿಯೂ ಮಾಡುತ್ತಿರುವುದು ಏನು. ನಿಮ್ಮ ಹೆಂಗಸರ ಸ್ಥಿತಿಯನ್ನು ಉತ್ತಮಗೊಳಿಸಬಲ್ಲಿರಾ? ನಂತರ ನಿಮ್ಮ ಅಭಿವೃದ್ಧಿಗೆ ದಾರಿ ಇದೆ. ಹಾಗಿಲ್ಲದೆ ಇದ್ದರೆ ಈಗ ಇರುವಂತೆ ಎಂದೆಂದಿಗೂ ಹೀನಸ್ಥಿತಿಯಲ್ಲಿ ನರಳಬೇಕಾಗುವುದು.

ನಮ್ಮ ದೇಶದಲ್ಲಿ ಯಾರಾದರೂ ಕೀಳುಜಾತಿಯಲ್ಲಿ ಹುಟ್ಟಿದರೆ ಆಯಿತು ಅವರ ಪಾಡು. ಅಭಿವೃದ್ಧಿಗೆ ಬರಲು ದಾರಿಯೇ ಇಲ್ಲ. ಏತಕ್ಕೆ ಇದು. ಎಂತಹ ಕಿರುಕುಳ ಇದು! ಈ ದೇಶದಲ್ಲಿ ಪ್ರತಿಯೊಂದು ವ್ಯಕ್ತಿಗೂ ಮುಂದುವರಿಯಲು ಸಾಧ್ಯವಿದೆ, ಅವಕಾಶವಿದೆ, ಒಂದು ನೆಟ್ಟಿಗೆ ಇದೆ. ಇಂದು ಅವನು ಕಡುಬಡವನಾಗಿರಬಹುದು; ನಾಳೆ ಅವನು ಧನವಂತನಾಗಬಹುದು, ವಿದ್ಯಾವಂತನಾಗಬಹುದು, ಗೌರವಸ್ಥನಾಗಬಹುದು. ಇಲ್ಲಿ ದೀನರಿಗೆ ಸಹಾಯಮಾಡಲು ಪ್ರತಿಯೊಬ್ಬರೂ ತವಕಪಡುವರು. ಭರತಖಂಡದಲ್ಲಿ ನಾವು ಅತಿಬಡವರು ಎಂಬ ಗೋಳೇನೋ ಕೇಳಿಸುತ್ತದೆ. ಆದರೆ ಬಡವರ ಸ್ಥಿತಿಯನ್ನು ಉತ್ತಮಗೊಳಿಸುವಂತಹ ಧಾರ್ಮಿಕ ಸಂಸ್ಥೆಗಳು ಎಷ್ಟು ಇವೆ? ಸಂಕಟದಲ್ಲಿ, ದುಃಖದಲ್ಲಿ ಸಿಕ್ಕಿ, ನರಳುತ್ತಿರುವ ಕೋಟ್ಯಾನುಕೋಟಿ ಭಾರತೀಯರಿಗೆ, ಎಷ್ಟು ಜನ ಕಣ್ಣೀ

ರಿಡುವರು? ನಾವು ಮಾನವರೆ? ಅವರ ಜೀವನೋಪಾಯಕ್ಕೆ, ಅವರನ್ನು ಉತ್ತಮಸ್ಥಿತಿಗೆ ತರುವುದಕ್ಕೆ, ನಾವು ಏನು ಮಾಡುತ್ತಿರುವೆವು? ನಾವು ಅವರನ್ನು ಮುಟ್ಟುವುದಿಲ್ಲ, ಅವರ ಸಂಗವನ್ನು ನಿರಾಕರಿಸುವೆವು! ನಾವು ನಿಜವಾಗಿಯೂ ಮಾನವರೆ? ದೀನರು, ಅತ್ಯಾಚಾರದಿಂದ ನೊಂದ ಸಾಮಾನ್ಯ ಭಾರತೀಯರಿಗೆ, ಇರುವ ಆ ಸಾವಿರಾರು ಮಂದಿ ಬ್ರಾಹ್ಮಣರು ಏನುಮಾಡುತ್ತಿರುವರು? "ಮುಟ್ಟಬೇಡ, ಮುಟ್ಟಬೇಡ" ಎಂಬ ಪದವೊಂದೆ ಅವರ ನಾಲಿಗೆಯ ಮೇಲೆ ನಲಿದಾಡುವುದು. ನಮ್ಮ ಸನಾತನ ಧರ್ಮ ಅವರ ಕೈಗೆ ಸಿಕ್ಕಿ ಎಷ್ಟು ಮಲಿನವಾಗಿದೆ, ಎಷ್ಟು ಅಧೋಗತಿ ಗಿಳಿದಿದೆ! ಈಗ ನಮ್ಮ ಧರ್ಮವಿರುವುದೆಲ್ಲಿ? "ಮುಟ್ಟಬೇಡ" ಎಂಬ ಪದದಲ್ಲಿ; ಮತ್ತೆಲ್ಲಿಯೂ ಇಲ್ಲ.

ನನ್ನ ಕುತೂಹಲವನ್ನು ತೃಪ್ತಿಪಡಿಸುವುದಕ್ಕಾಗಲಿ ಕೀರ್ತಿಗಳಿಸು ವುದಕ್ಕಾಗಲೀ, ನಾನು ಈ ದೇಶಕ್ಕೆ ಬರಲಿಲ್ಲ. ಭಾರತೀಯ ದೀನರ ಮೇಲ್ಮೆಗೆ ಏನಾದರೂ ಸಹಾಯ ದೊರಕುವುದೇ ಎಂಬುದನ್ನು ನೋಡಲು ಬಂದೆ. ದೇವರು ನನಗೆ ಸಹಾಯಮಾಡಿದರೆ, ಅವರನ್ನು ಉದ್ಧಾರ ಮಾಡುವ ರೀತಿ ಯಾವುದು ಎಂಬುದು ಕ್ರಮೇಣ ಗೊತ್ತಾಗುವುದು.

ಆಧ್ಯಾತ್ಮಿಕ ದೃಷ್ಟಿಯಿಂದ ಅಮೇರಿಕಾದವರು ನಮಗಿಂತ ಬಹಳ ಹಿಂದೆ ಇರುವರು. ಆದರೆ ಅವರ ಸಮಾಜ ನಮ್ಮ ಸಮಾಜಕ್ಕಿಂತ ಬಹಳ ಉತ್ತಮವಾಗಿದೆ. ನಾವು ಅವರಿಗೆ ಆಧ್ಯಾತ್ಮಿಕ ಬೋಧನೆಯನ್ನು ಮಾಡೋಣ. ಅವರ ಸಮಾಜದಲ್ಲಿ ಯಾವುದು ಉತ್ತಮವೋ ಅದನ್ನು ಸ್ವೀಕರಿಸೋಣ. ನನ್ನ ಪ್ರಿಯ ವಂದನೆಗಳು. ವಿವೇಕಾನಂದ.

(೧೭)

[ಸಂಸಾರದಲ್ಲಿ ದೊಡ್ಡದೊಂದು ಸಂಕಟ ಪ್ರಾಪ್ತವಾಗಿ ಶೋಕಾರ್ತರಾದ ಮದ್ರಾಸಿನ ಗೆಳೆಯರೊಬ್ಬರಿಗೆ ಬರೆದದ್ದು—೧೮೯೪ ರಲ್ಲಿ.]

ಮಾನವನಿಗೆ ಒದಗಬಹುದಾದ, ಮಹಾ ವಿಪತ್ತನ್ನು ಅನುಭವಿಸು ವಾಗ ಪ್ರಾಚೀನ ಯಹೂದ್ಯ ಮಹಾತ್ಮನು ಎಂದ ನುಡಿಗಳಿವು—" ತಾಯಿ

ಒಡಲಿಂದ ಬೆತ್ತಲೇಬಂದೆ. ಅಲ್ಲಿಗೆ ಬೆತ್ತಲೆಯೇ ಹೋಗುತ್ತೇನೆ. ದೇವರು ಕೊಟ್ಟ. ಎಲ್ಲವನ್ನೂ ಅವನೇ ಕಸಿದುಕೊಂಡ. ಧನ್ಯವಾಗಲಿ ಅವನ ಹೆಸರು." ಇದು ಸುಳ್ಳಲ್ಲ. ನಮ್ಮ ಇಡೀ ಬಾಳಿನ ರಹಸ್ಯವೇ ಇದರಲ್ಲಿ ಅಡಗಿರುವುದು. ಕಡಲಮೇಲೆ ಚಂಡಮಾರುತ ಬೀಸುತ್ತಿರಬಹುದು. ಅಲೆಗಳೆದ್ದು ಬೀಳುತ್ತಿರಬಹುದು. ಆದರೆ ಅಂತರಾಳದಲ್ಲಿದೆ ಅನಂತಶಾಂತಿ, ಅನಂತ ಸಮಾಧಾನ, ಅನಂತ ಆನಂದ. "ಈಗ ದುಃಖಿಸುವವರೇ ಧನ್ಯರು, ಏಕೆಂದರೆ ಸಮಾಧಾನ ಸಿಕ್ಕುವುದೇ ಅವರಿಗೆ." ಇದು ಏತಕ್ಕೆ? ಈ ಸಮಯದಲ್ಲಿ, ತಂದೆ ಅಳುವಿಗೆ ನಿಲ್ಲದೆ, ತಾಯಿ ಸುರಿಯುವ ಕಂಬನಿಗೆ ಕರಗದೆ, ನಮ್ಮೆದೆಯನ್ನು ಹಿಸುಕುವುದು ಅವನ ಕೈಗಳು. ದುಃಖ ನಿರಾಶೆಗಳ ಭಾರದಲ್ಲಿ ಕುಗ್ಗಿಹೋದಾಗ ನಮ್ಮ ಕಾಲಿನ ಕೆಳಗೆ ಇರುವ ಜಗತ್ತೇ ಕಳಚಿಬಿದ್ದಂತೆ ತೋರುವುದು. ಬೇಧಿಸಲಾಗದ ದುಃಖನಿರಾಶೆಯು ಕಾರ್ಮೋಡಗಳು ಆಗಸವನ್ನು ಕವಿಯುವುದು. ಇಂತಹ ಸಮಯದಲ್ಲಿ ಅಂತರಂಗದ ವಿವೇಕದ ಕಣ್ಣು ತೆರೆಯುವುದು. ಮರುಕ್ಷಣದಲ್ಲಿಯೇ ಬೆಳಕು ಹೊಳೆಯುವುದು. ಕಟ್ಟಿದ ಕನಸುಗಳು ಒಡೆಯುವುವು. ಆಗಲೇ ಜಗತ್ತಿನಲ್ಲಿ ಅತ್ಯಂತ ರಹಸ್ಯವಾದ ಸತ್ಯದ ಎದುರಿಗೆ ನಾವು ಅರಿಯದೆ ನಿಲ್ಲುವೆವು. ಅನೇಕ ಕ್ಷುದ್ರವ್ಯಕ್ತಿಗಳನ್ನು ಮುಳುಗಿಸುವಂತಹ ದುಃಖದ ಭಾರವನ್ನು ತಡೆದು ನಿಲ್ಲುವನೇ ಪ್ರತಿಭಾವಂತನು, ಶಕ್ತಿಶಾಲಿಯು, ಸಾಹಸ ಪ್ರಿಯನು. ಆಗ ಅವನು ಅನಂತವೂ ಪವಿತ್ರವೂ ಚಿದಾನಂದವೂ ಆದ, ಬೇರೆ ಬೇರೆ ನಾಮಗಳಿಂದ ಬೇರೆ ಬೇರೆ ದೇಶಗಳಲ್ಲಿ ಪೂಜೆಗೊಳ್ಳುವ ದೇವನನ್ನು ಕಾಣುವುದು. ಆಗ ನಮ್ಮನ್ನು ಈ ದುಃಖದ ಜಾಲಕ್ಕೆ ಕಟ್ಟಿರುವ ಬಂಧನಗಳೆಲ್ಲ ಕ್ಷಣಕಾಲವಾದರೂ ಸಡಿಲವಾಗಿ, ದೇವನೆಡೆಗೆ ಕರೆದೊಯ್ಯು ವುದು. ದುಷ್ಟರು ಕೊಡುವ ಕಷ್ಟ ಮುಟ್ಟಲಾರದು ಅಲ್ಲಿ. ಬಳಲಿದವರಿಗೆ ವಿಶ್ರಾಂತಿಯನ್ನು ಕೊಡುವ ಬೀಡದು. ಸಹೋದರನೆ, ಹಗಲು ರಾತ್ರಿ ದೇವರಿಗೆ ಪ್ರಾರ್ಥನೆ ಮಾಡುವುದನ್ನು ಬಿಡಬೇಡ. "ನಿನ್ನ ಇಚ್ಛೆ ನೆರ ವೇರಲಿ." ಎಂಬುದನ್ನು ಹಗಲು ರಾತ್ರಿ ಉಚ್ಚರಿಸಲು ಮರೆಯಬೇಡ. ಏಕೆಂದರೆ, "ಪ್ರಶ್ನಿಸುವುದಲ್ಲ ನಮ್ಮ ಕೆಲಸ. ಮಾಡುವುದು ಮತ್ತು ಮಡಿಯುವುದು ಮಾತ್ರ ನಮ್ಮ ಕೆಲಸ."

ಹೇ ದೇವ! ಧನ್ಯವಾಗಲಿ ನಿನ್ನ ನಾಮ! ನಿನ್ನ ಇಷ್ಟಾರ್ಥ ನೆರವೇರಲಿ. ಹೇ ದೇವ! ನಾವು ನಿನಗೆ ತಲೆಬಾಗಬೇಕೆಂಬುದು ಗೊತ್ತಿದೆ. ಹೇ ದೇವ! ಜಗನ್ಮಾಯಿಯ ಕರಗಳೆ ನಮ್ಮನ್ನು ಶಿಕ್ಷಿಸುತ್ತಿರುವುದು ಎಂಬುದು ನಮಗೆ ಗೊತ್ತಿದೆ. ಮನಸ್ಸೇನೊ ಅನುಭವಿಸುವುದಕ್ಕೆ ಸಿದ್ಧವಾಗಿರುವುದು. ಆದರೆ ದೇಹ ದುರ್ಬಲವಾಗಿರುವುದು. ಹೇ ಪ್ರೇಮಮಯ ತಂದೆ! ನಿನ್ನ ವಂಶನಾಶನವನ್ನು ನಿನ್ನ ಕಣ್ಣೆದುರಿಗೆ ಕೈಕಟ್ಟಿಕೊಂಡು ನೋಡಿದವನು ನೀನು. ಹೇದೇವ, ಬಾ! ಹೇ ಗುರುವರ್ಯನೆ ಬಾ! ಯೋಧನ ಕೆಲಸ ಆಣತಿಯನ್ನು ಪಾಲಿಸುವುದು, ಮರುಮಾತನಾಡದಿರುವುದು ಎಂಬುದನ್ನು ಬೋಧಿಸಿದಾತನು ನೀನು. ಹೇದೇವ! ಹೇ ಪಾರ್ಥಸಾರಥಿ, ಬಾ ಎನ್ನೆಡೆಗೆ. ಭಗವಂತನಲ್ಲಿ ಶರಣಾಗತನಾಗುವುದೇ ಜೀವನದ ಚರಮಗುರಿ ಎಂಬ ಸಂದೇಶವನ್ನು ಪಾರ್ಥನಿಗೆ ಹಿಂದೆ ಬೋಧಿಸಿದೆ. ಅದನ್ನೇ ನನಗೂ ಉಪದೇಶಿಸು. ಹಿಂದಿನ ಮಹಾ ಪುರುಷರೊಂದಿಗೆ ನಾನು ಮನಸ್ಸುಗಟ್ಟಿ ಮಾಡಿ "ಓಂ ಶ್ರೀ ಕೃಷ್ಣಾರ್ಪಣಮಸ್ತು" ಎಂದು ಶರಣಾಗತನಾಗಿ ಬೇಡುವೆನು. ಭಗವಂತ ನಿನಗೆ ಶಾಂತಿಯನ್ನು ಕೊಡಲಿ ಎಂಬುದೇ ಹಗಲಿರುಳು ನನ್ನ ಪ್ರಾರ್ಥನೆ.

—ವಿವೇಕಾನಂದ.

( ೧೮ )

೫೪೧ ಡಿಯರ್ ಬಾರನ್ ಅವೆನ್ಯೂ, ಚಿಕಾಗೊ.

೨೪ ನೇ ಜನವರಿ ೧೮೯೪.

ಪ್ರಿಯ ಸ್ನೇಹಿತರೆ,

ನಿಮ್ಮ ಪತ್ರಗಳು ನನಗೆ ಸೇರಿದುವು. ನನ್ನ ವಿಷಯವಾಗಿ ನಿಮಗೆ ಅಷ್ಟೊಂದು ತಿಳಿದಿರುವುದು ಆಶ್ಚರ್ಯ. ನೀವು ಹೇಳುವ ಆ ಪತ್ರಿಕೆಯ ಟೀಕೆಯನ್ನು, ಅಮೆರಿಕಾ ಜನರ ಮನೋಭಿಪ್ರಾಯವೆಂದು ತೆಗೆದುಕೊಳ್ಳಬೇಡಿ. ಆ ಪತ್ರಿಕೆ ಇಲ್ಲಿ ಇರುವುದೇ ಅನೇಕರಿಗೆ ತಿಳಿಯದು. ಅದನ್ನು "ನೀಲನಾಸಿಕ" ಪ್ರೆಸ್‌ಬಿಟೇರಿಯನ್ನರದು ಎಂದು ಕರೆಯುತ್ತಾರೆ.

ಬಹಳ ಅನ್ಯಮತದ್ವೇಷದ ಪತ್ರಿಕೆ. ಆದರೂ ಎಲ್ಲಾ ನೀಲನಾಸಿಕರೂ ಅಸಂಭಾವಿತರಲ್ಲ. ಅಮೇರಿಕಾ ದೇಶದ ಜನರು ಮತ್ತು ಪಾದ್ರಿಗಳು ಇಲ್ಲಿ ನನಗೆ ಸತ್ಕಾರಮಾಡಿರುವರು. ಸಮಾಜದಲ್ಲಿ ಪ್ರಖ್ಯಾತನಾದವ್ಯಕ್ತಿಯನ್ನು ಟೀಕೆಮಾಡಿ ಪ್ರಖ್ಯಾತಿಗೆ ಬರಬೇಕೆಂದು ಆ ಪತ್ರಿಕೆ ಭಾವಿಸಿತ್ತು. ಆ ಉಪಾಯ ಇಲ್ಲಿಯ ಜನರಿಗೆ ಚೆನ್ನಾಗಿ ಗೊತ್ತಿದೆ. ಆದ್ದರಿಂದ ಅದರ ವಿಚಾರವನ್ನು ಮನಸ್ಸಿಗೆ ಹಚ್ಚಿಕೊಳ್ಳುವುದಿಲ್ಲ. ಆದರೂ ನಮ್ಮ ಇಂಡಿಯಾದೇಶದ ಪಾದ್ರಿಗಳೇನೊ ಇದರಿಂದ ದೊಡ್ಡ ಲಾಭವನ್ನು ಪಡೆಯಲು ಯತ್ನಿಸಬಹುದು. ಅವರೇನಾದರೂ ಪ್ರಯತ್ನ ಪಟ್ಟರೆ, "ಎಲೆ! ಯಹೂದ್ಯನೆ, ದೇವರು ನಿನ್ನನ್ನು ವಿಚಾರಿಸಿಕೊಳ್ಳುವನು" ಎಂದು ಹೇಳಿ. ಅವರ ಹಳೆಯ ಮನೆ ಬುಡ ಸಹಿತ ಅಲ್ಲಾಡುತ್ತಿದೆ. ಅವರು ಎಷ್ಟು ಕೂಗಾಡಿದರೂ ಅದು ಕೆಳಕ್ಕೆ ಉರುಳೇ ಉರುಳುವುದು. ಪೌರಾತ್ಯ ಧಾರ್ಮಿಕ ಭಾವನೆಗಳು ಇಲ್ಲಿಗೆ ಹಬ್ಬಿದುದರ ಪರಿಣಾಮವಾಗಿ ಅವರ ಸುಖಜೀವನಕ್ಕೆ ಭಂಗ ಬಂದಿದೆ. ಅಯ್ಯೋ ಪಾಪ! ಪ್ರಖ್ಯಾತ ಪಾದ್ರಿಗಳಲ್ಲಿ ಒಬ್ಬರೂ ಕೂಡ ನನಗೆ ವಿರೋಧವಾಗಿಲ್ಲ. ಆಗಲಿ, ನಾನು ನೀರಿಗೆ ಇಳಿದ ಮೇಲೆ ಚೆನ್ನಾಗಿ ಸ್ನಾನ ಮಾಡಲೇ ಬೇಕು.

ಮಹಾಸಭೆಯ ಮುಂದೆ ನಮ್ಮ ಧರ್ಮದ ವಿಚಾರವಾಗಿ ಓದಿದ ಒಂದು ಸಣ್ಣ ಲೇಖನವಿರುವ ವೃತ್ತ ಪತ್ರಿಕೆಯನ್ನು ಕಳುಹಿಸುವೆನು. ನನ್ನ ಬಹು ಪಾಲು ಉಪನ್ಯಾಸಗಳೆಲ್ಲಾ ಸಿದ್ಧತೆಯಿಲ್ಲದೆ ಬಂದವುಗಳು. ಭರತ ಖಂಡದಿಂದ ಸಹಾಯವೇನೂ ಬೇಕಾಗಿಲ್ಲ. ಇಲ್ಲಿಯೇ ನನಗೆ ಬೇಕಾದಷ್ಟು ಇದೆ. ಕಳುಹಿಸಿರುವ ಸಣ್ಣ ಲೇಖನವನ್ನು ಇತರ ದೇಶೀಯ ಭಾಷೆಗಳಿಗೆ ಭಾಷಾಂತರ ಮಾಡಿ ನಿಮ್ಮ ಹತ್ತಿರವಿರುವ ದ್ರವ್ಯದಿಂದ ಮುದ್ರಿಸಿ ಎಲ್ಲರಿಗೂ ತಿಳಿಯುವಂತೆ ಮಾಡಿ. ಇದು ನಮ್ಮದೇಶದ ಆದರ್ಶವನ್ನು ಜನರ ಮುಂದಿಡುವುದು. ಇನ್ನು ಕೇಂದ್ರ ವಿದ್ಯಾಲಯದ ಯೋಜನೆಯನ್ನು ಮತ್ತು ಅದರ ಶಾಖೆಗಳು ನಾನಾ ಕಡೆಗೆ ಹರಡುವುದನ್ನು ಮರೆಯಬೇಡಿ.

ಅಮೇರಿಕಾ ದೇಶದ ನಾರಿಯರು ನನಗೆ ತೋರಿಸಿದ ಆದರವನ್ನು ಬಣ್ಣಿಸಲಾರೆ. ದೇವರು ಅವರಿಗೆ ಒಳ್ಳೆಯದನ್ನು ಮಾಡಲಿ. ನಾರಿಯರೆ

ಈ ದೇಶದಲ್ಲಿ ಎಲ್ಲಾ ಚಳುವಳಿಯ ಜೀವಾಳ. ಈ ದೇಶದ ಸಂಸ್ಕೃತಿಯ ಪ್ರತಿನಿಧಿಗಳು ಅವರು. ಪುರುಷರಿಗೆ ವಿದ್ಯಾವಂತರಾಗಲು ಕಾಲವೇ ಇಲ್ಲ.

ಕಿ— ಪತ್ರಗಳು ನನಗೆ ತಲುಪಿದುವು ಜಾತಿಯು ಹೋಗಬೇಕೆ ಇರಬೇಕೆ ಎಂಬ ಪ್ರಶ್ನೆಗೂ ನನಗೂ ಸಂಬಂಧವಿಲ್ಲ. ಅತಿ ದೀನನೂ, ದರಿದ್ರನೂ ಆದವನ ಮನೆಯ ಬಾಗಿಲಿಗೆ, ಭರತ ಖಂಡದಲ್ಲಿ ಮತ್ತು ಹೊರಗೆ ಮಹಾವ್ಯಕ್ತಿಗಳು ಆಲೋಚಿಸಿದ ಭಾವಗಳನ್ನು ಒದಗಿಸಬೇಕೆಂ ಬುದೇ ನನ್ನ ಬಯಕೆ. ನಂತರ ಅವರೇ ಆಲೋಚಿಸಲಿ. ಜಾತಿ ಇರ ಬೇಕೆ, ಬೇಡವೆ; ಸ್ತ್ರೀಯರು ಸಂಪೂರ್ಣ ಸ್ವತಂತ್ರರಾಗಿರಬೇಕೆ ಬೇಡವೆ ; ಎಂಬುದಕ್ಕೂ ನನಗೂ ಸಂಬಂಧವಿಲ್ಲ. ಜೀವನ ಅದರ ಬೆಳವಣಿಗೆ ಮತ್ತು ಅದು ಆರೋಗ್ಯದಿಂದ ಇರುವುದಕ್ಕೆ ಸ್ವತಂತ್ರ ಆಲೋಚನೆ ಮತ್ತು ಕಾರ್ಯ ಅತ್ಯಾವಶ್ಯಕ. ಇದು ಎಲ್ಲಿ ಇಲ್ಲವೊ ಅಲ್ಲಿಯ ಮನುಷ್ಯ, ಅಲ್ಲಿಯ ಜನಾಂಗ, ಅಲ್ಲಿಯ ದೇಶ ಅವನತಿಗೆ ಇಳಿಯುವುದು.

ಎಲ್ಲಿಯವರೆವಿಗೂ ಸ್ವತಂತ್ರ ಆಲೋಚನೆ ಮತ್ತು ಕ್ರಿಯೆ ನೆರೆಯವರಿಗೆ ತೊಂದರೆ ಕೊಡುವುದಿಲ್ಲವೊ, ಅಲ್ಲಿಯವರೆವಿಗಾದರೂ ಯಾವ ಒಂದು ಪಂಗಡವಾಗಲಿ, ಜಾತಿಯಾಗಲೀ, ದೇಶವಾಗಲಿ, ಅಥವಾ ಒಂದು ಸಂಸ್ಥೆಯಾಗಲಿ, ಅದರ ಸ್ವತಂತ್ರಕ್ಕೆ ಅಡ್ಡಿ ತರುವುದೋ ಅದು ಪೈಶಾಚಿಕವಾದುದು. ಅದು ನಿರ್ನಾಮವಾಗಬೇಕು.

ಪ್ರತಿಯೊಬ್ಬನ ಮನೆಯ ಬಾಗಿಲಿಗೂ, ಉಚ್ಚಧ್ಯೇಯಗಳನ್ನು ಕೊಂಡೊಯ್ಯುವ ಯಂತ್ರವೊಂದನ್ನು ಚಲಿಸುವಂತೆ ಮಾಡುವುದೇ ನನ್ನ ಜೀವನದ ಹೆಬ್ಬಯಕೆ. ನಂತರ ಪುರುಷರು, ಸ್ತ್ರೀಯರು ತಮ್ಮ ಅದೃಷ್ಟ ವನ್ನು ತಾವೇ ಪರಿಹರಿಸಿಕೊಳ್ಳಲಿ. ಜೀವನದ ಮಹತ್ತಾದ ಪ್ರಶ್ನೆಗಳ ಮೇಲೆ ನಮ್ಮ ಪುರಾತನರು ಮತ್ತು ಅನ್ಯದೇಶೀಯರು ಏನು ಆಲೋಚಿ ಸಿರುವರು? ಎಂಬುದನ್ನು ಮೊದಲು ನೋಡಲಿ, ನಂತರ ಏನು ಮಾಡ ಬೇಕೆಂಬುದನ್ನು ನಿಶ್ಚಯಿಸಲಿ. ನಾವು ರಸಾಯನಿಕ ದ್ರವ್ಯಗಳನ್ನು ಸೇರಿಸೋಣ. ಪ್ರಕೃತಿ ನಿಯಮದಂತೆ ನಂತರ ಅದೇ ಸ್ಫಟಿಕವಾಗುವುದು (Crystal). ಕಷ್ಟಪಟ್ಟು ಕೆಲಸಮಾಡಿ. ಚಂಚಲರಾಗದಿರಿ. ದೇವರಲ್ಲಿ ನಂಬಿಕೆ ಇಡಿ. ಕಾರ್ಯಕ್ಕೆ ಕೈ ಹಾಕಿ. ಈಗಲೋ ಆಗಲೋ ನಾನು

ಬರುತ್ತೇನೆ. "ಧರ್ಮವನ್ನು ಅಲ್ಲಗಳೆಯದೆ ಜನಸಾಮಾನ್ಯರ ಉನ್ನತಿ ಆಗಬೇಕು" ಎಂಬ ಆದರ್ಶವನ್ನು ಮರೆಯಬೇಡಿ.

ದೀನರ ಜೋಪಡಿಗಳಲ್ಲಿ ನಾಡು ಬದುಕಿರುವುದು ಎಂಬುದನ್ನು ಜ್ಞಾಪಕದಲ್ಲಿಡಿ. ಅಯ್ಯೋ! ಆದರೆ ಅವರಿಗೆ ಯಾರೂ ಸಹಾಯಮಾಡಿಲ್ಲ. ಇಂದಿನ ಸಮಾಜ ಸುಧಾರಕರು ವಿಧವೆಯ ಮದುವೆಯ ಗಲಾಟೆಯಲ್ಲಿರುವರು. ಪ್ರತಿಯೊಂದು ಸುಧಾರಣೆಗೂ ನನ್ನ ಸಹಾನುಭೂತಿಯೇನೋ ಇದೆ. ಒಂದು ದೇಶದ ಅದೃಷ್ಟವಿರುವುದು ಅಲ್ಲಿ, ವಿಧವೆಯರಿಗೆ ಸಿಕ್ಕುವ ಗಂಡಂದಿರ ಸಂಖ್ಯೆಯ ಮೇಲೆ ನಿಂತಿಲ್ಲ. ಅಲ್ಲಿರುವ ಜನಸಾಮಾನ್ಯರ ಸ್ಥಿತಿಯ ಮೇಲೆ ನಿಂತಿರುವುದು. ಅವರನ್ನು ಮೇಲೆತ್ತಬಲ್ಲಿರಾ? ಅವರೊಂದಿಗೆ ಜನ್ಮತಃ ಬಂದಿರುವ ಆಧ್ಯಾತ್ಮಿಕ ಪ್ರವೃತ್ತಿಯನ್ನು ನಾಶಮಾಡದೆ, ಕಳೆದುಕೊಂಡ ವ್ಯಕ್ತಿತ್ವವನ್ನು ಅವರಿಗೆ ಪುನಃ ಕೊಡಬಲ್ಲಿರಾ? ಸ್ವಾತಂತ್ರ್ಯದಲ್ಲಿ, ಕ್ರಿಯೆಯಲ್ಲಿ, ಶಕ್ತಿಯಲ್ಲಿ ಪಾಶ್ಚಾತ್ಯರನ್ನು ಕೂಡ ಮೀರಿ, ಅದೇ ಸಮಯದಲ್ಲಿ ಧಾರ್ಮಿಕ ಸಂಸ್ಕೃತಿ ಸ್ವಭಾವಗಳಲ್ಲಿ ಪೂರ್ಣ ಭಾರತೀಯರಾಗಿರಬಲ್ಲಿರಾ? ಇದನ್ನು ನೆರವೇರಿಸಬೇಕಾಗಿದೆ. ಇದನ್ನು ನಾವು ಮಾಡಿಯೇ ಮಾಡುವೆವು. ಇದನ್ನೆಲ್ಲ ಸಾಧಿಸುವುದಕ್ಕೆ ನೀವು ಜನ್ಮ ತಾಳಿರುವುದು. ಮೊದಲು ನಿಮ್ಮಲ್ಲಿ ನಂಬಿಕೆ ಇರಲಿ. ಮಹತ್ವದ ದೃಢ ನಂಬಿಕೆಗಳು ಮಹಾಕಾರ್ಯಕ್ಕೆ ಮೂಲ. ಮುಂದೆ! ಯಾವಾಗಲೂ ಮುಂದೆ ನಡೆಯಿರಿ! ಪ್ರಾಣ ಹೋದರೂ ಸರಿ ದೀನರಿಗೆ, ದಲಿತರಿಗೆ ದಯೆ ತೋರುವುದು ನಮ್ಮ ಗುರಿ.

ನನ್ನ ಕೆಚ್ಚೆದೆಯ ಮಕ್ಕಳೆ ಮುಂದೆ! —ವಿಶ್ವಾಸಪೂರ್ವಕ

ವಿವೇಕಾನಂದ.

ವಿ. ಸೂ.—ಒಂದು ಕೇಂದ್ರ ವಿದ್ಯಾನಿಲಯದ ಮೂಲಕ ಜನಸಾಮಾನ್ಯರನ್ನು ಹೇಗೆ ಮೇಲೆತ್ತುವುದೆಂಬುದನ್ನು ಬೋಧಿಸಿ. ಈ ವಿದ್ಯಾನಿಲಯದಿಂದ ತರಪೇತು ಹೊಂದಿದ ಧಾರ್ಮಿಕ ಪ್ರಚಾರಕರ ಮೂಲಕ ಪ್ರತಿಯೊಬ್ಬ ಬಡವನ ಮನೆ ಬಾಗಿಲಿಗೂ ವಿದ್ಯೆ ಮತ್ತು ಧರ್ಮದ ವಿಷಯಗಳು ಬರುವಂತೆ ಮಾಡಬೇಕು.—ವಿ.

(೧೯)

ಚಿಕಾಗೊ,
೨೯ ನೇ ಜನವರಿ, ೧೮೯೪

ಪ್ರಿಯ ದಿವಾನ್‌ಜಿ ಸಾಹೇಬರೆ,

ಕೆಲವು ದಿನಗಳ ಹಿಂದೆ ನಿಮ್ಮ ಕಾಗದ ತಲುಪಿತು. ನೀವು ನನ್ನ ಬಡತಾಯಿಯನ್ನು ಮತ್ತು ಸಹೋದರರನ್ನು ನೋಡುವುದಕ್ಕೆ ಹೋಗಿದ್ದಿರೆಂದು ತಿಳಿದೆ. ನೀವು ಹಾಗೆ ಮಾಡಿದುದು ಸಂತೋಷ. ನನ್ನ ಹೃದಯದ ಏಕಮಾತ್ರ ಮರ್ಮಾಂತಿಕ ಸ್ಥಳವನ್ನು ನೀವು ಮುಟ್ಟಿದಿರಿ. ನಾನು ನಿರ್ದಯನಾದ ಮೂರ್ಖನಲ್ಲವೆಂಬುದು ನಿಮಗೆ ಗೊತ್ತಿರಬೇಕು. ದಿವಾನ್‌ಜಿ ಸಾಹೇಬರೆ, ಇಡೀ ಜಗತ್ತಿನಲ್ಲಿ ನಾನು ಪ್ರೀತಿಸುವ ಯಾವುದಾದರೂ ಒಂದು ವಸ್ತುವಿದ್ದರೆ, ಅದೇ ನನ್ನ ತಾಯಿ. ಆದರೂ ನಾನು ಪ್ರಪಂಚವನ್ನು ತ್ಯಜಿಸದೇ ಇದ್ದರೆ, ನನ್ನ ಧನ್ಯ ಗುರುದೇವ ರಾಮಕೃಷ್ಣ ಪರಮಹಂಸರು ಯಾವ ಸಂದೇಶವನ್ನು ಜಗತ್ತಿಗೆ ಸಾರಲು ಬಂದರೋ ಅದು ಬೆಳಕಿಗೆ ಬರುತ್ತಿರಲಿಲ್ಲವೆಂದು ನಂಬಿದ್ದೆ ಮತ್ತು ಈಗಲೂ ನಂಬುತ್ತೇನೆ. ಹಾಗಿಲ್ಲದೇ ಇದ್ದರೆ, ಇಂದಿನ ನಾಸ್ತಿಕತೆ, ಮತ್ತು ಭೋಗವೆ ಪರಮಾನಂದ ಎಂದು ಸಾರುವ, ಹುಚ್ಚು ಹೊಳೆಗೆ ಅಡ್ಡಕಟ್ಟೆ ನಿಂತ ಆ ಯುವಕರು ಏನಾಗುತ್ತಿದ್ದರೋ! ಇವರು ಭರತಖಂಡಕ್ಕೆ, ಅದರಲ್ಲೂ ಬಂಗಾಳದೇಶಕ್ಕೆ ಬಹಳ ಉಪಕಾರವನ್ನು ಮಾಡಿದ್ದಾರೆ. ಇದು ಈಗ ತಾನೆ ಮೊದಲಾಗಿದೆ. ದೇವರ ದಯೆಯಿಂದ, ಇಡೀ ಜಗತ್ತೇ ಅನೇಕಕಾಲ ಕೊಂಡಾಡುವಂತಹ ಮಹತ್ಕಾರ್ಯಗಳನ್ನು ಮಾಡುವರು. ಒಂದು ಕಡೆ ಭಾರತದ ಮತ್ತು ಇಡೀ ಜಗತ್ತಿನ ಧಾರ್ಮಿಕ ಭವಿಷ್ಯ, ಅನೇಕ ಶತಮಾನಗಳಿಂದಲೂ ಯಾರೂ ಕೇಳುವರಿಲ್ಲದೆ, ಅವರ ವಿಚಾರವಾಗಿ ಆಲೋಚನೆಯನ್ನು ಕೂಡ ಮಾಡುವರಿಲ್ಲದೆ ಅಧಃಪಾತಾಳಕ್ಕೆ ಇಳಿಯುತ್ತಿದ್ದ ಲಕ್ಷಾಂತರ ದೀನರ ಮೇಲೆ ನನಗೆ ಇದ್ದ ಮರುಕ; ಮತ್ತೊಂದು ಕಡೆ ನನ್ನ ಹತ್ತಿರದ, ಪ್ರೀತಿಗೆ ಪಾತ್ರರಾದವರನ್ನು ದುಃಖದಲ್ಲಿ ಬಿಡುವುದು. ನಾನು ಮೊದಲನೆಯದನ್ನು ಆರಿಸಿದೆ. "ದೇವರು ಮಿಕ್ಕಿರುವುದನ್ನು ಮಾಡುವನು"! ಇನ್ನೇನೂ ಇಲ್ಲದೆ ಇದ್ದರೂ ಅವನು ನನ್ನೊಂದಿಗೆ ಇರುವನು

ಒಂದಾದರೂ ಸತ್ಯ. ನಾನು ಎಲ್ಲಿಯವರೆವಿಗೂ ನಿಷ್ಕಪಟಿಯಾಗಿರುವೆನೋ ಅಲ್ಲಿಯವರೆವಿಗೂ ಯಾರೂ ನನ್ನನ್ನು ತಡೆಯಲಾರರು. ಭಗವಂತನು ನನಗೆ ಸಹಾಯಮಾಡುವನು.

ಅನೇಕರು ಭರತ ಖಂಡದಲ್ಲಿ ನನ್ನನ್ನು ಅರ್ಥಮಾಡಿಕೊಳ್ಳಲಿಲ್ಲ. ಹೇಗೆ ತಿಳಿದುಕೊಳ್ಳುವರು; ಅಯ್ಯೋ ಪಾಪ! ಪ್ರತಿದಿನವೂ ತಿನ್ನುವುದು, ಕುಡಿಯುವುದು ಇವುಗಳನ್ನು ಬಿಟ್ಟರೆ ಅವರ ಕಣ್ಣಿಗೆ ಬೇರೇನೂ ಕಾಣಿಸದು. ನಿಮ್ಮಂತಹ ಗುಣಗ್ರಾಹಿಗಳಾದ ಎಲ್ಲೋ ಕೊಂಚಮಂದಿ ನನ್ನನ್ನು ಮೆಚ್ಚುವರೆಂಬುದು ಗೊತ್ತಿದೆ. ದೇವರು ನಿಮ್ಮ ಔದಾರ್ಯತೆಗೆ ಆಶೀರ್ವದಿಸಲಿ. ಜನರು ಮೆಚ್ಚಲಿ, ಮೆಚ್ಚದಿರಲಿ, ಇಂತಹ ಯುವಕರನ್ನು ಒಂದುಗೂಡಿಸುವುದಕ್ಕೆ ನಾನು ಜನ್ಮವೆತ್ತಿರುವುದು. ಪ್ರತಿಯೊಂದು ಪಟ್ಟಣದಿಂದಲೂ ಇಂತಹ ನೂರಾರು ಜನ ಸಿದ್ಧರಾಗಿರುವರು ಸೇರುವುದಕ್ಕೆ. ನಿಗ್ರಹಿಸಲಾರದ ಪ್ರಚಂಡ ತರಂಗ ಬಂದು ಕೊಚ್ಚಿಕೊಂಡು ಹೋಗುವಂತೆ ಈ ಯುವಕರೆಲ್ಲರನ್ನೂ ಭರತ ಖಂಡದ ಮೇಲೆ ಬಿಡುವೆನು. ದೀನರ, ದಲಿತರ ಮನೆಯ ಬಾಗಿಲಿಗೆ, ಜೀವನದಲ್ಲಿ ಶಾಂತಿ, ನೀತಿ, ಧರ್ಮ, ವಿದ್ಯೆ ಬರುವಂತೆ ಮಾಡುವೆನು. ಇದನ್ನು ನಾನು ಮಾಡುವೆನು ಇಲ್ಲವೆ ಮಡಿಯುವೆನು.

ನಮ್ಮ ಜನರಿಗೆ ಉದಾತ್ತ ಆದರ್ಶಗಳಿಲ್ಲ. ಇರುವವರನ್ನು ಕಂಡರೆ ನೋಡಿ ಸಹಿಸುವುದಿಲ್ಲ. ಸಾವಿರಾರು ವರುಷಗಳ ಗುಲಾಮಗಿರಿಯ ಪರಿಣಾಮವಾಗಿ ಅವರಲ್ಲಿ ಹೀನ ಅಸೂಯೆ ಮತ್ತು ಅನುಮಾನಗಳು ಯಾವ ಬಂದ. ಹೊಸ ಅಭಿಪ್ರಾಯಕ್ಕೂ ವಿಘ್ನವಾಗಿ ನಿಲ್ಲುವುವು. ಆದರೂ ದೇವರು ದೊಡ್ಡವನು.

ನೀವು ಮಂಗಳಾರತಿ ಮತ್ತು ಇನ್ನು ಇತರ ವಿಷಯವಾಗಿ ಬರೆದಿರುವಿರಿ. ಭರತ ಖಂಡದಲ್ಲೆಲ್ಲ ಪ್ರತಿಯೊಂದು ಮತದಲ್ಲಿಯೂ ಆಚರಿಸುವ ರೀತಿಯೆ ಇದು. ವೇದಗಳಲ್ಲಿ ಮೊದಲನೆಯ ಕರ್ತವ್ಯವೆ ಗುರುಪೂಜೆ ಎಂದು ಸಾರಿ ಹೇಳಿರುವುದು. ಅಲ್ಲಿ ಒಳ್ಳೆಯದೂ ಇದೆ, ಕೆಟ್ಟದ್ದೂ ಇದೆ. ನಾವು ಒಂದು ವಿಶೇಷ ಪಂಗಡವೆಂಬುದನ್ನು ಮರೆಯಬಾರದು. ನಮ್ಮಲ್ಲಿ ಯಾರಿಗೂ ಕೂಡ ಇನ್ನೊಬ್ಬರಮೇಲೆ ತಮ್ಮ ಅಭಿಪ್ರಾಯವನ್ನು ಬಲ

ವಂತ ಪಡಿಸುವುದಕ್ಕೆ ಅಧಿಕಾರವಿಲ್ಲ. ನಮ್ಮಲ್ಲಿ ಅನೇಕರಿಗೆ ಯಾವವಿಧವಾದ ವಿಗ್ರಹಾರಾಧನೆಯಲ್ಲಿಯೂ ನಂಬಿಕೆ ಇಲ್ಲ. ಆದರೆ ಇನ್ನೊಬ್ಬರು ಮಾಡಿದರೆ ಅದನ್ನು ವಿರೋಧಿಸಲು ನಮಗೆ ಅಧಿಕಾರವಿಲ್ಲ. ಏಕೆಂದರೆ ಅದು ನಮ್ಮ ಧರ್ಮದ ಮೊದಲನೆಯ ಸಿದ್ಧಾಂತವನ್ನು ಅಂದರೆ ದೇವರನ್ನು, ಮನುಷ್ಯನ ಮೂಲಕವಾಗಿ ಮಾತ್ರ ತಿಳಿಯಬಹುದು, ಎಂಬುದನ್ನು ವಿರೋಧಿಸುವುದು. ಜ್ಯೋತಿಯ ಸ್ಪಂದನ ಎಲ್ಲೆಲ್ಲಿಯೂ ಇರುವುದು. ಕತ್ತಲೆಯ ಕೋಣೆಯಲ್ಲಿಕೂಡ ಅದು ಇರುವುದು. ಆದರೆ ಅದು ದೀಪದಲ್ಲಿ ಮಾತ್ರ ಮನುಷ್ಯನಿಗೆ ಗೋಚರವಾಗುವುದು. ಹೀಗೆಯೇ ದೇವರು ಎಲ್ಲಾ ಕಡೆಯಲ್ಲಿಯೂ ಇದ್ದರೂ ನಮಗೆ ಗೋಚರವಾಗುವುದು ಮಹಾಪುರುಷರಲ್ಲಿ. ದೇವರಿಗೆ ನಾವು ಆರೋಪಿಸುವ ಕರುಣೆ, ರಕ್ಷಣೆ, ಸಹಾಯ ಎಂಬ ಗುಣಗಳೆಲ್ಲ, ಮಾನವ ಸಹಜವಾದುವುಗಳು. ನಾವು ಹೇಗೋ ದೇವರು ಹಾಗೆ ಇರುವನು ಎಂದು ತಿಳಿದುಕೊಳ್ಳುವೆವು. ಈ ಗುಣಗಳೆಲ್ಲ ಒಬ್ಬ ಮಾನವನಿಗೆ ಮಾತ್ರ ಸಲ್ಲಲು ಸಾಧ್ಯ. ಅವರನ್ನು ನೀವು ಗುರುವೆಂದಾದರೂ ಕರೆಯಿರಿ, ದೇವರ ಸಂದೇಶಕನೆಂದು ಹೇಳಿ, ಅವತಾರವೆಂದಾದರೂ ತಿಳಿದುಕೊಳ್ಳಿ. ಮಾನವನು ತನ್ನ ಪ್ರಕೃತಿಗೆ ವಿರೋಧವಾಗಿ ಹೋಗಲಾರ. ಹೇಗೆ ನೀವು ನಿಮ್ಮ ದೇಹದಿಂದ ಬೇರೆಯಾಗಿ ಹಾರಲಾರಿರೋ ಅಷ್ಟೆ ಅಸಾಧ್ಯ. ನಿಮ್ಮ ಚರಿತ್ರೆಯಲ್ಲಿ ಬರುವ ಎಲ್ಲಾ ಮಹಾತ್ಮರನ್ನು ಸೇರಿಸಿದರೂ, ಅದರ ನೂರರಷ್ಟು ಗುರು ಪವಿತ್ರವಾಗಿರುವಾಗ, ಅಂತಹ ಗುರುವನ್ನು ಕೆಲವರು ಪೂಜೆಮಾಡಿದರೆ ದೋಷವೇನಿದೆ? ಯೇಸುಕ್ರಿಸ್ತ, ಬುದ್ಧ, ಕೃಷ್ಣ ಮುಂತಾದವರನ್ನು ಪೂಜಿಸುವುದರಿಂದ ದೋಷವಿಲ್ಲದೆ ಇದ್ದರೆ ಗುರುಪೂಜೆಯಿಂದ ಬಂದ ದೋಷವೇನು? ಈ ಮಹಾತ್ಮ ಒಮ್ಮೆಯಾದರೂ ಪಾಪಕಾರ್ಯವನ್ನು ಮಾಡಿದವರಲ್ಲ, ಆಲೋಚಿಸಿದವರಲ್ಲ. ಅತೀಂದ್ರಿಯ ಜ್ಞಾನದಮೇಲೆ ನಿಂತ ಇವರ ಬುದ್ಧಿಶಕ್ತಿ ಉಳಿದ ಎಲ್ಲಾ ಮತಸ್ಥಾಪಕರಿಗಿಂತಲೂ ಮೇಲಾಗಿತ್ತು. ಉಳಿದವರು ಕೇವಲ ಒಂದು ಭಾಗವನ್ನು ಮಾತ್ರ ಕಂಡವರು. ಜಗತ್ತಿಗೆ ಎಲ್ಲಾ ಧರ್ಮದಲ್ಲಿರುವ ಒಂದೇ ಸತ್ಯವನ್ನು ಮೊದಲು ಬೋಧಿಸಿದವರು ಇವರು. ಇದು ಜಗತ್ತಿನಲ್ಲೆಲ್ಲಾ ಪ್ರಚಾರಕ್ಕೆ ಬರುತ್ತಿದೆ. ವಿಜ್ಞಾನಶಾಸ್ತ್ರ, ತತ್ವಶಾಸ್ತ್ರ, ಮತ್ತು

ಇನ್ನೂ ಯಾವ ಶಾಸ್ತ್ರದ ಸಹಾಯವನ್ನೂ ಸ್ವೀಕರಿಸದೆ ಇದನ್ನು ಅವರು ಸಾಧಿಸಿದರು.

ಇದೂ ಕೂಡ ಆವಶ್ಯಕವಿಲ್ಲ. ನನ್ನ ಯಾವ ಗುರುಭಾಯಿಯೂ ಕೂಡ ಅವರ ಗುರುಗಳನ್ನು ಉಳಿದವರು ಪೂಜಿಸಬೇಕೆಂದು ಹೇಳಿಲ್ಲ. ಇಲ್ಲ, ಇದು ಖಂಡಿತವಾಗಿಯೂ ಇಲ್ಲ! ಮತ್ತೊಬ್ಬರು ಪೂಜೆಮಾಡಿದರೆ ಅದನ್ನು ವಿರೋಧಿಸುವುದಕ್ಕೆ ನನಗೆ ಅಧಿಕಾರವಿಲ್ಲ. ಏಕೆಂದರೆ ಹತ್ತು ಜನ ಭಿನ್ನ ಭಿನ್ನ ಅಭಿಪ್ರಾಯಗಳುಳ್ಳವರು ಒಟ್ಟಿಗೆ ಕಲೆತು ಸೌಹಾರ್ದದಿಂದ ಇರುವ, ಒಂದು ಅಸಾಧಾರಣ ಸಂಘವನ್ನು ಇದು ಕೆಡಿಸುವುದು. ದಿವಾನ್‌ಜಿಯವರೆ! ಸ್ವಲ್ಪ ತಡೆಯಿರಿ, ದೇವರು ದೊಡ್ಡವನು, ಕರುಣಾಮಯನು. ಇನ್ನೂ ಏನೇನು ಆಗುವುದೋ ಅದೆಲ್ಲವನ್ನೂ ನೋಡುವಿರಿ!

ನಾವು ಅನ್ಯಧರ್ಮವನ್ನು ಸಹಿಸುವುದು ಮಾತ್ರವಲ್ಲ. ಎಲ್ಲವನ್ನೂ ಸ್ವೀಕರಿಸುವೆವು. ದೇವರ ದಯೆಯಿಂದ ಇದನ್ನು ವಿಶ್ವಕ್ಕೇ ಬೋಧಿಸಲು ಪ್ರಯತ್ನಿಸುತ್ತಿರುವೆನು.

ಪ್ರತಿಯೊಂದು ವ್ಯಕ್ತಿಯನ್ನು ಮತ್ತು ಪ್ರತಿಯೊಂದು ಜನಾಂಗವನ್ನು ಏಳಿಗೆಗೆ ತರುವುದಕ್ಕೆ ಇವು ಮೂರು ವಿಷಯಗಳು ಅತ್ಯಾವಶ್ಯಕ.

೧. ಸತ್ಯದಶಕ್ತಿಯಲ್ಲಿ ದೃಢವಾದ ನಂಬಿಕೆ.

೨. ಅಸೂಯೆ ಅನುಮಾನಗಳು ಇಲ್ಲದೇ ಇರುವುದು.

೩. ಯಾರು ಒಳ್ಳೆಯವರಾಗುವುದಕ್ಕೆ ಮತ್ತು ಒಳ್ಳೆಯದನ್ನು ಮಾಡುವುದಕ್ಕೆ ಪ್ರಯತ್ನಪಡುವರೋ ಅವರಿಗೆಲ್ಲ ಸಹಾಯಮಾಡುವುದು.

ಶ್ಲಾಘ್ಯನೀಯವಾದ, ವಿದ್ವಾಂಸರಿಂದಲೂ ಮತ್ತು ಇತರ ಸೌಭಾಗ್ಯಗಳನ್ನು ಪಡೆದ ಹಿಂದೂದೇಶ ಏತಕ್ಕೆ ಹೀಗೆ ಒಡೆದು ಚೂರಾಗಬೇಕಾಗಿತ್ತು? ಇದಕ್ಕೆ ಉತ್ತರವೇ ಅಸೂಯೆ ಎಂದು ಹೇಳುತ್ತೇನೆ. ಇನ್ನೊಬ್ಬರು ಕೀರ್ತಿಗೌರವ ಗಳಿಸಿದರೆ ಅದನ್ನು ನೋಡಿ ಸಹಿಸಲಾರದೆ ಕರುಬುವ ಹೀನ ಹಿಂದೂ ಜನಾಂಗದಂತೆ ಮತ್ತೊಂದು ಇಲ್ಲ. ನೀವು ಏನಾದರೂ ಪಾಶ್ಚಾತ್ಯ ದೇಶಗಳಿಗೆ ಬಂದರೆ ಮೊದಲು ಇಲ್ಲಿ ನಿಮಗೆ ತೋರುವುದು, ಈ ಅಸೂಯೆಗಳ ಅಭಾವ.

ಐದು ನಿಮಿಷಗಳಾದರೂ, ಮೂರು ಜನರು ಕಲೆತು ಸೌಹಾರ್ದ ದಿಂದ ಒಂದು ಕೆಲಸವನ್ನು ಮಾಡಲಾರರು. ಪ್ರತಿಯೊಬ್ಬನೂ ಅಧಿಕಾರಕ್ಕೋ ಹೋರಾಡುವನು. ಕೊನೆಗೆ ಇಡೀ ಸಂಸ್ಥೆಯೇ ಹಾಳಾಗುವುದು. ಅಯ್ಯೋ ದೇವರೆ! ಅಯ್ಯೋ ದೇವರೆ! ಎಂದು ನಾವು ಅಸೂಯೆಪಡದೆ ಇರುವುದನ್ನು ಕಲಿಯುವುದು. ಇಂತಹ ದೇಶದಲ್ಲಿ, ಅದರಲ್ಲೂ ಬಂಗಾಳ ಪ್ರಾಂತ್ಯದಲ್ಲಿ, ಭಿನ್ನಾಭಿಪ್ರಾಯಗಳಿದ್ದರೂ, ಎಂದೂ ನಾಶವಾಗದ ಪ್ರೇಮದಿಂದ ಪರಸ್ಪರ ಆಬದ್ಧರಾದ ಒಂದು ಸಹೋದರ ಸಂಘವನ್ನು ಸ್ಥಾಪಿಸುವುದು, ಆಶ್ಚರ್ಯಕರವಲ್ಲವೆ! ಈ ಸಂಘ ಅಭಿವೃದ್ಧಿಯಾಗು ವುದು. ಈ ಅಮೋಘವಾದ ಸ್ವತಂತ್ರದ ಭಾವನೆ ಅನಂತಶಕ್ತಿ, ಅನಂತ ಅಭಿವೃದ್ಧಿಗಳೊಂದಿಗೆ ಕಲೆತು, ಭರತ ಖಂಡದಲ್ಲೆಲ್ಲಾ ಹರಡಬೇಕು. ಇಡೀ ಜನಾಂಗದಲ್ಲೇ ವಿದ್ಯುತ್ ಸಂಚಾರಮಾಡಿದಂತೆ ಆಗಬೇಕು. ಎಷ್ಟು ಅಜ್ಞಾನವಿದ್ದರೂ, ಎಷ್ಟು ಜಾತಿಯ ವೈಮನಸ್ಯವಿದ್ದರೂ, ಮೂಢನಂಬಿಕೆ ಗಳಿದ್ದರೂ, ಸಮಾಜದ ಅಂಗೋಪಾಂಗದಲ್ಲಿ ತೂರಿ ಸಂಚಾರಮಾಡಬೇಕು.

ಚೇತನದ ಚಿಹ್ನೆ ಎಲ್ಲಿಯೂ ಇಲ್ಲ. ಎಲ್ಲ ಕಡೆಯಲ್ಲಿಯೂ ಸ್ಮಶಾನ ಮೌನ. ನಿಮ್ಮಂತಹ ಮಹಾನುಭಾವರು ಕಡಲಿಂದ ಮೇಲೆದ್ದುನಿಂತ ಬಂಡೆಯಂತಿರುವಿರಿ. ಅನವರತವೂ ದೇವರು ನಿಮ್ಮನ್ನು ಆಶೀರ್ವದಿಸಲಿ.

ವಿಶ್ವಾಸಪೂರ್ವಕ ನಿಮ್ಮ
ವಿವೇಕಾನಂದ.

(೨೦)

೫೪೧, ಡಿಯರ್‌ಬಾರನ್ ಅವೆನ್ಯೂ, ಚಿಕಾಗೊ,
೩ ನೇ ಮಾರ್ಚಿ, ೧೮೯೪

ಪ್ರಿಯ—,

ಭಕ್ತಿಯು ಆಶ್ಚರ್ಯಕರವಾದ ಆಂತರಿಕ ಜ್ಞಾನವನ್ನು ಕೊಡ ಬಲ್ಲದು. ಅದೊಂದೇ ನಮ್ಮನ್ನು ಉದ್ಧಾರಮಾಡಬಲ್ಲದು ಎಂಬುದನ್ನು ನಾನು ಒಪ್ಪುತ್ತೇನೆ. ಆದರೆ ಮುಂದಿನ ಬೆಳವಣಿಗೆಗೆ ಆತಂಕ ತಂದೊಡ್ಡುವ, ಅಂಧಮತಾಭಿಮಾನ ಬೆಳೆಯುವ ಅಪಾಯವಿದೆ.

ಜ್ಞಾನವೇನೊ ಒಳ್ಳೆಯದೆ. ಆದರೆ ಅದು ಬುದ್ಧಿಯ ಕಸರತ್ತಾಗಿ ಪರಿಣಮಿಸುವ ಭೀತಿಯುಂಟು. ಪ್ರೀತಿ ಅಮೋಘವಾದದ್ದು. ಮಹತ್ವವಾದದ್ದು. ಆದರೆ ಅರ್ಥವಿಲ್ಲದ ಭಾವನೆಯ ಪ್ರದರ್ಶನಗಳಲ್ಲಿ ಕೊನೆಗಾಣಬಹುದು. ಇವುಗಳೆಲ್ಲದರ ಒಂದು ಸಮನ್ವಯ ನಮಗೆ ಬೇಕಾಗಿರುವುದು. ಶ್ರೀ ರಾಮಕೃಷ್ಣರು ಅಂತಹ ಸಮನ್ವಯಮೂರ್ತಿ. ಅಂತಹ ಮಹಾತ್ಮರು ಜಗದಲ್ಲಿ ಅತಿವಿರಳ. ಅನೇಕ ಶತಮಾನಗಳಿಗೊಮ್ಮೆ ಅವರು ಬರಬಹುದು. ಅವರ ಜೀವನವನ್ನು, ಉಪದೇಶವನ್ನು ಜೀವನದಲ್ಲಿ ಆದರ್ಶವಾಗಿಟ್ಟುಕೊಂಡು ನಾವು ಮುಂದುವರೆಯಬಹುದು. ನಮ್ಮಲ್ಲಿ ಪ್ರತಿಯೊಬ್ಬರೂ ಅಂತಹ ಪೂರ್ಣತೆಯ ಶಿಖರವನ್ನೇನೊ ಮುಟ್ಟಲಾರದೆ ಇರಬಹುದು. ಒಬ್ಬೊಬ್ಬರು ಒಂದೊಂದು ಭಾಗವನ್ನು ವಿಕಾಸಗೊಳಿಸುವುದರಿಂದ ಒಬ್ಬರ ಕುಂದನ್ನು ಇನ್ನೊಬ್ಬರು ಹೋಗಲಾಡಿಸಬಹುದು; ಒಂದು ಸಮತೆಗೆ ತರಬಹುದು; ಒಬ್ಬರು ಇನ್ನೊಬ್ಬರೊಂದಿಗೆ ಹೊಂದಿಕೊಳ್ಳಬಹುದು; ಮತ್ತೊಬ್ಬರಲ್ಲಿ ಇಲ್ಲದ ಕೆಲವು ಗುಣಗಳನ್ನು ನಾವು ಅಭಿವೃದ್ಧಿಮಾಡಬಹುದು. ಈ ಒಟ್ಟು ದೃಷ್ಟಿಯಿಂದಲಾದರೂ ನಾವು ಅಂತಹ ಸಮನ್ವಯ ಆದರ್ಶದೆಡೆಗೆ ಮುಂದುವರಿಯಬಹುದು. ಇದು ಸಮುದಾಯ ಸಮನ್ವಯ. ಎಲ್ಲಾ ಮತಗಳಿಗಿಂತಲೂ, ಎಲ್ಲಾ ಜಾತಿಗಳಿಗಿಂತಲೂ, ಇದು ನಿಸ್ಸಂಶಯವಾಗಿಯೂ ಮೇಲಾದುದು.

ಒಂದು ಧರ್ಮ ತನ್ನ ಪ್ರಭಾವವನ್ನು ಜನಸಮುದಾಯದಲ್ಲಿ ಬೀರಬೇಕಾದರೆ, ಉತ್ಸಾಹ ಅತ್ಯಾವಶ್ಯಕ. ಆದರೆ ಸಂಪ್ರದಾಯಗಳು ಹೆಚ್ಚಿಹೋಗುವ ಅಪಾಯದಿಂದ ಪಾರಾಗಬೇಕು. ಇದನ್ನು, ಯಾವ ಸಂಪ್ರದಾಯಕ್ಕೂ ಸೇರದ ಒಂದು ಧರ್ಮ ಸಂಸ್ಥೆಯಾಗುವುದರಿಂದ ಸಾಧಿಸಬಹುದು; ಇದರಿಂದ ಸಂಪ್ರದಾಯ ಧರ್ಮದ ಪ್ರಯೋಗಗಳನ್ನೂ ಜೊತೆಗೆ ವಿಶ್ವಧರ್ಮದ ಔದಾರ್ಯತೆಯನ್ನೂ ನಾವು ಹೊಂದಬಹುದು.

ದೇವರೇನೋ ಸರ್ವಾಂತರ್ಯಾಮಿಯಾದರೂ ಮಾನವ ಜೀವನದ ಮೂಲಕ ಮಾತ್ರ ನಮಗೆ ಗೋಚರವಾಗುವುದು. ಶ್ರೀ ರಾಮಕೃಷ್ಣರಷ್ಟು ಪೂರ್ಣತೆಯನ್ನು ಪಡೆದ ಜೀವನ ಮತ್ತೊಂದಿಲ್ಲ. ಆ ಮಹಾ ಪುರುಷರ ಸಾನ್ನಿಧ್ಯವನ್ನು ನಾವು ಆಶ್ರಯಿಸಬೇಕು. ಆದರೂ ಪ್ರತಿಯೊಬ್ಬರೂ

ಕೂಡ ತಮ್ಮ ಭಾವಕ್ಕೆ ಅನುಗುಣವಾಗಿ ನೋಡುವಂತೆ ಅವಕಾಶಕೊಡಬೇಕು. ಅವರನ್ನು ದೇವರೆಂದು ಬೇಕಾದರೆ ಕರೆಯಲಿ, ರಕ್ಷಕನೆನ್ನಲಿ, ಆಚಾರ್ಯನೆನ್ನಲಿ, ಅಥವಾ ಮಹಾತ್ಮನೆನ್ನಲಿ. ತಮ್ಮ ಇಚ್ಛೆ ಬಂದಂತೆ ಕರೆಯಲಿ.

ಸಮಾಜದಲ್ಲಿ ಎಲ್ಲರಿಗೂ ಸಾಮಾನ್ಯ ಹಕ್ಕಾಗಲಿ, ಅಥವಾ ಅದಕ್ಕೆ ವಿರೋಧವಾಗಲಿ ನಾವು ಬೋಧಿಸುವುದಿಲ್ಲ. ಆದರೆ ಪ್ರತಿಯೊಂದು ವ್ಯಕ್ತಿಗೂ ಸಾಮಾನ್ಯ ಅಧಿಕಾರವಿರುವುದೆಂದು, ಸ್ವತಂತ್ರ ಆಲೋಚನೆ ಮತ್ತು ನಡವಳಿಕೆಗೆ ಅವಕಾಶವಿರಬೇಕೆಂದು ನಾವು ಒತ್ತಿ ಹೇಳುತ್ತೇವೆ.

ಏಕದೇವ ವಾದಿಯಾಗಲಿ, ಹಲವುದೇವ ವಾದಿಯಾಗಲಿ, ಸರ್ವಂ ಬ್ರಹ್ಮಮಯಂ ಜಗತ್ ಎಂದಾದರೂ ಹೇಳಲಿ, ಬ್ರಹ್ಮಸತ್ಯಂ ಜಗತ್ ಮಿಥ್ಯಾ ಎಂದಾದರೂ ಹೇಳಲಿ, ದೇವರಿಲ್ಲವೆಂತಲೇ ಸಾರಲಿ ನಾವು ಯಾರನ್ನೂ ನಿರಾಕರಿಸುವುದಿಲ್ಲ. ವಿಶಾಲವಾದ ಮತ್ತು ಗಂಭೀರವಾದ ಶೀಲದ ಆದರ್ಶಕ್ಕೆ ಪ್ರಯತ್ನಪಡುವುದೇ ಶಿಷ್ಯನಾಗುವುದಕ್ಕೆ ಬೇಕಾದ ಏಕಮಾತ್ರ ಯೋಗ್ಯತೆ. ನಡವಳಿಕೆ, ಸ್ವಭಾವ, ಊಟಮಾಡುವುದು, ನೀರುಕುಡಿಯುವುದು ಇವುಗಳನ್ನು ಹೇಗೆ ಹೇಗೆ ಮಾಡಬೇಕೆಂದು ನಾವು ಯಾವ ನಿಯಮಗಳನ್ನೂ ವಿಧಿಸುವುದಿಲ್ಲ. ಅದು ಇತರರಿಗೆ ತೊಂದರೆ ಮಾಡದೆ ಇದ್ದರೆ ಸರಿ.

ಉನ್ನತಿಗೆ ಯಾವುದು ಆತಂಕ ಪ್ರಾಯವಾಗಿರುವುದೋ ಯಾವುದು ನಮ್ಮನ್ನು ಅಧೋಗತಿಗೆ ಸೆಳೆಯುವುದೋ ಅವೆಲ್ಲ ಪಾಪ. ಯಾವುದು ಉನ್ನತಿಗೆ ಸಾಧನವಾಗಿ, ಹೃದಯದ ಐಕ್ಯತೆಗೆ ಸಹಾಯವಾಗುವುದೋ ಅವೆಲ್ಲ ಪುಣ್ಯ.

ಅವನವನ ಸ್ವಭಾವಕ್ಕೆ ಅನುಗುಣವಾಗಿ ಪ್ರತಿಯೊಬ್ಬನೂ ತನಗೆ ಸಹಾಯವಾಗುವ ಮಾರ್ಗವನ್ನು ಹುಡುಕಿ ಅದನ್ನು ಅನುಸರಿಸುವುದಕ್ಕೆ ಸ್ವಾತಂತ್ರ್ಯವಿದೆ. ಉದಾಹರಣೆಗೆ ಮಾಂಸಾಹಾರ ಒಬ್ಬನಿಗೆ ಸಹಾಯ ಮಾಡಬಹುದು ಫಲಹಾರ ಮತ್ತೊಬ್ಬನಿಗೆ ಸಹಾಯ ಮಾಡಬಹುದು. ಅವರವರ ವಿಶೇಷವನ್ನು ಅವರು ಇಟ್ಟುಕೊಂಡಿರಬಹುದು. ಆದರೆ ಮತ್ತೊಬ್ಬನನ್ನು ಟೀಕಿಸುವುದಕ್ಕೆ ಅವನಿಗೆ ಅಧಿಕಾರವಿರುವುದಿಲ್ಲ.

ಯಾವುದು ಅವನಿಗೆ ಅನುಕೂಲವೋ ಅದೇ ಮತ್ತೊಬ್ಬನಿಗೆ ಪ್ರತಿಕೂಲವಾಗಿರಬಹುದು. ಅವನ ರೀತಿಯನ್ನು ಉಳಿದವರೂ ಅನುಸರಿಸಬೇಕೆಂಬ ಸ್ವಾರ್ಥಾಂಧವಿರಕೂಡದು. ಕೆಲವರ ಉನ್ನತಿಗೆ ಹೆಂಡತಿಯು ಅನುಕೂಲೆಯಾಗಬಹುದು. ಮತ್ತೆ ಕೆಲವರಿಗೆ ಅವಳು ಅಡ್ಡಿ ಬರಬಹುದು. ಯಾರು ಮದುವೆಯಾಗಿಲ್ಲವೋ ಅವನು ಮದುವೆಯಾದವನನ್ನು ತಪ್ಪುಮಾಡುತ್ತಾನೆ ಎಂದು ಹೇಳಲು ಅಧಿಕಾರವಿಲ್ಲ. ತನ್ನ ನೈತಿಕ ದೃಷ್ಟಿಯನ್ನು ಇತರ ಸಹೋದರರೂ ಅನುಸರಿಸಬೇಕೆಂದು ಬಲವಂತ ಮಾಡಕೂಡದು.

ಪ್ರತಿಜೀವವೂ ಪಾವನವಾದುದು. ಅದು ಬ್ರಹ್ಮಸ್ವರೂಪವೆಂದು ನಾವೆಲ್ಲರೂ ನಂಬುತ್ತೇವೆ. ಪ್ರತಿ ಜೀವವೂ ಕೂಡ ಅಜ್ಞಾನ ಮೋಡಗಳಿಂದ ಕವಿದುಕೊಂಡಿರುವ ಸೂರ್ಯನಂತೆ. ಒಂದು ಜೀವನಿಗೂ, ಮತ್ತೊಂದು ಜೀವನಿಗೂ ಇರುವ ವ್ಯತ್ಯಾಸವೇ ಇದನ್ನು ಮುಚ್ಚಿಕೊಂಡಿರುವ ಮೋಡದಲ್ಲಿದೆ. ಕೆಲವೆಡೆ ಮೇಘದ ಆವರಣ ಮಂದವಾಗಿರುವುದು. ಕೆಲವೆಡೆ ಮೇಘದ ಆವರಣ ತೆಳುವಾಗಿರುವುದು. ತಿಳಿದೋ ತಿಳಿಯದೆಯೋ ಇದು ಸರ್ವಧರ್ಮಗಳ ತಳಹದಿ ಎಂದು ನಾವು ನಂಬುತ್ತೇವೆ. ಭೌತಿಕ, ಮಾನಸಿಕ, ಆಧ್ಯಾತ್ಮಿಕ ಪ್ರಪಂಚದಲ್ಲಿ ಮಾನವನ ಉನ್ನತಿಯ ಸಮಗ್ರ ಚರಿತ್ರೆಗೂ ಇದೇ ವ್ಯಾಖ್ಯಾನ. ಇದೇ ಸಮಾಧಾನ. ಒಂದೇ ಆತ್ಮ ಉಪಾಧಿಗಳ ಭೇದಗಳ ಮೂಲಕ ಪ್ರಕಾಶಿಸುತ್ತಿದೆ.

ಇದೇ ವೇದಗಳ ಸಾರವೆಂಬುದು ನಮ್ಮ ನಂಬಿಕೆ. ಪ್ರತಿಯೊಬ್ಬನೂ ಇತರ ಜೀವಿಗಳನ್ನು ಶಿವನೆಂಬ ದೃಷ್ಟಿಯಿಂದ ನೋಡುವುದು ಅವನ ಕರ್ತವ್ಯ. ಅದರಂತೆ ಆಚರಿಸಬೇಕು. ಇದು ಅವನ ಧರ್ಮ. ಹಾಗಲ್ಲದೆ ಇನ್ನೊಬ್ಬರನ್ನು ದ್ವೇಷಿಸುವುದಾಗಲಿ, ಅಲ್ಲಗಳೆಯುವುದಾಗಲಿ, ನಿಕೃಷ್ಟ ದೃಷ್ಟಿಯಿಂದ ನೋಡುವುದಾಗಲಿ ಅಥವಾ ಇನ್ನಾವ ವಿಧದಿಂದಲೇ ಆಗಲಿ ಹಿಂಸಿಸಕೂಡದೆಂಬುದು ನಮ್ಮ ನಂಬಿಕೆ. ಇದು ಕೇವಲ ಸನ್ಯಾಸಿಗಳ ಧರ್ಮ ಮಾತ್ರವಲ್ಲ. ಪ್ರತಿಯೊಬ್ಬ ಸ್ತ್ರೀ, ಪುರುಷರೂ ಕೂಡ ಇದನ್ನು ಅನುಸರಿಸಬೇಕು.

ಜೀವಕ್ಕೆ ಲಿಂಗವಿಲ್ಲ, ಜಾತಿಯಿಲ್ಲ, ಕಳಂಕರಹಿತವಾದುದು. ವೇದದಲ್ಲಿ ಆಗಲಿ, ಪುರಾಣದಲ್ಲಿ ಆಗಲಿ, ದರ್ಶನದಲ್ಲಿ ಆಗಲಿ, ಅಥವಾ ತಂತ್ರದಲ್ಲಿ

ಆಗಲಿ, ಎಲ್ಲಿಯೂ ಜೀವಕ್ಕೆ ಲಿಂಗ, ಜಾತಿ, ಮತವಿದೆ ಎಂದು ಹೇಳಿಲ್ಲ
ವೆಂಬುದು ನಮ್ಮ ಮತ. ಸಮಾಜಸುಧಾರಣೆಗೂ, ಧರ್ಮಕ್ಕೂ ಏನು
ಸಂಬಂಧವಿಲ್ಲವೆಂದು ಹೇಳುವವರೊಂದಿಗೆ ನಾವು ಒಪ್ಪುತ್ತೇವೆ. ಆದರೆ
ಅವರೂ ಕೂಡ ಸಮಾಜದ ನೀತಿಯನ್ನು ರಚಿಸುವುದಕ್ಕೆ ಧರ್ಮಕ್ಕೆ ಯಾವ
ಅಧಿಕಾರವೂ ಇಲ್ಲವೆಂಬುದರಲ್ಲಿ ನಮ್ಮೊಂದಿಗೆ ಒಪ್ಪಬೇಕು. ಜೀವನದಲ್ಲಿ
ಮೇಲುಕೀಳೆಂಬ ಭಾವನೆಯನ್ನು ಅದು ತರಕೂಡದು. ಧರ್ಮದ
ಗುರಿಯೇ, ಈ ರಾಕ್ಷಸೀಕೃತ್ಯಗಳನ್ನು, ಜಾತಿಮತಗಳೆಂಬ ಮಾಯಾಜಾಲ
ವನ್ನು ಹರಿಯುವುದು.

ಈ ಭೇದಗಳು ಆವಶ್ಯಕವೆಂದೂ, ಇವುಗಳ ಮೂಲಕವೇ ನಾವು
ಚರಮ ಸತ್ಯದೆಡೆಗೆ, ಐಕ್ಯತೆಗೆ ಪ್ರಯಾಣಮಾಡುತ್ತೇವೆಂದೂ, ಅವರು
ವಾದಿಸಬಹುದು. ಆದರೆ ನಾವು ಹೇಳುವುದಿಷ್ಟೆ: ಧರ್ಮವೇ, ಕೊಳೆ
ಯಿಂದ ಕೊಳೆಯನ್ನು ತೊಳೆಯುವುದಕ್ಕೆ ಆಗುವುದಿಲ್ಲ ಎಂದು ಹಲವು
ಬಾರಿ ಸಾರಿದೆ.

ಯಾರಾದರೂ ಪಾಪಕರ್ಮಗಳನ್ನು ಮಾಡಿ ಪುಣ್ಯವಂತನಾಗ
ಬಲ್ಲನೆ? ಸಾಮಾಜಿಕ ನೀತಿಗಳು, ಆರ್ಥಿಕಸ್ಥಿತಿಗೆ ಅನುಸಾರವಾಗಿ
ಧರ್ಮದ ಒಪ್ಪಿಗೆಯೊಂದಿ ನಿಯಮಿತವಾದುವು. ಸಾಮಾಜಿಕ ನೀತಿಗಳಲ್ಲಿ
ತಲೆಹಾಕಿದುದೇ ಧರ್ಮದ ಒಂದು ಘೋರ ಅಪರಾಧ. "ಸಮಾಜ ಸುಧಾ
ರಣೆ ಧರ್ಮದ ಕೆಲಸವಲ್ಲ" ವೆಂದು ನಟಿಸಿ ತನ್ನನ್ನು ತಾನೇ ವಿರೋಧಿಸಿ
ಕೊಂಡಿದೆ ಧರ್ಮ. ಒಳ್ಳೆಯದು. ಧರ್ಮ ಸಮಾಜ ಸುಧಾರಣೆಯಲ್ಲಿ
ಕೈಹಾಕಬಾರದೆಂಬುದೇ, ನಮಗೆ ಬೇಕಾಗಿರುವುದು. ಸಮಾಜ ಸುಧಾ
ರಣೆಯ ನಿಯಮಗಳನ್ನು ವಿಧಿಸುವ ಅಧಿಕಾರವು ಧರ್ಮಕ್ಕೆ ಇಲ್ಲವೆಂದು
ನಾವು ಎತ್ತಿಹೇಳುತ್ತೇವೆ. ಕೈ ತೆಗೆಯಿರಿ. ನಿಮ್ಮ ಹದ್ದಿನಲ್ಲಿ ನೀವಿರಿ.
ಎಲ್ಲವೂ ಸರಿಯಾಗುವುದು.

೧. ಶಿಕ್ಷಣವೆಂದರೆ ಮೊದಲೇ ಮನುಷ್ಯನಲ್ಲಿ ಇರುವ ಪರಿಪೂರ್ಣತೆ
ಯನ್ನು ಪ್ರಕಾಶಪಡಿಸುವುದು.

೨. ಧರ್ಮವೆಂದರೆ ಆಗಲೇ ಮಾನವನಲ್ಲಿ ಅಡಗಿರುವ ಬ್ರಹ್ಮತ್ವ
ವನ್ನು ಪ್ರಕಾಶಪಡಿಸುವುದು.

ಎರಡು ಪ್ರಸಂಗಗಳಲ್ಲಿಯೂ ಗುರುವಿನ ಕರ್ತವ್ಯ ಶಿಷ್ಯನ ವಿಕಾಸಕ್ಕೆ ಇರುವ ಆತಂಕಗಳನ್ನು ತೆಗೆಯುವುದು. ನೀವು ತಡೆಯದೆ ಇರಿ. ನಾನು ಯಾವಾಗಲೂ ಹೇಳುವುದೇ ಇದು. ನಂತರ ಎಲ್ಲಾ ಸರಿ ಹೋಗುತ್ತದೆ. ದಾರಿ ಬಿಡಿಸುವುದುಮಾತ್ರ ನಮ್ಮ ಕರ್ತವ್ಯ. ದೇವರು ಉಳಿದೆಲ್ಲವನ್ನೂ ಮಾಡುವನು.

ಧರ್ಮದ ಕೆಲಸ ಆತ್ಮಕ್ಕೆ ಸಂಬಂಧಪಟ್ಟುದು. ಸಾಮಾಜಿಕ ನೀತಿಗಳಲ್ಲಿ ಕೈಹಾಕಲು ಇದಕ್ಕೆ ಹಕ್ಕಿಲ್ಲವೆಂಬುದನ್ನು ಮಾತ್ರ ನೀವು ಮರೆಯಕೂಡದು. ಹಿಂದೆ ಆಗಿರುವ ಅನರ್ಥಗಳಲ್ಲಿ ಇದು ಹೇಗಿದೆ ಎಂದರೆ ಇನ್ನೊಬ್ಬನ ಆಸ್ತಿಯನ್ನು, ಬಲಾತ್ಕಾರದಿಂದ ಅಪಹರಿಸಿ ಪುನಃ ಅವನು ಅದನ್ನು ತೆಗೆದುಕೊಳ್ಳಲು ಬಂದಾಗ ಮಾನವನ ಹಕ್ಕಿನ ಪವಿತ್ರತೆಯನ್ನು ಕೂಗಿ ಹೇಳುವಂತಿದೆ.

ಪ್ರತಿಯೊಂದು ಸಾಮಾಜಿಕ ವ್ಯವಹಾರದಲ್ಲಿ, ಪುರೋಹಿತನು ಕೈ ಹಾಕುವುದಕ್ಕೆ ಅವನಿಗೆ ಯಾವ ಅಧಿಕಾರವಿದೆ? ಇದರಿಂದ ಕೋಟ್ಯಾನುಕೋಟಿ ಮಾನವರು ದುಃಖಪಡಬೇಕಾಗಿದೆ.

ಮಾಂಸಾಹಾರವನ್ನು ಮಾಡುವ ಕ್ಷತ್ರಿಯರ ವಿಚಾರವನ್ನು ಕುರಿತು ನೀವು ಬರೆಯುತ್ತೀರಿ. ಮಾಂಸಾಹಾರವೋ, ಅಲ್ಲವೋ, ಅದು ನಮಗೆ ಬೇಕಾಗಿಲ್ಲ. ಹಿಂದೂಧರ್ಮದಲ್ಲಿರುವ, ಎಲ್ಲಾ ಉಚ್ಛವಾದ ಮತ್ತು ಅತ್ಯಂತ ಶ್ಲಾಘನೀಯವಾದ ಮಹದಾಲೋಚನೆಗಳ ಮೂಲ ಅವರು. ಉಪನಿಷತ್ತುಗಳನ್ನು ಯಾರು ಬರೆದರು? ರಾಮನು ಯಾರು? ಕೃಷ್ಣನು ಯಾರು? ಬುದ್ಧನು ಯಾರು? ಜೈನಧರ್ಮದ ತೀರ್ಥಂಕರರು ಯಾರು? ಕ್ಷತ್ರಿಯರು ಎಂದು ಧರ್ಮವನ್ನು ಬೋಧಿಸಿದರೋ, ಅವರು ಯಾವಾಗಲೂ, ಎಲ್ಲರಿಗೂ, ಅದನ್ನು ದಾನಮಾಡಿದರು. ಬ್ರಾಹ್ಮಣರು ಎಂದು ಏನು ಬರೆದರೂ ಅದಕ್ಕೆ ಅವರಲ್ಲದೆ ಉಳಿದವರಿಗೆ ಅರ್ಹತೆಯಿಲ್ಲ. ಭಗವದ್ಗೀತೆಯನ್ನು ಮತ್ತು ವ್ಯಾಸನ ಬ್ರಹ್ಮಸೂತ್ರವನ್ನು ಓದಿ. ಅಥವಾ ಯಾರಾದರೂ ನಿಮಗೆ ಓದಿಹೇಳುವಂತೆ ಮಾಡಿ. ಗೀತೆಯಲ್ಲಿ ಮುಕ್ತಿಯ ಪರಮಪದವನ್ನು ಹೊಂದಲು ಎಲ್ಲಾ ಸ್ತ್ರೀಯರಿಗೆ, ಎಲ್ಲಾ ಪುರುಷರಿಗೆ, ಎಲ್ಲಾ ಜಾತಿಮತಗಳವರಿಗೆ ಅಧಿಕಾರವಿದೆ ಎಂದು ಕೃಷ್ಣನು ಸಾರುತ್ತಾನೆ.

ಆದರೆ ವ್ಯಾಸನಾದರೋ, ಪಾಪ, ಶೂದ್ರರನ್ನು ಮೋಸಮಾಡುವುದಕ್ಕೆ, ವೇದಕ್ಕೆ ಅಪಾರ್ಥವನ್ನು ಕಲ್ಪಿಸುತ್ತಾನೆ. ಭಗವಂತನೂ ನಿಮ್ಮಂತೆ ಒಬ್ಬ ಹುಚ್ಚು ಮನುಷ್ಯನೇ! ಹರಿಯುತ್ತಿರುವ ಆತನ ಕೃಪಾ ನದಿಯನ್ನು ಒಂದು ಚೂರು ಮಾಂಸ ತಡೆಗಟ್ಟುವುದೇ! ಹೀಗಿದ್ದಪಕ್ಷದಲ್ಲಿ ಅವನು ಒಂದು ಕುರುಡುಕಾಸೂ ಬೆಲೆಬಾಳಲಾರ!

ನನ್ನಿಂದ ನೀವು ಏನನ್ನೂ ಆಶಿಸಬೇಡಿ. ನಾನು ನಿಮಗೆ ಹಿಂದೆ ಹೇಳಿದಂತೆ, ಭಾರತವರ್ಷದ ಉದ್ಧಾರ ಭಾರತೀಯನಿಂದಲೇ. ಯುವಕ ಸಂತಾನರೆ, ಈ ಹೊಸ ಆದರ್ಶಕ್ಕೆ, ನಿಮ್ಮ ಬಾಳನ್ನು ಅರ್ಪಿಸಿ. ನೂರಾರು ಮಂದಿ ಇದರಲ್ಲಿ ಉನ್ಮತ್ತರಾಗಬಲ್ಲಿರಾ? ಆಲೋಚನೆಮಾಡಿ, ವಿಷಯ ಸಂಗ್ರಹಮಾಡಿ. ಶ್ರೀರಾಮಕೃಷ್ಣರ ಜೀವನ ಚರಿತ್ರೆಯನ್ನು ಬರೆಯಿರಿ. ಪವಾಡಗಳಾವುದನ್ನು ಅಲ್ಲಿ ಸೇರಿಸಬೇಡಿ. ಅವರು ಬೋಧಿಸಿದ ತತ್ವಕ್ಕೆ ದೃಷ್ಟಾಂತವಾಗಿ ಜೀವನವನ್ನು ಬರೆಯಬೇಕು. ಅವರ ಜೀವನ ಮಾತ್ರ ಇರಲಿ. ಅದರಲ್ಲಿ ನನ್ನನ್ನು ಅಥವಾ ಮತ್ತಾವ ಶಿಷ್ಯನನ್ನಾದರೂ ತರಬೇಡಿ. ಅವರು ಮಾಡಿದ ಉಪದೇಶವನ್ನು, ಅವರ ಚರಿತ್ರೆಯ ಮೂಲಕ ಜಗತ್ತಿಗೆ ಕೊಡುವುದು ನಿಮ್ಮ ಮುಖ್ಯಗುರಿಯಾಗಿರಬೇಕು.

ನಾನು ಅಯೋಗ್ಯನಾದರೂ ನನ್ನಿಂದ ಒಂದು ಕಾರ್ಯವಾಗ ಬೇಕಾಗಿತ್ತು. ಅದೇ ನನ್ನ ವಶಕ್ಕೆ ಕೊಟ್ಟ ರತ್ನದ ಪೆಟ್ಟಿಗೆಯನ್ನು ನಿಮಗೆ ತಲಪಿಸುವುದು. ಅದನ್ನು ನಿಮಗೇತಕ್ಕೆ ಕೊಡಬೇಕು? ಕಾರಣವಿಷ್ಟೆ. ಕಪಟಿಗಳು, ಅಸೂಯಾಪರರು, ಗುಲಾಮರು, ಹೇಡಿಗಳು, ಮತ್ತು ಕೇವಲ ಚಾರ್ವಾಕರು ಆದ ಉಳಿದವರು ಏನೂ ಮಾಡಲಾರರು. ಅಸೂಯೆ ಎಂಬುದು ನಮ್ಮದೇಶದ ಹುಟ್ಟುಗುಣ. ಸೇವಕರಿಗೆ ಸಹಜವಾದುದು ಇದು. ಈ ಅಸೂಯೆ, ದ್ವೇಷ ಇಲ್ಲಿ ತುಂಬಿರುವುದರಿಂದಲೇ, ದೇವರಿಗೆ ಅಷ್ಟೊಂದು ಶಕ್ತಿ ಇದ್ದರೂ ಕೂಡ, ಏನೂ ಮಾಡಲಾರ.........

ನನ್ನ ಕರ್ತವ್ಯವೆಲ್ಲವನ್ನೂ ಮಾಡಿ ಈಗ ಕಾಲವಾಗಿ ಮಾಯವಾಗಿ ಹೋಗಿರುವೆನು ಎಂದು ಭಾವಿಸಿ, ಕೆಲಸವೆಲ್ಲ ನಿಮ್ಮ ಹೆಗಲಮೇಲೆ ಬಿದ್ದಿದೆ ಎಂದು ತಿಳಿಯಿರಿ. ನಮ್ಮ ತಾಯಿನಾಡಿನ ಯುವಕರೆ! ಈ ಮಹಾ ಕಾರ್ಯವನ್ನು ಮಾಡಲು ದೇವರು ನಿಮ್ಮನ್ನು ನಿಯಮಿಸಿರುವನು ಎಂದು

ತಿಳಿಯಿರಿ. ಸೊಂಟಕಟ್ಟಿ, ಈ ಪವಿತ್ರ ಕಾರ್ಯಾರಂಭಕ್ಕೆ ದೇವರು ನಿಮ್ಮನ್ನು ಹರಸಲಿ. ನನ್ನನ್ನು ಬಿಡಿ. ಸಂಪೂರ್ಣ ಮರೆತುಬಿಡಿ. ಈ ನವ ಆದರ್ಶವನ್ನು, ಈ ನವ ಸಂಪ್ರದಾಯವನ್ನು, ಈ ನವಜೀವನವನ್ನು ಉಪದೇಶಿಸಿ. ಯಾರನ್ನೂ ನಿಂದಿಸಬೇಡಿ. ಯಾವ ಆಚಾರವನ್ನೂ ಹಳಿಯಬೇಡಿ. ಜಾತಿ ಅಥವಾ ಸಮಾಜದ ಮತ್ತಾವ ಲೋಪದ ಪರವಾಗಿ ಆಗಲೀ, ವಿರೋಧವಾಗಿ ಆಗಲೀ, ಬೋಧನೆಮಾಡಬೇಡಿ. ಕೈತೆಗೆಯಿರಿ, ನೀವು ಅದರತಂಟೆಗೆ ಹೋಗಬೇಡಿ. ಎಲ್ಲಾ ತಾನಾಗಿಯೆ ಸರಿಹೋಗುವುದು. ಧೈರ್ಯಶಾಲಿಗಳೂ, ಸ್ಥೈರ್ಯಶಾಲಿಗಳೂ, ಪ್ರೇಮಪೂರಿತರೂ ಆದ ನಿಮಗೆ ನನ್ನ ಆಶೀರ್ವಾದಗಳು.

ವಿವೇಕಾನಂದ.

೨೧

ಜಾರ್ಜ್, ಡಬ್ಲ್ಯು, ಹೇಲ್,
೫೪೧, ಡಿಯರ್ ಬಾರನ್ ಅವೆನ್ಯೂ, ಚಿಕಾಗೊ.
೧೯ ನೇ ಮಾರ್ಚ ೧೮೯೪.

ಪ್ರಿಯ—,

ನಾನು ಈ ದೇಶಕ್ಕೆ ಬಂದಾಗಿನಿಂದ ನಿನಗೆ ಕಾಗದ ಬರೆಯಲಿಲ್ಲ. ಹರಿದಾಸ ಭಾಯಿಯ ಪತ್ರದಿಂದ ನನಗೆ ಎಲ್ಲಾ ವಿಷಯಗಳೂ ಗೊತ್ತಾಗಿದೆ. ಗಿರೀಶಚಂದ್ರ ಘೋಷ್ ಆದಿಯಾಗಿ ಉಳಿದ ನೀವುಗಳೆಲ್ಲ ಹರಿದಾಸ ಭಾಯಿಯನ್ನು ಬಹಳ ವಿಶ್ವಾಸದಿಂದ ಕಂಡುದು ಬಹಳ ಸಂತೋಷ.

ಈ ದೇಶದಲ್ಲಿ ನನಗೆ ಯಾವ ಕೊರತೆಯೂ ಇಲ್ಲ. ಇಲ್ಲಿ ಭಿಕ್ಷೆ ಮಾಡುವುದು ವಾಡಿಕೆಯೂ ಇಲ್ಲ. ಅದಕ್ಕೇ ನಾನು ಇಲ್ಲಿ ಕೆಲಸಮಾಡಬೇಕಾಗಿದೆ. ಅಂದರೆ ಉಪನ್ಯಾಸಗಳನ್ನು ಕೊಡಬೇಕಾಗಿದೆ. ಇಲ್ಲಿ ಸೆಕೆ ಎಷ್ಟೋ, ಚಳಿಯು ಅಷ್ಟೆ. ಬೇಸಗೆಯಲ್ಲಿ ಬಿಸಿಲು ಕಲ್ಕತ್ತೆಗಿಂತ ಕಡಿಮೆಯೇನೂ ಇಲ್ಲ. ಚಳಿಗಾಲದಲ್ಲಿ ಚಳಿಯನ್ನು ಎಷ್ಟು ವರ್ಣಿಸುವುದು! ಈ ದೇಶದಲ್ಲೆಲ್ಲ ಮೂರು-ನಾಲ್ಕು ಅಡಿಗಳ ಎತ್ತರಕ್ಕೆ ಮಂಜು ಮುತ್ತುವುದು.

ಕೆಲವು ಕಡೆ ಆರು-ಏಳು ಅಡಿಗಳ ಎತ್ತರಕ್ಕೆ ಇರುವುದು! ದಕ್ಷಿಣದಲ್ಲಿ ಹಿಮ ಬೀಳುವುದಿಲ್ಲ. ಇಲ್ಲಿ ಹಿಮವೇನೂ ಒಂದು ದೊಡ್ಡ ವಿಷಯವಲ್ಲ. ಸೊನ್ನೆಯ ಮೇಲೆ ೩೨ ಡಿಗ್ರಿ [ಫ್ಯಾರನ್ ಹೀಟ್] ಉಷ್ಣವಿರುವಾಗಲೇ ಹಿಮ ಬೀಳುತ್ತದೆ. ಕಲ್ಕತ್ತೆಯಲ್ಲಿ ಸೊನ್ನೆಯ ಮೇಲೆ ೬೦ ಡಿಗ್ರಿ ಇರುತ್ತದೆ. ಯಾವಾಗಲೂ ಇಂಗ್ಲೆಂಡಿನಲ್ಲಿ ಸೊನ್ನೆಯ ಸಮೀಪಕ್ಕೆ ಬಹಳ ಅಪರೂಪವಾಗಿ ಹೋಗುತ್ತದೆ. ಇಲ್ಲಾದರೊ ಕೆಲವು ವೇಳೆ ಸೊನ್ನೆಯ ಕೆಳಗೆ ೪೦ ಡಿಗ್ರಿಗಳಷ್ಟು ಹೋಗುತ್ತದೆ. ಉತ್ತರದಲ್ಲಿ ಕೆನಡಾ ದೇಶದಲ್ಲಿ, ಉಷ್ಣಮಾಪಕದ ಪಾದರಸ ಘನೀಭೂತವಾಗುತ್ತದೆ. ಆಗ ಅವರು ಆಲ್ಕೋಹಾಲ್ (ಮದ್ಯರಸ) ಉಷ್ಣಮಾಪಕವನ್ನು ಉಪಯೋಗಿಸುವರು. ಇಲ್ಲಿ ಉಷ್ಣಮಾಪಕದ ಪಾದರಸ ಸೊನ್ನೆಯ ಕೆಳಗೆ ೨೦ ಡಿಗ್ರಿ ಇರುವಾಗ, ಬಹಳ ಚಳಿಯಾದರೂ ಹಿಮ ಬೀಳುವುದಿಲ್ಲ. ಬಹಳ ಚಳಿಯಾಗುವಾಗ ಹಿಮ ಬೀಳುವುದೆಂದು ನಾನು ಮೊದಲು ಯೋಚಿಸಿದ್ದೆ. ಆದರೆ ಹಾಗಿಲ್ಲ. ಸಾಧಾರಣ ಶಾಖವಿರುವ ದಿನಗಳಲ್ಲೂ ಹಿಮ ಬೀಳುವುದು. ವಿಪರೀತ ಚಳಿ ಒಂದು ತರಹ ಮತ್ತನ್ನು ಉಂಟುಮಾಡುವುದು. ಗಾಡಿಗಳು ಯಾವುವೂ ನೆಲದಮೇಲೆ ಹೋಗಲು ಆಗುವುದಿಲ್ಲ. ಚಕ್ರವಿಲ್ಲದ ಗಾಡಿಗಳು ಹಿಮದ ಮೇಲೆ ಜಾರಿಕೊಂಡು ಹೋಗುವುವು. ನದಿನಾಲೆ, ಸರೋವರಗಳ ಮೇಲೆಲ್ಲ ಒಂದು ಆನೆಕೂಡ ನಡೆದುಕೊಂಡು ಹೋಗಬಹುದು. ಎಲ್ಲ ಅಷ್ಟು ಗಟ್ಟಿಯಾಗಿ ಘನೀಭೂತವಾಗಿ ಹೋಗುವುದು. ಅಷ್ಟು ವೇಗದಿಂದ ಧುಮುಕುವ ಆ ನಯಾಗರ ಜಲಪಾತ ಕೂಡ ಅಮೃತಶಿಲೆಯಂತೆ ಘನೀಭೂತವಾಗುವುದು! ಆದರೆ ನಾನು ಆರೋಗ್ಯದಿಂದ ಇರುವೆನು. ಮೊದಲು ನನಗೆ ಸ್ವಲ್ಪ ಅಂಜಿಕೆಯಾಯಿತು. ಆದರೆ ನಂತರ ಆವಶ್ಯಕತೆ ಇದ್ದುದರಿಂದ ಒಂದು ದಿನ ರೈಲ್ವೆಯಲ್ಲಿ ಕೆನಡಾ ದೇಶದ ಸಮೀಪಕ್ಕೆ ಮತ್ತೊಂದು ದಿನ ದಕ್ಷಿಣ ಅಮೇರಿಕಾದಲ್ಲಿ ಉಪನ್ಯಾಸಮಾಡುವುದಕ್ಕೆ ಹೋಗುತ್ತೇನೆ. ರೈಲ್ ಗಾಡಿಯ ಒಳಗಡೆ ಚಳಿಕಾಟದಿಂದ ಪಾರಾಗಲು ಮನೆಯಲ್ಲಿರುವಂತೆ ಉಗಿ ಕೊಳವಿಯಿಂದ ಬೆಚ್ಚಗೆ ಮಾಡಿರುವರು. ಸುತ್ತಲೂ ಧವಳ ಹಿಮರಾಶಿ. ಆ ಸೌಂದರ್ಯವನ್ನೇನು ಬಣ್ಣಿಸುವುದು.

ನನ್ನ ಮೂಗು ಮತ್ತು ಕಿವಿಗಳು ಬಿದ್ದುಹೋಗಬಹುದೆಂದು ತುಂಬ ಅಂಜಿಕೆಯಾಗಿತ್ತು. ಆದರೆ ಇಂದಿನ ವರೆವಿಗೂ ಅವು ಭದ್ರವಾಗಿರುವುವು. ಒಂದರ ಮೇಲೊಂದು ಬೆಚ್ಚನೆಯ ಹೊದಿಕೆ, ಅದರ ಮೇಲೆ ಕೂದಲಿರುವ ಚರ್ಮದ ಕೋಟು, ಬೂಟ್ಸು, ಅದರ ಮೇಲೆ ಉಣ್ಣೆಯ ಬೂಟ್ಸು, ಇಷ್ಟು ತೊಟ್ಟು ಹೊರಗೆ ಹೋಗಬೇಕು. ಉಸಿರುಬಿಡುವುದೇ ತಡ, ಅದು ಗಡ್ಡ ಮೀಸೆಗಳ ಮೇಲೆಬಿದ್ದು ಘನೀಭೂತವಾಗುವುದು! ಇದು ಇಷ್ಟಾದರೂ ಇಲ್ಲಿಯ ತಪಮಾನ ವಿಷಯವೇನೆಂದು ಕೇಳುವೆ! ಇಲ್ಲಿ ಜನರು ಒಳಗೆ ನೀರು ಕುಡಿಯುವಾಗ ಮಂಜುಗಡ್ಡೆ ಹಾಕದೆ ಕುಡಿಯು ವುದಿಲ್ಲ. ಇದು ಏಕೆಂದರೆ ಕೋಣೆಯ ಒಳಗೆ ಶಾಖವಾಗಿರುವುದು. ಪ್ರತಿಯೊಂದು ಕೋಣೆಯನ್ನು ಮತ್ತು ಮಹಡಿಗೆ ಹತ್ತುವ ಮೆಟ್ಟಲು ಗಳನ್ನು ಆವಿಯಿಂದ ತುಂಬಿದ ಕೊಳವೆಗಳ ಮೂಲಕ, ಶಾಖವಾಗಿಟ್ಟಿರುವರು. ಕಲಾ ಕೌಶಲ್ಯದಲ್ಲಿ, ಭೋಗವಿಲಾಸದಲ್ಲಿ ಇಲ್ಲಿಯ ಜನರು ಅಗ್ರಗಣ್ಯರು. ಹಣ ಸಂಪಾದನೆಮಾಡುವುದರಲ್ಲಿ ಇವರ ಮುಂದೆ ಯಾರೂ ಇಲ್ಲ. ವ್ಯಯಮಾಡುವುದರಲ್ಲೂ ಇವರ ಮುಂದೆ ಯಾರೂ ಇಲ್ಲ. ಒಬ್ಬ ಕೂಲಿಯವನಿಗೆ ಇಲ್ಲಿ ಒಂದು ದಿವಸಕ್ಕೆ ಆರು ರೂಪಾಯಿಗಳನ್ನು ಕೊಡ ಬೇಕು. ಅದರಂತೆಯೇ ಉಳಿದ ಆಳುಗಳಿಗೆ ಸಂಬಳ ಕೂಡ. ಮೂರು ರೂಪಾಯಿಗೆ ಕಡಿಮೆ. ಗಾಡಿ ಹತ್ತುವುದಕ್ಕೇ ಆಗುವುದಿಲ್ಲ. ನಾಲ್ಕು ಆಣೆಗೆ ಕಡಿಮೆ ಒಂದು ಕಡ್ಡಿಯ ಚುಟ್ಟ ಸಿಕ್ಕುವುದಿಲ್ಲ. ಸ್ವಲ್ಪ ಸಾಧಾ ರಣವಾದ ಒಂದು ಜೊತೆ ಜೋಡಿಗೆ ಇಪ್ಪತ್ತೈದು ರೂಪಾಯಿಗಳು ಆಗುತ್ತದೆ. ಒಂದು ಪೋಷಾಕಿಗೆ ೫೦೦ ರೂಪಾಯಿಗಳು. ಹೇಗೆ ಸಂಪಾದನೆಮಾಡುತ್ತಾರೋ ಹಾಗೆಯೇ ಖರ್ಚುಮಾಡುವರು. ಎರಡು ನೂರು ರೂಪಾಯಿಗಳಿಂದ ಮೂರುಸಾವಿರ ರೂಪಾಯಿಗಳ ವರೆಗೆ ಒಂದು ಉಪನ್ಯಾಸಕ್ಕೆ ಸಿಕ್ಕುವುದು. ನನಗೆ ಐದುನೂರು ರೂಪಾಯಿಗಳ ವರೆಗೆ ಸಿಕ್ಕಿರುವುದು. ನಿಜವಾಗಿಯೂ ಈಗ ನನ್ನ ಅದೃಷ್ಟ ಕುಲಾಯಿಸಿದೆ. ಇಲ್ಲಿ ಜನರಿಗೆ ನನ್ನಲ್ಲಿ ಅಭಿಲಾಷೆ. ಸಾವಿರಾರು ಜನ ನನ್ನ ಉಪನ್ಯಾಸ ವನ್ನು ಕೇಳುವುದಕ್ಕೆ ಬರುತ್ತಾರೆ.

ದೇವರ ಇಚ್ಛೆಯಂತೆ ಇಲ್ಲಿ ಮೊದಲು ನಾನು—ಅವರನ್ನು ಕಂಡೆ. ಮೊದಲು ನನ್ನೊಡನೆ ವಿಶ್ವಾಸದಿಂದ ಇದ್ದರು. ಆದರೆ ಎಂದು ಚಿಕಾಗೊ ಜನಸಂದಣಿ ತಂಡತಂಡವಾಗಿ ನನ್ನೆಡೆಗೆ ಬರಲು ಮೊದಲಾಯಿತೊ ಅಂದಿನಿಂದ ಅವರ ಮನಸ್ಸಿನಲ್ಲಿ ಅಸೂಯೆ ಹುಟ್ಟಲು ಪ್ರಾರಂಭ ವಾಯಿತು. ಇಲ್ಲಿಯ ಪಾದ್ರಿಗಳು ನನ್ನನ್ನು ಅಡಗಿಸಲು ವಿಶ್ವಪ್ರಯತ್ನ ಪಟ್ಟರು. ಆದರೆ ಗುರುದೇವನು ನನ್ನ ಕಡೆಗೆ ಇರುವನು. ಯಾರು ಏನು ಮಾಡಬಲ್ಲರು? ಒಟ್ಟು ಅಮೇರಿಕಾ ಜನರೇ ನನ್ನನ್ನು ಪ್ರೀತಿಯಿಂದ ಆದರಿಸುತ್ತಾರೆ. ನನ್ನನ್ನು ಗುರುಭಾವದಿಂದ ಕಾಣುತ್ತಾರೆ. ನನ್ನ ಖರ್ಚೆಲ್ಲ ವನ್ನೂ ಕೊಡುತ್ತಾರೆ. ನನಗೆ ವಿರೋಧವಾಗಿ ಏನುಮಾಡುವುದಕ್ಕೂ ನಿಮ್ಮ ಪುರೋಹಿತರ ಕೈಯ್ಯಲ್ಲಿ ಆಗಲಿಲ್ಲ. ಇಲ್ಲಿಯ ಜನರು ಬುದ್ಧಿವಂತರು. "ವಿಗ್ರಹಾರಾಧಕರು ನಾವಲ್ಲ." "ನಮ್ಮ ವಿಧವೆಯರಿಗೆ ಪುನಃ ಮದುವೆ ಮಾಡುತ್ತೇವೆ" ಎಂದರೆ ಸಾಲದು. ಅವರಿಗೆ ಬೇಕಾಗಿರುವುದು ವಿಚಾರ ಪೂರಿತವಾದ ತತ್ತ್ವಶಾಸ್ತ್ರ, ಒಣಮಾತು ಇಲ್ಲಿ ಸಾಗದು.

ದ....ಒಳ್ಳೆಯ ಹುಡುಗ. ಅಷ್ಟೇನೂ ವಿದ್ಯಾವಂತನಲ್ಲ. ಆದರೆ ಬಹಳ ಸಾಧುಸ್ವಭಾವವುಳ್ಳವನು. ಈ ದೇಶದಲ್ಲಿ ಜನರಿಗೆ ಅವನ ಮೇಲೆ ಬಹಳ ವಿಶ್ವಾಸವಿತ್ತು.

ಸಹೋದರನೆ, ನನಗೆ ಬುದ್ಧಿ ಬಂದಿದೆ. "ಸುಮ್ಮ ಸುಮ್ಮನೆ ಇತರರ ಅಭಿವೃದ್ಧಿಗೆ ಅಡ್ಡಿಮಾಡುವವರು ಎಂತಹವರೋ ನಾವು ಅರಿಯೆವು." ನಾವು ಎಲ್ಲದರಿಂದಲೂ ಪಾರಾಗಬಹುದು. ಆದರೆ ಈ ಹೊಟ್ಟೆಕಿಚ್ಚನ್ನು ಬಿಡಲು ಸಾಧ್ಯವಿಲ್ಲ. ಇನ್ನೊಬ್ಬನನ್ನು ನಿಂದಿಸುವುದು, ಮತ್ತೊಬ್ಬರ ಅಭಿವೃದ್ಧಿಯನ್ನು ನೋಡಿ ಕರುಬುವುದು, ನನ್ನದೇ ದೊಡ್ಡಸ್ತಿಕೆ, ಇತರರು ದೊಡ್ಡವರಾಗಕೂಡದು! ಇದೆಲ್ಲ ನಮ್ಮ ದೇಶದ ಹುಟ್ಟುಗುಣ.

ಜಗತ್ತಿನ ಯಾವ ಎಡೆಯಲ್ಲೂ ಸ್ತ್ರೀಯರು ಇಲ್ಲಿನಂತೆ ಇಲ್ಲ. ಎಷ್ಟು ಸರಳಹೃದಯರು! ಎಷ್ಟು ಸ್ವತಂತ್ರರು! ಎಷ್ಟು ಆತ್ಮಾವಲಂಬಿ ಗಳು! ಎಷ್ಟು ದಯಾಳುಗಳು! ಈ ದೇಶದ ಜೀವಾಳ ಸ್ತ್ರೀಯರೆ! ವಿದ್ಯೆ, ಬುದ್ಧಿ ಎಲ್ಲವೂ ಇವರಡೆ. "ಯಾ ಶ್ರೀಃ ಸ್ವಯಂ ಸುಕೃತಿನಾಂ ಭವನೇಷು" ಪುಣ್ಯವಂತರ ಮನೆಗಳಲ್ಲಿ ಯಾರು ಲಕ್ಷ್ಮೀ ಸ್ವರೂಪರಾಗಿರುವರೋ

ಎಂಬುದು ಇವರಿಗೆ ಸಲ್ಲುತ್ತವೆ. "ಪಾಪಾತ್ಮನಾಂ ಹೃದಯೇಷ್ವ ಲಕ್ಷ್ಮೀಃ" ಪಾಪಾತ್ಮರ ಹೃದಯದಲ್ಲಿ ಅಲಕ್ಷ್ಮೀ ಎಂಬುದು ನಮಗೆ ಸಲ್ಲುತ್ತದೆ. ಇವುಗಳನ್ನು ಆಲೋಚನೆಮಾಡಿ ನೋಡು. ಅಬ್ಬ ದೇವರೆ! ಅಮೇರಿಕಾ ನಾರಿಯರನ್ನು ನೋಡಿ ನಾನು ವಿಸ್ಮಯದಿಂದ ಮೂಕನಾಗಿದ್ದೇನೆ. "ತ್ವಂ ಸ್ತ್ರೀ ತ್ವಂ ಈಶ್ವರಿ, ತ್ವಂ ಹ್ರೀಃ" ನೀನೇ ಲಕ್ಷ್ಮೀ, ನೀನೇ ಈಶ್ವರಿ, ನೀನೇ ಲಜ್ಜಾಸ್ವರೂಪಿಣಿ "ಯಾ ದೇವಿ ಸರ್ವಭೂತೇಷು ಶಕ್ತಿರೂಪೇಣ ಸಂಸ್ಥಿತಾ" ಯಾವ ದೇವಿಯು ಸರ್ವಭೂತಗಳಲ್ಲಿಯೂ ಶಕ್ತಿಸ್ವರೂಪಿಣಿಯಾಗಿರುವಳೋ, ಇದೆಲ್ಲ ಇಲ್ಲಿಗೆ ತೋರುತ್ತದೆ. ಈ ದೇಶದ ಹಿಮದಷ್ಟು ಬಿಳುಪೂ, ಶುದ್ಧವೂ ಆದ ಸಾವಿರಾರು ಮಂದಿ ನಾರಿಯರು ಇಲ್ಲಿರುವರು. ನಮ್ಮ ಹುಡುಗಿಯರನ್ನು ನೋಡಿ. ಬಾಲ್ಯದಲ್ಲಿಯೇ ಮಕ್ಕಳ ತಾಯಿಯರಾಗುವುದನ್ನು! ಅಯ್ಯೋ ದೇವರೆ! ನನಗೆ ಈಗ ಎಲ್ಲ ಹೊಳೆಯುವುದು. ಸಹೋದರನೇ, "ಯತ್ರನಾರ್ಯಸ್ತು ಪೂಜ್ಯಂತೆ ನಂದಂತೆ ತತ್ರದೇವತಾಃ" ಎಲ್ಲಿ ಸ್ತ್ರೀಯರು ತೃಪ್ತರಾಗಿರುವರೋ ಅಲ್ಲಿ ದೇವತೆಗಳೂ ತೃಪ್ತರಾಗಿರುವರು, ಎಂದು ಮನು ಹೇಳಿರುವನು. ನಾವು ಪಾಪಾಧಮರು. ನಮ್ಮ ಅಧೋಗತಿಗೆ ಕಾರಣ ಸ್ತ್ರೀಯರನ್ನು "ತುಚ್ಛವಾದ ಕೀಟಗಳು" "ನರಕಕ್ಕೆ ಮಾರ್ಗ" ಎಂದು ಹಳಿದುದೆ. ಅಬ್ಬ! ಸ್ವರ್ಗಕ್ಕೂ ನರಕಕ್ಕೂ ಇದೇ ಭೇದ. "ಯಥಾ ತಥ್ಯತೋಽರ್ಥಾನ್ ವ್ಯದಧಾತಿ" "ಯೋಗ್ಯತೆಗೆ ತಕ್ಕಂತೆ ಅವನು ಫಲವನ್ನು ವಿಧಿಸುತ್ತಾನೆ." ಆದರೆ ನಾವಾದರೋ "ದೂರಮಪಸರ ರೇ ಚಂಡಾಲ" (ಹೇ ಚಂಡಾಲ, ದೂರ ಸರಿ!) "ಕೇನೈಷಾ ನಿರ್ಮಿತಾ ನಾರೀ ಮೋಹಿನೀ" (ಈ ಮೋಹಿನಿಯಾದ ನಾರಿಯನ್ನು ಯಾರು ನಿರ್ಮಿಸಿದವರು?"). ನನ್ನ ಸಹೋದರನೇ, ದಕ್ಷಿಣ ಇಂಡಿಯಾದಲ್ಲಿ ಮೇಲಿನ ವರ್ಗದವರು ಕೆಳಗೆ ಇರುವವರಿಗೆ ಕೊಡುವ ಅತ್ಯಾಚಾರವನ್ನು ಏನೆಂದು ಹೇಳಲಿ! ಗುಡಿಯ ಒಳಗೆ ಕುಣಿತ ನೃತ್ಯ ಸಂಗೀತಗಳು! ದರಿದ್ರರ ದುಃಖವನ್ನು ಪರಿಹರಿಸದ, ಮಾನವನನ್ನು ದೇವನ ಸಮಾನನನ್ನಾಗಿ ಮಾಡದ ಧರ್ಮ ಧರ್ಮವೇನಯ್ಯ! ನಮ್ಮ ಧರ್ಮದ ಹೆಸರಿಗಾದರೂ ಇದು ಕೀರ್ತಿ ತರುತ್ತದೆಯೆ? ಮುಟ್ಟಬೇಡ ಎಂಬುದೇ ನಮ್ಮ ಧರ್ಮ. ಮುಟ್ಟಬೇಡ, ಮುಟ್ಟಬೇಡ ಎಂಬ ಗಾಯತ್ರಿ

ಯೊಂದನ್ನೇ ನಾವು ಯಾವಾಗಲೂ ಹಾಡುತ್ತಿರುವುದು. ಅಯ್ಯೋ ದೇವರೆ! ಕಳೆದ ಎರಡು ಸಾವಿರ ವರ್ಷಗಳಿಂದಲೂ ಬಲಗೈಯಿಂದ ಊಟ ಮಾಡುವುದೆ, ಎಡಗೈಯಿಂದ ಊಟಮಾಡುವುದೆ, ನೀರನ್ನು ಎಡಗಡೆ ಯಿಂದ ತೆಗೆದುಕೊಳ್ಳುವುದೋ ಅಥವಾ ಬಲಗಡೆಯಿಂದ ತೆಗೆದುಕೊಳ್ಳು ವುದೋ ಎಂಬ ಮಹಾ ಪ್ರಶ್ನೆಗಳನ್ನು ಚರ್ಚೆಮಾಡುತ್ತಿರುವರು. ಇಂತಹ ದೇಶ ನಾಶವಾಗದೆ ಇದ್ದರೆ ಮತ್ತಾವದೇಶ ನಾಶವಾಗುವುದು! "ಕಾಲಃ ಸುಪ್ತೇಷು ಜಾಗರ್ತಿ ಕಾಲೋಹಿ ದುರತಿಕ್ರಮಃ" ಸಕಲರೂ ನಿದ್ದೆ ಮಾಡುವಾಗ ಕಾಲಮಾತ್ರ ಎಚ್ಚೆತ್ತಿರುತ್ತದೆ. ಕಾಲವನ್ನು ಅತಿಕ್ರಮಿಸು ವುದು ಕಷ್ಟ. ಇದು ದೇವರಿಗೆ ಗೊತ್ತು. ಅವನ ಕಣ್ಣಿಗೆ ಯಾರು ಮಣ್ಣು ಹಾಕುವವರು!

ಭರತ ಖಂಡದಲ್ಲಿ ಬಹಳ ಮಂದಿ ಮಹುವಾ ಹೂವನ್ನು ತಿಂದು ಜೀವಿಸುವರು. ಸುಮಾರು ಹತ್ತು-ಇಪ್ಪತ್ತು ಲಕ್ಷ ಸಾಧು ಸಂತರು ಮತ್ತು ಅನೇಕ ಕೋಟಿ ಬ್ರಾಹ್ಮಣರು ಬಡವರ ರಕ್ತವನ್ನು ಹೀರುತ್ತಿರುವರು. ಅವರನ್ನು ಮೇಲೆತ್ತುವುದಕ್ಕೆ ಸ್ವಲ್ಪವೂ ಶ್ರಮಪಡುವುದಿಲ್ಲ. ಇದು ಒಂದು ದೇಶವೊ ಅಥವಾ ನರಕದ ಪೀಡೆಯೋ? ಅಲ್ಲಿರುವುದು ಧರ್ಮವೊ ಅಥವಾ ಪಿಶಾಚಿಯ ನೃತ್ಯವೊ? ನನ್ನ ಸಹೋದರನೇ, ನೀನು ಇದನ್ನು ಕೂಲಂಕಷ ವಾಗಿ ವಿಚಾರಮಾಡಬೇಕಾಗಿದೆ. ನಾನು ಭರತ ಖಂಡವನ್ನೆಲ್ಲ ಸಂಚರಿಸಿ ದ್ದೇನೆ. ಅಮೇರಿಕಾ ದೇಶವನ್ನು ನೋಡಿರುವೆನು. ಕಾರಣವಿಲ್ಲದೆ ಕಾರ್ಯ ವುಂಟೆ, ಪಾಪವಿಲ್ಲದೆ ಶಿಕ್ಷೆಯುಂಟೆ?

ಸರ್ವಶಾಸ್ತ್ರಪುರಾಣೇಷು ವ್ಯಾಸಸ್ಯ ವಚನಂಧ್ರುವಂ ।
ಪರೋಪಕಾರಸ್ತು ಪುಣ್ಯಾಯ, ಪಾಪಾಯ ಪರಪೀಡನಂ ॥

ಸಕಲ ಶಾಸ್ತ್ರ ಪುರಾಣಗಳಲ್ಲಿಯೂ ವ್ಯಾಸರ ಮಾತು ಸತ್ಯ. ಪರೋಪ ಕಾರದಿಂದ ಪುಣ್ಯ, ಪರಪೀಡನೆಯಿಂದ ಪಾಪ ಬರುವುದು. ಇದು ಸತ್ಯ ವಲ್ಲವೆ?

ಸಹೋದರನೆ, ಇವುಗಳೆಲ್ಲವನ್ನೂ ನೋಡಿ, ಅದರಲ್ಲೂ ಬಡತನ ಮೌಢ್ಯತೆಗಳನ್ನು ಕಂಡು ನನಗೆ ನಿದ್ರೆಬರಲಿಲ್ಲ. ಕನ್ಯಾಕುಮಾರಿಯಲ್ಲಿ

ಭಾರತವರ್ಷದ ಕೊನೆಯ ಕಲ್ಲುಬಂಡೆಯಮೇಲೆ ಕುಳಿತಾಗ ನನಗೆ ಒಂದು ಆಲೋಚನೆ ಹೊಳೆಯಿತು. ನಮ್ಮಂತೆ ಅನೇಕ ಸನ್ಯಾಸಿಗಳು ಸಂಚಾರ ಮಾಡುತ್ತ ಜನರಿಗೆ ತತ್ವಬೋಧೆಯನ್ನು ಮಾಡುತ್ತೇವೆ, ಅಲ್ಲವೆ! ಇದೆಲ್ಲ ಹುಚ್ಚುತನ! "ಹಸಿದವರಿಗೆ ಧರ್ಮ ಹಿಡಿಯದು" ಎಂದು ನಮ್ಮ ಗುರುದೇವನು ಹೇಳುತ್ತಿರಲಿಲ್ಲವೆ. ಬಡವರು ಪಶುಗಳಂತೆ ಜೀವಿಸುತ್ತಿರುವರು. ಇದಕ್ಕೆ ಅಜ್ಞಾನವೆ ಕಾರಣ. ಅನೇಕ ಶತಮಾನಗಳಿಂದ ನಾವು ಅವರ ರಕ್ತವನ್ನು ಹೀರುತ್ತಿರುವೆವು. ಅವರನ್ನು ಕಾಲಿನಿಂದ ತುಳಿಯುತ್ತಿರುವೆವು.

ಪರಹಿತವನ್ನು ಬಯಸುವ, ಸ್ವಾರ್ಥಶೂನ್ಯರಾದ ಕೆಲವು ಸನ್ಯಾಸಿಗಳು ಗ್ರಾಮಸಂಚಾರಹೊರಟು, ವಿದ್ಯಾಪ್ರಚಾರಮಾಡುತ್ತ, ಭೂಪಟ, ಮಾಯಾದೀಪ, ಕೃತಕ ಗೋಳ ಇವೇ ಮುಂತಾದ ಉಪಕರಣಗಳ ಮೂಲಕ, ಉತ್ತಮರಿಂದ ಹಿಡಿದು ಚಂಡಾಲರವರೆಗೆ ತಿಳುವಳಿಕೆಯನ್ನು ಹರಡುತ್ತ ಸಕಲರ ಮೇಲ್ಮೆಗಾಗಿ ಪ್ರಯತ್ನಪಟ್ಟಲ್ಲಿ ಅದರಿಂದ ಕಾಲಾನುಕಾಲಕ್ಕೆ ಕಲ್ಯಾಣ ಉಂಟಾಗದೆ? ನನ್ನ ಮನಸ್ಸಿನಲ್ಲಿರುವ ಹಂಚಿಕೆಯನ್ನೆಲ್ಲಾ ಈ ಒಂದು ಪತ್ರದಲ್ಲಿ ಬರೆಯಲಾರೆ. ಒಟ್ಟೀನೊಂದರೆ ಮಹಮ್ಮದನ ಬಳಿ ಬೆಟ್ಟ ಬಾರದೇ ಇದ್ದರೆ ಮಹಮ್ಮದನು ಬೆಟ್ಟದ ಬಳಿ ಹೋಗಬೇಕು. ಪಾಠಶಾಲೆಗಳಿಗೆ ಬಡವರು ಬರುವುದು ಸಾಧ್ಯವಿಲ್ಲ. ಕಾವ್ಯ ಮುಂತಾದುವುಗಳನ್ನು ಅವರು ಓದುವುದರಿಂದ ಅವರಿಗೆ ಅಷ್ಟೇನೂ ಲಾಭವಾಗುವುದಿಲ್ಲ. ನಾವು ಜನಾಂಗದ ವ್ಯಕ್ತಿತ್ವವನ್ನು ಕಳೆದುಕೊಂಡಿರುವೆವು. ಅದೇ ಭರತಖಂಡದಲ್ಲಿ ಎಲ್ಲಾ ವಿಪತ್ತಿಗೂ ಕಾರಣ. ಕಳೆದುಕೊಂಡ ವ್ಯಕ್ತಿತ್ವವನ್ನು ದೇಶಕ್ಕೆ ಪುನಃ ಕೊಡಬೇಕು. ಹಿಂದೆ ಬಿದ್ದವರನ್ನು ಉದ್ಧರಿಸಬೇಕು. ಹಿಂದೂಗಳು, ಮಹಮ್ಮದೀಯರು, ಕ್ರೈಸ್ತರು ಎಲ್ಲರೂ ಅವರನ್ನು ತುಳಿದಿರುವರು. ಅವರನ್ನು ಉದ್ಧಾರಮಾಡುವ ಶಕ್ತಿ ಒಳಗಿನಿಂದಲೇ ಬರಬೇಕು. ಅಂದರೆ ಆಚಾರಶೀಲರಾದ ಹಿಂದೂಗಳಿಂದಲೇ ಬರಬೇಕು. ಪ್ರತಿಯೊಂದು ದೇಶದಲ್ಲಿಯೂ ದೋಷಗಳಿವೆ. ಅವು ಧರ್ಮದಿಂದ ಆದವುಗಳಲ್ಲ; ಧರ್ಮಪರಿಪಾಲನೆಗೆ ವಿರೋಧವಾಗಿವೆ.

ಇದರ ಪರಿಹಾರಕ್ಕೆ, ಮೊದಲು ನಮಗೆ ಬೇಕಾಗಿರುವುದು ಜನ, ನಂತರ ಹಣ. ಪ್ರತಿಯೊಂದು ಊರಿನಿಂದಲೂ ಹತ್ತು ಹದಿನೈದು ಜನರು

ಗುರುದೇವನ ಕೃಪೆಯಿಂದ ಸಿಕ್ಕುವರು ಎಂದು ಭಾವಿಸಿದ್ದೆನು. ನಂತರ ಹಣವನ್ನು ಶೇಖರಿಸುವುದಕ್ಕಾಗಿ ಹೊರಟೆನು. ಭರತಖಂಡದ ಜನರು ದುಡ್ಡನ್ನು ಖರ್ಚುಮಾಡುತ್ತಾರೆಂದು ತಿಳಿದಿರುವಿರೇನು? ಸ್ವಾರ್ಥ ಪರತೆಯ ಮೂರ್ತಿಗಳು—ಅವರು. ಏನಾದರೂ ಖರ್ಚುಮಾಡುವರೆ? ಅದಕ್ಕೋಸ್ಕರವೇ ನಾನೇ ಹಣವನ್ನು ಸಂಪಾದನೆ ಮಾಡುವುದಕ್ಕಾಗಿ ಅಮೇರಿಕಾದೇಶಕ್ಕೆ ಬಂದಿರುವೆನು. ನಂತರ ನನ್ನ ದೇಶಕ್ಕೆ ಹಿಂತಿರುಗಿ, ನನ್ನ ಜೀವನದ ಮುಖ್ಯ ಉದ್ದೇಶಸಿದ್ಧಿಗೆ ಉಳಿದ ಆಯುಷ್ಯವನ್ನು ಸವೆಸುವೆನು.

ನಮ್ಮ ದೇಶದಲ್ಲಿ ಸಮಾಜದ ಮೇಲ್ಮೆಯ ಗುಣಗಳಿಗೆ ಎಷ್ಟು ಅಭಾವವೋ, ಇಲ್ಲಿ ಆಧ್ಯಾತ್ಮಿಕವಿದ್ಯೆಗೆ ಅಷ್ಟು ಅಭಾವ. ನಾನು ಅವರಿಗೆ ಆಧ್ಯಾತ್ಮಿಕ ವಿದ್ಯೆಯನ್ನು ಕಲಿಸುತ್ತೇನೆ. ಅವರು ನನಗೆ ಹಣವನ್ನು ಕೊಡುತ್ತಾರೆ. ನನ್ನ ಬಯಕೆ ಸಿದ್ಧಿಸಬೇಕಾದರೆ ಎಷ್ಟು ದಿನಗಳು ಹಿಡಿಯುವುದೋ ಯಾರಿಗೆ ಗೊತ್ತು. ಇಲ್ಲಿಯ ಜನ ಆಶಾಢ ಭೂತಿಗಳಲ್ಲ. ಇವರಲ್ಲಿ ಅಸೂಯೆ ಎಂಬುದು ಲವಲೇಶವೂ ಇಲ್ಲ. ಹಿಂದೂ ಸ್ಥಾನದಲ್ಲಿ ನಾನು ಯಾರನ್ನೂ ನೆಚ್ಚುವುದಿಲ್ಲ. ನನಗೆ ಬೇಕಾದುದನ್ನು ಗಳಿಸುವುದಕ್ಕೆ ನಾನೇ ನನ್ನ ಕೈಲಾದಷ್ಟು ಶ್ರಮಪಟ್ಟು ನನ್ನ ಉದ್ದೇಶವನ್ನು ಈಡೇರಿಸಿಕೊಳ್ಳುತ್ತೇನೆ. ಅಥವಾ ಪ್ರಯತ್ನದಲ್ಲಿ ಪ್ರಾಣಬಿಡುತ್ತೇನೆ. "ಸನ್ನಿಮಿತ್ತೇ ವರಂ ತ್ಯಾಗೋ ವಿನಾಶೇ ನಿಯತೇ ಸತಿ" ಸಾವು ನಿಶ್ಚಯ ವಾಗಿರುವಾಗ ಸದುದ್ದೇಶ ಸಾಧನೆಗಾಗಿ ದೇಹತ್ಯಾಗಮಾಡುವುದು ಮೇಲು.

ಇದೆಲ್ಲ ಏನೋ ಒಂದು ಆಗದ ಹೋಗದಮಾತು ಎಂದು ನೀವು ಆಲೋಚಿಸಬಹುದು. ನನ್ನಲ್ಲಿ ಏನಿದೆ ಎಂಬುದು ನಿಮಗೆ ಸ್ವಲ್ಪವೂ ತಿಳಿಯದು. ನನ್ನ ಯೋಜನೆಗಳಿಗೆ ನಿಮ್ಮಲ್ಲಿ ಯಾರಾದರೂ ಸಹಾಯ ಮಾಡಿದರೆ ಒಳ್ಳೆಯದು. ಇಲ್ಲದೇ ಇದ್ದರೆ ಗುರುದೇವನೇ ನನಗೆ ದಾರಿ ತೋರುವನು. ನಾವು ಅಸೂಯೆಯನ್ನು ಬಿಟ್ಟು ಒಟ್ಟಿಗೆ ಸೇರಲಾರೆವು. ಇದು ನಮ್ಮ ಜಾತಿದೋಷ! ಈ ದೋಷ ಈ ದೇಶದಲ್ಲಿ ಇಲ್ಲ. ಆದುದರಿಂದಲೇ ಇವರು ಇಷ್ಟು ದೊಡ್ಡ ಜನಾಂಗವಾಗಿರುವುದು.

ನಮ್ಮಂತಹ ಕೂಪಮಂಡೂಕಗಳನ್ನು ನಾನು ಎಲ್ಲಿಯೂ ನೋಡಿಲ್ಲ. ಪರದೇಶದಿಂದ ಏನು ಹೊಸವಿಷಯ ಬರಲಿ, ಅದನ್ನು ಅಮೇರಿಕಾ ಮೊದಲು ಸ್ವೀಕರಿಸುವುದು. ಆದರೆ ನಾವೋ! ನಮ್ಮ ಹಾಗೆ ಪ್ರಪಂಚದಲ್ಲಿ ಯಾರೂ ಇಲ್ಲ! ಆರ್ಯ ಸಂತಾನರಲ್ಲವೆ ನಾವು! ಆ ಹುಟ್ಟುಗುಣ ಎಲ್ಲಿ ಕಾಣಿಸುತ್ತಿದೆಯೋ ನನಗೆ ತಿಳಿಯದು. ಆದರೂ ನಾವು ಆರ್ಯ ಸಂತಾನರು! ಸತತವೂ ನಿಮ್ಮ

ವಿವೇಕಾನಂದ.

೨೨

ಚಿಕಾಗೊ

೨೮ ನೇ ಮೇ ೧೮೯೪.

ಪ್ರಿಯ—,

ನಾನು ನ್ಯೂಯಾರ್ಕಿಗೂ, ಬಾಸ್ಟನ್ನಿಗೂ ಅಲೆಯುತ್ತಿದ್ದುದರಿಂದ ನಿನಗೆ ಬೇಗ ಕಾಗದ ಬರೆಯಲು ಆಗಲಿಲ್ಲ. ನಾನು ಎಂದು ಇಂಡಿಯಾದೇಶಕ್ಕೆ ಹಿಂತಿರುಗುತ್ತೇನೆಯೊ ತಿಳಿಯದು. ನನಗೆ ಬೆಂಬಲವಾಗಿ ನಿಂತು ದಾರಿತೋರುತ್ತಿರುವ ದೇವನಿಗೆ ಸರ್ವವನ್ನೂ ಬಿಡುವುದು ಮೇಲು. ನಾನು ಜೀವಿಸಿಲ್ಲ ಎಂದು ತಿಳಿದು ನನ್ನನ್ನು ಬಿಟ್ಟು ಕೆಲಸಮಾಡಿ.

ಇಲ್ಲಿ ಬೇಕಾದಷ್ಟು ಉಪನ್ಯಾಸವನ್ನು ಮಾಡಿ ಆಗಿದೆ. ಖರ್ಚು ಬಹಳ ದುಬಾರಿ ಇಲ್ಲಿ. ಎಲ್ಲಾ ಕಡೆಯಲ್ಲೂ ಶೀಲವಂತರು, ದೊಡ್ಡಮನೆತನದವರು ನಾನು ಹೋದೆಡೆಯಲ್ಲೆಲ್ಲ ನನ್ನನ್ನು ಸಂರಕ್ಷಿಸಿ ಕಾಪಾಡುತ್ತಿರುವರು. ಆದರೂ ಹಣ ನೀರಿನಂತೆ ವ್ಯಯವಾಗುತ್ತಿದೆ.

ಈ ಬೇಸಗೆಯ ಸಮಯದಲ್ಲಿ ನಾನು ಹೋಗುತ್ತೇನೆಯೊ ಇಲ್ಲವೊ ತಿಳಿಯದು. ಮುಕ್ಕಾಲು ಪಾಲು ಇಲ್ಲ. ಅಷ್ಟರಲ್ಲಿಯೇ ನಿನ್ನ ಏರ್ಪಾಡುಗಳನ್ನು ವ್ಯವಸ್ಥೆಗೆ ತಂದು ಕೆಲಸವನ್ನು ಮುಂದುವರಿಸು. ಸಕಲವನ್ನೂ ನಾನು ಮಾಡಬಲ್ಲೆನೆಂದು ನಂಬು. ದೇವರು ನಮ್ಮೊಡನೆ ಇರುವನು, ಎಂದು ತಿಳಿಯಿರಿ. ಎಲೈ ಧೈರ್ಯಶಾಲಿಗಳಿರಾ! ಮುಂದುವರೆಯಿರಿ!

ನನ್ನ ಜನ್ಮಭೂಮಿಯಲ್ಲಿ ಬೇಕಾದಷ್ಟು ಆದರಣೆಯೇನೋ ಸಿಕ್ಕಿತು. ಗೌರವವೋ, ನಿಂದೆಯೋ, ನಿರ್ಲಕ್ಷಿಸಬೇಡಿ. ಸೋಮಾರಿಗಳಾಗಬೇಡಿ. ನಮ್ಮ ಆಲೋಚನೆಯಲ್ಲಿ ಸ್ವಲ್ಪವನ್ನಾದರೂ ಕಾರ್ಯರೂಪಕ್ಕೆ ತಂದಿಲ್ಲ ವೆನ್ನುವುದನ್ನು ನೆನಪಿನಲ್ಲಿಡಬೇಕು.

ಸುಶಿಕ್ಷಿತರಾದ ಯುವಕರ ಮೇಲೆ ನಿಮ್ಮ ಪ್ರಭಾವವನ್ನು ಬೀರಿ. ಅವರೆಲ್ಲರನ್ನೂ ಒಟ್ಟಿಗೆ ತಂದು ಕೆಲಸದ ಅಭ್ಯಾಸವನ್ನು ಕೊಡಿ. ಮಹಾ ಕಾರ್ಯಗಳು ಮಹಾ ತ್ಯಾಗದಿಂದ ಮಾತ್ರ ಸಿದ್ಧಿಸುವುವು. ಸ್ವಾರ್ಥತೆ ಬೇಡ. ಹೆಸರು ಬೇಡ. ಕೀರ್ತಿ ಬೇಡ. ನಿಮಗೂ ಬೇಡ, ನನಗೂ ಬೇಡ. ನಮ್ಮ ಗುರುದೇವನಿಗೂ ಬೇಡ. ಕೆಚ್ಚೆದೆಯುಳ್ಳವರೂ, ಉದಾರಮನಸ್ಸಿನವರೂ, ಶೀಲವಂತರೂ ಆದ ಎನ್ನ ಹುಡುಗರಿರಾ! ನಮ್ಮ ಆದರ್ಶವನ್ನು ಕಾರ್ಯರೂಪಕ್ಕೆ ತನ್ನಿ. ಸೊಂಟಕಟ್ಟಿ ಸಿದ್ಧರಾಗಿ. ಹೆಗಲುಕೊಡಿ ಕಾರ್ಯಕ್ಕೆ. ಕೀರ್ತಿ ಗೌರವಗಳೆಂಬ ಹೀನ ವಿಷಯಗಳನ್ನು ಹಿಂತಿರುಗಿ ನೋಡುವುದಕ್ಕೆ ನಿಲ್ಲಬೇಡಿ. ಸ್ವಾರ್ಥತೆಯನ್ನು ಸಂಪೂರ್ಣ ತ್ಯಾಗಮಾಡಿ ಕೆಲಸಕ್ಕೆ ಕೈ ಹಾಕಿ. "ಹಲವು ಹುಲ್ಲನ್ನು ಸೇರಿಸಿ ಹಗ್ಗ ಮಾಡಿದರೆ ಮದಿಸಿದ ಆನೆಯನ್ನಾದರೂ ಕಟ್ಟಿಹಾಕಬಹುದು." ಎಂಬು ದನ್ನು ನೆನಪಿನಲ್ಲಿಡಿ. ದೇವರು ನಿಮ್ಮೆಲ್ಲರನ್ನೂ ಆಶೀರ್ವದಿಸಲಿ! ನಾನಾ ಗಲೇ ತಿಳಿದುಕೊಂಡಿರುವಂತೆ ಅವನ ಶಕ್ತಿ ನಿಮ್ಮೆಲ್ಲರಲ್ಲಿಯೂ ಸಂಚರಿಸಲಿ. "ಜಾಗ್ರತರಾಗಿ ಗುರಿ ಸೇರುವವರೆಗೂ ನಿಲ್ಲಬೇಡಿ." ಎಂದು ಸಾರು ವುದು ವೇದಗಳು. ಏಳಿ! ಏಳಿ! ದೀರ್ಘನಿದ್ರೆ ಕಳೆಯುತ್ತಿದೆ. ಉದಯ ಸನ್ನಿಹಿತವಾಗುತ್ತಿದೆ. ಅಲೆ ಮೇಲೆದ್ದಿದೆ. ಅದರ ರಭಸವನ್ನು ತಡೆಯಲು ಯಾರಿಗೂ ಶಕ್ತಿ ಸಾಲದು. ಉತ್ಸಾಹ ಎನ್ನ ಹುಡುಗರಿರಾ! ಉತ್ಸಾಹ! ಪ್ರೇಮ! ಶ್ರದ್ಧಾ ಭಕ್ತಿಗಳು! ಯಾವುದಕ್ಕೂ ಅಂಜಬೇಡಿ. ಅಂಜಿಕೆಯೆ ಮಹಾ ಪಾಪ.

ಎಲ್ಲರಿಗೂ ನನ್ನ ಆಶೀರ್ವಾದಗಳು. ನಮ್ಮ ಕೆಲಸಕ್ಕೆ ಸಹಾಯ ಮಾಡಿದ ಎಲ್ಲಾ ಉದಾರ ಮನಸ್ಸಿನವರಿಗೂ ನನ್ನ ಅನಂತ ಪ್ರೇಮ ಕೃತಜ್ಞತೆಗಳನ್ನು ಕಳುಹಿಸುತ್ತೇನೆಂದು ಹೇಳು. ಆದರೆ ಕೆಲಸದಲ್ಲಿ ಮಾತ್ರ ಸೋಮಾರಿಗಳಾಗಕೂಡದು. ಆದರ್ಶವನ್ನು ಎಲ್ಲರಿಗೂ ಸಾರಿ. ಇಡೀ

ದೇಶದಲ್ಲೆಲ್ಲ ಪ್ರಚಾರಮಾಡಿ. ಅಹಂಕಾರಪಡಬೇಡಿ. ಹೀಗೆಯೆ ಆಗಬೇಕೆಂಬ ಹಟಹಿಡಿಯಬೇಡಿ. ಯಾವುದಕ್ಕೂ ವಿರೋಧವಾಗಿ ಹೋಗಬೇಡಿ. ರಸಾಯನಿಕ ವಸ್ತುಗಳನ್ನು ಶೇಖರಿಸುವುದು ಮಾತ್ರ ನಮ್ಮ ಕೆಲಸ. ಅದು ಹೇಗೆ, ಎಂದು ಸ್ಫಟಿಕವಾಗುವುದೆಂಬುದು ದೇವರಿಗೆ ಗೊತ್ತು. ನನ್ನ ಅಥವಾ ನಿಮ್ಮ ವಿಜಯದಿಂದ ಹೆಮ್ಮೆ ಬೇಡ. ಮಹಾ ಕಾರ್ಯವನ್ನು ನಾವು ಮಾಡಬೇಕಾಗಿರುವುದು. ಮುಂದೆ ಆಗಬೇಕಾದ ಕಾರ್ಯದೊಂದಿಗೆ ಹೋಲಿಸಿ ನೋಡಿದರೆ ಈಗ ಆಗಿರುವ ಕಾರ್ಯ ಅಲ್ಪ! ನಂಬಿ! ದೇವರು ಆಜ್ಞೆ ಮಾಡಿರುವನು. ಭರತಖಂಡ ಉದ್ಧಾರವಾಗಬೇಕು. ಜನ ಸಾಮಾನ್ಯರನ್ನು, ಬಡವರನ್ನು ಸುಖಿಗಳನ್ನಾಗಿ ಮಾಡಬೇಕು.. ಆನಂದ ಪಡಿ. ಆತ್ಮ ಶಕ್ತಿಯ ಪ್ರವಾಹ ಮೇಲೆದ್ದಿದೆ. ಯಾರು ತಡೆಗಟ್ಟಿದರೂ ಲೆಕ್ಕವಿಲ್ಲದೆ ವಿಶಾಲವಾಗಿ ಎಲ್ಲವನ್ನೂ ಬಳಸಿಕೊಂಡು ಹರಿಯುವುದು ಆ ಪ್ರವಾಹ. ನನ್ನ ಕಣ್ಣಿಗೆ ಕಾಣುತ್ತಿದೆ. ಎಲ್ಲರೂ ಮುಂದಕ್ಕೆ ಬನ್ನಿ. ಮಾಡುವ ಪ್ರತಿಯೊಂದು ಒಳ್ಳೆ ಕೆಲಸವೂ ಅದರ ಶಕ್ತಿಯನ್ನು ಹೆಚ್ಚಿಸುವುದು. ಪ್ರತಿಯೊಬ್ಬರ ಕೈಗಳಿಂದಲೂ ಮಾರ್ಗ ಸುಗಮವಾಗುವುದು. ದೇವರಿಗೆ ಜಯವಾಗಲಿ!

ಯಾವ ಸಹಾಯವೂ ನನಗೆ ಬೇಕಾಗಿಲ್ಲ. ಸ್ವಲ್ಪ ದುಡ್ಡನ್ನು ಕೂಡಿಹಾಕಿ ಕೆಲವು ಮಾಯಾದೀಪ, ಭೂಪಟ, ಗೋಳ ಇವನ್ನು ಕೊಂಡುಕೊಳ್ಳಿ. ಪ್ರತಿದಿನವೂ ದೀನರು, ಬಡವರು, ಪಂಚಮರು ಮುಂತಾದವರನ್ನು ಸೇರಿಸಿ, ಮೊದಲು ಧರ್ಮದ ವಿಚಾರವಾಗಿ, ನಂತರ ಭೂಗೋಳ, ಖಗೋಳ ಮುಂತಾದುವುಗಳ ಮೇಲೆ ಮಾಯಾದೀಪದ ಮೂಲಕ ಉಪನ್ಯಾಸ ಮಾಡಿ. ಕೆಲವು ಉತ್ಸಾಹ ಶೀಲರಾದ ಯುವಕರನ್ನು ತರಬೇತು ಮಾಡಿ. ಅವರಲ್ಲಿ ನಿಮ್ಮ ಉತ್ಸಾಹವನ್ನು ಮೊದಲು ತುಂಬಿ; ನಂತರ ಅದು ಅನೇಕರನ್ನು ಸೇರಿಸಿಕೊಂಡು ವಿಶಾಲ ವಾಗುತ್ತ ಬರಲಿ. ನಿಮ್ಮ ಕೈಯಲ್ಲಿ ಸಾಧ್ಯವಾದಷ್ಟನ್ನು ಮಾಡಿ. ನೀರೆಲ್ಲ ಹೋದಮೇಲೆ ನಾನು ನದಿಯನ್ನು ದಾಟುತ್ತೇನೆಂದು ಕಾದು ಕುಳಿತುಕೊಳ್ಳಬೇಡಿ. ಮಾಸಪತ್ರಿಕೆಗಳು, ದೈನಂದಿನ ಪತ್ರಿಕೆಗಳು, ಇವು ಗಳನ್ನು ಮುದ್ರಿಸಿ ಪ್ರಚಾರಮಾಡುವುದೇನೊ ಒಳ್ಳೆಯದು. ಆದರೆ

ಎಳ್ಳಷ್ಟು ಕೆಲಸಮಾಡುವುದು, ಹೊರೆ ಬರೆದು ಮಾತನಾಡುವುದಕ್ಕಿಂತ ಉತ್ತಮ.—ಅವರ ಮನೆಯಲ್ಲಿ ಒಂದು ಸಭೆ ಸೇರಿ. ಸ್ವಲ್ಪ ಹಣವನ್ನು ಸಂಪಾದಿಸಿ ನಾನು ಮೇಲೆ ಹೇಳಿದ ವಸ್ತುಗಳನ್ನು ಕೊಂಡು ಒಂದು ಗುಡಿಸಲನ್ನು ಬಾಡಿಗೆಗೆ ತೆಗೆದುಕೊಂಡು ಕಾರ್ಯರಂಗಕ್ಕೆ ಇಳಿಯಿರಿ. ಮೊದಲು ಕೆಲಸ, ಎರಡನೆಯದು ಪತ್ರಿಕೆ. ಜನಸಾಮಾನ್ಯರ ಮೇಲೆ ನಿಮ್ಮ ಪ್ರಭಾವವನ್ನು ಬೀರಬೇಕು. ಸಣ್ಣದು ಮೊದಲೆಂದು ಎದೆಗುಂದ ಬೇಡ. ಮಹಾ ಕಾರ್ಯಗಳು ನಂತರ ಬರುವುವು. ಧೈರ್ಯಶಾಲಿಯಾಗು. ನಿಮ್ಮ ಒಡನಾಡಿಗಳಿಗೆ ನಾಯಕನಾಗಲು ಯತ್ನಿಸಬೇಡ, ಆದರೆ ಅವರ ಸೇವಕನಾಗು. ಮುಂದಾಳಾಗಬೇಕೆಂಬ ಹುಚ್ಚು ಎಂತೆಂತಹ ದೊಡ್ಡ ಹಡಗುಗಳನ್ನು ಜೀವನ ಸಾಗರದಲ್ಲಿ ಮುಳುಗಿಸಿದೆಯೋ! ಇದರ ವಿಷಯ ದಲ್ಲಿ ಮಾತ್ರ ಬಹಳ ಜೋಕೆ. ಪ್ರಾಣ ಹೋದರೂ ಸರಿ, ನಿಸ್ವಾರ್ಥರಾಗಿ ಕೆಲಸಮಾಡಿ. ನಾನು ಏನು ಹೇಳಬೇಕೆಂದು ಬಯಸಿದ್ದೆನೊ ಅದೆಲ್ಲವನ್ನೂ ಬರೆಯಲು ಆಗಲಿಲ್ಲ. ನನ್ನ ಕೆಚ್ಚೆದೆಯ ಮಕ್ಕಳಿಗೆ ದೇವರು ಜ್ಞಾನವನ್ನು ಕೊಡುತ್ತಾನೆ. ಕಾರ್ಯಕ್ಕೆ ಸೊಂಟಕಟ್ಟಿ ನನ್ನ ಮಕ್ಕಳಿರಾ! ದೇವರಿಗೆ ಜಯವಾಗಲಿ.

ನಿಮ್ಮ ವಿಶ್ವಾಸಪೂರ್ವಕ,
ವಿವೇಕಾನಂದ.

(೨೩)

ಚಿಕಾಗೊ,
೨೦ ನೇ ಜೂನ್, ೧೮೯೪

ಪ್ರಿಯ ದಿವಾನ್‌ಜಿ ಸಾಹೇಬರೇ,

ನೀವು ವಿಶ್ವಾಸದಿಂದ ಬರೆದ ಕಾಗದ ಇಂದು ತಲುಪಿತು. ನನ್ನ ದುಡುಕು, ಒರಟು ಮಾತುಗಳಿಂದ ನಿಮ್ಮಂತಹ ಉದಾರ ಹೃದಯರಿಗೆ ಮನಸ್ಸು ನೋಯಿಸಿರಬಹುದೆಂದು ನನಗೆ ತುಂಬಾ ವ್ಯಥೆಯಾಗುವುದು. ನೀವು ಶಾಂತರೀತಿಯಿಂದ ನನ್ನ ತಪ್ಪನ್ನು ತಿದ್ದಿರುವುದಕ್ಕೆ ನಾನು ಒಪ್ಪಿಕೊಳ್ಳುತ್ತೇನೆ "ನನ್ನನ್ನು ನಿಮ್ಮ ಮಗನೆಂದು ಭಾವಿಸಿ, ನೀವು ಬುದ್ಧಿ

ಕಲಿಸಬೇಕು." ಹಾಗೆ ಹೇಳುವಂತೆ ಪ್ರೇರೇಪಿಸಿದುದು ಪ್ರೀತಿ ಎಂಬುದು ನಿಮಗೆ ಚೆನ್ನಾಗಿ ಗೊತ್ತಿದೆ. ಚಾಡಿಕೋರರಿಂದ ಪರೋಕ್ಷವಾಗಿ ನನಗೆ ಏನೂ ಸಹಾಯವಾಗಲಿಲ್ಲ. ಅದಕ್ಕೆ ಬದಲು ಅವರಿಂದ ತುಂಬಾ ತೊಂದರೆಯಾಯಿತು. ಹಿಂದೂ ದೇಶದ ಜನರು ನಾನು ಅವರ ಪ್ರತಿನಿಧಿ ಎಂದು ಅಮೇರಿಕಾ ದೇಶೀಯರಿಗೆ ಹೇಳುವುದಕ್ಕೆ ಒಂದು ಬೆರಳನ್ನು ಕೂಡ ಎತ್ತಲಿಲ್ಲ. ಏನಾದರೂ ನಮ್ಮ ಜನರು ನನ್ನನ್ನು ಅವರ ಪ್ರತಿನಿಧಿ ಎಂದೂ, ನನಗೆ ಸಹಾಯಮಾಡಿದುದಕ್ಕೆ ಅಮೇರಿಕಾ ದೇಶಕ್ಕೆ ಕೃತಜ್ಞತೆ ತೋರಿಸಿ ಒಂದು ಪತ್ರ ಬರೆದರೆ? ಅವರು ನಾನು ಸನ್ಯಾಸಿ ಬಟ್ಟೆಯನ್ನು ಅಮೇರಿಕಾದಲ್ಲಿ ಮಾತ್ರ ಹಾಕಿಕೊಂಡೆನೆಂದೂ, ನನ್ನನ್ನು ಕಪಟಿಯೆಂದೂ, ವಂಚಕನೆಂದೂ ಸಾರುತ್ತಿರುವರು. ಇದು ಅಮೇರಿಕಾ ದೇಶದ ಜನರ ಮೇಲೆ ಯಾವ ವಿಧವಾದ ಪರಿಣಾಮವನ್ನೂ ಮಾಡಲಿಲ್ಲ. ಆದರೂ ಅವರು ನನಗೆ ದ್ರವ್ಯದ ಮೂಲಕವಾಗಿ ಸಹಾಯಮಾಡುವ ದೃಷ್ಟಿಯಿಂದ ತುಂಬಾ ಅನಾನುಕೂಲವಾಯಿತು. ನನಗೆ ಕೊಡಬೇಕೆಂದಿದ್ದ ದುಡ್ಡನ್ನು ಹಿಂದಕ್ಕೆ ತೆಗೆದುಕೊಂಡರು. ನಾನು ಇಲ್ಲಿ ಆಗಲೇ ಸುಮಾರು ಒಂದು ವರ್ಷದಿಂದ ಇರುವೆನು. ಒಬ್ಬ ಪ್ರಮುಖ ಭಾರತೀಯನಿಗಾದರೂ ಇಲ್ಲಿಯ ಜನರಿಗೆ ನಾನು ಮೋಸಗಾರನಲ್ಲವೆಂದು ಬರೆಯುವುದಕ್ಕೆ ಆಗಲಿಲ್ಲ. ಇಲ್ಲಿಯ ಪಾದ್ರಿಗಳಾದರೋ ನನ್ನ ಮೇಲೆ ದೋಷಾರೋಪಣೆಮಾಡುವುದಕ್ಕೆ ಸದಾ ಏನನ್ನಾದರೂ ಹುಡುಕುತ್ತಲೇ ಇರುತ್ತಾರೆ. ಇಂಡಿಯಾ ದೇಶದ ಕ್ರೈಸ್ತ ಪತ್ರಿಕೆಗಳಲ್ಲಿ ನನ್ನ ಮೇಲೆ ಏನು ಆರೋಪಣೆ ಬಂದರೂ ಸರಿಯೆ, ಅದನ್ನು ತಮ್ಮ ಪತ್ರಿಕೆಗಳಲ್ಲಿ ಪ್ರಚಾರಪಡಿಸುತ್ತಿರುವರು. ಇಲ್ಲಿಯ ಜನರಿಗೆ ಭರತ ಖಂಡದಲ್ಲಿ ಹಿಂದೂಗಳಿಗೂ ಕ್ರೈಸ್ತರಿಗೂ ಇರುವ ಭೇದವೇ ತಿಳಿಯದು.

ನನ್ನ ಸ್ವಂತ ಉದ್ಯಮಕ್ಕೆ ಹಣವನ್ನು ಶೇಖರಿಸುವುದೇ ನಾನು ಇಲ್ಲಿಗೆ ಬಂದ ಮುಖ್ಯ ಉದ್ದೇಶ. ನಿಮಗೆ ಇದೆಲ್ಲವನ್ನೂ ಪುನಃ ಸವಿಸ್ತಾರವಾಗಿ ಹೇಳೋಣ.

ಪಾಶ್ಚಾತ್ಯ ಮತ್ತು ಪೌರಾತ್ಯ ದೇಶಗಳಿಗೆ ಇರುವ ವ್ಯತ್ಯಾಸ ಮುಖ್ಯವಾಗಿ ಇವು—ಅವರು ಒಂದು ಜನಾಂಗ, ನಾವು ಒಂದು

ಜನಾಂಗವಾಗಿಲ್ಲ. ವಿದ್ಯೆ ಮತ್ತು ಸಂಸ್ಕೃತಿ ಇಲ್ಲಿ ಸಾಧಾರಣವಾಗಿದೆ. ಸಮಾಜದಲ್ಲಿ ಕೆಳಗೆ ಇರುವವರಿಗೂ ಕೂಡ ತಲಪುತ್ತದೆ. ಅಮೇರಿಕಾ ದೇಶದಲ್ಲಿಯೂ, ಇಂಡಿಯಾ ದೇಶದಲ್ಲಿಯೂ ಉತ್ತಮ ವರ್ಗದವರು ಒಂದೆ. ಆದರೆ ಆಯಾ ದೇಶದ ಮೇಲಿನ ಮತ್ತು ಕೆಳಗಿನ ವರ್ಗದವರಿಗೆ ಇರುವ ಅಂತರಕ್ಕೆ ಎರಡು ದೇಶದಲ್ಲಿಯೂ ಬಹಳ ವ್ಯತ್ಯಾಸವಿದೆ. ಆಂಗ್ಲೇಯರಿಗೆ ಭರತ ಖಂಡವನ್ನು ಜಯಿಸಲು ಏತಕ್ಕೆ ಇಷ್ಟು ಸುಲಭವಾಯಿತು? ಅದಕ್ಕೆ ಕಾರಣ ಅವರು ಒಂದು ಜನಾಂಗ. ನಾವು ಒಂದು ಜನಾಂಗವಾಗಿಲ್ಲ. ನಮ್ಮಲ್ಲಿ ಯಾರಾದರೂ ಪ್ರಖ್ಯಾತ ಪುರುಷರು ಕಾಲವಾದರೆ, ಮತ್ತೊಂದು ಅಂತಹ ವ್ಯಕ್ತಿ ಬರುವುದಕ್ಕೆ ಅನೇಕ ಶತಮಾನಗಳು ಕಾದು ಕುಳಿತುಕೊಳ್ಳಬೇಕು. ಆಲ್ಲಾದರೋ, ಸತ್ತ ಮರುಕ್ಷಣವೇ ದೇಶ ಅಂತಹ ಪ್ರಖ್ಯಾತ ಪುರುಷನನ್ನು ಮುಂದಕ್ಕೆ ತರುವುದು. ನಮ್ಮ ದಿವಾನ್‌ಜಿ ಸಾಹೇಬರು ಏನಾದರೂ ಕಾಲವಾದರೆ (ದೇವರು ನಮ್ಮ ದೇಶದ ಹಿತಕ್ಕಾಗಿ ಇದನ್ನು ತಡಮಾಡಲಿ) ನಿಮ್ಮ ಸ್ಥಳಕ್ಕೆ ಮತ್ತೊಬ್ಬರನ್ನು ತರುವುದಕ್ಕೆ ದೇಶಕ್ಕೆ ಎಷ್ಟು ಕಷ್ಟವಾಗುವುದೆಂದು ಆಗ ತಿಳಿಯುತ್ತದೆ. ಈಗಲೂ ನಿಮಗೆ ನಿವೃತ್ತಿಯಾಗಲು ಅವಕಾಶಕೊಡದೆ ಇರುವುದರಿಂದಲೇ ಇದು ವ್ಯಕ್ತವಾಗುತ್ತದೆ. ಮಹಾಪುರುಷರ ಅಭಾವ ನಮ್ಮಲ್ಲಿರುವುದು. ಇದಕ್ಕೆ ಕಾರಣವೇನು? ಅವರಿಗೆ ಮುಂದಾಳುಗಳನ್ನು ಆರಿಸುವುದಕ್ಕೆ ವಿಶಾಲವಾದ ಕ್ಷೇತ್ರವಿದೆ. ನಮ್ಮಲ್ಲಿ ಅದು ಬಹಳ ಕಿರಿದು. ಮೂವತ್ತು ಕೋಟಿ ಜನ ಸಂಖ್ಯೆಯುಳ್ಳ ಭರತ ಖಂಡದಲ್ಲಿ ಮುಂದಾಳುಗಳನ್ನು ಹುಡುಕಬೇಕಾದರೆ, ಎಲ್ಲೋ ಅಲ್ಪಮಂದಿಗಳ ಪೈಕಿ. ಅಲ್ಲಿ ಮೂರು, ನಾಲ್ಕು ಅಥವಾ ಆರು ಕೋಟಿ ಜನಸಂಖ್ಯೆ ಇದ್ದರೂ ವಿದ್ಯಾವಂತರೂ ಸುಸಂಸ್ಕೃತರೂ ಜಾಸ್ತಿಯಾಗಿರುವುದರಿಂದ ಮುಂದಾಳುಗಳನ್ನು ಚುನಾಯಿಸುವುದಕ್ಕೆ ನಮಗಿಂತ ವಿಶಾಲವಾದ ಕ್ಷೇತ್ರವಿದೆ. ನನ್ನ ಪ್ರಿಯ ಸ್ನೇಹಿತರೇ, ದಯವಿಟ್ಟು ತಪ್ಪು ತಿಳಿದುಕೊಳ್ಳಬೇಡಿ. ನಮ್ಮ ದೇಶದಲ್ಲಿರುವ ದೊಡ್ಡ ದೋಷ ಇದು. ಇದನ್ನು ನಿವಾರಿಸಬೇಕು. ಜನಸಾಮಾನ್ಯರನ್ನು ವಿದ್ಯಾವಂತರನ್ನಾಗಿ ಮಾಡಬೇಕು. ಅವರನ್ನು ಮೇಲಕ್ಕೆ ಎತ್ತಬೇಕು. ಇದರಿಂದ ಮಾತ್ರ ಒಂದು ಜನಾಂಗವಾಗುವುದಕ್ಕೆ ಸಹಾಯವಾಗುವುದು. ನಮ್ಮ ಸಮಾಜ

ಸುಧಾರಕರು ಗಾಯವೆಲ್ಲಿದೆ ಎಂದು ನೋಡುವುದಿಲ್ಲ. ವಿಧವಾ ವಿವಾಹ ದಿಂದ ದೇಶವನ್ನು ಉದ್ಧಾರಮಾಡಬೇಕೆಂದು ಬಯಸುವರು. ಒಂದು ದೇಶದ ವಿಧವೆಯರಿಗೆ ಸಿಕ್ಕುವ ಗಂಡಂದಿರ ಸಂಖ್ಯೆಯ ಮೇಲೆ ದೇಶ ಉಳಿಯುವುದೆಂದು ತಿಳಿದಿರುವಿರೇನು? ನಮ್ಮ ಧರ್ಮವನ್ನೂ ಕೂಡ ದೂರು ವುದಕ್ಕೆ ಆಗುವುದಿಲ್ಲ. ಒಂದು ವಿಗ್ರಹ ಹೆಚ್ಚು ಕಡಿಮೆಯಾದರೆ ಅದರಿಂದಾ ಗುವ ಲಾಭನಷ್ಟ ಅಷ್ಟರಲ್ಲೇ ಇದೆ. ಜನಾಂಗದ ಬಹು ಮುಖ್ಯವಾದ ಭಾಗ ಬಡಜೋಪಡಿಗಳಲ್ಲಿ ವಾಸವಾಗಿರುವರು. ಅವರು ತಮ್ಮ ಪುರುಷತ್ವವನ್ನು ಮರೆತಿರುವರು. ಇಲ್ಲಿದೆ ತಪ್ಪೆಲ್ಲ. ಅನವರತವೂ ಹಿಂದೂಗಳು, ಮುಸ ಲ್ಮಾನರು, ಕ್ರೈಸ್ತರು ಇವರುಗಳಿಂದ ತುಳಿಸಿಕೊಂಡು ಕ್ರಮೇಣ ಅವರು ಯಾರ ಜೇಬಿನಲ್ಲಿ ಹೆಚ್ಚು ದುಡ್ಡಿದೆಯೋ ಅವರಿಂದ ತುಳಿಸಿಕೊಳ್ಳುವುದೇ ನಮ್ಮ ಕರ್ತವ್ಯವೆಂದು ತಿಳಿಯಲು ಮೊದಲುಮಾಡಿರುವರು. ಅವರು ಕಳೆದುಕೊಂಡ ವ್ಯಕ್ತಿತ್ವವನ್ನು ಪುನಃ ಕೊಡಬೇಕು. ಅವರನ್ನು ವಿದ್ಯಾ ವಂತರನ್ನಾಗಿ ಮಾಡಬೇಕು. ವಿಗ್ರಹಗಳು ಇರಬೇಕೋ ಬೇಡವೊ, ವಿಧವೆಯರಿಗೆ ಸಾಕಾದಷ್ಟು ಗಂಡಂದಿರು ಸಿಕ್ಕುತ್ತಾರೋ ಇಲ್ಲವೊ, ಜಾತಿಯು ಒಳ್ಳೆಯದೋ ಕೆಟ್ಟದ್ದೊ, ಇಂತಹ ಪ್ರಶ್ನೆಗಳೇ ನನಗೆ ಬೇಕಾಗಿಲ್ಲ. ಪ್ರತಿಯೊಬ್ಬರೂ ಅವರವರ ಮೋಕ್ಷವನ್ನು ಅವರೇ ಸಂಪಾದಿಸಿಕೊಳ್ಳಬೇಕು. ರಸಾಯನಿಕವಸ್ತುಗಳನ್ನು ಒಂದೆಡೆ ಸೇರಿಸು ವುದು ನಮ್ಮ ಕೆಲಸ. ದೇವರ ನಿಯಾಮಕದಂತೆ ಅದು ಸ್ಫಟಿಕವಾಗು ವುದು. ವಿಷಯಗಳನ್ನು ಅವರಿಗೆ ಕೊಡೋಣ. ಉಳಿದುದನ್ನು ಅವರೇ ಮಾಡುವರು. ಜನಸಾಮಾನ್ಯರಿಗೆ ವಿದ್ಯೆಯನ್ನು ಕೊಡಬೇಕೆಂದು ಇದ ರಿಂದ ಗೊತ್ತಾಗುವುದು. ಇಲ್ಲಿವೆ ಅವರ ಕಷ್ಟಗಳೆಲ್ಲ. ದಿವಾಳಿಯಾದ ಸರ್ಕಾರ ಇದಾವುದನ್ನೂ ಮಾಡಲಾರದು. ಮತ್ತು ಶಕ್ಯವಿದ್ದರೂ ಮಾಡುವುದೂ ಇಲ್ಲ. ಆದಕಾರಣ ಅಲ್ಲಿಂದ ಯಾವ ಸಹಾಯವನ್ನೂ ನಿರೀಕ್ಷಿಸಬೇಡಿ.

ಪ್ರತಿಯೊಂದು ಹಳ್ಳಿಯಲ್ಲಿಯೂ ಒಂದು ಉಚಿತ ಪಾಠಶಾಲೆ ಯನ್ನು ತೆರೆಯುವುದಕ್ಕೆ ಸಾಧ್ಯವಾದರೂ ಕೂಡ, ಬಡಹುಡುಗರು ತಮ್ಮ ಜೀವನೋಪಾಯಕ್ಕೆ ಹೊಲಕ್ಕೆ ಹೋಗುವರೆ ಹೊರತು ಶಾಲೆಗೆ ಕಲಿಯು

ವುದಕ್ಕೆ ಬರುವುದಿಲ್ಲ. ನಮ್ಮಲ್ಲಿ ಹಣವೂ ಇಲ್ಲ. ಅಥವಾ ಅವರನ್ನು ವಿದ್ಯಾಭ್ಯಾಸಂಗಕ್ಕೆ ಬರುವಂತೆ ಮಾಡಲೂ ಆಗುವುದಿಲ್ಲ. ಸಮಸ್ಯೆ ಕಠಿಣವಾಗಿದೆ. ನನಗೆ ಒಂದು ದಾರಿತೋರಿದೆ. ಅದೇ ಇದು. ಮಹಮ್ಮದನ ಸಮೀಪಕ್ಕೆ ಬೆಟ್ಟಬಾರದೇ ಇದ್ದರೂ, ಬೆಟ್ಟದ ಸಮೀಪಕ್ಕೇ ಮಹಮ್ಮದನು ಬರಬೇಕು. ಬಡವರು ವಿದ್ಯಾಭ್ಯಾಸಂಗಕ್ಕೆ ಶಾಲೆಗೆ ಬರದೇ ಇದ್ದರೆ, ವಿದ್ಯಾಭ್ಯಾಸಂಗ ಅವರುಳುವೆಡೆಯಲ್ಲಿ, ಕಾರ್ಖಾನೆಯಲ್ಲಿ, ಕೆಲಸಮಾಡುವ ಕಡೆಯಲ್ಲಿ, ಅವರು ಎಲ್ಲಿದ್ದರೆ ಅಲ್ಲಿ ಹೋಗುವಂತೆ ಮಾಡಬೇಕು. ಇದು ಹೇಗೆ ಸಾಧ್ಯ? ನೀವು ನನ್ನ ಗುರುಭಾಯಿಗಳನ್ನು ನೋಡಿರುವಿರಿ. ಅಂತಹ ನಿಸ್ವಾರ್ಥಪರರೂ ವಿದ್ಯಾವಂತರೂ, ಶೀಲವಂತರೂ ಆದ ನೂರಾರುಮಂದಿ ಭರತಖಂಡದಲ್ಲಿ ಸಿಕ್ಕುವರು. ಇಂತಹ ಯುವಕರು ಹಳ್ಳಿಯಿಂದ ಹಳ್ಳಿಗೆ, ಪ್ರಯಾಣಮಾಡಲಿ. ಪ್ರತಿಯೊಬ್ಬನ ಮನೆಯ ಬಾಗಿಲಿಗೆ ಧರ್ಮವನ್ನು ಮಾತ್ರವಲ್ಲ, ವಿದ್ಯೆಯನ್ನೂ ಹಂಚಲಿ. ಹೆಂಗಸರಿಗೆ ಶಿಕ್ಷಣ ಕೊಡುವುದಕ್ಕಾಗಿ ವಿಧವೆಯರಿಗೆ ತರಬೇತುಕೊಡುವ ಒಂದು ಕೇಂದ್ರವೂ ನಮ್ಮಲ್ಲಿದೆ.

ತಮ್ಮ ದಿವಸದ ಕೆಲಸವಾದಮೇಲೆ ಗ್ರಾಮಸ್ಥರು ಬಂದು ಒಂದು ಮರದ ಕೆಳಗೋ ಎಲ್ಲೋ ಕುಳಿತು ಹೊಗೆ ಸೇದುತ್ತಾ ಕಾಡುಹರಟೆ ಹೊಡೆಯುತ್ತ ಕಾಲವನ್ನು ಕಳೆಯುವರು. ವಿದ್ಯಾವಂತರಾದ ಇಬ್ಬರು ಸನ್ಯಾಸಿಗಳು ಅಂತಹ ಜನಗಳ ಹತ್ತಿರ ಹೋಗಿ ಮಾಯಾಲಾಂದ್ರದ ಮೂಲಕ, ಭೂಗೋಳ, ಚರಿತ್ರೆ ಮುಂತಾದುವುಗಳಿಂದ ಚಿತ್ರವನ್ನು ತೋರಿಸಬೇಕು. ಗೋಳಗಳು, ಭೂಪಟಗಳು ಮತ್ತು ಇನ್ನೂ ಇಂತಹ ಸಲಕರಣೆಗಳ ಮೂಲಕ ಬರಿಯ ಬಾಯಿಮಾತಿನಲ್ಲಿ ಎಷ್ಟೋ ಕೆಲಸ ಮಾಡಬಹುದು. ದಿವಾನ್ ಸಾಹೇಬರೆ! ಕಣ್ಣೊಂದೆ ಬಾಗಿಲಲ್ಲ ಜ್ಞಾನಕ್ಕೆ, ಕಿವಿಯಿಂದ ಕೇಳಿಯೂ ಜ್ಞಾನವನ್ನು ಶೇಖರಿಸಬಹುದು. ಇವುಗಳಿಂದ ಅವರಿಗೆ ವಿಷಯ ಸಂಗ್ರಹವಾಗುತ್ತದೆ. ನೀತಿ ಎಂದರೆ ಏನು? ಇದರಿಂದ ಮುಂದೆ ಉತ್ತಮರಾಗಬಹುದೆಂಬ ನಂಬಿಕೆ ಹುಟ್ಟುತ್ತವೆ. ಇಲ್ಲಿಗೆ ನಮ್ಮ ಕೆಲಸ ಮುಗಿಯುತ್ತದೆ. ಉಳಿದುದನ್ನು ಅವರೇ ಮಾಡಲಿ. ಇಂತಹ ಒಂದುತ್ಯಾಗ ಮಾಡುವುದಕ್ಕೆ, ಇಂತಹ ಒಂದು ಮಹಾಕಾರ್ಯಕ್ಕೆ ಸನ್ಯಾಸಿ

ಗಳನ್ನು ಯಾವುದು ಪ್ರೇರೇಪಿಸುವುದು? ಧಾರ್ಮಿಕ ಉತ್ಸಾಹ. ಪ್ರತಿಯೊಂದು ಹೊಸ ಧರ್ಮದ ಅಲೆಗೂ, ಒಂದು ಹೊಸಕೇಂದ್ರ ಬೇಕಾಗುವುದು. ಹಳೆಯಧರ್ಮ ಹೊಸಕೇಂದ್ರದ ಸಹವಾಸದಿಂದ ಮಾತ್ರ ಪುನಃ ಜೀವ ತಾಳುವುದು. ನಿಮ್ಮ ನಂಬಿಕೆ, ಸಿದ್ಧಾಂತ ಇವನ್ನು ಆಚೆಗೆ ಎಸೆಯಿರಿ ಇದರಿಂದ ಏನೂ ಪ್ರಯೋಜನವಿಲ್ಲ. ಉತ್ತಮ ಚರಿತ್ರ ಮತ್ತು ಜೀವನಗಳಿಂದ ಕೂಡಿದ ದೇವಮಾನವನು ಮಾತ್ರ ನಮಗೆ ದಾರಿತೋರಬಲ್ಲ. ಅಂತಹ ಮಾನವನ ಸುತ್ತಲೂ ಉಳಿದೆಲ್ಲವೂ ಸಂಗ್ರಹ ವಾಗಬೇಕು. ನಂತರ ಒಂದು ದೊಡ್ಡ ತರಂಗದಂತೆ ಸಮಾಜದಮೇಲೆ ಬೀಳಬೇಕು. ಅವರ ಲೋಪದೋಷಗಳನ್ನೆಲ್ಲ ತೊಳೆದು ಅವರನ್ನು ಮುಂದಕ್ಕೆ ಕರೆದೊಯ್ಯಬೇಕು.

.......ಹಳೆಯ ಹಿಂದೂ ಧರ್ಮವನ್ನು ಹಿಂದೂಧರ್ಮದಿಂದ ಮಾತ್ರ ಸುಧಾರಿಸಬಹುದು. ಈಗ ಏಳುತ್ತಿರುವ ಅನೇಕ ಸುಧಾರಣಾ ಸಮಿತಿಗಳಿಂದ ಅಲ್ಲ. ಪೂರ್ವ ಮತ್ತು ಪಾಶ್ಚಾತ್ಯ ನಾಗರಿಕತೆ ಎರಡೂ ಸುಧಾರಕನಲ್ಲಿ ಬೆರೆತಿರಬೇಕು. ಅಂತಹ ಒಂದು ಸಪಪಿಧಾನದ ಆದಿಯನ್ನು ನೀವು ನೋಡಿಲ್ಲವೆಂದು ತಿಳಿದಿರುವಿರೇನು? ಮುಂದೆ ಬರುವ ಪ್ರಚಂಡ ಪ್ರವಾಹದ ಮೊಳಧ್ವನಿಗಳಾಗಲೇ ಕೇಳುತ್ತಿವೆ. ಅಂತಹ ಒಂದು ಕೇಂದ್ರವೇ, ಅಂತಹ ದೇವಮಾನವರೇ ಶ್ರೀ ರಾಮಕೃಷ್ಣ ಪರಮಹಂಸ. ಆ ಮಹಾಪುರುಷರ ಸುತ್ತಲೂ ಈ ಹೊಸಗುಂಪು ಸೇರುತ್ತಿದೆ. ಕೆಲಸವನ್ನು ಅವರು ಮಾಡುತ್ತಾರೆ. ಇದಕ್ಕೆ ಒಂದು ಸಂಸ್ಥೆಯಾಗ ಬೇಕು. ಯಂತ್ರವನ್ನು ಮೊದಲು ಚಲಿಸುವಂತೆ ಮಾಡುವುದ ಕ್ಕಾದರೂ, ಸ್ವಲ್ಪ ಹಣಬೇಕು. ಅಲ್ಲವೆ ದಿವಾನ್‌ಜಿ ಸಾಹೇಬರೆ? ಇಂಡಿಯಾ ದೇಶದಲ್ಲಿ ಯಾರು ನಮಗೆ ಹಣವನ್ನು ಕೊಡುವರು? ಅದಕ್ಕೇ ನಾನು ಸಾಗರವನ್ನು ದಾಟಿ ಅಮೇರಿಕಾದೇಶಕ್ಕೆ ಬಂದುದು. ಇದಕ್ಕೆ ಬೇಕಾದ ಹಣವನ್ನು ಬಡವರಿಂದ ಚಂದಾ ಎತ್ತಿದೆ. ಶ್ರೀಮಂತರಿಂದ ಒಂದು ಕಾಸನ್ನೂ ಸ್ವೀಕರಿಸಲಿಲ್ಲ. ಏಕೆಂದರೆ ಅವರಿಗೆ ನನ್ನ ಉದ್ದೇಶವನ್ನು ತಿಳಿಯಲು ಆಗಲಿಲ್ಲ. ಒಂದು ವರುಷ ಈ ದೇಶದಲ್ಲಿ ಉಪನ್ಯಾಸ ಮಾಡಿದರೂ, ಯಾವ ಸಾರ್ಥಕವೂ ಆಗಲಿಲ್ಲ. ನನ್ನ ಸ್ವಂತ ಖರ್ಚಿಗೇನೊ

ಯಾವ ಕೊರತೆ ಇಲ್ಲದೇ ಇದ್ದರೂ ನನ್ನ ಕಾರ್ಯಸಾಧನೆಗೆ ಬೇಕಾದ ನಿಧಿಗೆ ಸಹಾಯವಾಗಲಿಲ್ಲ. ಮೊದಲಾಗಿ ಅಮೇರಿಕಾದಲ್ಲಿ ಈ ವರುಷ ಜನರು ಉತ್ತಮ ಸ್ಥಿತಿಯಲ್ಲಿಲ್ಲ. ಅವರಲ್ಲೇ ಸಾವಿರಾರು ಜನರಿಗೆ ಕೆಲಸವಿಲ್ಲದೆ ತಾಪತ್ರಯ ಪಡುತ್ತಿರುವರು. ಎರಡನೆಯದಾಗಿ ಪಾದ್ರಿಗಳು ಮತ್ತು.... ಅವರು ನನ್ನ ಎಲ್ಲಾ ಪ್ರಯತ್ನಕ್ಕೂ ಅಡ್ಡಿ ಮಾಡುತ್ತಿರುವರು. ಮೂರ ನೆಯದಾಗಿ ಆಗಲೇ ಒಂದು ವರುಷವಾಗಿದೆ; ಆದರೂ ನಮ್ಮ ದೇಶದ ಜನರು ನನ್ನನ್ನು ಹಿಂದೂ ಧರ್ಮದ ಪ್ರತಿನಿಧಿ, ಇವನು ಮೋಸಗಾರನಲ್ಲ, ನಿಜವಾದ ಸನ್ಯಾಸಿ ಇವನು, ಎಂದು ಅಮೇರಿಕಾ ದೇಶದವರಿಗೆ ಹೇಳಲಿಲ್ಲ. ಕೇವಲ ಇಷ್ಟನ್ನು ಮಾತ್ರ, ಕೆಲವು ಮಾತುಗಳ ಖರ್ಚನ್ನು ಮಾಡಲಿಲ್ಲ! ಬಹಳ ಧೈರ್ಯಶಾಲಿಗಳು! ನಮ್ಮ ದೇಶದ ಜನರು! ಅವರನ್ನು ಪ್ರೀತಿಸುತ್ತೇನೆ ದಿವಾನ್‌ಜಿ ಸಾಹೇಬರೆ. ಮಾನವನ ಸಹಾಯವನ್ನು ನಾನು ಯಾವಾಗಲೂ ನಿರಾಕರಿಸುತ್ತೇನೆ. ಬೆಟ್ಟ ಕಣಿವೆಗಳಲ್ಲಿ, ಕಾಡು ಮೇಡುಗಳಲ್ಲಿ, ಯಾರು ನನ್ನೊಂದಿಗೆ ಇದ್ದನೊ ಅವನೇ ನನ್ನೊಂದಿಗೆ ಈಗಲೂ ಇರುತ್ತಾನೆಂದು ನಂಬುತ್ತೇನೆ. ಇಲ್ಲದೇ ಇದ್ದರೆ ನನಗಿಂತ ಮೇಲಾದ ಮತ್ತೊಬ್ಬ ಧೀರ ಮಾನವನು ನಮ್ಮ ದೇಶದಲ್ಲಿ ಇಂದೋ, ನಾಳೆಯೋ ಹುಟ್ಟಿ ನಾನು ಕೈಹಿಡಿದ ಕೆಲಸವನ್ನು ಮುಂದುಗಾಣಿಸುವನು. ಅದಕ್ಕೇ ನಾನು ನಿಮಗೆ ಎಲ್ಲಾ ವಿಷಯಗಳನ್ನೂ ಹೇಳಿರುವುದು. ದಿವಾನಜಿಯವರೆ, ನನ್ನ ದೀರ್ಘ ಪತ್ರಕ್ಕೆ ದಯಪಟ್ಟು ಕ್ಷಮಿಸಿ. ನನಗೆ ನಿಜವಾಗಿ ಅನುತಾಪಪಡುವ ಕೆಲವರಲ್ಲಿ ನೀವೊಬ್ಬರು. ನನ್ನ ಉದಾರ ಸ್ನೇಹಿತರೆ, ನಾನೊಬ್ಬ ಕನಸುಣಿ ಎಂದೂ, ಯಾವಾಗಲೂ ಮನೋ ರಾಜ್ಯದಲ್ಲೇ ಸಂಚಾರ ಮಾಡುವವನೆಂದೂ ನೀವು ತಿಳಿಯುವುದಕ್ಕೆ ಯಾವ ಅಭ್ಯಂತರವೂ ಇಲ್ಲ. ನಾನು ಆಪಾದಮಸ್ತಕವೂ ನಿಷ್ಕಪಟಿ ಎಂಬುದನ್ನು ಮಾತ್ರಮರೆಯಬೇಡಿ. ನನ್ನ ದೇಶವನ್ನು ಅತ್ಯಧಿಕವಾಗಿ ಪ್ರೀತಿಸುವುದೊಂದೇ ನನ್ನ ದೋಷ. ಧನ್ಯ ಸ್ನೇಹಿತರೆ, ನಿಮಗೆ ಮತ್ತು ನಿಮಗೆ ಸೇರಿದವರೆಲ್ಲರಿಗೂ ಅನವರತವೂ ಮಂಗಳವಾಗಲಿ, ನೀವು ಪ್ರೀತಿ ಸುವ ಜನರ ಮೇಲೆಲ್ಲ ಭಗವಂತನು ಕರುಣೆ ಬೀರಲಿ. ನನ್ನ ಪ್ರೀತಿ ಪೂರ್ವಕವಾದ ಕೃತಜ್ಞತೆಗಳನ್ನು ನಿಮಗೆ ಅರ್ಪಿಸುತ್ತೇನೆ. ನಾನು ನಿಮಗೆ

ಹೆಚ್ಚು ಋಣಿಯಾಗಿರುವೆನು. ನೀವು ನನ್ನ ಸ್ನೇಹಿತರೆಂದು ಮಾತ್ರವಲ್ಲ. ನಿಮ್ಮ ಜೀವನವನ್ನೆಲ್ಲ ಮಾತೃಭೂಮಿ ಮತ್ತು ದೇವರನ್ನು ಸೇವಿಸುವುದರಲ್ಲಿ ಕಳೆದಿರುವಿರಿ. ಅನವರತವೂ ನಿಮ್ಮ ವಿಶ್ವಾಸವನ್ನು ನೆನೆಯುವ,

ವಿವೇಕಾನಂದ.

(೨೪)

[ದೈವಾಧೀನರಾದ ಶ್ರೀ ಚಾಮರಾಜೇಂದ್ರ ಒಡೆಯರಿಗೆ ಬರೆದ ಪತ್ರ]

ಚಿಕಾಗೊ,
೨೩ ನೇ ಜೂನ್ ೧೮೯೪

ಮಹಾರಾಜರೆ,

ಶ್ರೀಮನ್ನಾರಾಯಣನು ತಮಗೂ ತಮ್ಮ ಪರಿವಾರಕ್ಕೂ ಕಲ್ಯಾಣವನ್ನುಂಟುಮಾಡಲಿ. ನೀವು ಪ್ರೀತಿಯಿಂದ ಮಾಡಿದ ಸಹಾಯದಿಂದ ನಾನು ಈ ದೂರದೇಶಕ್ಕೆ ಬರಲು ಸಾಧ್ಯವಾಯಿತು. ಅಂದಿನಿಂದ ಇಲ್ಲಿ ಪ್ರಖ್ಯಾತನಾಗಿರುವೆನು. ಅತಿಥಿ ಸತ್ಕಾರಪರರು ಇಲ್ಲಿಯ ಜನರು. ನನ್ನ ಕೊರತೆಗಳೆಲ್ಲವನ್ನೂ ಬಗೆಹರಿಸಿರುವರು. ಇದು ಹಲವು ವಿಧದಲ್ಲಿ ಒಂದು ಆಶ್ಚರ್ಯಕರವಾದ ದೇಶ. ಇಲ್ಲಿಯ ಜನರೊಂದು ಅದ್ಭುತ ಜನಾಂಗ. ಇಲ್ಲಿಯ ಜನರು ನಿತ್ಯ ಜೀವನದಲ್ಲಿ ಉಪಯೋಗಿಸುವಷ್ಟು ಯಂತ್ರವನ್ನು ಜಗತ್ತಿನಲ್ಲಿ ಇನ್ನಾವ ಜನಾಂಗವೂ ಉಪಯೋಗಿಸುವುದಿಲ್ಲ. ಎಲ್ಲಾ ಯಂತ್ರವೆ. ಇವರು ಜನಸಂಖ್ಯೆಯಲ್ಲಿ ಜಗತ್ತಿನಲ್ಲಿ ಇಪ್ಪತ್ತನೇ ಒಂದು ಪಾಲು. ಆದರೆ ಪ್ರಪಂಚದ ಐಶ್ವರ್ಯದಲ್ಲಿ ಆರನೇ ಒಂದು ಭಾಗ ಇವರಲ್ಲಿದೆ. ಇವರ ಐಶ್ವರ್ಯಕ್ಕೆ, ಭೋಗವಿಲಾಸಗಳಿಗೆ ಒಂದು ಮೇರೆಯೆ ಇಲ್ಲ. ಆದರೂ ಇಲ್ಲಿ ಎಲ್ಲಾ ಬಹಳ ಬೆಲೆ. ಇಲ್ಲಿ ಕೂಲಿಗಳ ದರ ಜಗತ್ತಿನ ಎಲ್ಲಾ ಕಡೆಗಿಂತಲೂ ಅಧಿಕ. ಆದರೂ ಬಂಡವಾಳಗಾರರಿಗೂ, ಕೂಲಿಕಾರರಿಗೂ ನಿತ್ಯ ವ್ಯಾಜ್ಯ ತಪ್ಪದು.

ಅಮೇರಿಕಾದ ಸ್ತ್ರೀಯರಿಗಿರುವಷ್ಟು ಅಧಿಕಾರ ಜಗತ್ತಿನ ಮತ್ತಾವ ಸ್ತ್ರೀಯರಿಗೂ ಇಲ್ಲ. ಅವರು ಪ್ರತಿಯೊಂದನ್ನೂ ಮೆಲ್ಲಗೆ ತಮ್ಮ ವಶ ಮಾಡಿಕೊಳ್ಳುತ್ತಿರುವರು. ಸುಸಂಸ್ಕೃತರಾದ ಹೆಂಗಸರು ಗಂಡಸರಿಗಿಂತ

ಹೆಚ್ಚು ಎಂದು ಹೇಳಲು ಆಶ್ಚರ್ಯವಾಗುತ್ತದೆ. ಆದರೆ ಉಚ್ಚ ಪ್ರತಿಭಾ ಶಾಲಿಗಳು ಬಹುಮಟ್ಟಿಗೆ ಪುರುಷರೆಂಬುದೇನೋ ನಿಜ. ಪಾಶ್ಚಾತ್ಯರು ನಮ್ಮನ್ನು ಜಾತಿಯ ವಿಷಯವಾಗಿ ಎಷ್ಟು ದೂರಿದರೂ, ಅವರಲ್ಲಿ ಇದಕ್ಕಿಂತ ನೀಚವಾದ ಜಾತಿ ಭೇದವಿದೆ. ಅದೇ ಹಣದ ಜಾತಿ. ಅಮೇರಿಕಾದವರು ಹೇಳುವಂತೆ ಸರ್ವಶಕ್ತಿಸ್ವರೂಪನಾದ ಡಾಲರ್ ಮಾಡದ ಕಾರ್ಯವಿಲ್ಲ.

ಈ ದೇಶದಲ್ಲಿರುವಷ್ಟು ಕಾನೂನುಗಳು ಮತ್ತೆಲ್ಲಿಯೂ ಇಲ್ಲ. ಆದರೆ ಅದಕ್ಕೆ ಇಲ್ಲಿರುವಷ್ಟು ಅಸಡ್ಡೆ ಮತ್ತೆಲ್ಲಿಯೂ ಇಲ್ಲ. ಒಟ್ಟಿನಲ್ಲಿ ನಮ್ಮ ದೀನ ಹಿಂದೂಗಳು ಪಾಶ್ಚಾತ್ಯರಿಗಿಂತ ಎಷ್ಟೋ ಪಾಲು ಹೆಚ್ಚು ನೀತಿವಂತರು. ಧರ್ಮದಲ್ಲಿ ಮಿಥ್ಯಾಚಾರ ಇಲ್ಲವೆ ಅಂಧಅಭಿಮಾನ ಇವೆರಡನ್ನೇ ಅವರು ಅಭ್ಯಾಸ ಮಾಡುವುದು. ಇಲ್ಲಿನ ಆಲೋಚನಾ ಪರರಿಗೆ ಮೂಢ ನಂಬಿಕೆಗಳಿಂದ ಕೂಡಿದ ಅವರ ಧರ್ಮದಲ್ಲಿ ಬೇಜಾರು ಹುಟ್ಟಿ ಹೊಸ ಬೆಳಕು ಭಾರತದಿಂದ ಬರುವುದೆಂದು ಕಾಯುತ್ತಿರುವರು. ಆಧುನಿಕ ವೈಜ್ಞಾನಿಕ ಶಾಸ್ತ್ರಗಳನ್ನು ಮತ್ತು ಸಿದ್ಧಾಂತಗಳನ್ನು ಪವಿತ್ರ ವೇದದಲ್ಲಿರುವ ಮಹದಾಲೋಚನೆಗಳು ಎದುರಿಸುತ್ತಿವೆ. ಅವುಗಳ ಆಘಾತದಿಂದ ನಾಶವಾಗದೆ ಇವೆ. ಇಂತಹ ಎಷ್ಟು ಸ್ವಲ್ಪ ವಿಷಯಗಳನ್ನಾದರೂ ಕೂಡ ಅಮೇರಿಕಾ ದೇಶ ಉತ್ಸಾಹದಿಂದ ಸ್ವೀಕರಿಸುವುದು. ನೀವು ಇದನ್ನು ನೋಡದಿದ್ದಲ್ಲದೆ ನಂಬಲಾಗುವುದಿಲ್ಲ. ಶೂನ್ಯದಿಂದ ಸೃಷ್ಟಿ, ಸೃಷ್ಟಿಸಿದ ಜೀವ, ಸ್ವರ್ಗವೆನ್ನುವಲ್ಲಿ ಸಿಂಹಾಸನದ ಮೇಲೆ ಕುಳಿತು ಕ್ರೂರನೂ, ಅತ್ಯಾಚಾರಿಯೂ ಆದ ಈಶ್ವರ, ಕೆಳಗೆ ನಿತ್ಯ ನರಕಯಾತನೆ, ಇವು ವಿದ್ಯಾವಂತರನ್ನೆಲ್ಲ ಬೇಸರಿಸಿವೆ. ಸೃಷ್ಟಿಯ ಅನಾದಿತ್ವ ಅದರಂತೆ ಆತ್ಮದ ನಿತ್ಯತ್ವ, ಮತ್ತು ನಮ್ಮ ಆತ್ಮದಲ್ಲೇ ಅವಸ್ಥಿತವಾದ ಪರಮಾತ್ಮ ಇವುಗಳನ್ನು ಒಂದಲ್ಲ ಒಂದು ವಿಧದಲ್ಲಿ ಕಲಿಯುತ್ತಿರುವರು. ಇನ್ನು ಐವತ್ತು ವರುಷಗಳಲ್ಲಿ ಪ್ರಪಂಚದ ವಿದ್ಯಾವಂತರುಗಳೆಲ್ಲರೂ ವೇದದಲ್ಲಿ ಹೇಳಿರುವ ಸೃಷ್ಟಿ ಮತ್ತು ಆತ್ಮದ ಅನಾದಿತ್ವದಲ್ಲಿ ಮತ್ತು ದೇವತ್ವವೇ ಮಾನವನ ಚರಮಗುರಿ ಮತ್ತು ಪೂರ್ಣಾವಸ್ಥೆ ಎಂಬ ವಿಷಯದಲ್ಲಿ ನಂಬುವರು. ಈಗಲೂ ಕೂಡ ವಿದ್ಯಾವಂತರಾದ ಪಾದ್ರಿಗಳು ಬೈಬಲನ್ನು

ಅದೃಷ್ಟಿಯಿಂದ ವಿವರಿಸುತ್ತಿರುವರು. ಅವರಿಗೆ ಹೆಚ್ಚು ಆಧ್ಯಾತ್ಮಿಕ ವಿದ್ಯೆ ಬೇಕು. ನಮಗೆ ಹೆಚ್ಚು ಐಹಿಕ ಉನ್ನತಿಯ ಶಿಕ್ಷಣ ಬೇಕು ಎಂಬುದು ನನ್ನ ನಿರ್ಧಾರ.

ಭಾರತ ವರ್ಷದಲ್ಲಿರುವ ದೌರ್ಭಾಗ್ಯಕ್ಕೆಲ್ಲ ಮೂಲ ಅಲ್ಲಿರುವ ಬಡಜನರ ಸ್ಥಿತಿ. ಪಾಶ್ಚಾತ್ಯ ದೇಶಗಳಲ್ಲಿ ಬಡವರು ಪಿಶಾಚಿಗಳಂತೆ. ಅವರೊಂದಿಗೆ ಹೋಲಿಸಿದರೆ ನಮ್ಮ ಬಡವರು ದೇವತೆಗಳು. ಆದುದರಿಂದಲೇ ಅವರನ್ನು ಉದ್ಧಾರಮಾಡುವುದು ಸುಲಭ. ಹೀನಸ್ಥಿತಿಯಲ್ಲಿರುವ ನಮ್ಮ ಬಡವರಿಗೆ ನಾವು ಮಾಡಬೇಕಾದ ಮುಖ್ಯಕರ್ತವ್ಯವೆ, ಅವರಿಗೆ ವಿದ್ಯೆಯನ್ನು ಕೊಟ್ಟು ಅವರನ್ನು ಪುನಃ ಮಾನವರನ್ನಾಗಿ ಮಾಡುವುದು. ನಮ್ಮ ಹಿಂದೂ ರಾಜರಿಗೂ, ಅವರ ಪ್ರಜೆಗಳಿಗೂ ಇರುವ ಪರಸ್ಪರ ಕೆಲಸವೇ ಇದು. ಆದರೆ ಇದುವರೆವಿಗೂ ಆ ದಾರಿಯಲ್ಲಿ ಯಾವ ಪ್ರಯತ್ನವೂ ನಡೆದಿಲ್ಲ. ಪುರೋಹಿತರ ದರ್ಪ ಮತ್ತು ಪರದೇಶದ ಜನರ ಕೈಯಲ್ಲಿ ಪಡೆದ ಸೋಲು ಅನೇಕ ಶತಮಾನದಿಂದ ಅವರನ್ನು ನೆಲಕ್ಕೆ ತುಳಿದಿವೆ. ಕೊನೆಗೆ ಭರತ ಖಂಡದ ಬಡವರು ತಾವು ಮಾನವರೆಂಬುದನ್ನು ಮರೆತಿರುವರು. ಅವರನ್ನು ಆಲೋಚನಾ ಪರರನ್ನಾಗಿ ಮಾಡಬೇಕು. ಪ್ರಪಂಚದಲ್ಲಿ ಅವರ ಸುತ್ತಲೂ ಏನು ಆಗುತ್ತಿದೆ ಎಂಬುದನ್ನು ನೋಡಲು ಕಣ್ಣುತೆರೆಯುವಂತೆ ಮಾಡಬೇಕು. ನಂತರ ಅವರ ಉದ್ಧಾರವನ್ನು ಅವರೇ ಮಾಡಿಕೊಳ್ಳುವರು. ಪ್ರತಿಯೊಂದು ಜನಾಂಗವೂ, ಪ್ರತಿಯೊಬ್ಬ ಪುರುಷನೂ ಪ್ರತಿಯೊಬ್ಬ ಸ್ತ್ರೀಯೂ ತಮ್ಮ ವಿಮೋಚನೆಗೆ ತಾವೇ ಪ್ರಯತ್ನ ಪಡಬೇಕು. ಆಲೋಚನಾ ಶಕ್ತಿಯನ್ನು ಅವರಿಗೆ ಕೊಡಿ. ಅವರಿಗೆ ಬೇಕಾಗಿರುವ ಸಹಾಯ ಅದೊಂದೆ. ನಂತರ ಇವುಗಳ ಪರಿಣಾಮವಾಗಿ ಉಳಿದುದೆಲ್ಲ ಬಂದೇ ಬರುವುದು. ಸಾಮಗ್ರಿಗಳನ್ನು ಒದಗಿಸಿಕೊಡುವುದು ನಮ್ಮ ಕೆಲಸ. ಉಳಿದುದು ಪ್ರಕೃತಿನಿಯಮದ ಕೆಲಸ. ಅವರ ತಲೆಯಲ್ಲಿ ಆಲೋಚನೆಯನ್ನು ತುಂಬುವುದು ನಮ್ಮ ಕೆಲಸ. ಉಳಿದುದು ಪ್ರಕೃತಿ ನಿಯಮದ ಕೆಲಸ. ಮಿಕ್ಕ ಕೆಲಸವನ್ನು ಅವರೇ ಮಾಡುವರು. ಭರತ ಖಂಡದಲ್ಲಿ ಮಾಡಬೇಕಾದ ಕೆಲಸವಿದು. ಈ ಒಂದು ಆಲೋಚನೆಯೇ ನನ್ನ ಮನಸ್ಸಿನಲ್ಲಿ ಅನೇಕ ಕಾಲದಿಂದ ಇರುವುದು. ಭರತ ಖಂಡದಲ್ಲಿ

ನಾನು ಇದನ್ನು ನಿವೇದಿಸಲು ಆಗಲಿಲ್ಲ. ಅದಕ್ಕೋಸ್ಕರವೇ ನಾನು ಇಲ್ಲಿಗೆ ಬಂದುದು. ಬಡವರಿಗೆ ಕಲಿಸುವ ವಿಷಯದಲ್ಲಿ ಒಂದು ತೊಂದರೆ ಇದೆ. ನೀವು ಪ್ರತಿಯೊಂದು ಹಳ್ಳಿಯಲ್ಲಿಯೂ ಒಂದು ಪಾಠಶಾಲೆಯನ್ನು ತೆರೆಯಬಹುದು. ಆದರೂ ಇದರಿಂದ ಅಷ್ಟು ಅನುಕೂಲವಾಗುವುದಿಲ್ಲ. ಇಂಡಿಯಾದಲ್ಲಿ ಬಡತನ ಬಹಳ ಹೆಚ್ಚು. ಬಡಹುಡುಗರು ತನ್ನ ತಂದೆಗೆ ಸಹಾಯಕ್ಕಾಗಿ ಹೊಲಕ್ಕೆ ಹೋಗುವರು, ಅಥವಾ ಜೀವನೋಪಾಯಕ್ಕೆ ಮತ್ತಾವುದಾದರೂ ಕಸಬನ್ನು ಕಲಿಯುವರೇ ಹೊರತು ಶಾಲೆಗೆ ಬರುವುದಕ್ಕೆ ಆಗುವದಿಲ್ಲ. ಬೆಟ್ಟ ಮಹಮ್ಮದನ ಸಮೀಪಕ್ಕೆ ಹೋಗದೇ ಇದ್ದರೆ ಮಹಮ್ಮದನು ಬೆಟ್ಟದ ಸಮೀಪಕ್ಕೆ ಬರಬೇಕು. ಬಡಹುಡುಗನು ವಿದ್ಯಾ ವ್ಯಾಸಂಗಕ್ಕೆ ಬರದೇ ಇದ್ದರೆ ವಿದ್ಯೆ ಅವನ ಬಳಿಗೆ ಬರಬೇಕು. ನಮ್ಮ ದೇಶದಲ್ಲಿ ಸ್ವಾರ್ಥತ್ಯಾಗಮಾಡಿದ ಹಲವು ಸನ್ಯಾಸಿಗಳು ಹಳ್ಳಿಯಿಂದ ಹಳ್ಳಿಗೆ ಧರ್ಮವನ್ನು ಬೋಧನೆಮಾಡುತ್ತ ಹೋಗುತ್ತಿರುವರು. ಅವರಲ್ಲಿ ಕೆಲವರನ್ನು ನೇಮಿಸಿ ಧರ್ಮ ಬೋಧನೆಯೊಡನೆ ಲೌಕಿಕ ವಿಚಾರಗಳನ್ನು ಜನಗಳಿಗೆ ತಿಳಿಸುವಂತೆ ಮಾಡಿದರೆ ಆ ಸನ್ಯಾಸಿಗಳು ಪ್ರತಿಯೊಂದು ಮನೆಗೂ ಹೋಗಿ ವಿದ್ಯೆಯನ್ನು ಕಲಿಸಬಹುದು. ಇದರಲ್ಲಿ ಇಬ್ಬರು ಸಂಜೆ ಒಂದು ಹಳ್ಳಿಗೆ ಹೋಗಿ ಮಾಯಾದೀಪ, ಭೂಪಟ, ಕೃತಕಗೋಳ ಇವುಗಳೊಂದಿಗೆ ಹೋದರೆ ಗ್ರಾಮಸ್ಥರಿಗೆ ಖಗೋಳಶಾಸ್ತ್ರ, ಭೂಗೋಳಶಾಸ್ತ್ರಗಳನ್ನು ಕಲಿಸಬಹುದು. ಬೇರೆ ಬೇರೆ ದೇಶಗಳ ಕಥೆಯನ್ನು ಅವರಿಗೆ ಕಲಿಸುವುದರಿಂದ ಬಡವರಿಗೆ ತಮ್ಮ ಜೀವಮಾನದಲ್ಲೆಲ್ಲ ಓದಿ ಕಲಿಯುವುದಕ್ಕಿಂತ ನೂರುಪಾಲು ಹೆಚ್ಚು ಸುದ್ದಿಗಳನ್ನು ಕೇಳುವುದರಿಂದ ಒದಗಿಸಬಹುದು. ಇದಕ್ಕೆ ಒಂದು ಸಂಸ್ಥೆಬೇಕು. ದುಡ್ಡಿಲ್ಲದೆ ಒಂದು ಸಂಸ್ಥೆಯಾಗದು. ಒಂದು ಗಾಲಿಯನ್ನು ಚಲಿಸುವಂತೆ ಮಾಡುವುದು ಬಹಳ ಕಷ್ಟ. ಆದರೆ ಎಂದು ಅದನ್ನು ಚಲಿಸುವಂತೆ ಮಾಡುವೆವೋ ಅಂದಿನಿಂದ ಬರಬರುತ್ತ ಹೆಚ್ಚು ವೇಗದಲ್ಲಿ ಚಲಿಸುವುದು. ನಮ್ಮ ದೇಶದಲ್ಲಿ ಇದಕ್ಕೆ ಸಹಾಯವನ್ನು ಹುಡುಕಿ ಬೇಸತ್ತು ಅಲ್ಲಿಯ ಯಾವ ಶ್ರೀಮಂತರಿಂದಲೂ ಸಹಾನುಭೂತಿ ಸಿಕ್ಕದೆ, ಮಹಾರಾಜರ ಸಹಾಯದಿಂದ ಈ ದೇಶಕ್ಕೆ ಬಂದೆನು. ಅಮೇರಿಕಾ ದೇಶೀಯರಿಗೆ ಇಂಡಿಯಾ ದೇಶದ ಬಡಜನರು

ಸತ್ತರೇನು, ಬದುಕಿದರೇನು. ನಮ್ಮ ಜನರೇ ತಮ್ಮ ಸ್ವಾರ್ಥತೆಯನ್ನಲ್ಲದೆ ಬೇರೆ ಏನನ್ನೂ ಆಲೋಚಿಸದೆ ಇರುವಾಗ ಅನ್ಯರಿಗೆ ಇದರ ಪಾಡೇಕೆ.

ಎಲೈ, ಮಹಾನುಭಾವನಾದ ದೊರೆಯೆ, ಕೆಲವುದಿನ ಬಾಳುವೆಯದು ಈ ಜನ್ಮ. ಜಗತ್ತಿನ ಸುಖಭೋಗಗಳೆಲ್ಲ ಕ್ಷಣಿಕವಾದುವು. ಯಾರು ಪರರ ಹಿತಕ್ಕಾಗಿ ಬದುಕುವರೋ ಅವರೇ ಜೀವಂತರು. ಉಳಿದವರು ಜೀವಚ್ಛವಗಳು. ತಮ್ಮಂತಹ ಉದಾರಮನಸ್ಸಿನ ಭರತಖಂಡದ ರಾಜರೊಬ್ಬರು, ಅಧೋಗತಿಗಿಳಿದ ಭರತಖಂಡವನ್ನು ಪುನಃ ಮೇಲೆತ್ತುವುದಕ್ಕೆ ಎಷ್ಟೋ ಸಹಾಯಮಾಡಬಹುದು. ಮುಂದಿನ ಜನಾಂಗವು ದೀರ್ಘಕಾಲ ತಮ್ಮನ್ನು ಸ್ಮರಿಸಿ ಕೊಂಡಾಡುವ ಕೀರ್ತಿಯನ್ನು ಗಳಿಸಬಹುದು. ಅಜ್ಞಾನಾಂಧಕಾರದಲ್ಲಿ ಮುಳುಗಿ ನರಳುತ್ತಿರುವ ಕೋಟ್ಯಾನುಕೋಟಿ ಭಾರತೀಯರಿಗಾಗಿ ಭಗವಂತನು ತಮ್ಮ ಹೃದಯ ಮರುಗುವಂತೆ ಮಾಡಲಿ ಎಂಬುದು ನನ್ನ ಪ್ರಾರ್ಥನೆ. ನಿಮ್ಮ

ವಿವೇಕಾನಂದ.

೨೫

C/o ಜಾರ್ಜ್ ಡಬ್ಲ್ಯು. ಹೇಲ್,
೫೪೧, ಡಿಯರ್ ಬಾರ್ನ್ ಅವೆನ್ಯೂ, ಚಿಕಾಗೊ,
೨೬ನೇ ಜೂನ್, ೧೮೯೪

ಪ್ರಿಯ—,

ಹೆಸರಾಂತ ಹಿಂದಿಭಾಷೆಯ ಕವಿ ತುಲಸೀದಾಸನು ತನ್ನ ರಾಮಾಯಣದಲ್ಲಿ ಹೀಗೆ ಹೇಳಿರುವನು. "ನಾನು ದುರ್ಜನರು ಸಜ್ಜನರಿಬ್ಬರನ್ನೂ ನಮಸ್ಕರಿಸುವೆನು. ಆದರೆ ಅವರಿಬ್ಬರೂ ನನಗೆ ಹಿಂಸಿಸುವರು. ದುರ್ಜನರು ಹತ್ತಿರ ಬಂದೊಡನೆಯೆ ಹಿಂಸೆಕೊಡುವುದಕ್ಕೆ ಪ್ರಾರಂಭಿಸುವರು—ಸಜ್ಜನರಾದರೋ ಅಗಲುವಾಗ ನನ್ನ ಪ್ರಾಣವನ್ನೇ ಸೆಳೆಯುವರು!"

ನಾನು ಇದನ್ನು ಒಪ್ಪುತ್ತೇನೆ. ನನಗೆ ಪ್ರಪಂಚದಲ್ಲಿ ಸಿಕ್ಕಿರುವ ದಾವುದು ಎಂದರೆ ಭಗವಂತನ ಭಕ್ತರನ್ನು ಪ್ರೀತಿಸುವುದ. ಅವರಿಂದ

ಅಗಲುವುದೆಂದರೆ ಸಹಿಸಲಸದಳ ವ್ಯಥೆಗೀಡಾಗುವೆನು. ಆದರೂ ಇದು ನೆರವೇರಬೇಕು. ನನ್ನ ಪ್ರಿಯ ಕರ್ಮಕೌಶಲಿನ ಮಂಜುಳನಾದವೆ, ಮುಂದೆ ನಡಿ, ನಾನು ಹಿಂಬಾಲಿಸುವೆನು. ಉದಾರಿಗಳು, ಮೃದು ಮಧುರನಾದ, ಧಾರಾಳಿತನದ ಮಹಾಪುರುಷರಿಂದ ಅಗಲುವ ಯಾತನೆಯನ್ನು, ದುಃಖವನ್ನು ವಿವರಿಸುವುದು ಅಸಾಧ್ಯ. ಓ ನಾನು ವೀತರಾಗಿಯಾಗಿದ್ದರೆ!

ಅತಿ ಸುಂದರ ತಳ್ಳಿಯ ಸೌಮ್ಯದೃಶ್ಯವನ್ನು ನೀನು ಆನಂದಿಸುತ್ತಿರುವೆ, ಎಂದು ಊಹಿಸುತ್ತೇನೆ. "ಜನರು ಎಲ್ಲಿ ಜಾಗ್ರತರಾಗಿರುವರೋ ಅಲ್ಲಿ ಜಿತಾತ್ಮ ನಿದ್ರಿಸಿರುವನು. ಎಲ್ಲಿ ಜನರು ನಿದ್ರಾಪರವಶರಾಗಿರುವರೋ, ಅಲ್ಲಿ ಅವನು ಜಾಗ್ರತನಾಗಿರುವನು."

ಪ್ರಪಂಚದ ಧೂಳು ಕೂಡ ನಿನ್ನನ್ನು ಸೋಕದೆ ಇರಲಿ. ಅದನ್ನು ಕವಿಗಳು ಹೂವಿನ ಹಾರಗಳಿಂದ ಮುಚ್ಚಲ್ಪಟ್ಟ, ಒಂದು ಸತ್ತು ನಾರುವ ಹೆಣವೆನ್ನುವರು. ಸಾಧ್ಯವಾದರೆ ಅದನ್ನು ಮುಟ್ಟಬೇಡ. ಸಗ್ಗದ ಹೋಮಾ ಪಕ್ಷಿಯ ಮರಿಗಳಂತೆ ಮೇಲೆ ಹಾರಿ. ಸಂಸಾರದ ಪಂಕ ನಿಮ್ಮ ಕಾಲಿಗೆ ಸೋಕುವುದಕ್ಕೆ ಮುಂಚೆ ಮೇಲೆ ಹಾರಿ.

"ಹೇ ಜಾಗ್ರತನಾದವನೆ ಪುನಃ ನಿದ್ರಿಸಬೇಡ"

"ಪ್ರಪಂಚದ ಜನ ಹಲವನ್ನು ಪ್ರೀತಿಸಲಿ. ನಮಗೆ ಇರುವವನೊಬ್ಬ ಪ್ರಿಯತಮ ದೇವರು. ಅವರು ಹೇಳುವುದನ್ನು ಲೆಕ್ಕಿಸುವುದಿಲ್ಲ. ನಮ್ಮ ಪ್ರಿಯತಮನಿಗೆ ಒಳ್ಳೆ ಒಳಿದು ಹಲವು ಬಗೆಯ ರಾಕ್ಷಸೀ ಗುಣಗಳನ್ನು ಆರೋಪಿಸುವಾಗ ಅಂಜಿಕೆಯಾಗುವುದು ಅವರಿಗೆ ಇಷ್ಟ ತೋರಿದುದನ್ನು ಮಾಡಲಿ. ನಮಗೆ ಮಾತ್ರ ಅವನಾವಾಗಲೂ ನನ್ನ ಪ್ರಿಯತಮ—ನನ್ನ ಪ್ರೇಮ, ನನ್ನ ಪ್ರೇಮ, ಅದಕ್ಕೆ ಹೆಚ್ಚೇನೂ ಇಲ್ಲ."

"ಅವನಿಗೆ ಎಷ್ಟು ಶಕ್ತಿ ಇದೆ, ಎಷ್ಟು ಗುಣವಿದೆ, ಎಷ್ಟು ಒಳ್ಳೆಯದನ್ನು ಅವನು ಮಾಡಬಲ್ಲನು ಎಂಬುದನ್ನೂ ಕೂಡ ತಿಳಿಯಲು ಇಚ್ಛೆ ಇಲ್ಲ. ನಾನು ಒಂದೇ ಸಲ ಹೇಳುತ್ತೇನೆ; ಹಣಕ್ಕಲ್ಲ ನಾವು ಅವನನ್ನು ಪ್ರೀತಿಸುವುದು. ನಾವು ಪ್ರೀತಿಯನ್ನು ಮಾರುವುದಿಲ್ಲ. ನಾವು ಬೇಡದೆ, ಕೊಡುತ್ತೇವೆ."

"ನೀವು ತತ್ತ್ವಜ್ಞಾನಿಗಳು, ಅವನ ಸ್ವರೂಪ, ಗುಣ, ಶಕ್ತಿಯನ್ನು ವಿವರಿಸಲು ಬರುವಿರಾ, ನೀವು ಮೂರ್ಖರು! ಅವನ ಚೆಂದುಟಿಯ ಒಂದು ಚುಂಬನಕ್ಕಾಗಿ ಪ್ರಾಣಬಿಡುತ್ತಿರುವೆವು"

"ನಿಷ್ಪ್ರಯೋಜನ ವಸ್ತುವನ್ನು ಮನೆಗೆ ತೆಗೆದುಕೊಂಡು ಹೋಗಿ, ನನ್ನ ಪ್ರಿಯತಮನ ಒಂದು ಚುಂಬನವನ್ನು ಕಳುಹಿಸು. ಇದು ಸಾಧ್ಯವೇ ?"

"ಮೂಢ! ಯಾರೆದುರಿಗೆ ಅಂಜಿಕೆಯಿಂದ ಬಗ್ಗಿ ನಡೆಯುತ್ತಿರುವೆ? ನನ್ನ ಹಾರವನ್ನು ಅವನ ಕೊರಳಿಗೆ ಹಾಕಿ, ಅದಕ್ಕೆ ಒಂದು ದಾರಕಟ್ಟಿ ನನ್ನಿಂದ ಅವನು ಒಂದು ಕ್ಷಣಕಾಲವಾದರೂ ಮರೆಯಾಗುವನೇನೋ ಎಂದು ನೇದು ತರುತ್ತಿರುವೆನು. ಆ ಹಾರವೇ ಪ್ರೇಮದ ಪಟ್ಟಿ; ದಾರವೇ ಪ್ರೇಮೋನ್ಮಾದ. ಮೂಢ! ನಿನಗೆ ರಹಸ್ಯ ತಿಳಿಯದು. ಪ್ರೇಮ ಬಂಧನದಲ್ಲಿ ಸರ್ವವ್ಯಾಪಿಯಾಗಿರುವನು ನನ್ನ ವಶಕ್ಕೆ ಬರುವನು. ಪಶು ಪಾಲಕ ಬೃಂದಾವನದ ಗೋಪಿಯರ ಕೈಬಳೆಯ ಝಂಝಣ ನಿನಾದಕ್ಕೆ ಕುಣಿಯುತ್ತಿದ್ದುದು ನಿನಗೆ ತಿಳಿಯುತ್ತದೆ."

ನನ್ನ ತುಚ್ಛ ಬರಹವನ್ನು ಕ್ಷಮಿಸು. ಅವ್ಯಕ್ತವನ್ನು ವ್ಯಕ್ತ ಪಡಿಸಲು ಯತ್ನಿಸುವ ನನ್ನ ಮೌಢ್ಯವನ್ನು ಕ್ಷಮಿಸು. ಇದು ಅನುಭವ ವೇದ್ಯಮಾತ್ರ. ಅನವರತ ಆಶೀರ್ವಾದಗಳು.

ನಿನ್ನ ಸೋದರ,
ವಿವೇಕಾನಂದ.

(೨೬)

[ಮದ್ರಾಸಿನ ಒಬ್ಬ ಶಿಷ್ಯನಿಗೆ]

**೫೪೧, ಡಿಯರ್‌ಬಾರನ್ ಅವೆನ್ಯೂ, ಚಿಕಾಗೊ,**
**೨೮ ನೇ ಜೂನ್, ೧೮೯೪**

ಒಟ್ಟಿನಲ್ಲಿ ಕೋಟಿಪಾಲು ಅಮೇರಿಕಾದವರು ಹಿಂದೂಗಳಿಗಿಂತ ಮೇಲು. ದಯಾಹೀನರು, ಕೃತಘ್ನರಿರುವ ದೇಶಕ್ಕಿಂತ ಇಲ್ಲಿ ನಾನು ಹೆಚ್ಚು ಒಳ್ಳೆಯದನ್ನು ಮಾಡಬಲ್ಲೆ. ತಿ....ರ ಸಂಸ್ಥೆ ಕಳೆದ ಜನಗಣತಿ

ಪ್ರಕಾರ ಇಡೀ ಅಮೇರಿಕಾದಲ್ಲಿ ೬೨೫. ಅವರೊಂದಿಗೆ ನಾನು ಸೇರಿದರೆ; ನನಗೆ ಸಹಾಯವಾಗುವುದಂತಿರಲಿ ಕ್ಷಣದಲ್ಲಿ ನನ್ನ ಕಾರ್ಯವೆಲ್ಲ ನಾಶವಾಗುತ್ತದೆ. ಮದ್ರಾಸಿನ ಜನರು ನನ್ನ ಯೋಗ್ಯತೆಗಿಂತ ಹೆಚ್ಚು, ಅವರ ಶಕ್ತಿಗಿಂತ ಹೆಚ್ಚು ನನಗೆ ಸಹಾಯಮಾಡಿರುವರು. ನನ್ನ ಭಾವಪ್ರಚಾರಕ್ಕೆ ಪ್ರಪಂಚದಲ್ಲಿ ಅಮೇರಿಕಾ ಅತ್ಯಂತ ಉತ್ತಮಕ್ಷೇತ್ರ. ಆದಕಾರಣ ನಾನು ಬೇಗ ಅಮೇರಿಕಾ ದೇಶವನ್ನು ಬಿಡಲು ಯೋಚಿಸಿಲ್ಲ. ನಾನು ಏತಕ್ಕೆ ಬಿಡಬೇಕು. ಇಲ್ಲಿ ನನಗೆ ಆಹಾರವಿದೆ, ಬಟ್ಟೆ ಇದೆ, ಪಾನೀಯವಿದೆ. ಎಲ್ಲರೂ ಪ್ರೀತಿಯಿಂದ ನೋಡುವರು. ಇವೆಲ್ಲ ಕೇವಲ ಕೆಲವು ಒಳ್ಳೆ ಮಾತಿಗೆ! ಇಂತಹ ಒಂದು ಭವ್ಯ ದೇಶವನ್ನು ಬಿಟ್ಟು, ಮೃಗೀಯ ಅಕೃತಜ್ಞರು, ಕಡುಮೂರ್ಖರು, ಚಿರಕಾಲ ಕುರುಡು ನಂಬಿಕೆಯಲ್ಲಿ ನರಳುತ್ತಿರುವ ನಿಸ್ಸಾರರುಗಳ ದಯಾಹೀನರ ಬಳಿಗೆ ಏತಕ್ಕೆ ಹೋಗಬೇಕು?

ಇತಿ,

ವಿವೇಕಾನಂದ.

(೨೭)

ಗ್ರೀನ್ ಏಕರ್ ಇನ್, ಇಲಿಯಟ್, ಮೈನ್
ಜುಲೈ ೧೮೯೪.

ಪ್ರಿಯ—,

ಇದು ಒಂದು ದೊಡ್ಡ ಛತ್ರ ಮತ್ತು ತೋಟದ ಮನೆಯಾಗಿದೆ. ಕ್ರೈಸ್ತ ವಿಜ್ಞಾನಿಕರು (Christian Scientists) ಇಲ್ಲಿ ತಮ್ಮ ಸಭೆಯನ್ನು ನಡೆಸುತ್ತಿರುವರು. ಕಳೆದ ವಸಂತಕಾಲದಲ್ಲಿ ಈ ಸಭೆಯ ಮಹಿಳಾ ಚಾಲಕಿಯು ನನ್ನನ್ನು ಆಹ್ವಾನ ಮಾಡಿದ್ದಳು. ಅದಕ್ಕೋಸುಗವೆ, ನಾನು ಇಲ್ಲಿಗೆ ಬಂದುದು. ಸುಂದರವಾದ ತಂಪಾದ ಸ್ಥಳ ಎಂಬುದೇನೊ ನಿಜ. ನನ್ನ ಅನೇಕ ಚಿಕಾಗೊ ಸ್ನೇಹಿತರು ಇಲ್ಲಿರುವರು. ನದಿಯ ಪಕ್ಕದಲ್ಲಿ ಹೊಡೆದಿರುವ ಡೇರೆಯಲ್ಲಿ ಆ ಮಹಿಳೆ, ಅವಳ ಮಗಳು ಮತ್ತು ಇನ್ನು ಇತರರೂ ಇರುವರು. ಎಲ್ಲರೂ ಸಂತೋಷದಿಂದ ಕಾಲಕಳೆಯುತ್ತಿರು

ವರು. ಕೆಲವುವೇಳೆ ಎಲ್ಲರೂ ವೈಜ್ಞಾನಿಕರ ಉಡುಪನ್ನು ದಿನವೆಲ್ಲ ಧರಿಸುವರು. ಮುಕ್ಕಾಲುವಾಲು ಪ್ರತಿದಿನವೂ ಉಪನ್ಯಾಸಗಳು ಇದ್ದೇ ಇರುವುವು. ಬಾಸ್ಟನ್ನಿನಿಂದ ಬಂದ ಒಬ್ಬ ಮಹನೀಯನು ಇಲ್ಲಿರುವನು. ಆವೇಶದಿಂದ ಪ್ರೇರೇಪಿತನಾಗಿ ಆತನು ಪ್ರತಿದಿನವೂ ಮಾತನಾಡುವನಂತೆ. —ಸಂಪಾದಕಿಯು ಇಲ್ಲೆ ವಾಸವಾಗಿರುವಳು. ಆಕೆ ಧಾರ್ಮಿಕ ಪ್ರವಚನಗಳನ್ನು ನಡೆಸುತ್ತಿರುವಳು. ಎಲ್ಲಾ ವಿಧವಾದ ಖಾಯಿಲೆಯನ್ನು ಗುಣಮಾಡುವುದಕ್ಕೂ ಪ್ರತಿದಿನವೂ ಉಪನ್ಯಾಸಗಳನ್ನು ಇಟ್ಟುಕೊಂಡಿರುವಳು. ಬೇಗ ಕುರುಡರಿಗೆ ಕಣ್ಣು, ಕಿವುಡರಿಗೆ ಕಿವಿ, ಮುಂತಾದುವುಗಳೆಲ್ಲವನ್ನೂ ಬರಿಸುವರು ಎಂದು ಊಹಿಸುತ್ತೇನೆ! ಏನಾದರೂ ಆಗಲಿ ಇದು ಒಂದು ವಿಚಿತ್ರ ಸಮ್ಮೇಳನ. ಸಾಮಾಜಿಕ ಕಾಯಿದೆಗಳನ್ನು ಅವರೇನೂ ಅಷ್ಟು ಮಾನ್ಯ ಮಾಡುವವರಲ್ಲ. ಎಲ್ಲರೂ ಸ್ವತಂತ್ರರಾಗಿರುವರು. ಸಂತೋಷದಿಂದ ಇರುವರು.—ಆ ಮಹಿಳೆಯು ಬಹು ಬುದ್ಧಿವಂತೆ. ಅಂತೆಯೇ ಚಲುವರು ಇರುವರು. ಡೆಟ್ರಾಯಟ್‌ನಿಂದ ಬಂದ ಮಾನ್ಯ ಮಹಿಳೆಯೊಬ್ಬಳು ಸಮುದ್ರದಲ್ಲಿ ಇಲ್ಲಿಂದ ಹದಿಮೂರು ಮೈಲಿ ದೂರದಲ್ಲಿರುವ ಒಂದು ದ್ವೀಪಕ್ಕೆ ನನ್ನನ್ನು ಕರೆದುಕೊಂಡು ಹೋಗುತ್ತೇನೆಂದು ಹೇಳಿರುವಳು. ಅಲ್ಲಿ ನಿರಾತಂಕವಾಗಿ ಕಾಲವನ್ನು ಕಳೆಯಬಹುದೆಂದು ಯೋಚಿಸುತ್ತೇನೆ. ಇಲ್ಲಿಂದ ನಾನು ಅನಿಸ್ಕ್ವಾಮಿಗೆ ಹೋಗಬಹುದು. ಇದು ಬಹಳ ಸುಂದರಸ್ಥಳ. ಸ್ನಾನಮಾಡುವುದಕ್ಕೆ ಬಹಳ ರಮ್ಯವಾಗಿರುವುದು—ಅವರು ನನಗೆ ಈಜುವಾಗ ಉಪಯೋಗಿಸುವ ಬಟ್ಟೆಯನ್ನು ಹೊಲಿಸಿಕೊಟ್ಟಿರುವರು. ನಾನು ಬಾತಿನಂತೆ ನೀರಿನಲ್ಲಿ ನಿರಾಯಾಸವಾಗಿ ಬಹಳಕಾಲ ಕಳೆಯುವೆನು. ಅತಿದೀನರಿಗೂ ಕೂಡ ಇದು ಆತ್ಮಾನಂದವನ್ನು ಕೊಡುವುದು.

ಬಾಸ್ಟನ್‌ನಿಂದ ಬಂದ— ಅವನು ಇಲ್ಲಿರುವರು. ನಿಮ್ಮ ಸಂಗಡದ ಪ್ರಮುಖರಲ್ಲಿ ಒಬ್ಬರಿರುವರು. ಶ್ರೀಮತಿ ಪಿರ್ಲ್‌ಪೂಲರ ಸಂಗಡಕ್ಕೆ ಸೇರುವುದಕ್ಕೆ ಅವರು ಒಪ್ಪುವುದಿಲ್ಲ. ಆದಕ್ಕೇ ಅವನು ತಾನೊಬ್ಬ ಮಾನಸಿಕ ಚಿಕಿತ್ಸಕರೆಂದೂ, ತನ್ನ ಚಿಕಿತ್ಸೆಯಲ್ಲಿ—ಆದಿಭೌತಿಕ—ರಸಾಯನಿಕ—ಭೌತಿಕ—ಧಾರ್ಮಿಕ ಮತ್ತು ಇನ್ನೂ ಏನೇನು ಇವೆಯೋ ಬಲ್ಲವ

ರಾರು—ಎಲ್ಲಾ ಬೆರೆತಿವೆಯಂತೆ. ನಿನ್ನೆಯದಿನ ದೊಡ್ಡ ಸುಂಟರಗಾಳಿ ಎದ್ದಿತು. ಹಾಕಿದ ಡೇರೆಗೆಲ್ಲ ಒಂದು ದೊಡ್ಡ ವಿಪತ್ತು. ಅವರು ಪ್ರತಿ ದಿನವೂ ಉಪನ್ಯಾಸ ಕೇಳುತ್ತಿದ್ದ ಡೇರೆಗೆ ಆಧ್ಯಾತ್ಮಿಕ ಶಕ್ತಿ ವಿಪರೀತ ವಾಗಿ ಜನರ ಕಣ್ಣಿಂದ ಮಾಯವಾಗಿ ಹೋಯಿತು! ಸುಮಾರು ಐದು ನೂರು ಕುರ್ಚಿಗಳು ನೆಲದಮೇಲೆ ಚೆಲ್ಲಾಪಿಲ್ಲಿಯಾಗಿ ಭಾವೋನ್ಮತ್ತದಿಂದ ಕುಣಿದಾಡುತ್ತಿದ್ದುವು!........ ಆಕೆ ಪ್ರತಿದಿನವೂ ಒಂದು ಪಾಠವನ್ನು ಹೇಳುತ್ತಿರುವಳು.—ಆಕೆ ಇಲ್ಲೆಲ್ಲ ಕುಣಿದಾಡುತ್ತಿರುವಳು. ಎಲ್ಲರೂ ಹರ್ಷಸಾಗರದಲ್ಲಿ ಓಲಾಡುತ್ತಿರುವರು. ಕಳೆದ ಚಳಿಗಾಲದಲ್ಲಿ ಆಕೆ ಬಹಳ ಕಷ್ಟಪಟ್ಟಳು. ಈಗಲಾದರೂ ಸ್ವಲ್ಪ ಆನಂದಿಸುವುದನ್ನು ನೋಡಿ ನೀವು ಆಶ್ಚರ್ಯ ಚಕಿತರಾಗಬಹುದು. ಆದರೆ ಎಲ್ಲರೂ ಬಹಳ ಒಳ್ಳೆಯವರು. ಅದರಲ್ಲಿ ಏನೂ ದೋಷವಿಲ್ಲ. ಸ್ವಲ್ಪ ಶೃಂಗಾರರಸಾಭಿಮಾನಿಗಳು ಅಷ್ಟೆ.

ನಾನು ಇಲ್ಲಿ ಬರುವ ಶನಿವಾರದವರೆಗೂ ಇರುತ್ತೇನೆ. ನಿನ್ನೆಯ ದಿನ ಶಿಬಿರದ ಜನರೆಲ್ಲ ದೇವದಾರು ಮರದ ಕೆಳಗೆ ಮಲಗಲು ಹೋಗಿದ್ದರು. ಅದರ ಕೆಳಗೆ ನಾನು ಹಿಂದೂಗಳಂತೆ ಪ್ರತಿದಿನವೂ ಅದರೊಡನೆ ಮಾತು ಕಥೆಗಳನ್ನು ನಡೆಸುತ್ತಿದ್ದೆನು. ನಾನು ಕೂಡ ಅವರೊಂದಿಗೆ ಹೋದೆ. ಅನಂತ ತಾರೆಗಳು ಮೇಲೆ. ಕೆಳಗೆ ತಾಯಿಯ ತೊಡೆಯಂತಿರುವ ನೆಲದ ಮೇಲೆ ಮಲಗಿದೆವು. ಇದರ ಸೊಬಗನ್ನೆಲ್ಲ ನಾನು ಅನುಭವಿಸಿದೆನು. ಅಂದಿನ ಇರುಳಿನ ಆನಂದವನ್ನು ನಾನು ನಿನಗೆ ವರ್ಣಿಸಲಾರೆ. ಗಡಿಬಿಡಿಯ ಜೀವನದಲ್ಲಿ ಒಂದು ವರುಷವನ್ನು ಕಳೆದ ಮೇಲೆ, ನೆಲದ ಮೇಲೆ ಮಲಗು ವುದು, ಕಾಡಿನಲ್ಲಿ ಮರದ ಕೆಳಗೆ ಧ್ಯಾನಕ್ಕೆ ಕುಳಿತುಕೊಳ್ಳುವುದು ಎಷ್ಟು ಸಂತೋಷ. ಛತ್ರದ ಜನರು ಅಷ್ಟೇನೂ ಬಡವರಲ್ಲ. ಶಿಬಿರದ ಜನರು ಇನ್ನೂ ತಾರುಣ್ಯದಲ್ಲಿ ಆರೋಗ್ಯದಿಂದ ಇರುವರು. ನಿಷ್ಕಪ ಟಿಗಳಾದ ಮಹಿಳೆ ಮಹನೀಯರು; ನಾನು ಅವರಿಗೆ "ಶಿವೋಹಂ" "ಶಿವೋಹಂ" ಬೋಧಿಸುತ್ತೇನೆ. ಅವರು ಅದನ್ನು ಉಚ್ಚರಿಸುತ್ತಾರೆ. ಸರಳರು ಮತ್ತು ನಿರ್ಮಲಚಿತ್ತರು ಇವರು. ಅತಿ ಸಾಹಸಿಗಳು. ಇವರಿಂದ ನನಗೆ ಸಂತೋಷವಾಗಿದೆ. ನಾನು ಈಗ ಆರೋಗ್ಯವಾಗಿರು ವೆನು. ನನ್ನನ್ನು ಬಡವನಾಗಿ ಮಾಡಿದುದಕ್ಕೆ ದೇವರಿಗೆ ವಂದನೆಗಳು.

ಡೇರೆಯಲ್ಲಿ ವಾಸವಾಗಿರುವ ಜನರನ್ನು ಬಡವರನ್ನಾಗಿ ಮಾಡಿದುದಕ್ಕೆ ಆತನಿಗೆ ವಂದನೆಗಳು. ಸೂಕ್ಷ್ಮ ಆರೋಗ್ಯದವರು ಹೋಟೇಲಿನಲ್ಲಿ ಇರುವರು. ಆದರೆ ಯಾರಿಗೆ ಕಬ್ಬಿಣದಂತಹ ನರಗಳಿವೆಯೋ, ಯಾರ ಆತ್ಮ ಉಕ್ಕಿಗಿಂತ ಗಟ್ಟಿಯಾಗಿದೆಯೋ, ಯಾರ ಸ್ಫೂರ್ತಿ ಬೆಂಕಿಯ ಮುಷ್ಟಿಯಂತೆ ಇದೆಯೋ, ಅವರು ಡೇರೆಯ ಶಿಬಿರದಲ್ಲಿ ಇರುವರು. ನೆನ್ನೆ ಪ್ರಚಂಡ ಮಳೆ ಬೀಳುತ್ತಿತ್ತು. ಬಿರುಗಾಳಿ ಎಲ್ಲವನ್ನೂ ಸಿಕ್ಕಿದ ಕಡೆಗೆ ಎಸೆಯುತ್ತಿತ್ತು. ಆಗ ಡೇರೆಗೆ ಹೊಡೆದ ದಾರಗಳನ್ನು ಹಿಡಿದುಕೊಂಡು ಅವುಗಳು ಹಾರಿ ಹೋಗದಂತೆ ನೋಡಿಕೊಳ್ಳುತ್ತಿದ್ದುದನ್ನು ನೋಡಬೇಕಾಗಿತ್ತು! ಈ ಕೆಚ್ಚೆದೆಯವರು ತಮ್ಮ ಆತ್ಮಶಕ್ತಿಯ ಬಲದ ಮೇಲೆ ಕದಲದಂತೆ ನಿಂತಿದ್ದರು. ಇದನ್ನು ನೀವು ನೋಡಿದ್ದರೆ ನಿಮಗೂ ಸ್ವಲ್ಪ ಧೈರ್ಯ ಬರುತ್ತಿತ್ತು. ಇಂತಹ ಒಂದು ನೋಟವನ್ನು ನೋಡುವುದಕ್ಕೆ ನಾನು ನೂರು ಮೈಲಿಯಾದರೂ ಹೋಗುವೆನು. ದೇವರು ಅವರನ್ನು ಹರಸಲಿ. ನೀವು ಹಳ್ಳಿಯಲ್ಲಿ ಕಾಲವನ್ನು ಆನಂದದಿಂದ ಕಳೆಯುತ್ತಿರಬಹುದು. ಒಂದು ಕ್ಷಣವಾದರೂ ನೀವು ನನ್ನ ವಿಷಯದಲ್ಲಿ ಚಿಂತಾಜನಕರಾಗಬೇಡಿ. ದೇವರು ನನ್ನನ್ನು ನೋಡಿಕೊಳ್ಳುವನು. ಇಲ್ಲದೇ ಇದ್ದರೆ ನನ್ನ ಕಾಲ ಬಂದಿತೆಂದು ಹೊರಡಲನುವಾಗುವೆನು.

"ಪರಮ ಆಪ್ತನೆ! ಹಲವರು ಅನೇಕ ವಸ್ತುಗಳನ್ನು ನಿನಗೆ ಕೊಡುವರು. ನಾನು ದೀನ. ನನ್ನಲ್ಲಿರುವುದು ದೇಹ, ಆತ್ಮ ಮನಸ್ಸು ಮಾತ್ರ. ಅದೆಲ್ಲವನ್ನೂ ನಿನಗೆ ಅರ್ಪಿಸುತ್ತೇನೆ. ಅದನ್ನು ನಿರಾಕರಿಸಬೇಡ. ಹೇ ದೇವ, ಅದನ್ನು ಸ್ವೀಕರಿಸಲು ಮನಸ್ಸುಮಾಡು." ನನ್ನ ತನುಮನಗಳನ್ನೆಲ್ಲ ಒಮ್ಮೆಯೆ ಕೊಟ್ಟಿರುವೆನು. ಇಲ್ಲಿಯ ಜನರು ಭಾವಹೀನರು. ಆ ಮಧುರ ಸ್ವಭಾವದ "ಮಾಧವನನ್ನು" ಇವರು ಶ್ಲಾಘಿಸರು. ಜಗತ್ತಿನ ಮುಕ್ಕಾಲುಪಾಲು ಜನರೇ ಹೀಗೆ. ಬುದ್ಧಿಯ ಕಸರತ್ತಿನ ಕಡೆ ತಿರುಗುವರು. ಇಲ್ಲವೆ ಯಂತ್ರ, ತಂತ್ರ, ಔಷಧಿಯ ಕಡೆ ತಿರುಗುವರು. "ಪ್ರೀತಿ, ಜೀವನ, ಸ್ವಾತಂತ್ರ" ಎಂಬ ವಿಚಾರದಲ್ಲಿ ಇಲ್ಲಿಯ ಜನರು ಕೂಗುವಷ್ಟು ನಾನು ಇನ್ನೆಲ್ಲಿಯೂ ಕೇಳಿಲ್ಲ. ಆದರೆ ಎಲ್ಲಾ ಕಡೆಗಿಂತ ಕಡಿಮೆ ಇಲ್ಲಿಯ ಜನರಿಗೆ ಈ ವಿಚಾರ ತಿಳಿದಿರುವುದು. ಇಲ್ಲಿ ದೇವರೆಂದರೆ

ಉಗ್ರಸ್ವಭಾವದ ಒಬ್ಬ ದೊಡ್ಡ ಅಧಿಕಾರಿ; ಇಲ್ಲವೇ ಇದ್ದರೆ ರೋಗಗಳನ್ನು ಗುಣಮಾಡುವ ಒಂದು ಶಕ್ತಿಯ ತರಂಗ. ದೇವರು ಇವರಿಗೆ ಒಳ್ಳೆಯದು ಮಾಡಲಿ. ಈ ಅರಗಿಳಿಗಳು ಹಗಲು ರಾತ್ರಿ ಪ್ರೀತಿ, ಪ್ರೀತಿ, ಪ್ರೀತಿ ಎಂಬ ವಿಚಾರವನ್ನೇ ಮಾತನಾಡುತ್ತಿರುವರು.

ಈಗ, ನಿಮಗೆ ಸುಂದರ ಕನಸುಗಳು, ಸುಂದರ ಆಲೋಚನೆಗಳನ್ನು ದೇವರು ನೀಡಲಿ. ನೀವು ಉದಾರ ಮನಸ್ಸಿನ ಒಳ್ಳೆಯ ಸ್ವಭಾವದವರು. ಆತ್ಮವನ್ನು ಜಡಮಾಡುವುದಕ್ಕಿಂತ, (ಅಂದರೆ ಜಡಪ್ರಪಂಚದ ಹೀನ ಸ್ಥಿತಿಗೆ ಆತ್ಮಶಕ್ತಿಯನ್ನು ಈ ಜನರು ತಂದಿರುವರು), ಅದರ ಬದಲು ಜಡವಸ್ತುವನ್ನು ಆತ್ಮಶಕ್ತಿಯನ್ನಾಗಿ ಬದಲಾಯಿಸಬೇಕು. ಆ ಅನಂತ ಸೌಂದರ್ಯದ, ಅನಂತಶಾಂತಿಯ, ಅನಂತ ಕಲ್ಯಾಣದ ಜ್ಯೋತಿಯ ದರ್ಶನವನ್ನು ದಿನಕ್ಕೆ ಒಮ್ಮೆಯಾದರೂ ಮಾಡಿ ಅದರಲ್ಲೇ ದಿನವೆಲ್ಲ ಐಕ್ಯನಾಗುವುದಕ್ಕೆ ಪ್ರಯತ್ನಿಸಬೇಕು. ಮಾಯಾಮಂತ್ರ, ತಂತ್ರಗಳೆಂಬ ಗುಪ್ತವಾದ ಯಾವ ವಿಷಯಗಳನ್ನೂ ಹುಡುಕಲೂ ಹೋಗಬೇಡಿ. ಅವುಗಳನ್ನು ಕಾಲಿನಿಂದಲೂ ಮುಟ್ಟಬೇಡಿ. ಹಗಲಿರುಳು ನಿಮ್ಮ ಮನಸ್ಸು ದೇವರ ಅಡಿದಾವರೆಯನ್ನು ಮುಟ್ಟಲು ವಿಘ್ನವಿಲ್ಲದೆ ಮೇಲೇರಲಿ. ಆ ಭಗವಂತನ ಪೀಠ ನಿಮ್ಮೆದೆಯಲ್ಲಿಯೇ ಇದೆ. ದೇಹ ಮತ್ತು ಉಳಿದವುಗಳು ತಮಗೆ ತಾವೆ ನೋಡಿಕೊಳ್ಳಲಿ. ಜೀವನ ಕ್ಷಣಿಕ. ಕೋಟಿ ಮಾಯವಾಗುವ ಒಂದು ಕನಸಿನಂತೆ. ವಯಸ್ಸು ಅದಂತೇ ಯೌವನ ಸೌಂದರ್ಯಗಳು ಬಾಡುವುವು. ಹಗಲಿರುಳು ಇದನ್ನು ಪಠಿಸಿ. "ನೀನೇ ನನ್ನ ತಂದೆ, ನೀನೇ ನನ್ನ ತಾಯಿ, ನೀನೇ ನನ್ನ ಪತಿ, ನೀನೇ ನನ್ನ ಪ್ರೇಮ, ನೀನೇ ನನ್ನ ಪ್ರಭು, ನೀನೇ ನನ್ನ ದೇವರು, ನೀನಲ್ಲದೆ ನನಗೆ ಮತ್ತೇನೂ ಬೇಡ. ನೀನು ನನ್ನಲ್ಲಿ, ನಾನು ನಿನ್ನಲ್ಲಿ. ನಾನೇ ನೀನು, ನೀನೇ ನಾನು. ಐಶ್ವರ್ಯ ನಶಿಸುವುದು, ಸೌಂದರ್ಯ ಬಾಡುವುದು, ಜೀವನ ಓಡುವುದು, ಅಧಿಕಾರ ಹೋಗುವುದು, ಆದರೆ ದೇವರೊಬ್ಬನೆ ಅನವರತವಿರುವುದು. ಪ್ರೇಮ ಒಂದೆ ಅನವರತ ಬಾಳುವುದು. ದೇಹವೆಂಬ ಯಂತ್ರವನ್ನು ಸರಿಯಾಗಿ ಇಟ್ಟಿರುವುದರಲ್ಲಿ ಒಂದು ಸಂತೋಷವಿದ್ದರೆ, ದೇಹದೊಂದಿಗೆ ಆತ್ಮ ನರಳದಂತೆ ತಡೆಯುವುದು ಅಧಿಕತರ ಸಂತೋಷ. ಜಡವನ್ನು ಅದರ ಪಾಲಿಗೆ ಬಿಟ್ಟು,

ನೀನು ಜಡವಲ್ಲ ಎಂದು ತೋರುವುದಕ್ಕೆ ಇದೇ ಒಂದು ಪ್ರಮಾಣ ದೃಶ್ಯ. ದೇವರಲ್ಲಿ ನಂಬಿಕೆ ಇಡು! ದೇಹಕ್ಕೆ ಮತ್ತು ಇನ್ನು ಯಾವುದಕ್ಕಾದರೂ ಏನಾದರೇನಂತೆ! ಭಯಂಕರ ಪಾಪದೆದುರಿಗೆ ಇರುವಾಗ, ನನ್ನ ದೇವರೆ, ನನ್ನ ಪ್ರೇಮವೇ ಎನ್ನು! ಜಗದಲ್ಲಿ ಎಂತಹ ಪಾಪವಾದರೂ ಎದುರಿಸಲಿ, ನನ್ನ ದೇವರೆ, ನನ್ನ ಪ್ರೇಮವೆ ಎನ್ನು! ನೀನು ಎದುರಿಗೆ ಇರುವೆ, ನನಗೆ ಕಾಣುತ್ತಿದೆ. ನೀನು ನನ್ನಲ್ಲಿರುವೆ. ನನಗೆ ಅದು ತೋರುತ್ತಿದೆ. ನಾನು ನಿನ್ನವನು ನೀನು ನನ್ನನ್ನು ಸ್ವೀಕರಿಸು. ನಾನು ಪ್ರಪಂಚಕ್ಕೆ ಸಂಬಂಧ ಪಟ್ಟವಸ್ತುವಲ್ಲ. ನನ್ನನ್ನು ತ್ಯಜಿಸಬೇಡ. ವಜ್ರದಗಣಿಯನ್ನು ಬಿಟ್ಟು ಗಾಜಿನ ಚೂರನ್ನು ಅರಿಸಲು ಹೋಗಬೇಡ! ದೊಡ್ಡ ಅವಕಾಶ ಸಿಕ್ಕಿರುವುದು ಈ ಜೀವನದಲ್ಲಿ. ಏನು? ಪ್ರಾಪಂಚಿಕ ಭೋಗವನ್ನು ಹುಡುಕುವಿಯಾ? ಭಗವಂತನು ಅನಂತ ಆನಂದದ ಗಣಿ. ಪರಮಪೂಜ್ಯವಾದ ವಸ್ತುವನ್ನು ಹುಡುಕು. ಪರಮಪೂಜ್ಯನಾದ ದೇವರನ್ನು ಸೇರಲು ಪ್ರಯತ್ನಪಡು. ನೀನು ಪರಮ ಪದವನ್ನು ಮುಟ್ಟೇಮುಟ್ಟುವೆ.

ಅನಂತ ಆಶೀರ್ವಾದಗಳು,

ನಿನ್ನ ವಿವೇಕಾನಂದ.

(೨೮)

ಅಮೇರಿಕಾ,

೨೧ ನೇ ಸೆಪ್ಟೆಂಬರ್, ೧೮೯೪

ಪ್ರಿಯ ಅ....,

ನಾನು ಬಿಡುವಿಲ್ಲದೆ ಊರಿಂದ ಊರಿಗೆ ಅಲೆಯುತ್ತಾ ಪಾಠ ಪ್ರವಚನ ಉಪನ್ಯಾಸದಲ್ಲಿ ನಿರತನಾಗಿರುವೆನು.

ನಾನು ಬರೆಯಬೇಕೆಂದು ನಿರ್ಧರಿಸಿದ ಪುಸ್ತಕಕ್ಕೆ ಇನ್ನೂ ಏನನ್ನು ಬರೆಯಲಿಲ್ಲ. ನಂತರ ನಾನು ಅದನ್ನು ತೆಗೆದುಕೊಳ್ಳಲು ಸಾಧ್ಯವಾಗಬಹುದು. ಉದಾರ ದೃಷ್ಟಿಯವರೊಂದಿಗೆ ಮತ್ತು ಸಂಪ್ರದಾಯವಂತರಲ್ಲಿ

ಕೆಲವು ಒಳ್ಳೆಯ ಸ್ನೇಹಿತರನ್ನು ಮಾಡಿಕೊಂಡಿರುವೆನು. ಬೇಗ ಭರತ ಖಂಡಕ್ಕೆ ಹಿಂತಿರುಗಬಹುದೆಂದು ಎಣಿಸಿದ್ದೇನೆ. ನನಗೆ ಈ ದೇಶ ಸಾಕಾಯಿತು. ಹೆಚ್ಚು ಕೆಲಸ ದುರ್ಬಲನನ್ನಾಗಿ ಮಾಡುತ್ತಿದೆ. ಹೆಚ್ಚು ಬಹಿರಂಗ ಉಪನ್ಯಾಸ, ಸದಾ ಅವಾಂತರ, ಈ ಅಸ್ವಸ್ಥತೆಗೆ ಕಾರಣ. ಅದಕ್ಕೆ ನಾನು ಬೇಗ ಹಿಂತಿರುಗುವುದು. ಹಲವರಿಗೆ ಬೇಕಾದವನಾಗಿರುವುದರಿಂದ ವಿಸ್ತಾರವಾಗುತ್ತಿರುವ ಜನಸಂಗಡವೇನೋ ಇದೆ. ಅವರು ನನ್ನನ್ನು ಸದಾ ಕಾಲದಲ್ಲೂ ಇಲ್ಲೇ ಇರಲು ಬಯಸುವರು. ಪತ್ರಗಳಿಂದ ಬಂದ ಯಶಸ್ಸು, ಜನರೆದುರಿಗೆ ನಟನೆ, ನನಗೆ ಸಾಕಾಗಿದೆ. ನನಗೆ ಇದು ಸ್ವಲ್ಪವೂ ಬೇಕಾಗಿಲ್ಲ. ಕೇವಲ ದಯೆಯಿಂದ ಮಾತ್ರ ಪ್ರೇರೇಪಿತರಾಗಿ ಯಾವ ದೇಶದಲ್ಲೂ ಜನರು ಹೆಚ್ಚು ಒಳ್ಳೆಯದನ್ನು ಮಾಡುವುದಿಲ್ಲ.

ಕ್ರೈಸ್ತ ಧರ್ಮದಲ್ಲಿ ದಾನಮಾಡುವ ಕೆಲವರು ವ್ಯವಹಾರ ಚಾತುರ್ಯದ ದೃಷ್ಟಿಯಿಂದಲೋ, ನರಕ ಭಯದಿಂದಲೋ ಮಾಡುವರು. ನಮ್ಮ ಬಂಗಾಳಿಯ ಗಾದೆಯಂತೆ—"ಹಸುಕೊಂದು, ಅದರ ಚರ್ಮದಿಂದ ಒಂದು ಜೊತೆ ಎಕ್ಕಡಮಾಡಿ ಬ್ರಾಹ್ಮಣನಿಗೆ ದಾನಮಾಡುವುದು"—ಅದು ಇಲ್ಲಿಯೂ ಹೀಗೆ, ಪ್ರಪಂಚದ ಎಲ್ಲಾ ಕಡೆಯಲ್ಲಿಯೂ ಹೀಗೆ. ನಮ್ಮ ಜನಾಂಗದೊಂದಿಗೆ ಹೋಲಿಸಿ ನೋಡಿದರೆ ಪಾಶ್ಚಾತ್ಯರು ಬೆಳ್ಳುಣರು. ಪ್ರಪಂಚದಲ್ಲಿ ಅತಿಘೋರಾಳಿಗಳು ಏಷ್ಯದ ಜನಾಂಗದವರು ಎಂದು ನಾನು ದೃಢವಾಗಿ ನಂಬುತ್ತೇನೆ. ಆದರೆ ಅವರು ಬಹಳ ಬಡವರು.

ನಾನು ನ್ಯೂಯಾರ್ಕಿನಲ್ಲಿ ಕೆಲವು ತಿಂಗಳು ಇರುತ್ತೇನೆ. ಅದೇ ದೇಶದ ತಲೆ, ಕೈ ಮತ್ತು ಹಣದಚೀಲ. ಬಾಸ್ಟನ್ ನಗರವನ್ನು ಬ್ರಾಹ್ಮಣರ ಊರೆಂದು ಕರೆಯುತ್ತಾರೆ. ಅಮೇರಿಕಾ ದೇಶದಲ್ಲಿ ನನಗೆ ಸಹಾನುಭೂತಿ ತೋರುವ ನೂರಾರು, ಸಾವಿರಾರು ಮಂದಿ ಇರುವರು. ನ್ಯೂಯಾರ್ಕಿನ ಜನರು ಸರಳ ಸ್ವಭಾವದವರು. ನನಗೆ ಕೆಲವು ಪ್ರಭಾವಶಾಲಿ ಸ್ನೇಹಿತರಿರುವುದರಿಂದ ಏನುಮಾಡಲು ಸಾಧ್ಯವೋ ನೋಡುತ್ತೇನೆ. ಅಂತೂ ಉಪನ್ಯಾಸಕೊಟ್ಟು ನನಗೆ ಬೇಜಾರಾಗಿದೆ. ಪಾಶ್ಚಾತ್ಯರಿಗೆ ಉತ್ತಮ ಆಧ್ಯಾತ್ಮಿಕ ಜೀವನವನ್ನು ಗ್ರಹಿಸಬೇಕಾದರೆ ಇನ್ನೂ ಬಹಳ ಕಾಲ ಹಿಡಿಯುವುದು. ಎಲ್ಲಾ ಪೌಂಡು, ಷಿಲಿಂಗು, ಪೆನ್ನು ಇವರಿಗೆ. ಅವರಿಗೆ

ಧರ್ಮ, ಏನಾದರೂ ಹಣ, ಆರೋಗ್ಯ, ಸೌಂದರ್ಯ, ದೀರ್ಘಾಯುಸ್ಸು ಇದನ್ನು ಕೊಟ್ಟರೆ ಎಲ್ಲರೂ ಅಲ್ಲಿಗೆ ನುಗ್ಗುವರು, ಇಲ್ಲದೇ ಇದ್ದರೇ ಇಲ್ಲ.....

ಬಾ....ಬೆ....ಬೆ ಮತ್ತು ನಮ್ಮ ಸ್ನೇಹಿತರಿಗೆಲ್ಲಾ ನನ್ನ ವಿಶ್ವಾಸವನ್ನು ತಿಳಿಸು.

ನಿನ್ನ ಚಿರ ವಿಶ್ವಾಸಪೂರ್ವಕ,

ವಿವೇಕಾನಂದ.

(೨೯)

ನ್ಯೂಯಾರ್ಕ್

೨೫ ನೇ ಸೆಪ್ಟೆಂಬರ್, ೧೮೯೪

ನನ್ನ ಪ್ರಿಯ—,

ಕೆಲವು ಪತ್ರಗಳನ್ನು ನಿನ್ನಿಂದ ಸ್ವೀಕರಿಸಿ ನನಗೆ ತುಂಬಾ ಸಂತೋಷವಾಯಿತು. ಸ—ಮತ್ತು ಇನ್ನು ಕೆಲವರು ಸಮಾಜದಲ್ಲಿ ಒಂದು ಆಂದೋಳನವನ್ನು ಉಂಟುಮಾಡುತ್ತಿರುವರೆಂದು ಕೇಳಿ ತುಂಬಾ ಹರ್ಷವಾಯಿತು. ನಾವು ಜನರನ್ನು ಹುರಿದುಂಬಿಸಬೇಕು. ಇಲ್ಲದೇ ಇದ್ದರೆ ಪ್ರಯೋಜನವಿಲ್ಲ. ಇಡೀ ಪ್ರಪಂಚದಮೇಲೆ ನಿಮ್ಮ ಪ್ರಭಾವ ವನ್ನು ಬೀರುವಿರಿ. ಗುರುದೇವನಿಗೆ ಜಯವಾಗಲಿ. "ಶ್ರೇಯಾಂಸಿ ಬಹುವಿಘ್ನಾನಿ" ಯಾವ ಒಂದು ಶ್ರೇಯಸ್ಕರವಾದ ಕೆಲಸಕ್ಕೂ ವಿಘ್ನಗಳು ಬಹಳ ಎಂಬುದು ನಿಮಗೆ ಗೊತ್ತಿದೆ. ನಮ್ಮನ್ನು ತಡೆಯಲು ಬಂದ ಈ ವಿಘ್ನಗಳೇ ಉತ್ತಮಶೀಲವನ್ನು ನಮ್ಮಲ್ಲಿ ಉಂಟುಮಾಡುವುದು. ಪಾದ್ರಿಗಳು ಮತ್ತು ಅವರ ಸಂಗಡಕ್ಕೆ ಸೇರಿದ ಜನರಿಗೆ ಇಂತಹ ವಿಘ್ನ ಗಳನ್ನು ಎದುರಿಸಲು ಸಾಧ್ಯವೇ? ಮಹಾಪಂಡಿತರೇ ಸೋತಿರುವ ಕಡೆ ದಡ್ಡರು ಜಯಶೀಲರಾಗುವರೇ? ಇದರಿಂದ ಏನು ಪ್ರಯೋಜನ, ನನ್ನ ಮಗು! ಇದನ್ನು ಮನಸ್ಸಿಗೆ ಹಚ್ಚಿಕೊಳ್ಳಬೇಡ. ಯಾರು ಒಂದು ಕಾರ್ಯವನ್ನು ಮಾಡುತ್ತಿರುವಾಗಲೂ ಕೂಡ, ಅದಕ್ಕೆ ಉತ್ತೇಜನ ಕೊಡುವವರು ಕೆಲವರು, ಅದರಲ್ಲಿ ತಪ್ಪು ಕಂಡುಹಿಡಿದು ದೂರುವವರು

ಕೆಲವರು ಇದ್ದೇ ಇರುವರು. ನಿನ್ನ ಕೆಲಸವನ್ನು ನೀನುಮಾಡು. ಉಳಿದ ಸಂಗತದವರಿಗೆ ಉತ್ತರವನ್ನು ಕೊಡುವ ಅಗತ್ಯವೇನಿದೆ? "ಸತ್ಯಮೇವ ಜಯತೆ ನ ಅನೃತಂ. ಸತ್ಯೇನ್ನೈವ ಪಂಥಾ ವಿತತೋ ದೇವಯಾನಃ": ಸತ್ಯವೇ ಗೆಲ್ಲುವುದು. ಅಸತ್ಯವೆಂದಿಗೂ ಗೆಲ್ಲುವುದಿಲ್ಲ. ಸತ್ಯದ ಮೂಲಕವಾಗಿದೆ ದೇವಯಾನದ ಮಾರ್ಗ—ಕ್ರಮೇಣ ಎಲ್ಲವೂ ಬರುವುದು.

ಇಲ್ಲಿಯ ಜನರು ಬೇಸಗೆ ಸಮಯದಲ್ಲಿ ಸಮುದ್ರತೀರಕ್ಕೆ ಹೋಗುವರು. ನಾನು ಹಾಗೆಮಾಡಿದೆನು. ಇಲ್ಲಿಯ ಜನರಿಗೆ ದೋಣಿ ನಡೆಸುವುದರಲ್ಲಿ, ಯಾಚ್ ನಡೆಸುವುದರಲ್ಲಿ ಬಹು ಹುಚ್ಚು ಹಿಡಿದಿದೆ. ಯಾಚ್ ಎಂದರೆ ಒಂದು ಸಣ್ಣ ಹಗುರವಾದ ದೋಣಿ. ಮುದುಕರಾಗಲೀ, ಹುಡುಗರಾಗಲಿ ಯಾರಿಗೆ ಸ್ವಲ್ಪ ಅನುಕೂಲವಿದೆಯೋ ಅವರಿಗೆಲ್ಲ ಇಂತಹ ಒಂದೊಂದು ಸಣ್ಣ ದೋಣಿಗಳಿರುವುವು. ಪ್ರತಿದಿನವೂ ಸಮುದ್ರಕ್ಕೆ ಇದರಲ್ಲಿ ಹೋಗುವರು. ಪುನಃ ಕುಡಿಯುವುದಕ್ಕೆ, ತಿನ್ನುವುದಕ್ಕೆ, ಕುಣಿಯುವುದಕ್ಕೆ ಹಿಂತಿರುಗುವರು. ಹಗಲು ರಾತ್ರಿ ಸಂಗೀತಕ್ಕೆ ಬಿಡುವೇ ಇಲ್ಲ. ಮನೆಯ ಒಳಗೆ ಇರಬೇಕಾದರೆ ಪಿಯಾನೊಗಳ ಗಲಾಟೆ ಹೇಳತೀರದು.

ನನ್ನ ಕಾಗದವನ್ನು ಯಾರ ವಿಳಾಸಕ್ಕೆ ನೀವು ಇಲ್ಲಿ ಕಳುಹಿಸಿದರೋ ಅವರ ವಿಚಾರವಾಗಿ ನಾನು ನಿಮಗೆ ಸ್ವಲ್ಪ ಹೇಳುತ್ತೇನೆ. ಅವರು, ಅವರ ಹೆಂಡತಿಯವರು ವೃದ್ಧದಂಪತಿಗಳು. ಅವರಿಗೆ ಇಬ್ಬರು ಹೆಣ್ಣು ಮಕ್ಕಳು, ಒಬ್ಬಗಂಡುಮಗ, ಇಬ್ಬರು ಸೋದರ ಸೊಸೆಯರೂ ಇರುವರು. ಮಗನು ಪರದೇಶದಲ್ಲಿ ಸಂಪಾದನೆಯನ್ನು ಮಾಡುತ್ತಿರುವನು. ಹೆಣ್ಣು ಮಕ್ಕಳು ಮನೆಯಲ್ಲಿ ವಾಸವಾಗಿರುವರು. ಈ ದೇಶದಲ್ಲಿ ಸಂಬಂಧ ಹೆಣ್ಣು ಮಕ್ಕಳ ಮೂಲಕ. ಮಗನು ಮದುವೆಯಾದಮೇಲೆ ಮನೆಗೆಹೊರಗೆ ಆದಂತೆ. ಆದರೆ ಮಗಳ ಗಂಡನೋ ಅನೇಕವೇಳೆ ಮಾವನನ್ನು ನೋಡಲು ಬರುತ್ತಾನೆ. ಅವರು ಹೀಗೆನ್ನುವರು.

"ಮಗನು ಅವನ ಹೆಂಡತಿಬರುವ ತನಕ ಮಗ,
ಮಗಳಾದರೋ ಅವಳ ಜೀವನವೆಲ್ಲ ಮಗಳೆ."

ನಾಲ್ಕು ಹುಡುಗಿಯರು ಇನ್ನೂ ಸಣ್ಣವರು. ಮದುವೆಯಾಗಿಲ್ಲ. ಮದುವೆ ಬಹಳ ಕಷ್ಟದ ಕೆಲಸ ಇಲ್ಲಿ. ಮೊದಲನೆಯದಾಗಿ ಅವರ ಮನಸ್ಸಿಗೆ ಮೆಚ್ಚುವಂತಹ ಗಂಡಂದಿರು ಸಿಕ್ಕಬೇಕು. ಎರಡನೆಯದಾಗಿ ಅವನು ಶ್ರೀಮಂತನಾಗಿರಬೇಕು................ ಅವರು ಬಹುಶಃ ಮದುವೆ ಮಾಡಿಕೊಳ್ಳುವುದೇ ಇಲ್ಲ ಎಂದು ತೋರುತ್ತದೆ. ನನ್ನ ಪರಿಚಯದಿಂದ ಅವರ ಮನಸ್ಸು ಈಗ ವೈರಾಗ್ಯದ ಕಡೆ ತಿರುಗಿದೆ. ಆತ್ಮ ವಿಚಾರಪರರಾಗಿರುವರು ಸದ್ಯಕ್ಕೆ!

ಇಬ್ಬರು ಹೆಣ್ಣುಮಕ್ಕಳಿಗೆ ಹೊಂಬಣ್ಣದ ಕೂದಲುಗಳು. ಅದಕ್ಕೆ ಬ್ಲಾಂಡ್ ಎನ್ನುತ್ತಾರೆ. ಇಬ್ಬರು ಸೋದರ ಸೊಸೆಯರಿಗೆ ಕಪ್ಪು ಕೂದಲುಗಳು. ಇದಕ್ಕೆ ಬ್ರೂನೆಟ್ ಎನ್ನುತ್ತಾರೆ. ಅವರಿಗೆ ಅನೇಕ ಕಸಬುಗಳು ಗೊತ್ತಿದೆ. ಸೋದರ ಸೊಸೆಯರು ಅಷ್ಟು ಶ್ರೀಮಂತರಲ್ಲ. ಅವರು ಒಂದು ಶಿಶುವಿಹಾರವನ್ನು ನಡೆಸುತ್ತಿರುವರು. ಆದರೆ ಹೆಣ್ಣುಮಕ್ಕಳು ಏನನ್ನೂ ಸಂಪಾದಿಸುವುದಿಲ್ಲ. ಈ ದೇಶದ ಅನೇಕ ಹುಡುಗಿಯರು ತಮ್ಮ ಜೀವನೋಪಾಯಕ್ಕೆ ಹಣ ಸಂಪಾದನೆಮಾಡುತ್ತಾರೆ. ಯಾರೂ ಇನ್ನೊಬ್ಬರ ಆಶ್ರಿತರಾಗಲು ಬಯಸುವುದಿಲ್ಲ. ಕೋಟ್ಯಾಧೀಶ್ವರರ ಮಕ್ಕಳೂ ಕೂಡ ಸಂಪಾದಿಸುವರು. ಅವರು ಮದುವೆಯಾಗಿ ತಮ್ಮದೇ ಒಂದು ಸಂಸಾರವನ್ನೂ ಹೂಡುವರು. ಈ ಮನೆಯ ಹೆಣ್ಣು ಮಕ್ಕಳು ನನ್ನನ್ನು ಅಣ್ಣನೆಂದು ಕರೆಯುತ್ತಾರೆ. ಅವರ ತಾಯಿಯನ್ನು ನಾನು ತಾಯಿಯೆಂದು ಕರೆಯುತ್ತೇನೆ. ನನ್ನ ಸಾಮಾನುಗಳೆಲ್ಲ ಅವರ ಮನೆಯಲ್ಲಿವೆ. ನಾನು ಎಲ್ಲಿಗೆ ಹೋದರೂ ಅವರು ಅದನ್ನು ನೋಡಿಕೊಳ್ಳುತ್ತಿರುವರು. ಇಲ್ಲಿ ಹುಡುಗರು ಇನ್ನೂ ಚಿಕ್ಕ ವಯಸ್ಸಿನಲ್ಲಿ ಕೆಲಸವನ್ನು ಹುಡುಕಿಕೊಂಡು ಹೋಗುವರು. ಅದೇ ಕಾಲದಲ್ಲಿ ಹುಡುಗಿಯರು ವಿಶ್ವವಿದ್ಯಾನಿಲಯಗಳಲ್ಲಿ ಕಲಿಯುತ್ತಿರುತ್ತಾರೆ. ಆದಕಾರಣ ಒಂದು ಸಭೆಯಲ್ಲಿ ಶೇಕಡ ೯೯ ಮಂದಿ ಪ್ರೇಕ್ಷಕರು ಹೆಂಗಸರು. ಹುಡುಗರನ್ನು ಇವರೊಂದಿಗೆ ಹೋಲಿಸುವುದಕ್ಕೆ ಆಗುವುದೇ ಇಲ್ಲ.

ಇಲ್ಲಿ ಅನೇಕರು ಭೂತಾರಾಧಕರು. ಯಾರು ಭೂತವನ್ನು ಬರುವಂತೆ ಪ್ರೇರೇಪಿಸುತ್ತಾರೊ ಅವರನ್ನು ಮಧ್ಯಸ್ಥಗಾರರು ಎನ್ನುತ್ತಾರೆ. ಆತನು

ಒಂದು ತೆರೆಯ ಹಿಂದೆ ಹೋಗುತ್ತಾನೆ. ನಂತರ ಅತನಿಂದ ನಾನಾ ಬಣ್ಣದ ನಾನಾ ಆಕಾರದ ಭೂತಗಳು ಬರುತ್ತವೆ. ನಾನು ಇಂತಹ ಕೆಲವು ದೃಶ್ಯಗಳನ್ನು ನೋಡಿರುವೆನು. ಆದರೆ ಅದೆಲ್ಲ ಮೋಸದಂತೆ ಕಾಣುತ್ತದೆ. ಇನ್ನೂ ಕೆಲವು ದೃಶ್ಯಗಳನ್ನು ನೋಡಿ ಕೊನೆಯ ತೀರ್ಮಾನಕ್ಕೆ ಬರುತ್ತೇನೆ. ಅನೇಕ ಭೂತಾರಾಧಕರು ನನ್ನನ್ನು ಗೌರವಿಸುತ್ತಾರೆ.

ನಂತರ ಕ್ರೈಸ್ತ ವಿಜ್ಞಾನಿಗಳು ಬರುವರು. ಇರುವ ಪಂಗಡಗಳಲ್ಲೆಲ್ಲಾ ಅವರೇ ಬಹಳ ಪ್ರಭಾವವುಳ್ಳವರು. ಎಲ್ಲೆಲ್ಲಿ ನೋಡಿದರೂ ಅವರೇ ಈಗ. ವೇಗದಿಂದ ಅವರ ಪಂಗಡ ಹರಡುತ್ತಿದೆ. ಪೂರ್ವಾಚಾರಪರಾಯಣರಿಗೆ ಇವರ ಮೇಲೆ ಅಸೂಯೆ ಉಂಟಾಗಿದೆ. ಅವರು ವೇದಾಂತಿಗಳು. ಅಂದರೆ ಅವರು ಕೆಲವು ಅದ್ವೈತ ಸಿದ್ಧಾಂತಗಳನ್ನು ತೆಗೆದುಕೊಂಡು ಅದನ್ನು ಬೈಬಲಿನಲ್ಲಿ ಸೇರಿಸುವರು. "ಸೋಹಂ, ಸೋಹಂ" ನಾನೇ ಅವನು ಎಂದು ಉಚ್ಚಾರಣೆಮಾಡಿ ರೋಗಗಳನ್ನು ಮಾನಸಿಕ ಶಕ್ತಿಯ ಬಲದಿಂದ ಗುಣಮಾಡುವರು. ಅವರೆಲ್ಲರೂ ನನ್ನನ್ನು ವಿಶೇಷವಾಗಿ ಪ್ರೀತಿಸುತ್ತಾರೆ.

ಈಗಿನ ಪೂರ್ವಾಚಾರ ಪರಾಯಣರಾದ ಕ್ರೈಸ್ತರು ಸಹಾಯಕ್ಕೆ ಗೋಗರೆಯುತ್ತಿರುವರು. ದೆವ್ವಗಳ ಆರಾಧನೆ ಹಿಂದಿನ ಕಾಲದ ಮಾತಾಗಿದೆ. ನನಗೆ ತುಂಬಾ ಅಂಜುವರು. ನನ್ನನ್ನು "ಏನು ಸಾಂಕ್ರಾಮಿಕ ಜಾಡ್ಯದಂತೆ ಆಗಿರುವನು ಇವನು. ಸಾವಿರಾರು ಜನ ಗಂಡಸರೂ ಹೆಂಗಸರೂ ಇವನನ್ನು ಹಿಂಬಾಲಿಸುತ್ತಿರುವರಲ್ಲ! ಪೂರ್ವಾಚಾರವನ್ನು ಇವನು ಸಂಪೂರ್ಣ ನಾಶಮಾಡುತ್ತಾನೆ" ಎನ್ನುತ್ತಿರುವರು. ಜ್ಞಾನದೀಪಿಗೆಯನ್ನು ಹತ್ತಿಸಿರುವೆವು. ಗುರುದೇವನ ದಯೆಯಿಂದ ಬೆಳಗುತ್ತಿರುವ ಆ ಜ್ಯೋತಿ ಆರುವುದಿಲ್ಲ. ಇನ್ನು ಕೆಲವು ಕಾಲದಲ್ಲಿ ಈ ಮತಭ್ರಾಂತರ ಅಹಂಕಾರ ಅಡಗುವುದು.

ಥಿಯಾಸಫಿಸ್ಟರಿಗೆ ಅಷ್ಟೇನೂ ಪ್ರಭಾವವಿಲ್ಲ. ಅವರೂ ಕೂಡ ಈ ಮತಭ್ರಾಂತರಿಗೆ ವಿರೋಧವಾಗಿರುವರು.

ಈ ಕ್ರೈಸ್ತ ವಿಜ್ಞಾನಿಗಳು ನಮ್ಮ ಕರ್ತಾಭಾಜಾ ಪಂಗಡದಂತೆ, "ನನಗೆ ಏನೂ ಖಾಯಿಲೆಯಿಲ್ಲ" ಎಂದು ಹೇಳಿದರೆ ಸಾಕು, ಆಗಲೇ ಗುಣವಾಗುವುದು. "ನಾನೇ ಅವನು, ಸೋಹಂ" ಎಂದರೆ ಸಾಕು.

ಎಲ್ಲಾ ಪಾಪಗಳಿಂದ ಬಿಡುಗಡೆ ಹೊಂದುವರು, ನಿಶ್ಚಿಂತರಾಗಿರಬಹುದು. ಇದು ಕೇವಲ ಜಡವಾದಿಗಳ ದೇಶ. ಈ ಕ್ರೈಸ್ತ ದೇಶದ ಜನಾಂಗಗಳಿಗೆ ಧರ್ಮದಲ್ಲಿ ಶ್ರದ್ಧೆ ಹುಟ್ಟಬೇಕಾದರೆ, ಏನಾದರೂ ಖಾಯಿಲೆ ಗುಣಮಾಡಬೇಕು; ಚಮತ್ಕಾರವಾದ ಮಾಯಾ ಮಂತ್ರಗಳನ್ನು ಮಾಡಬೇಕು; ಹಣ ಸಂಪಾದನೆಗೆ ದಾರಿಮಾಡಿಕೊಡಬೇಕು. ಧರ್ಮವಲ್ಲದೆ ಇರುವ ಬೇರೆ ಎಲ್ಲಾ ವಿದ್ಯೆಯ ಅಲ್ಪಭಾಗವನ್ನು ತಿಳಿದಿರಬೇಕು. ಆಗ ಮಾತ್ರ ಅವನಿಗೆ ಪುರಸ್ಕಾರ, ಇಲ್ಲದೇ ಇದ್ದರೆ ತಿರಸ್ಕಾರ. ಆದರೆ ಕೆಲವು ಮಹನೀಯರು ಇದಕ್ಕೆ ವಿರೋಧವಾಗಿರುವರು.

ಇಲ್ಲಿಯ ಜನರಿಗೆ ನನ್ನಲ್ಲಿ ಒಬ್ಬ ಹೊಸ ಮನುಷ್ಯ ಸಿಕ್ಕಿರುವನು. ಪೂರ್ವಾಚಾರ ಪರಾಯಣರೂ ಕೂಡ ಚಿಂತಾಜನಕರಾಗಿರುವರು. ಇಲ್ಲಿಯ ಜನರು ಒಂದು ವಿಧವಾದ ಗೌರವದಿಂದ ನನ್ನನ್ನು ನೋಡುತ್ತಿರುವರು. ನನ್ನ ಸಮೋಪದೇಶ, ಬ್ರಹ್ಮಚರ್ಯ, ಶೀಲಪವಿತ್ರತೆ ಇವುಗಳಿಗಿಂತ ಹೆಚ್ಚು ಶಕ್ತಿ ಯಶಸ್ವಿಯಾಗಿರುವುದು. ಮದ್ರಾಸಿನ ಪುರಜನರು ನನಗೆ ಒಪ್ಪಿಸಿದ ಮಾನಪತ್ರಕ್ಕೆ ಉತ್ತರವನ್ನು ಬರೆಯುವುದರಲ್ಲಿ ನಿರತನಾಗಿರುವೆನು. ಅದನ್ನು ಇಲ್ಲಿಯ ಪತ್ರಿಕೆಗಳಲ್ಲಿ ಪ್ರಕಟಿಸಿರುವರು. ಇದರಿಂದ ಜನರಲ್ಲಿ ಒಂದು ಕುತೂಹಲ ಉಂಟಾಗಿರುವುದು. ಅಗ್ಗವಾದರೆ ಅದನ್ನು ಮುದ್ರಿಸಿ ಕಳುಹಿಸುತ್ತೇನೆ. ತಗ್ಗಾದರೆ ಒಂದು ಪ್ರತಿಯನ್ನು ಟೈಪ್ ಮಾಡಿ ಕಳುಹಿಸುತ್ತೇನೆ. ನಿನಗೂ ಒಂದು ಪ್ರತಿಯನ್ನು ಕಳುಹಿಸುತ್ತೇನೆ. "ಇಂಡಿಯನ್ ಮಿರರ್" ನಲ್ಲಿ ಪ್ರಚುರಪಡಿಸಿ. ಇಲ್ಲಿ ಮದುವೆಯಾಗದ ಹುಡುಗಿಯರು ಬಹಳ ಗೌರವಶೀಲರು. ಸ್ವಾಭಿಮಾನಪರರು. ಇಲ್ಲಿಯ ಜನಾಂಗದವರು ವಿರೋಚನನ ವಂಶಕ್ಕೆ ಸೇರಿದವರು. ಇವರಿಗೆ ದೇಹವನ್ನು ಪೋಷಿಸುವುದೇ, ಒಂದು ದೊಡ್ಡ ಪುಣ್ಯ ಕೆಲಸ. ಇದನ್ನು ತೊಳೆಯುವುದರಲ್ಲಿ, ಒಳೆಯುವುದರಲ್ಲಿ ಅವರ ಮಾನಸಿಕ ಶಕ್ತಿಯೆಲ್ಲ ವ್ಯಯವಾಗುವುದು. ಉಗುರನ್ನು ಕತ್ತರಿಸುವುದಕ್ಕೆ ಒಂದುಹತ್ತು ಸಾವಿರ ಉಪಕರಣ. ಅವರು ಹಾಕುವ ಬಟ್ಟೆಬರೆ, ಉಪಯೋಗಿಸುವ ಸೋಪು ಸೆಂಟುಗಳಲ್ಲಿ ಎಷ್ಟು ವಿಧ ಉಂಟೋ ಅದನ್ನು ಲೆಕ್ಕಹಾಕಲು ಅಸಾಧ್ಯ.

ಅಮೇರಿಕಾ ಜನಾಂಗದವರು ಒಳ್ಳೆಯ ಸ್ವಭಾವದವರು. ಸತ್ಯವಾಗಿ ಅದರಲ್ಲಿ ಎಲ್ಲಾ ಸರಿಯಾಗಿದೆ. ಆದರೆ ಭೋಗವೇ ದೇವರು. ಈ ದೇಶದಲ್ಲಿ ಐಶ್ವರ್ಯ ನದಿಯ ನೀರಿನಂತೆ ಹರಿಯುತ್ತದೆ, ಸೌಂದರ್ಯವೇ ತೆರೆ, ಪಾಂಡಿತ್ಯವೇ ಅಲೆ, ಭೋಗವೇ ಪ್ರವಾಹದಂತೆ ಹರಿಯುತ್ತಿದೆ.

ಕಾಂಕ್ಷನ್ತಃ ಕರ್ಮಣಾಂ ಸಿದ್ಧಿಂ ಯಜನ್ತ ಇಹ ದೇವತಾಃ ।
ಕ್ಷಿಪ್ರಂಹಿ ಮಾನುಷೇ ಲೋಕೇ ಸಿದ್ಧಿರ್ಭವತಿ ಕರ್ಮಜಾ ॥

ತಮ್ಮ ಕೆಲಸದಲ್ಲಿ ಜಯವನ್ನು ಪಡೆಯಬೇಕೆಂದು ಜಗತ್ತಿನಲ್ಲಿ ಮಾನವರು ಅನೇಕ ದೇವತೆಗಳನ್ನು ಪೂಜಿಸುತ್ತಾರೆ. ಕರ್ಮದ ಮೂಲಕ ಮಾನವ ಲೋಕದಲ್ಲಿ ಜಯ ಬೇಗನೆ ದೊರಕುವುದು.

ಇಲ್ಲಿಯ ಜನರು ಚತುರರು ಸಾಹಸಪರರು, ಅಬ್ಬ! ಎಷ್ಟು ಶಕ್ತಿ! ಎಷ್ಟು ಕಾರ್ಯೋತ್ಸಾಹಿಗಳು! ಎಂತಹ ಪುರುಷತ್ವ ಇವರದು. ಆನೆಯನ್ನು ಹೋಲುವ ಕುದುರೆಗಳು ದೊಡ್ಡ ಮನೆಯಂತಿರುವ ಗಾಡಿಗಳನ್ನು ಎಳೆಯುತ್ತವೆ. ಇದರಂತೆಯೇ ಉಳಿದ ಪ್ರಮಾಣಗಳನ್ನು ನೀವು ಆಲೋಚಿಸಬಹುದು. ಶಕ್ತಿ ಬಾಹುಳ್ಯದ ಪ್ರದರ್ಶನವಿದು. ಹೆಂಗಸರನ್ನು ಬಹಳ ಗೌರವದಿಂದ ಕಾಣುವರು. ಅವರ ಜೀವನದಲ್ಲಿ ಬಹಳ ಮುಖ್ಯ ಕರ್ತವ್ಯವನ್ನು ಅವರು ವಹಿಸುತ್ತಾರೆ. ಒಟ್ಟಿನಲ್ಲಿ ಹೇಳುವುದೆಂದರೆ ಇಂತಹ ಒಂದು ಪೂಜ್ಯಭಾವ ತನ್ನ ಚರಮಾವಸ್ಥೆಯನ್ನು ಮುಟ್ಟಿದೆ ಇಲ್ಲಿ. ಈಗ ನಾನು ಮಾತನಾಡಬೇಕೆಂದಿದ್ದ ವಿಷಯಕ್ಕೆ ಬರೋಣ. ಅಬ್ಬ! ಈ ದೇಶದ ಹೆಂಗಸರನ್ನು ನೋಡಿ ನಾನು ಸ್ತಂಭೀಭೂತನಾಗಿದ್ದೇನೆ. ನನ್ನನ್ನು ಕೇವಲ ಹುಡುಗನೆಂದು ತಿಳಿದು ಅಂಗಡಿ ಮುಂತಾದುವುಗಳಿಗೆ ಕರೆದುಕೊಂಡು ಹೋಗುತ್ತಾರೆ. ಅವರು ಎಲ್ಲಾ ತರಹ ಕೆಲಸಗಳನ್ನೂ ಮಾಡುತಾರೆ. ಅವರು ಮಾಡುವ ಕೆಲಸದ ಹದಿನಾರನೆ ಒಂದು ಪಾಲನ್ನು ಕೂಡ ನಾನು ಮಾಡಲಾರೆ. ಅವರು ರೂಪಿನಲ್ಲಿ ಲಕ್ಷ್ಮಿಯನ್ನು, ಗುಣದಲ್ಲಿ ಸರಸ್ವತಿಯನ್ನು ಹೋಲುವರು. ಅವರೇ ಜಗನ್ಮಾಯಿಯ ಅವತಾರ. ಅವರ ಆರಾಧನೆಯ ಮೂಲಕ ಯಾವ ಕೆಲಸದಲ್ಲಾದರೂ ಸಿದ್ಧಿಯನ್ನು ಪಡೆಯಬಹುದು. ಅಯ್ಯೋ ದೇವರೆ! ನಾವು ಮನುಷ್ಯರ ಗುಂಪಿಗೆ ಸೇರಿರುವವೆ? ನಮ್ಮ ದೇಶದಲ್ಲಿ ಅಂತಹ ಜಗನ್ಮಾಯಿಯ

ಅವತಾರ ಸ್ವರೂಪರಾದಂಥ ಒಂದ. ಸಾವಿರ ಸ್ತ್ರೀರತ್ನಗಳನ್ನು ನಾನು ಸಾಯುವುದಕ್ಕೆ ಮುಂಚೆ ಒಂದು ಗೂಡಿಸಿದರೆ ಶಾಂತವಾಗಿ ಪ್ರಾಣ ಬಿಡುವೆನು. ಆಗ ಮಾತ್ರ ನಮ್ಮ ದೇಶದವರು ತಾವು ಅವಳ ಸಂತಾನರೆಂದು ಹೊಗಳಿಕೊಳ್ಳಬಹುದು.

ನಾನು ನಿಜವಾಗಿಯೂ ಇಲ್ಲಿಯ ಹೆಂಗಸರನ್ನು ನೋಡಿ ಚಕಿತನಾಗಿರುವೆನು. ಜಗನ್ಮಾತೆಯು ಇವರ ಮೇಲೆ ಎಷ್ಟು ಕರುಣೆಯನ್ನು ಬೀರಿದ್ದಾಳೆ. ಅತ್ಯಾಶ್ಚರ್ಯಕರವಾದ ಸ್ತ್ರೀಯರಿವರು! ಪರಸ್ಪರ ಪೈಪೋಟಿಯಲ್ಲಿ ಸೋತ ಗಂಡಸನ್ನು ಮೂಲೆಗೆ ಒತ್ತುವುದರಲ್ಲಿರುವರು. ಜಗನ್ಮಾತೆ! ಇದೆಲ್ಲ ನಿನ್ನ ಅನುಗ್ರಹದಿಂದ. ಈ ಲಿಂಗಭೇದಗಳಿಂದ ಬಂದಿರುವ ಮೇಲು ಕೀಳೆಂಬ ಭಾವವನ್ನು ನಾನು ಸಂಪೂರ್ಣ ನಾಶಮಾಡುವವರೆಗೂ ಶಾಂತನಾಗಲಾರೆ. ಆತ್ಮನಲ್ಲಿ ಏನಾದರೂ ಲಿಂಗಭೇದ ಇದೆಯೇನು? ಗಂಡಸಿಗೂ, ಹೆಂಗಸಿಗೂ ಇರುವ ಭೇದಭಾವ ಹೋಗಬೇಕು —ಎಲ್ಲಿಯೂ ಆತ್ಮವೇ. ದೇಹ ನಾನೆಂಬ ಭ್ರಮೆಯನ್ನು ಬಿಡಿ. "ಅಸ್ತಿ, ಅಸ್ತಿ" ಎಲ್ಲವೂ ಇದೆ ಎಂದು ಧೈರ್ಯವಾಗಿ ಹೇಳಿ ನಿಲ್ಲಿ. ಸ್ಪಷ್ಟವಾದ ಉತ್ತಮ ಭಾವಗಳನ್ನು ಮನಸ್ಸಿನಲ್ಲಿಡಿ. "ನಾಸ್ತಿ, ನಾಸ್ತಿ" ಇಲ್ಲ ಇಲ್ಲ ಎಂಬ ನಿಷೇಧಾರ್ಥವನ್ನು ಕೊಡುವ ಪದಗಳನ್ನು ಬಳಸಿ, ಬಳಸಿ ದೇಶವೆಲ್ಲ ಅಧೋಗತಿಗೆ ಇಳಿಯುತ್ತಿದೆ. "ಸೋಹಂ, ಸೋಹಂ, ಶಿವೋಹಂ" ಇದು ಎಷ್ಟು ಕಷ್ಟ! ಪ್ರತಿಯೊಂದು ಆತ್ಮನಲ್ಲಿಯೂ ಅನಂತ ಶಕ್ತಿ ನೆಲಸಿದೆ. ಯಾವಾಗಲೂ ಇಲ್ಲ, ಇಲ್ಲ ಎಂಬ ಭಾವವನ್ನು ಮನಸ್ಸಿನಲ್ಲಿಟ್ಟುಕೊಂಡು, ಚಿಕ್ಕ ನಾಯಿಗಳು ಆಗ ಬೇಕೇನು ನೀವು? ಯಾರಿಗೆ ನಿಷೇಧವನ್ನು ಬೋಧಿಸುವುದಕ್ಕೆ ಧೈರ್ಯವಿದೆ? ಯಾರನ್ನು ನೀವು ದುರ್ಬಲರು, ಶಕ್ತಿಹೀನರು, ಎಂದು ಕರೆಯುವುದು? ಶಿವನೇ ನಾನು, ಶಿವನೇ ನಾನು. ಎಂದು ಜನರು ನಾಸ್ತಿ ಎಂಬ ಆಲೋಚನೆಗಳನ್ನು ಮೆಲ್ಲುತ್ತಾರೆಯೊ ಆಗ ನನ್ನ ತಲೆಗೆ ಬಂದು ಸಿಡಿಲು ಬಡಿದಂತೆ ಆಗುವುದು: ಆತ್ಮನಿಂದೆ ಮಾಡಿಕೊಳ್ಳುವುದು ಮತ್ತೊಂದು ರೋಗ. ಅದನ್ನು ನಮ್ರತೆ ಎಂದು ಕರೆಯುವಿರೇನು? ಇದು ಮರೆ ಮಾಚಿದ ಅಪರಾಧ. "ನಲಿಂಗಂ ಧರ್ಮಕಾರಣಂ ಸಮತಾ ಸರ್ವ ಭೂತೇಷು, ಏತನ್ಮುಕ್ತಸ್ಯ

ಲಕ್ಷಣಂ" ಬಾಹ್ಯಾಡಂಬರವಲ್ಲ ಮುಕ್ತನ ಲಕ್ಷಣ. ಎಲ್ಲಲ್ಲಿರುವ ಸಮದೃಷ್ಟಿ, ಜೀವನ್ಮುಕ್ತನ ಲಕ್ಷಣ. "ಅಸ್ತಿ, ಅಸ್ತಿ, ಸೋಽಹಂ ಚಿದಾನಂದ ರೂಪಃ, ಶಿವೋಽಹಂ ಶಿವೋಽಹಂ." ಇದೆ, ಇದೆ, ನಾನೇ ಅವನು ಚಿದಾನಂದರೂಪನಾದ ಶಿವನು "ನಿರ್ಗಚ್ಛತಿ ಜಗಜ್ಜಾಲಾತ್ ಪಿಂಜರಾದಿವ ಕೇಸರಿ" —ಸಿಂಹವು ತನ್ನ ಸ[illegible]ದಿಂದ ಪಂಜರವನ್ನು ಸೀಳಿ ಬರುವಂತೆ, ಮಾಯಾಪ್ರಪಂಚದ ಬಂಧನಗಳನ್ನು ಅವನು ಸೀಳಿ ಬರುವನು. "ನಾಯಮಾತ್ಮಾ ಬಲಹೀನೇನ ಲಭ್ಯಃ" ಬಲಹೀನರಿಗೆ ಆತ್ಮಲಾಭವಾಗುವುದಿಲ್ಲ. ಮಹಾಹಿಮರಾಶಿ ಪರ್ವತವು ಮೇಲೆ ಬೀಳುವಂತೆ ಜಗದ ಮೇಲೆ ಬೀಳಿ. ನಿಮ್ಮ ಭಾರಕ್ಕೆ ಭೂಮಿ ಕುಸಿದು ಚೂರಾಗಲಿ. "ಹರ ಹರ ಮಹದೇವ!" "ಉದ್ಧರೇದಾತ್ಮನಾತ್ಮಾನಂ" ತನ್ನನ್ನು ತನ್ನಾತ್ಮನಿಂದಲೇ ಉದ್ಧರಿಸಿಕೊಳ್ಳಬೇಕು. ಪುರುಷಾಕಾರದ ಬಲದಿಂದ, ಸ್ವಪ್ರಯತ್ನದ ಸಾಹಸದಿಂದ ನಾವಿರುವ ಬಂಧನದಿಂದ ಪಾರಾಗಬೇಕು.

ಪರರ ಹಿತದಲ್ಲಿ ನಮ್ಮ ಜೀವನ ಸವೆಸಿಹೋಗುವಂತಹ ಕಾಲವೆಂದು ಬರುವುದು! ಪ್ರಪಂಚವೆಂಬುದು ಮಕ್ಕಳ ಆಟವಲ್ಲ. ಹಿಂದೆ ಬರುವವರಿಗೆ ಗುರಿ ಎಡೆಗೆ ಪ್ರಯಾಣ ಮಾಡುವುದಕ್ಕೆ, ರಾಜಮಾರ್ಗವನ್ನು ತಮ್ಮ ದೇಹದ ರಕ್ತವನ್ನಾದರೂ ಧಾರೆಯೆರೆದು ಯಾರು ಮಾಡುತ್ತಾರೆಯೋ ಅವರು ಮಹಾಪುರುಷರು. ಜಗದಾದಿಯಿಂದಲೂ ಹೀಗೆ ನಡೆಯುತ್ತಿದೆ. ತನ್ನ ದೇಹವನ್ನು ಅಡ್ಡಲಾಗಿರಿಸಿ ಸೇತುವೆಯನ್ನು ಒಬ್ಬ ಕಟ್ಟುವನು. ಇದರ ಸಹಾಯದಿಂದ ಸಾವಿರಾರು ಜನರು ಸಂಸಾರವೆಂಬ ನದಿಯನ್ನು ದಾಟುವರು. "ಏವಮಸ್ತು, ಏವಮಸ್ತು" "ಶಿವೋಽಹಂ, ಶಿವೋಽಹಂ" ಹಾಗೆ ಆಗಲಿ! ಹಾಗೆ ಆಗಲಿ! ನಾನೇಶಿವ! ನಾನೇಶಿವ!

ಮದ್ರಾಸ್ ಈಗ ಉತ್ಸಾಹದಲ್ಲಿದೆ ಎಂಬುದು ಸಂತೋಷದ ಸುದ್ದಿ. ನೀವು ಮಾಸಪತ್ರಿಕೆಯನ್ನು ಹೊರಡಿಸಬೇಕೆಂದಿದ್ದಿರಲ್ಲ, ಅದರ ಸಮಾಚಾರ ಏನು? ನಾವು ಎಲ್ಲರೊಂದಿಗೂ ಕಲೆಯಬೇಕು. ಯಾರ ಮನಸ್ಸನ್ನೂ ನೋಯಿಸಬಾರದು. ಎಲ್ಲಾ ಒಳ್ಳೆಯ ಶಕ್ತಿಗಳು ಎಲ್ಲಾ ಕೆಟ್ಟ ಶಕ್ತಿಗಳನ್ನು ವಿರೋಧಿಸಿ ನಿಲ್ಲಬೇಕು. ನಮಗೆ ಬೇಕಾಗಿರುವುದು ಇದು. ನಮ್ಮ ಗುರುವಿನಲ್ಲಿ ಪ್ರತಿಯೊಬ್ಬನೂ ನಂಬಿಕೆಯನ್ನು ಇಡಬೇಕೆಂದು ಬಲಾ

ತ್ಯರಿಸಬೇಡಿ. ಅರ್ಧ ಬಂಗಾಳಿ, ಅರ್ಧ ಹಿಂದಿ ಇರುವ ಒಂದು ಮಾಸ ಪತ್ರಿಕೆಯನ್ನು ನೀವು ಹೊರಡಿಸಬೇಕು. ಸಾಧ್ಯವಾದರೆ ಒಂದು ಆಂಗ್ಲ ಭಾಷೆಯಲ್ಲೂ ಇರಬೇಕು. ಸಿಕ್ಕಿದ ಕಡೆ ಅಲೆಯುತ್ತಿದ್ದರೆ ಏನೂ ಪ್ರಯೋಜನವಿಲ್ಲ. ನೀವು ಎಲ್ಲಿಹೋದರೂ ಅಲ್ಲಿ ಜನರಿಗೆ ಒಂದು ಶಾಶ್ವತವಾಗಿ ಉಪದೇಶವನ್ನು ಮಾಡುವ ಕೇಂದ್ರವನ್ನು ಸ್ಥಾಪಿಸಬೇಕು. ಆಗ ಮಾತ್ರ ಜನರು ಕಣ್ಣನ್ನು ತೆರೆಯಲು ಮೊದಲುಮಾಡುತ್ತಾರೆ. ನಾನು ಈಗ ಒಂದು ಪುಸ್ತಕವನ್ನು ಬರೆಯುತ್ತಿರುವೆನು. ಅದು ಮುಗಿದ ತಕ್ಷಣವೆ ನಾನು ಮನೆಗೆ ಓಡುವೆನು! ಶ್ರೀ ರಾಮಕೃಷ್ಣರು ಅವತಾರಮಾಡಿದ್ದು ಜಗದ ಹಿತಕ್ಕಾಗಿ, ಕೀರ್ತಿಗೌರವಗಳನ್ನು ಗಳಿಸುವುದಕ್ಕಲ್ಲ ಎಂಬುದನ್ನು ಯಾವಾಗಲೂ ಜ್ಞಾಪಕದಲ್ಲಿಡಿ. ಯಾವುದನ್ನು ಅವರು ಬೋಧಿಸುವುದಕ್ಕೆ ಬಂದರೋ ಅದನ್ನು ಮಾತ್ರ ಜನಸಮುದಾಯದಲ್ಲಿ ಹರಡಿ. ಅವರ ಹೆಸರನ್ನು ನೀವು ಎತ್ತಲೇ ಬೇಡಿ. ಅದು ತನ್ನಷ್ಟಕ್ಕೆ ತಾನೇ ಹಬ್ಬುವುದು. ಎಂದು ನೀವು ಪ್ರತ್ಯಕ್ಷವಾಗಿ ನಿಮ್ಮ ಗುರುವನ್ನು ಜನರು ಸ್ವೀಕರಿಸಬೇಕೆಂದು ಒತ್ತಾಯಮಾಡುವಿರೋ, ಆಗ ನೀವೇ ಒಂದು ಪಂಗಡವನ್ನು ಮಾಡುವಿರಿ. ಆಗ ಮಾಡಿದ ಪ್ರಯತ್ನವೆಲ್ಲಾ ನಿಷ್ಪ್ರಯೋಜನವಾಗುವುದು. ಅದಕ್ಕೋಸ್ಕರ ಜೋಪಾನವಾಗಿರಿ! ಎಲ್ಲರಿಗೂ ಒಂದು ಒಳ್ಳೆಯ ಮಾತಿರಲಿ. ಕೋಪವನ್ನು ತೋರುವುದರಿಂದ ನಾವು ಹಿಡಿದ ಕೆಲಸ ಹಾಳಾಗುತ್ತದೆ. ಜನರು ತಮ್ಮ ಮನಸ್ಸಿಗೆ ತೋರಿದುದನ್ನು ಅವರು ಹೇಳಿಕೊಳ್ಳಲಿ. ನೀವು ಮಾತ್ರ ನಿಮ್ಮ ದೃಢನಿಶ್ಚಯದಂತೆ ನಡೆಯಿರಿ, ಜಗತ್ತು ನಿಮ್ಮ ಕಾಲಿಗೆ ಬೀಳುವುದು. ಇದರಲ್ಲಿ ಸಂದೇಹವಿಲ್ಲ, ಅವರು "ಈ ಮನುಷ್ಯನ ಮೇಲೆ ಅಥವಾ ಆ ಮನುಷ್ಯನ ಮೇಲೆ ವಿಶ್ವಾಸವಿಡಿ ಎಂದು ಹೇಳುತ್ತಾರೆ. ಆದರೆ ಮೊದಲು ನಿಮ್ಮ ಮೇಲೆ ವಿಶ್ವಾಸವಿಡಿ" ಎಂದು ನಾನು ಹೇಳುತ್ತೇನೆ. ನಾವು ಮುಂದುವರಿಯುವ ರೀತಿ ಇದು. ಮೊದಲು ನಿಮ್ಮಲ್ಲಿ ವಿಶ್ವಾಸವಿರಲಿ—ಎಲ್ಲಾ ಶಕ್ತಿಯೂ ನಿಮ್ಮಲ್ಲಿದೆ—ಇದನ್ನು ತಿಳಿದುಕೊಳ್ಳಿ, ನಂತರ ಪ್ರಕಟಪಡಿಸಿ. "ನಾನು ಎಲ್ಲವನ್ನೂ ಮಾಡಬಲ್ಲೆ" ಎಂದು ಹೇಳಿ. ಹಾವು ಕಚ್ಚಿದರೂ ಕೂಡ ನಾವು ದೃಢ ಮನಸ್ಸಿನಿಂದ ಕಚ್ಚಲಿಲ್ಲವೆಂದರೆ ಅದರ ವಿಷಪರಿಣಾಮವನ್ನು ಅಲ್ಲಗಳೆಯ

ಬಹುದು ಬೇಕೆ! ಇಲ್ಲ ಎಂದು ಎಂದೂ ಹೇಳಬೇಡಿ. ನಿಷೇಧಮಯ ಆಲೋಚನೆಗಳು ಎಂದೂ ಬಾರದಿರಲಿ. ಯಾವಾಗಲೂ "ಸೋಽಹಂ, ಸೋಽಹಂ" ನಾನೇ ಅವನು, ನಾನೇ ಅವನು ಎಂದು ಹೇಳಿ.

ಕಿನ್ನಾಮ ರೋದಿಷಿ ಸಖೇ ತ್ವಯಿ ಸರ್ವಶಕ್ತಿಃ
ಆಮನ್ತ್ರಯಸ್ವ ಭಗವನ್ ಭಗದಂ ಸ್ವರೂಪಂ।
ತ್ರೈಲೋಕ್ಯಮೇತದಖಿಲಂ ತವ ಪಾದಮೂಲೆ
ಆತ್ಮೈವ ಹಿ ಪ್ರಭವತೇ ನ ಜಡಃ ಕದಾಚಿತ್ ॥

"ನನ್ನ ಮಗನೆ, ಯಾವುದು ನಿನ್ನನ್ನು ಅಳುವಂತೆ ಮಾಡುವುದು? ಎಲ್ಲಾ ಶಕ್ತಿಯೂ ನಿನ್ನಲ್ಲಿದೆ. ನಿನ್ನ ಅನಂತ ಶಕ್ತಿಯ ಸ್ವಭಾವವನ್ನು ಪ್ರಕಟಗೊಳಿಸು. ಎಲೈ ಮಹಾನುಭಾವನೆ! ಈ ಪ್ರಪಂಚವೆಲ್ಲ ನಿನ್ನ ಪಾದತಳಕ್ಕೆ ಬರುವುದು. ಆತ್ಮವೊಂದೇ ಮುಖ್ಯ; ಜಡವಸ್ತುವಲ್ಲ."

ನಿರ್ಭೀತಿಯಿಂದ ಕಾರ್ಯೋನ್ಮುಖರಾಗಿ! ಏನು ಅಂಜಿಕೆ! ನಿಮಗೆ ಅಡ್ಡಿ ತರುವುದಕ್ಕೆ ಯಾರಿಗೆ ಶಕ್ತಿಯಿದೆ? "ಕುರ್ಮಸ್ತಾರಕಚರ್ವಣಂ ತ್ರಿಭುವನಮುತ್ಪಾಟಯಾಮಃ ಬಲಾತ್, ಕಿಂ ಭೋಃ ನ ವಿಜಾನಾಸ್ಯಸ್ಮಾನ್ ರಾಮಕೃಷ್ಣದಾಸಾ ವಯಂ।" ನಕ್ಷತ್ರಗಳನ್ನು ಕೂಡ ಧೂಳಿಪಟ ಮಾಡುವೆವು. ಜಗತ್ತಿನ ಕಟ್ಟನ್ನು ಕೂಡ ಸಡಲಿಸುವೆವು. ನಾವು ಯಾರೆಂಬುದು ನಿಮಗೆ ಗೊತ್ತಿಲ್ಲವೆ? ಶ್ರೀ ರಾಮಕೃಷ್ಣರ ದಾಸರು ನಾವು. ಅಂಜಿಕೆ! ಯಾರಿಗೆ ಅಂಜಿಕೆ! ಖಂಡಿತ ಯಾರಿಗೂ ಇಲ್ಲ!

ಕ್ಷೀಣಾಃ ಸ್ಮ ದೀನಾಃ ಸಕರುಣಾ ಜಲ್ಪಂತಿ ಮೂಢಾ ಜನಾಃ
ನಾಸ್ತಿಕ್ಯಂ ತ್ವಿದಂ ತು ಅಹಹ ದೇಹಾತ್ಮವಾದಾತುರಾಃ।
ಪ್ರಾಪ್ತಾಃ ಸ್ಮ ವೀರಾ ಗತಭಯಾ ಅಭಯಂ ಪ್ರತಿಷ್ಠಾಂ ಯದಾ
ಆಸ್ತಿಕ್ಯಂ ತ್ವಿದಂ ತು ಚಿನುಮಃ ರಾಮಕೃಷ್ಣದಾಸಾ ವಯಂ॥

ಪೀತ್ವಾ ಪೀತ್ವಾ ಪರಮಮಮೃತಂ ವೀತಸಂಸಾರರಾಗಾಃ
ಹಿತ್ವಾ ಹಿತ್ವಾ ಸಕಲಕಲಹ ಪ್ರಾಪಿಣೀಂ ಸ್ವಾರ್ಥಸಿದ್ಧಿಂ।
ಧ್ಯಾತ್ವಾ ಧ್ಯಾತ್ವಾ ಗುರುವರಪದಂ ಸರ್ವಕಲ್ಯಾಣರೂಪಂ
ನತ್ವಾ ನತ್ವಾ ಸಕಲ ಭುವನಂ ಪಾತುಮಾಮಂತ್ರಯಾಮಃ॥

ಪ್ರಾಪ್ತಂ ಯದ್ವೈ ತ್ವನಾದಿನಿಧನಂ ವೇದೋದಧಿಂ ಮಥಿತ್ವಾ
ದತ್ತಂ ಯಸ್ಯ ಪ್ರಕರಣೇ ಹರಿಹರಬ್ರಹ್ಮಾದಿದೇವೈರ್ಬಲಂ।
ಪೂರ್ಣಂ ಯತ್ತು ಪ್ರಾಣಸಾರೈರ್ಭೌಮನಾರಾಯಣಾನಾಂ
ರಾಮಕೃಷ್ಣಸ್ತನುಂ ಧತ್ತೇ ತತ್ಪೂರ್ಣಪಾತ್ರಮಿದಂ ಭೋಃ॥

"ಮೂಢರು ದೇಹವನ್ನು ತಾವೆಂದು ಭ್ರಮಿಸಿ, ದುರ್ಬಲರು ನಾವು, ದೀನರು ನಾವು ಎಂದು ಅಳುವರು. ಇದೆಲ್ಲ ನಾಸ್ತಿಕತನ. ಭಯದಾಚೆ ಇರುವ ಗತಿಯನ್ನು ನಾವು ಹೊಂದಿರುವೆವು. ಇನ್ನುಮೇಲೆ ಯಾವ ಅಂಜಿಕೆಯ ಭಯವೂ ಇಲ್ಲ. ಧೀರರಾಗುವ. ಶ್ರೀರಾಮಕೃಷ್ಣರ ದಾಸರಾದ ನಾವು ಸ್ವೀಕರಿಸುವ ಆಸ್ತಿಕತನವಿದು.

"ಸಂಸಾರದ ಮೇಲಿನ ಆಸೆಯೆಲ್ಲವನ್ನೂ ತೊರೆದು ಅನವರತವೂ ಅಮರತ್ವದ ಅಮೃತಾನಂದವನ್ನು ಪಾನಮಾಡುತ್ತ, ಮೋಹಕ್ಕೆ ಮೂಲವಾದ ಸ್ವಾರ್ಥಪರತೆಯನ್ನು ತೊರೆದ, ಸರ್ವಕಲ್ಯಾಣರೂಪನಾದ ಗುರುದೇವನ ಪಾದಕಮಲಗಳನ್ನು ಧ್ಯಾನಿಸುತ್ತ, ಅನಂತವಂದನೆಗಳನ್ನು ಮಾಡಿ ಜಗತ್ತೆಲ್ಲವನ್ನೂ ಈ ಅಮೃತಪಾನದಲ್ಲಿ ಭಾಗಿಗಳಾಗಿ ಎಂದು ಬೇಡುತ್ತೇನೆ."

"ಈ ಅಮೃತವು ಅನಂತವೇದರಾಶಿಯ ಮಥನದಿಂದ ಉದ್ಭವಿಸಿತು. ಇದಕ್ಕೆ ಬ್ರಹ್ಮ ವಿಷ್ಣು ಮಹೇಶ್ವರಾದಿ ದೇವತೆಗಳೆಲ್ಲರೂ ತಮ್ಮ ಸರ್ವವನ್ನೂ ಧಾರೆಯೆರೆದಿರುವರು. ಮಹಾ ಅವತಾರಗಳ ತಪೋಶಕ್ತಿಯಿಂದ ಇದು ಪೋಷಿತವಾಗಿರುವುದು. ಶ್ರೀರಾಮಕೃಷ್ಣರು ಅಂತಹ ಅಮೃತವನ್ನು ಕಳಶದಲ್ಲಿ ತುಂಬಿ ದಾನ ಮಾಡುವುದಕ್ಕೆ ನಿಂತಿರುವರು."

ಆಂಗ್ಲ ಭಾಷಾಪರಿಚಿತರಾದ ಯುವಕರಲ್ಲಿ ನಾವು ಕೆಲಸ ಮಾಡಬೇಕು. "ತ್ಯಾಗೇನೈಕೇ ಅಮೃತತ್ವಮಾನಶುಃ" ಅವರು ತ್ಯಾಗದ ಮೂಲಕವಾಗಿಯೆ ಅಮೃತತ್ವವನ್ನು ಪಡೆದರು. ತ್ಯಾಗ, ತ್ಯಾಗ—ಎಲ್ಲಕ್ಕಿಂತ ಹೆಚ್ಚಾಗಿ ನೀವು ಇದನ್ನು ಬೋಧಿಸಬೇಕು. ಪ್ರಾಪಂಚಿಕತೆಯನ್ನು ತ್ಯಜಿಸಿದ ಹೊರತು ಆತ್ಮಶಕ್ತಿ ಬರುವುದಿಲ್ಲ.

ಅವರು ಯಾತಕ್ಕೆ ಅಷ್ಟೊಂದು ನರಳುತ್ತಿರುವರು. ಇಲ್ಲ ಎಂಬ ಆತ್ಮನಿಂದೆಯಿಂದ. ಮಾನಸಿಕ ಶಕ್ತಿಯಿಂದ ಅವರು ರೋಗವನ್ನು ಹೋಗಲಾಡಿಸಿಕೊಳ್ಳಲಿ ಎಂದು ಹೇಳಿ. ಒಂದು ಗಂಟೆಯಲ್ಲಿ ಅದು ಮಾಯವಾಗುವುದು. ಆತ್ಮನಾಗಿರುವ ನನಗೆ ಖಾಯಿಲೆ ಎಂದರೇನು? ರೋಗವಿರಕೂಡದು. ಅದು ಹೋಗಬೇಕು. "ನಾನು ಆತ್ಮ, ರೋಗ

ಗಳು ನನ್ನನ್ನು ಹೇಗೆ ಪೀಡಿಸಬಲ್ಲವು" ಎಂದು ದಿನಕ್ಕೆ ಒಂದು ಗಂಟೆ ಯಾದರೂ ಧ್ಯಾನಮಾಡುವಂತೆ ಹೇಳಿ; ಎಲ್ಲಾ ಬವಣೆಗಳೂ ಮಾಯ ವಾಗುವುವು. ಅನಂತಶಕ್ತಿಯುತರಾದ ಆತ್ಮರು ನೀವು ಎಂದು ಎಲ್ಲರೂ ಆಲೋಚಿಸಿನೋಡಿ! ಇದರಿಂದ ಶಕ್ತಿ ಬರುತ್ತದೆ. ಆತ್ಮನಿಂದೆ, ಯಾತಕ್ಕೆ ಇದು! ನಾನು ಪರಮಾತ್ಮನ ಸಂತಾನ. ಸರ್ವಶಕ್ತಿಸ್ವರೂಪಳಾದ ಜಗನ್ಮಾತೆಯ ಮಗ. ನನಗೆ ರೋಗ, ಅಂಜಿಕೆ, ಆಸೆಗಳು ಎಂದರೇನು? ಇದು ಒಂದು ಸಾಂಕ್ರಾಮಿಕ ಜಾಡ್ಯ. ಈ ಹೀನಾಯವಾದ ಸ್ವಭಾವ ವನ್ನು ತೊರದೂಡಿ. ಇದರಿಂದ ನಿಮಗೆ ಸರ್ವಮಂಗಳವಾಗುವುದು. ಇಲ್ಲ ಎಂಬ ಹೀನಾಯವಿಲ್ಲದೆ ಇರಲಿ. ಹೌದು ಎನ್ನುವ ಆಲೋಚನೆಯನ್ನು ಮಾಡಿ. ನಾನಿರುವೆನು. ದೇವರಿರುವನು. ಎಲ್ಲವೂ ನನ್ನಲ್ಲಿರುವುದು. ಆರೋಗ್ಯ, ಪವಿತ್ರತೆ, ಜ್ಞಾನ, ಮುಂತಾದುವೆಲ್ಲವನ್ನೂ ನಾನು ವ್ಯಕ್ತ ಪಡಿಸುತ್ತೇನೆ. ಏನು? ಈ ಪರದೇಶೀಯರು ನನ್ನ ಬೋಧನೆಯನ್ನು ಅರ್ಥಮಾಡಿಕೊಳ್ಳುವರು; ಸ್ವದೇಶೀಯರಾದ ನೀವು ಇಲ್ಲ ಎಂಬ ಆಲೋಚನೆಯಲ್ಲಿ ಮಗ್ನರಾಗಿ ಕಷ್ಟದಲ್ಲಿ ನರಳುತ್ತಿರುವಿರಿ. ನಿಮಗೆ ರೋಗವೆಂದು ಯಾರು ಹೇಳುವರು? ರೋಗಕ್ಕೂ, ನಿಮಗೂ ಸಂಬಂಧ ವೇನು? ಇಂತಹ ರೋಗದ ಆಲೋಚನೆಗಳನ್ನು ನೂಕುವ ......" ವೀರ್ಯ ಮಸಿ ವೀರ್ಯಂ, ಬಲಮಸಿ ಬಲಂ, ಓಜೋಽಸಿ ಓಜಃ, ಸಹೋಽಸಿ ಸಹೋ ಮಯಿ ದೇಹಿ." ಹೇ ದೇವ! ನೀನು ಶಕ್ತಿ, ನನಗೆ ಶಕ್ತಿಯನ್ನು ನೀಡು; ನೀನು ಬಲ, ನನಗೆ ಬಲವನ್ನು ನೀಡು; ನೀನು ಓಜಸ್ಸು, ಓಜಸ್ಸನ್ನು ನನಗೆ ನೀಡು; ನೀನು ಧೈರ್ಯ, ಧೈರ್ಯವನ್ನು ನೀಡೆನಗೆ! "ದೇವರ ಪೂಜೆಗೆ ಕುಳಿತುಕೊಳ್ಳುವಾಗ ಪ್ರತಿದಿನವೂ ಮಾಡುವ ಆಸನ ಶುದ್ಧಿಯಲ್ಲಿ ಬರುವ "ಆತ್ಮಾನಮಚ್ಛಿದ್ರಂ ಭಾವಯೇತ್." "ತಾನು ಆತ್ಮ, ತನ್ನನ್ನು ಯಾರೂ ಬಾಧಿಸಲಾರರು."—ಎಂದು ಭಾವಿಸಬೇಕು. ಹೀಗೆಂದರೆ ಏನು ಅರ್ಥ? ಅಂದರೆ, ಎಲವೂ ನನ್ನಲ್ಲಿವೆ. ನನ್ನ ಇಚ್ಛೆಯಂತೆ ಅದನ್ನು ವ್ಯಕ್ತಪಡಿಸಬಲ್ಲೆ. ಯಾರು ರೋಗದಿಂದ ನರಳುತ್ತಿರುವರೋ ಅವರೆಲ್ಲರೂ ಆತ್ಮ ಸ್ವರೂಪರು. ಅನಂತ ಅವರು. ಅವರಿಗೆ ರೋಗ

ಹೇಗೆ ಬರುವುದೆಂದು ಆಲೋಚಿಸು. ಕೆಲವು ದಿನಗಳು ಇದನ್ನು ಕೆಲವು ಗಂಟೆಯ ಹೊತ್ತು ಆಲೋಚಿಸಿ. ರೋಗಗಳೆಲ್ಲ ಮಾಯವಾಗುವುವು.

ನಿಮ್ಮ, ವಿವೇಕಾನಂದ.

(೫೦)

ಅಮೇರಿಕ,
೨೧ ನೇ ಸೆಪ್ಟಂಬರ್, ೧೮೯೪.

ಪ್ರಿಯ—,

ನನ್ನ ಕೆಚ್ಚೆದೆಯ ನಿಸ್ವಾರ್ಥ ಮಕ್ಕಳಿರಾ! ನೀವೆಲ್ಲಾ ಚೆನ್ನಾಗಿ ಕೆಲಸ ಮಾಡಿದ್ದೀರಿ. ನನಗೆ ನಿಮ್ಮಿಂದ ಎಷ್ಟೋ ಹೆಮ್ಮೆ....ಆಸೆ ಇದೆ. ನಿರಾಶರಾಗಬೇಡಿ. ಇಷ್ಟು ಬಿರುಸಿನಿಂದ ಮೊದಲು ಮಾಡಿದ ನೀವು ನಿರಾಶರಾದರೆ ಹುಚ್ಚರು!

ನಮ್ಮ ಕಾರ್ಯಕ್ಷೇತ್ರ ಇಂಡಿಯಾ. ಪರದೇಶೀಯರು ಮೆಚ್ಚುವ ಉಪಯೋಗವನ್ನೆಲ್ಲಾ ಭಾರತವರ್ಷವನ್ನು ಜಾಗ್ರತಗೊಳಿಸುವುದರಲ್ಲಿದೆ. ಅಷ್ಟೆ. ಕಾರ್ಯ ವಿಸ್ತಾರಕ್ಕೆ ನಮಗೆ ಒಂದು ನೆಲೆ ಬೇಕು. ಕ್ಷಣಮಾತ್ರವಾದರೂ ಚಂಚಲರಾಗದಿರಿ. ಎಲ್ಲವೂ ಸರಿಬರುವುದು. ಸಂಕಲ್ಪ ಜಗತ್ತನ್ನು ನಡೆಸುವುದು.

ಎನ್ನ ವತ್ಸ, ಕೆಲವು ಯುವಕರು ಕ್ರೈಸ್ತರಾಗುವುದನ್ನು ನೋಡಿ ನೀನು ದುಃಖಪಡಬೇಡ. ಇಂದಿನ ಸಮಾಜದ ತೊಡಕಿನಲ್ಲಿ ಅದರಲ್ಲೂ ಮದ್ರಾಸಿನಲ್ಲಿ ಅವರು ಇನ್ನೇನು ಆಗಬಲ್ಲರು. ಉನ್ನತಿಗೆ ಸ್ವಾತಂತ್ರ್ಯ ಮೊದಲು ಬೇಕು. ನಿಮ್ಮ ಪೂರ್ವಿಕರು ಆತ್ಮನ ಬೆಳವಣಿಗೆಗೆ ಸಕಲ ಅನುಕೂಲಗಳನ್ನು ಕೊಟ್ಟರು. ಆದರಿಂದ, ಧರ್ಮ ಬೆಳೆಯಿತು. ದೇಹಕ್ಕೆ ಕಟ್ಟುಗಳನ್ನು ಹಾಕಿ ಬಿಗಿದರು. ಇದರಿಂದ ಸಮಾಜ ಬೆಳೆಯಲಿಲ್ಲ. ಪಾಶ್ಚಾತ್ಯರಲ್ಲಿ ಇದಕ್ಕೆ ವಿರೋಧ. ಸಮಾಜಕ್ಕೆ ಸರ್ವ ಸ್ವಾತಂತ್ರ್ಯ. ಧರ್ಮಕ್ಕೆ ಸೊನ್ನೆ. ಈಗ ತಾನೆ ಪೌರಾತ್ಯ ಸಮಾಜದ ಕಾಲುಗಳ ಸಂಕೋಲೆಗಳು, ಪಾಶ್ಚಾತ್ಯ ಧರ್ಮದಡಿಗಳ ಬೇಡಿಗಳು ಕಳಚಿ ಬೀಳುತ್ತಿವೆ.

ಮರಳಿ ಅವುಗಳ ಸ್ವಭಾವಕ್ಕೆ ತಕ್ಕ ರೀತಿಯನ್ನು ಅವು ಅನುಸರಿಸುವುವು. ಭಾರತದ ಸಮಾಜದ ರೀತಿ, ಧಾರ್ಮಿಕ ಅಥವಾ ಆತ್ಮವಿಚಾರಪರವಾದುದು. ಪಾಶ್ಚಾತ್ಯ ಸಮಾಜದ ರೀತಿ ವೈಜ್ಞಾನಿಕ ಅಥವಾ ಬಾಹ್ಯ ಸಂಶೋಧನಾಪರವಾದುದು. ಪಾಶ್ಚಾತ್ಯರಿಗೆ ಸಾಮಾಜಿಕ ಸುಧಾರಣೆಯ ಮೂಲಕ ಆಧ್ಯಾತ್ಮಿಕೋನ್ನತಿ ಬೇಕು. ಪೌರಾತ್ಯರಿಗೆ ಆಧ್ಯಾತ್ಮಿಕತೆಯ ಮೂಲಕ ಸಾಮಾಜಿಕ ಸುಧಾರಣೆಬೇಕು. ಆಧುನಿಕ ಸಮಾಜ ಸುಧಾರಕರು, ಭಾರತವರ್ಷದಲ್ಲಿ ಧರ್ಮವನ್ನು ಕೆಡಹಿದ ಹೊರತು ಸಮಾಜ ಸುಧಾರಣೆಗೆ ದಾರಿಯಿಲ್ಲವೆಂದು ತಿಳಿದರು. ಅದಕ್ಕೆ ಪ್ರಯತ್ನಪಟ್ಟು ನಿರಾಶರಾದರು. ಅದಕ್ಕೆ ಕಾರಣವೇನು? ತಮ್ಮ ಧರ್ಮವೇನೆಂಬುದೇ ಅವರಿಗೆ ತಿಳಿಯದು. ಸಕಲ ಧರ್ಮಗಳಿಗೂ ತಾಯಿಯಾದ ಹಿಂದೂ ಧರ್ಮದಲ್ಲಿಶಿಕ್ಷಣವನ್ನು ಅವರಾರೂ ಹೊಂದಲಿಲ್ಲ. ನಮ್ಮ ಸಮಾಜ ಸುಧಾರಣೆಗೆ ಧರ್ಮನಾಶ ಆವಶ್ಯಕವಲ್ಲವೆಂಬುದು ನನ್ನ ಮತ. ಈಗಿನ ಸಮಾಜದ ಹೀನಸ್ಥಿತಿಗೆ ಧರ್ಮ ಕಾರಣವಲ್ಲ. ಧರ್ಮವು ಸಮಾಜಕ್ಕೆ ಹೇಗೆ ಅನ್ವಯಿಸಬೇಕೊ ಹಾಗೆ ಅನ್ವಯಿಸದೇ ಇದ್ದುದೇ ಇದಕ್ಕೆ ಕಾರಣ. ನಾನು ಈಗ ಹೇಳಿದುದನ್ನು ಪ್ರಾಚೀನ ಗ್ರಂಥಗಳ ಸಹಾಯದಿಂದ ಪ್ರತಿಪಾದಿಸಲು ಸಿದ್ಧನಾಗಿರುವೆನು. ಇದೀಗ ನನ್ನ ಉಪದೇಶ. ಇದನ್ನು ಆಚರಣೆಗೆ ತರುವುದಕ್ಕಾಗಿ ನಾವು ಜೀವವಿರುವ ತನಕ ಹೋರಾಡಬೇಕು. ಆದರೆ ಅದನ್ನು ಅರಿಯಲು ದೀರ್ಘಕಾಲ ಹಿಡಿಯುವುದು. ತಾಳ್ಮೆಯಿಂದ ಕಾರ್ಯನಡೆಸಿ. "ಉದ್ಧರೇದಾತ್ಮನಾತ್ಮಾನಂ" ತನ್ನಿಂದ ತಾನೇ ಉದ್ಧಾರವಾಗಬೇಕು.

ನಿಮ್ಮ ವಿವೇಕಾನಂದ.

ವಿ. ಸೂ.—ಇಂದಿನ ಹಿಂದೂ ಸಮಾಜ, ಆಧ್ಯಾತ್ಮನಿಷ್ಠರಿಗೆ ಮಾತ್ರವೇವ್ಯವಸ್ಥೆಯಾಗಿ, ಇತರರೆಲ್ಲರನ್ನೂ ನಿರಾಶರನ್ನಾಗಿ ಮಾಡಿ ಅರೆದು ತಿನ್ನುತ್ತಲಿದೆ. ಇದೇಕೆ? ಈ ಮಾಯಾ ಪ್ರಪಂಚದ ಸುಖವನ್ನು ಕೊಂಚ ಅನುಭವಿಸಬೇಕೆನ್ನುವರ ಪಾಡೇನಾಗಬೇಕು? ನಮ್ಮ ಧರ್ಮ ಹೇಗೆ ಸರ್ವಗ್ರಾಹಿಯೋ ಹಾಗೆಯೇ ಸಮಾಜವೂ ಇರಬೇಕು. ಮೊದಲು ನಮ್ಮ ಧರ್ಮಗಳ ತತ್ವವನ್ನು ತಿಳಿದು ಅದನ್ನು ಸಮಾಜಕ್ಕೆ ಅನ್ವಯಿಸುವುದರಿಂದ ಇದನ್ನು ನಾವು ಸಾಧಿಸಬಹುದು. ಇದು ನಿಧಾನವಾದರೂ ನಿಶ್ಚಯವಾಗಿ ಆಗತಕ್ಕ ಕೆಲಸ.—ವಿ.

(೩೧)

ಬಾಲ್ಟಿಮೋರ್, ಅಮೇರಿಕಾ,
೨೨ ನೇ ಅಕ್ಟೋಬರ್, ೧೮೯೪.

ಪ್ರಿಯ—,

ನಿನ್ನ ಕಾಗದ ತಲಪಿತು. ಅದನ್ನು ಓದಿ ತುಂಬಾ ಸಂತೋಷವಾಯಿತು. ಲಂಡನ್ನಿನಿಂದ ಆ—ಬರೆದ ಒಂದು ಪತ್ರ ನನಗೆ ಇಂದು ತಲಪಿತು. ಇದರಿಂದಲೂ ಸ್ವಲ್ಪ ಸಮಾಚಾರ ಗೊತ್ತಾಯಿತು.

ನಿನ್ನ ಶಕ್ತಿ ಈಗ ನಿನಗೇ ಗೊತ್ತಾಗಿದೆ. ಕಬ್ಬಿಣ ಕಾದಿರುವಾಗಲೇ ಹೊಡೆಯಬೇಕು. ಸೋಮಾರಿತನದಿಂದ ಪ್ರಯೋಜನವಿಲ್ಲ. ಅಸೂಯೆ, ಅಹಂಕಾರ, ಎಲ್ಲಾ ಆಲೋಚನೆಗಳನ್ನೂ ದೂರದೂಡು. ಅಮಿತಶಕ್ತಿಯಿಂದ ಕಾರ್ಯರಂಗಕ್ಕೆ ಬನ್ನಿ. ವಿಶೇಷ ಶಕ್ತಿಯಿಂದ ಕೆಲಸಕ್ಕೆ ಕೈಹಾಕಿ. ಮಿಕ್ಕ ವಿಷಯಗಳಿಗೆ ದೇವರು ದಾರಿ ತೋರುವನು. ವಿಶ್ವವೆಲ್ಲ ಒಂದು ಆಧ್ಯಾತ್ಮಿಕ ಮಹಾ ಪ್ರವಾಹದಿಂದ ಕೊಚ್ಚಿ ಹೋಗುವುದು. ದುಡಿಯಿರಿ. ದುಡಿಯಿರಿ. ಇದೇ ನಿಮ್ಮ ಗುರಿಯಾಗಲಿ. ನನಗೆ ಬೇರೇನೂ ಕಾಣುವುದಿಲ್ಲ. ಇಲ್ಲಿ ಕೆಲಸಕ್ಕೆ ಕೊನೆ ಮೊದಲೆ ಇಲ್ಲ. ದೇಶದಲ್ಲೆಲ್ಲಾ ನಾನು ಸುತ್ತಾಡುತ್ತಿರುವೆನು. ಆ ಮಹಾಶಕ್ತಿಯ ಬೀಜ ಎಲ್ಲೆಲ್ಲಿ ಬೀಳುವುದೋ ಅಲ್ಲೆಲ್ಲಾ ಫಲಿಸುವುದು.—"ಅದ್ಯ ವಾಬ್ದ ಶತಾನ್ತೇ ವಾ" ಇಂದು ಇಲ್ಲದೇ ಇದ್ದರೆ ಒಂದುನೂರು ವರ್ಷವಾದ ಮೇಲೆಯಾದರೂ ಅದು ಫಲಿಸುವುದು. ಎಲ್ಲರ ಸಹಾನುಭೂತಿಯಿಂದಲೂ ನೀವು ಕೆಲಸಮಾಡಬೇಕು. ಆಗ ಮಾತ್ರ ಫಲ ಬೇಗ ಸಿದ್ಧಿಸುವುದು.

ಜಗತ್ತಿಗೆ ಹಿತವನ್ನು ಮಾಡುವುದು ನಮ್ಮ ಗುರಿ. ನಮ್ಮ ಹೆಸರನ್ನು ಜಂಭ ಕೊಚ್ಚಿಕೊಳ್ಳುವುದಕ್ಕಲ್ಲ. ನ....ಯಾತಕ್ಕೆ ಪಾಳಿಯನ್ನು ಕಲಿತು ಬೌದ್ಧರ ಧರ್ಮಗ್ರಂಥಗಳನ್ನು ಸಿಂಹಳ ದ್ವೀಪದಲ್ಲಿ ಓದಕೂಡದು! ಯಾವ ಗುರಿಯೂ ಇಲ್ಲದೆ ಸುಮ್ಮನೆ ಸಂಚಾರಮಾಡುವುದರಿಂದ ಏನು ಪ್ರಯೋಜನವೋ ನನಗೆ ತಿಳಿಯದು. ಭಗವಂತನ ಕೃಪಾಶ್ರಯಕ್ಕೆ ಯಾರು ಸಿಕ್ಕಿರುವರೋ, ಅವರಿಗೆ ಶೀಲ, ಐಶ್ವರ್ಯ ಎಲ್ಲ ಬಯಕೆಗಳ ಸಿದ್ಧಿ, ಸ್ವಾತಂತ್ರ್ಯ ಇವುಗಳೆಲ್ಲ ಅವರ ಪದತಳದಲ್ಲಿ ಬಂದು ಬೀಳುವುವು.

"ಮಾಭೈಃ ಮಾಭೈಃ" ಧೈರ್ಯ, ಧೈರ್ಯ! ಎಲ್ಲವೂ ಕ್ರಮೇಣ ಬರುವುದು. ನೀವುಗಳೆಲ್ಲರೂ ಸ್ವಾರ್ಥತೆ, ಕಲಹಪ್ರಿಯತೆ ಮತ್ತು ಅಸೂಯೆ ಇವುಗಳಿಂದ ದೂರವಿರಬೇಕೆಂದು ನಾನು ಬಯಸುವೆನು. ಭೂಮಾತೆಯಂತೆ ನೀವೆಲ್ಲರೂ ಕ್ಷಮಾಗುಣಿಗಳಾಗಬೇಕು. ಇವುಗಳನ್ನು ನೀವು ಸಾಧಿಸಿದರೆ ಜಗತ್ತೇ ನಿಮ್ಮ ಅಡಿಗೆ ಬರುವುದು.

ವಾರ್ಷಿಕೋತ್ಸವಗಳಲ್ಲಿ ದೈಹಿಕ ಆಹಾರವನ್ನು ಕಡಿಮೆಮಾಡಿ ಆಲೋಚನೆಯನ್ನು ಪ್ರಚೋದಿಸುವ ವಿಷಯಗಳನ್ನು ಕೊಡಿ.

ವಿವೇಕಾನಂದ.

(೫೨)

ವಾಷಿಂಗ್‌ಟನ್,
೨೭ ನೇ ಅಕ್ಟೋಬರ್, ೧೮೯೪

ಪ್ರಿಯ—,

ನಾನು ಇಲ್ಲಿ, ಇಂಡಿಯಾ ದೇಶದಲ್ಲಿ ಏನು ಮಾಡುತ್ತಿದ್ದೆನೋ ಅದನ್ನೇ ಮಾಡುತ್ತಿರುವೆನು. ಮುಂದೆ ಆಗಬೇಕಾದುದನ್ನು ಮನಸ್ಸಿಗೆ ತಾರದೆ ಸರ್ವದಾ ದೇವರ ಮೇಲೆ ಭಾರಹಾಕುವೆನು. ಈ ದೇಶದಲ್ಲಿ ನಾನು ಸ್ವಲ್ಪವೂ ವಿರಾಮವಿಲ್ಲದೆ ಕೆಲಸಮಾಡಬೇಕಾಗಿದೆ ಎಂಬುದನ್ನು ನೀನು ಜ್ಞಾಪಕದಲ್ಲಿಡಬೇಕು. ನನ್ನ ಆಲೋಚನೆಗಳನ್ನು ಪುಸ್ತಕ ರೂಪಕ್ಕೆ ತರಲು ಸಾಕಾದಷ್ಟು ಕಾಲವಿಲ್ಲ. ಈ ಎಡೆಬಿಡದ ಕೆಲಸದಿಂದ ನನ್ನ ನರಗಳು ಶಿಥಿಲವಾಗಿ ನಷ್ಟಗಾಗಿದ್ದೇನೆ. ನೀವು ಮತ್ತು ನನ್ನ ಮದ್ರಾಸಿನ ಸ್ನೇಹಿತರೆಲ್ಲ ನನಗೋಸ್ಕರವಾಗಿ ನಿಸ್ವಾರ್ಥತೆಯಿಂದಲೂ, ಧೈರ್ಯದಿಂದಲೂ ಮಾಡಿದ ಸಹಾಯದ ಋಣವನ್ನು ನಾನು ಬಣ್ಣಿಸಲಾರೆ. ನನ್ನ ಪ್ರಕೃತಿ ಕಾರ್ಯದಕ್ಷತೆಯದಲ್ಲ. ಧ್ಯಾನ ಮತ್ತು ವ್ಯಾಸಂಗ ಮುಖವಾದುದು. ನಾನು ಈಗ ಸಾಕಾದಷ್ಟು ಕೆಲಸ ಮಾಡಿರುವೆನೆಂದು ತಿಳಿಯುತ್ತೇನೆ. ನನಗೆ ಈಗ ವಿರಾಮಬೇಕಾಗಿದೆ. ಶ್ರೀ ಗುರುದೇವನಿಂದ ನನ್ನ ಬಳಿಗೆ ಬಂದಿರುವವರಿಗೆ ಕೊಂಚ ಶಿಕ್ಷಣ ಕೊಡಬೇಕೆಂಬುದು ನನ್ನ ಬಯಕೆ. ನಿಮ್ಮಲ್ಲಿ ಎಂತಹ ಶಕ್ತಿ ಇದೆ ಎಂಬುದು ನಿಮಗೆ ಈಗ ಗೊತ್ತಿದೆ. ಮದರಾಸಿನ ಯುವಕರಿರಾ! ಇದನ್ನು ಮಾಡುವವರೆಲ್ಲ ನಿಜವಾಗಿ ನೀವೆ.

ನಾನು ಕೇವಲ ಹೆಸರಿಗೆ ಮಾತ್ರ. ನಾನು ತ್ಯಾಗಿ; ನನಗೆ ಬೇಕಾಗಿರುವುದು ಒಂದೇ ಒಂದು. ವಿಧವೆಯರ ದುಃಖವನ್ನು ಶಮನಮಾಡದ, ಅನಾಥರ ಬಾಯಿಗೆ ಒಂದು ತುತ್ತು ಅನ್ನವನ್ನು ಕೊಡದ, ಧರ್ಮದಲ್ಲಾಗಲಿ, ದೇವರಲ್ಲಾಗಲೀ ನನಗೆ ನಂಬಿಕೆಯಿಲ್ಲ. ಸಿದ್ಧಾಂತಗಳು ಎಷ್ಟು ಸೂಕ್ಷ್ಮವಾಗಿದ್ದರೇನು? ತತ್ವಶಾಸ್ತ್ರವನ್ನು ಎಷ್ಟು ಚೆನ್ನಾಗಿ ರಚಿಸಿದ್ದರೇನು? ಅವುಗಳು ಎಲ್ಲಿಯವರೆವಿಗೂ ಕೇವಲ ಪುಸ್ತಕಗಳಲ್ಲಿ, ನಮ್ಮ ಮೂಢನಂಬಿಕೆಗಳಲ್ಲಿ ಕೊನೆ ಗಾಣುವುವೋ, ಅಲ್ಲಿಯವರೆವಿಗೂ ಅದನ್ನು ಧರ್ಮವೆಂದು ಕರೆಯುವುದಿಲ್ಲ. ಕಣ್ಣಿರುವುದು ಮುಖದ ಮೇಲೆ, ಬೆನ್ನ ಹಿಂದೆ ಅಲ್ಲ. ಆದುದರಿಂದ ಮುಂದುವರಿಯಿರಿ. ಯಾವುದನ್ನು "ನನ್ನ ಧರ್ಮ" ಎಂದು ಹೆಮ್ಮೆಯಿಂದ ಹೇಳಿಕೊಳ್ಳುವಿರೋ, ಅದನ್ನು ಆಚರಣೆಯಲ್ಲಿ ತೋರಿಸಿ. ದೇವರು ನಿಮ್ಮನ್ನು ಆಶೀರ್ವದಿಸಲಿ.

ನನ್ನನ್ನು ನೋಡಬೇಡಿ. ನಿಮ್ಮನ್ನು ನೀವು ನೋಡಿಕೊಳ್ಳಿ. ನಿಮ್ಮ ಉತ್ಸಾಹಕ್ಕೆ ನಾನೊಂದು ನಿಮಿತ್ತವಾದೆನೆಂದು ನನಗೆ ಸಂತೋಷ. ಅದರಿಂದ ಪ್ರಯೋಜನಪಡೆಯಿರಿ. ಆ ಪ್ರವಾಹದ ಮೇಲೆ ತೇಲಿಹೋಗಿ; ಎಲ್ಲ ಸರಿಬರುವುದು. ನನ್ನ ಮಗು, ಪ್ರೇಮವೆಂದಿಗೂ ಸೋಲುವುದಿಲ್ಲ. ಇಂದಲ್ಲದೇ ಇದ್ದರೆ ನಾಳೆ, ಅಲ್ಲದೇ ಇದ್ದರೆ ಯುಗಗಳಾದ ಮೇಲೆ, ಸತ್ಯಕ್ಕೆ ಯಾವಾಗಲೂ ಜಯ ಸಿದ್ಧ. ಪ್ರೇಮಕ್ಕೆ ಯಾವಾಗಲೂ ಜಯ ಸಿದ್ಧ. ನಿಮ್ಮ ದೇಶದವರನ್ನು ನೀವು ಪ್ರೀತಿಸುವಿರೇನು? ದೇವರನ್ನು ಹುಡುಕಿಕೊಂಡು ಎಲ್ಲಿಗೆ ಹೋಗುವಿರಿ? ದರಿದ್ರರೂ, ದುಃಖಿಗಳೂ, ನಿರ್ಬಲರೂ —ಇವರೆಲ್ಲ ದೇವರಲ್ಲವೇನು? ಏತಕ್ಕೆ ಮೊದಲು ಅವರನ್ನು ಪೂಜೆ ಮಾಡಬಾರದು. ಗಂಗಾನದಿಯ ತೀರದಲ್ಲಿ ಭಾವಿಯನ್ನು ಏತಕ್ಕೆ ತೋಡುವುದಕ್ಕೆ ಹೋಗುತ್ತೀರಿ. ಪ್ರೇಮದ ಅನಂತ ಶಕ್ತಿಯಲ್ಲಿ ನಂಬಿಕೆ ಇಡಿ. ಈ ತೋರಿಕೆಯ ಕೀರ್ತಿಗೌರವ ಯಾರಿಗೆ ಬೇಕು? ವೃತ್ತಾಂತ ಪತ್ರಿಕೆ ನನ್ನ ವಿಷಯವಾಗಿ ಏನು ಹೇಳುತ್ತವೆ ಎಂಬುದನ್ನು ಸ್ವಲ್ಪವೂ ಗಮನಿಸುವುದಿಲ್ಲ. ನಿನಗೆ ಪ್ರೇಮವಿದೆಯೇನು? ಇದ್ದರೆ ನೀನು ಸರ್ವಶಕ್ತಿಯುತನು. ನೀನು ಸಂಪೂರ್ಣ ನಿಸ್ವಾರ್ಥಪರನೇನು? ಹಾಗಿದ್ದರೆ ನಿನ್ನನ್ನು ಎದುರಿಸಬಲ್ಲ ವೀರನಾರು? ಎಲ್ಲಾ ಕಡೆಯಲ್ಲಿಯೂ ಚಾರಿತ್ರಶುದ್ಧಿಗೆ

ಗೌರವ ಸಿಕ್ಕುವುದು. ಸಮುದ್ರದ ಆಳದಲ್ಲಿ ಕೂಡ ನನ್ನ ಮಕ್ಕಳನ್ನು ಕಾಪಾಡುವನು ದೇವರು. ನಮ್ಮ ದೇಶಕ್ಕೆ ಶೂರರು ಬೇಕಾಗಿದೆ. ಶೂರರಾಗಿ ನೀವು!

ನಾನು ಇಂಡಿಯಾ ದೇಶಕ್ಕೆ ಹಿಂತಿರುಗಬೇಕೆಂದು ಎಲ್ಲರೂ ಬಯಸುವರು. ನಾನು ಅಲ್ಲಿಗೆ ಬಂದರೆ ಹೆಚ್ಚು ಕೆಲಸವನ್ನು ಮಾಡಬಹುದೆಂದು ಅವರು ಎಣಿಸುವರು. ನನ್ನ ಸ್ನೇಹಿತನೆ! ಅವರು ತಪ್ಪು ತಿಳಿದುಕೊಂಡಿರುವರು. ಸದ್ಯದ ಉತ್ಸಾಹ ಎಲ್ಲಾ ಕೊಂಚ ದೇಶಭಕ್ತಿಯದು, ಅಷ್ಟೇ. ಅವರ ಉತ್ಸಾಹ ನಿಜವಾಗಿಯೂ ಅಪ್ಪಟವಾದುದಲ್ಲ. ಇನ್ನು ಸ್ವಲ್ಪಕಾಲದಲ್ಲಿ ನೂರಾರುಮಂದಿ ವೀರರು ಮುಂದೆ ಬಂದು ಕೆಲಸವನ್ನು ಸಾಗಿಸುವರು. ನೀವು ಕೈಲಾದುದನ್ನೆಲ್ಲ ಮಾಡಿರುವಿರಿ ಎಂದು ತಿಳಿದು ಮುಂದುವರಿಯಿರಿ. ನನಗೆ ಕಾದು ಕುಳಿತುಕೊಳ್ಳಬೇಡಿ. ಇಲ್ಲಿ ಕೆಲಸಕ್ಕೆ ಬಂದುದೊಡ್ಡ ಕ್ಷೇತ್ರವಿದೆ. ಈ ಸಿದ್ಧಾಂತ ಆ ಸಿದ್ಧಾಂತ ಇವೆಲ್ಲ ನನಗೇಕೆ? ನಾನು ದೇವರ ಸೇವಕ. ಮಹಾ ಉಪದೇಶವನ್ನು ಬೋಧಿಸುವುದಕ್ಕೆ ಜಗತ್ತಿನಲ್ಲಿ ಇಲ್ಲಿಗಿಂತ ಬೇರೆ ಉತ್ತಮಸ್ಥಳವೆಲ್ಲಿದೆ? ಒಬ್ಬನು ನನಗೆ ವಿರೋಧವಾದರೆ ನೂರುಜನ ನನ್ನ ಪರವಾಗಿ ಸಹಾಯ ಮಾಡುವವರು ಇಲ್ಲಿ ಇರುವರು. ಪರಸ್ಪರ ಸಹಾನುಭೂತಿ ಇದೆ ಪುರುಷರಲ್ಲಿ; ಇಲ್ಲಿಯ ಸ್ತ್ರೀಯರಾದರೊ ದೇವತಾಸ್ವರೂಪಿಣಿಯರು! ಹೊಗಳಿದರೆ ಕಡುಮೂರ್ಖರು ಕೂಡ ಎದ್ದು ನಿಲ್ಲುವರು. ಎಲ್ಲಾ ಕಷ್ಟವಿಲ್ಲದೆ ಕೊನೆಗಾಣುವುದೆಂದು ತಿಳಿದರೆ ಹೇಡಿಗಳೂ ಧೀರರ ಪಾತ್ರವನ್ನು ವಹಿಸುವರು. ಆದರೆ ಮೌನವಾಗಿ ಕೆಲಸಮಾಡುವವನೆ ನಿಜವಾದ ವೀರ. ಬುದ್ಧನೊಬ್ಬ ಪ್ರಖ್ಯಾತಿಗೆ ಬರುವುದಕ್ಕೆ ಮುಂಚೆ ಎಷ್ಟುಮಂದಿ ಬುದ್ಧರು ಮೌನದಲ್ಲಿ ಗತಿಸಿದರು? ನನ್ನ ಮಗು, ದೇವರಲ್ಲಿ ನನಗೆ ವಿಶ್ವಾಸವಿದೆ. ಮಾನವನಲ್ಲಿ ನನಗೆ ವಿಶ್ವಾಸವಿದೆ. ಸಂಕಟದಲ್ಲಿ ನರಳುವವನಿಗೆ ಸಹಾಯಮಾಡುವುದರಲ್ಲಿ ನನಗೆ ನಂಬಿಕೆ ಇದೆ. ಮತ್ತೊಬ್ಬರ ಉದ್ಧಾರಕ್ಕೆ ನರಕಕ್ಕೆಬೇಕಾದರೂ ಹೋಗುವುದಕ್ಕೆ ನಾನು ಸಿದ್ಧನಾಗಿರುವೆನು. ಪಾಶ್ಚಾತ್ಯರ ವಿಷಯವಾಗಿ ಮಾತನಾಡುವೆಯಲ್ಲ. ಅವರು ನನಗೆ ಆಹಾರ ಕೊಟ್ಟಿರುವರು. ಇಳಿದುಕೊಳ್ಳುವುದಕ್ಕೆ ಮನೆ ಕೊಟ್ಟಿರುವರು. ಸಹಾಯಕ್ಕೆ ಸ್ನೇಹಿತರನ್ನು ಬದ

ಗಿಸಿರುವರು, ಕಷ್ಟದಲ್ಲಿ ರಕ್ಷಣೆಕೊಟ್ಟಿರುವರು. ಅತ್ಯಂತ ಗೊಡ್ಡು ಕ್ರೈಸ್ತನುಕೂಡ ಹೀಗೆ ಸಹಾಯಮಾಡಿರುವನು! ಅವರ ಪಾದ್ರಿಗಳಲ್ಲಿ ಒಬ್ಬರು ನಿಮ್ಮ ದೇಶಕ್ಕೆ ಬಂದರೆ ನೀವು ಅವರಿಗೆ ಏನುಮಾಡುತ್ತೀರಿ? ಅವರನ್ನು ನೀವು ಮುಟ್ಟುವುದು ಕೂಡ ಇಲ್ಲ. ಅವರೆಲ್ಲ ಮ್ಲೇಚ್ಛರು! ನನ್ನ ಮಗು! ಯಾವ ಮನುಷ್ಯನೂ, ಯಾವ ಜನಾಂಗವೂ ಇನ್ನೊಬ್ಬರನ್ನು ದ್ವೇಷಿಸಿ ತಾನು ಮಾತ್ರ ಒದುಕಿರುವುದಕ್ಕೆ ಆಗುವುದಿಲ್ಲ. ಎಂದು ನಿಮ್ಮವರು ಮ್ಲೇಚ್ಛರು ಎಂಬ ಪದವನ್ನು ನಿರ್ಮಿಸಿ ಅನ್ಯದೇಶದೊಡನೆ ಸಂಪರ್ಕವನ್ನು ತೊರೆದರೋ, ಅಂದೇ ಭಾರತ ವರ್ಷದ ಉನ್ನತಿ ಕೊನೆಗೊಂಡಿತು. ಅಂತಹ ಆಲೋಚನೆಗೆ ಎಡೆಗೊಡಬೇಡ. ಜೋಪಾನವಾಗಿರು! ವೇದಾಂತ ತತ್ತ್ವಗಳನ್ನು ಮಾತನಾಡುವುದು ಬಹಳ ಸುಲಭ. ಆದರೆ ಅದರ ಒಂದು ಸಣ್ಣ ನಿಯಮವನ್ನು ಆಚರಣೆಗೆ ತರುವುದು ಎಷ್ಟು ಕಷ್ಟ!

ಆಶೀರ್ವಾದಗಳು, ಯಾವಾಗಲೂ ನಿನ್ನ,

ವಿವೇಕಾನಂದ.

ವಿ. ಸೂ.—ಅಧಿಕಾರಲಾಲಸೆ, ಅಸೂಯೆ ಇವೆರಡು ವಿಷಯದಲ್ಲಿ ಎಚ್ಚರಿಕೆ. ಆತ್ಮಾವಲಂಬನೆಯನ್ನು ಅನವರತವೂ ಅಭ್ಯಾಸಮಾಡಿ—ವಿ.

(೩೩)

೫೪೧, ಡಿಯರ್ ಬಾರನ್ ಅವೆನ್ಯೂ, ಚಿಕಾಗೊ,
ನವಂಬರ್ ೧೮೯೪.

ದಿವಾನ್ ಜಿ ಸಾಹೇಬರೆ,

ನಿಮ್ಮ ಪತ್ರದಿಂದ ನನಗೆ ತುಂಬಾ ಸಂತೋಷವಾಯಿತು. ತಮಾಷೆ ನನಗೂ ಗೊತ್ತಿದೆ. ಆದರೆ ಒಳ್ಳೀತಮಾಷೆಗೆ ಕೋಪಗೊಳ್ಳುವ ಮಗು ನಾನಲ್ಲ! ಇನ್ನೂ ಹೆಚ್ಚು ತೆಗೆದುಕೊಳ್ಳಿ.

ಪಾಶ್ಚಾತ್ಯರ ಜಯದ ರಹಸ್ಯವಿರುವುದು ಕಾರ್ಯದಕ್ಷತೆಯಲ್ಲಿ ಮತ್ತು ಅನ್ಯೋನ್ಯಸಹಾಯದಲ್ಲಿ. ಇದು ಪರಸ್ಪರ ನಂಬಿಕೆ ಮತ್ತು ಸಹಕಾರದಿಂದ ಮಾತ್ರ ಸಾಧ್ಯ. ನಿಮಗೆ ಬೊಂಬಾಯಿನಲ್ಲಿ ಪರಿಚಿತರಾದ ವೀರಚಂದ

ಗಾಂಧಿ ಎಂಬ ಜೈನರು ಇಲ್ಲಿರುವರು. ಅವರು ಇಂತಹ ಚಳಿ ರಾಜ್ಯದಲ್ಲಿಯೂ ಸಸ್ಯಾಹಾರವನ್ನಲ್ಲದೆ ಬೇರೆ ಏನನ್ನೂ ಸ್ವೀಕರಿಸುವುದಿಲ್ಲ. ಇವರು ಭರತಖಂಡದ ಜನರಮೇಲೆ, ಮತ್ತು ಅವರ ಧರ್ಮದಮೇಲೆ ಇರುವ ಅಪವಾದವನ್ನು ತಡೆಯಲು ಪ್ರಯತ್ನಿಸುತ್ತಿರುವರು. ಈ ದೇಶದ ಜನರೇನೋ ಅವರನ್ನು ಸನ್ಮಾನಮಾಡುತ್ತಾರೆ. ಆದರೆ ಯಾರು ಅವರನ್ನು ಇಲ್ಲಿಗೆ ಕಳುಹಿಸಿದ್ದಾರೋ ಅವರು ಏನುಮಾಡುತ್ತಿರುವರು? ಅವರನ್ನು ಅವರ ಜಾತಿಯಿಂದ ಬಹಿಷ್ಕಾರ ಹಾಕುವುದಕ್ಕೆ ಪ್ರಯತ್ನಮಾಡುತ್ತಿರುವರು. ಅಸೂಯೆ ಎಂಬ ಹೀನಗುಣ ಗುಲಾಮರಲ್ಲಿ ಹುಟ್ಟಿರುವುದು. ನಂತರ ಅಸೂಯೆಯೆ ಅವರನ್ನು ಗುಲಾಮಗಿರಿಯಲ್ಲಿ ಇಟ್ಟಿರುವುದು.

ಇಲ್ಲಿ— ಅವರೆಲ್ಲರೂ ಉಪನ್ಯಾಸಮಾಡಿ ಹಣ ಸಂಪಾದಿಸಲು ಪ್ರಯತ್ನಪಟ್ಟರು. ಇದರಿಂದ ಅವರಿಗೇನೊ ಸ್ವಲ್ಪ ಪ್ರಯೋಜನವಾಯಿತು. ಆದರೆ ಅವರೆಲ್ಲರಿಗಿಂತ ನನಗೇ ಹೆಚ್ಚು ಜಯ ಸಿಕ್ಕಿತು. ನಾನು ಅವರ ಜಯಕ್ಕೆ ಯಾವ ಕೊರತೆಯನ್ನು ತಂದೊಡ್ಡಲಿಲ್ಲ. ಅದು ದೇವರ ಇಚ್ಛೆ. ಇವರಲ್ಲಿ ಒಬ್ಬರನ್ನುಬಿಟ್ಟು ಉಳಿದವರೆಲ್ಲರೂ ನನ್ನ ವಿಷಯದಲ್ಲಿ ಸುಳ್ಳುಸುದ್ದಿಯನ್ನು ಹರಡುತ್ತಿರುವರು. ಇಂತಹ ನೀಚ ಕೃತ್ಯವನ್ನು ಅಮೇರಿಕಾದೇಶದವರು ಎಂದಿಗೂ ಮಾಡುವುದಿಲ್ಲ.

ಇಲ್ಲಿ ಯಾರಾದರೂ ಮುಂದೆ ಬರಬೇಕೆಂದು ಪ್ರಯತ್ನಪಟ್ಟರೆ ಎಲ್ಲರೂ ಅವನಿಗೆ ಸಹಾಯಮಾಡಲು ಸಿದ್ಧರಾಗಿರುವರು. ಆದರೆ, ಭರತಖಂಡದಲ್ಲಿ ನಾಳೆ, ನೀವು ನನ್ನನ್ನು ಹೊಗಳಿ ನಿಮ್ಮ ಯಾವುದಾದರೊಂದು ಪತ್ರಿಕೆಯಲ್ಲಿ ಒಂದು ಲೇಖನವನ್ನು ಬರೆಯಿರಿ. ಮಾರನೇ ದಿನವೇ ಅವರೆಲ್ಲ ನಿಮಗೆ ವಿರೋಧವಾಗುವರು. ಇದಕ್ಕೆ ಕಾರಣವೇನು? ಗುಲಾಮರ ಸ್ವಭಾವವೇ ಹೀಗೆ! ತಮ್ಮ ಸಹೋದರರಲ್ಲಿ ಯಾರಾದರೂ ತಮಗಿಂತ ಮೇಲಕ್ಕೆ ಸ್ವಲ್ಪ ತಲೆ ಎತ್ತುವುದನ್ನು ನೋಡಲು ಅವರಿಗೆ ಸಹನೆ ಇಲ್ಲ. ಇಂತಹ ಕ್ಷುದ್ರ ವ್ಯಕ್ತಿಗಳನ್ನು, ಇಲ್ಲಿಯ ದೇಶದಲ್ಲಿ ಸ್ವತಂತ್ರರಾಗಿಯೂ, ಆತ್ಮಾವಲಂಬಿಗಳಾದರೂ ಪರಸ್ಪರ ಸೋದರ ವಾತ್ಸಲ್ಯದಿಂದ ಕೂಡಿರುವ ಜನರೊಂದಿಗೆ ಹೋಲಿಸುವಿರೇನು? ಅಮೇರಿಕಾದೇಶದಲ್ಲಿ ಗುಲಾಮಗಿರಿಯಿಂದ ಪಾರಾದ ನಿಗ್ರೋ ಜನರು ನಮ್ಮ ದೇಶದ ಜನರ ಸ್ವಭಾ

ವಕ್ಕೆ ಹತ್ತಿರ ಇರುವರು. ದಕ್ಷಿಣ ಅಮೇರಿಕಾದಲ್ಲಿ (U.S.A.) ಅವರು ಎರಡು ಕೋಟಿ ಇರುವರು. ಬಿಳಿಯವರು ಎಲ್ಲೊ ಅಲ್ಪಮಂದಿ. ಆದರೇನು, ಅವರು ನಿಗ್ರೊಗಳೆಲ್ಲರನ್ನು ತಮ್ಮ ಸ್ವಾಧೀನದಲ್ಲಿಟ್ಟುಕೊಂಡಿರುವರು. ಇದಕ್ಕೆ ಕಾರಣವೇನು? ಕಾನೂನು ತಮ್ಮ ಪರವಾಗಿದ್ದರೂ ಈ ಗುಲಾಮರನ್ನು ಬಿಡುಗಡೆ ಮಾಡುವುದಕ್ಕಾಗಿ ತಮ್ಮೊಳಗೆ ಒಂದು ಘೋರ ಯುದ್ಧವನ್ನು ಮಾಡಬೇಕಾಯಿತು. ಒಬ್ಬ ನಿಗ್ರೊ ಅದೇ ಪಂಗಡಕ್ಕೆ ಸೇರಿದ ಮತ್ತೊಬ್ಬ ನಿಗ್ರೊ ಅಭಿವೃದ್ಧಿಯಾಗುತ್ತಿರುವುದನ್ನಾಗಲೀ, ಇನ್ನೊಬ್ಬರು ಅವನನ್ನು ಹೊಗಳುವುದನ್ನಾಗಲೀ, ಅವನು ಕೇಳಲಾರ. ಅಸೂಯೆ ತುಂಬ ತುಳುಕಾಡುತ್ತಿದೆ. ಇದೇ ಅವರ ದೋಷ. ತಮ್ಮ ಸಹೋದರರನ್ನು ನಾಶಮಾಡಲು ಬಿಳಿಯ ಜನರೊಡನೆ ಸಹಕರಿಸುವರು. ಇಂಡಿಯಾ ದೇಶದಿಂದ ಹೊರಗೆ ಬಂದ ಹೊರತು ನಿನಗೆ ಇದು ಗೊತ್ತಾಗುವುದಿಲ್ಲ. ಬೇಕಾದಷ್ಟು ಹಣ ಅಧಿಕಾರ ಇರುವವರಿಗೆ ಇದರ ಪ್ರಯಾಸವೇ ಬೇಕಾಗಿಲ್ಲ. ಪ್ರಪಂಚದ ಪಾಲಿಗೆ ಪ್ರಪಂಚ ಹೋಗುತ್ತಿರಲಿ ಎನ್ನಬಹುದು. ಯಾರು ಪದದಳಿತರ ಹೃದಯರಕ್ತದಿಂದ ಪೋಷಿತರಾಗಿ, ಕೋಟ್ಯಾನುಕೋಟಿ ಬಡ ಜನರ ದುಡಿತದಿಂದ ಸುಖದಲ್ಲಿ ಬಾಳಿ ವಿದ್ಯಾರ್ಜನೆ ಮಾಡಿದರೋ ಅವರು, ಇವರ ದುಃಖವನ್ನು ಸ್ವಲ್ಪವೂ ಮನಸ್ಸಿಗೆ ತಾರದಿದ್ದರೆ ಅಂತಹವರನ್ನು ದ್ರೋಹಿ ಎನ್ನುವೆನು. ಯಾವ ಪ್ರಾಂತ್ಯದಲ್ಲಿ, ಯಾವ ಕಾಲದಲ್ಲಿ, ನಿಮ್ಮ ಶ್ರೀಮಂತರು, ಕುಲೀನರು, ಪುರೋಹಿತರು ಮತ್ತು ಗುರುಗಳು ಬಡವರಿಗೆ ಮನಕರಗಿದರು? ದೀನ ಜನರನ್ನು ಹಿಂಡಿ, ಅವರ ಜೀವನವನ್ನು ಹೀರಿ, ತಮ್ಮ ದರ್ಪಕ್ಕೆ ಶಕ್ತಿಯನ್ನು ಸಂಪಾದಿಸುವರು.

ದೇವರು ದೊಡ್ಡವನು, ಸಾವಕಾಶವಾಗಿಯೋ ಜಾಗ್ರತೆಯೋ, ಸೇಡು ತೀರಿಸಿ ಕೊಳ್ಳುವ ಕಾಲ ಬಂದಿತು. ಯಾರು ದೀನರ ರಕ್ತವನ್ನು ಹೀರಿದರೋ, ಯಾವ ಶ್ರೀಮಂತರ ವಿದ್ಯಾವ್ಯಾಸಂಗಕ್ಕೆ ದೀನರು ಹಣವನ್ನು ಕೊಟ್ಟರೋ, ಯಾರ ಐಶ್ವರ್ಯಕ್ಕೆ ದೀನರ ಬಡತನ ಕಾರಣವಾಯಿತೊ, ಅಂತಹ ಸಾವಿರಾರು ಮಂದಿ ಶ್ರೀಮಂತರನ್ನು ಗುಲಾಮರಾಗಿ ಮಾರಿದರು, ಅವರ ಹೆಂಡಿರು ಮಕ್ಕಳ ಮಾನಭಂಗವಾಯಿತು. ಅವರ ಐಶ್ವರ್ಯ

ಸೂರೆ ಹೋಯಿತು. ಇದು ಕಳೆದ ಸಾವಿರ ವರುಷಗಳಿಂದ ಆಗಿದೆ. ಇದಕ್ಕೆ ಕಾರಣ ಏನೂ ಇಲ್ಲವೆಂದು ತಿಳಿದಿರೇನು ?

ಭರತಖಂಡದ ಮಹಮ್ಮದೀಯರಲ್ಲಿ ಅನೇಕರು ಏಕೆ ಮಹಮ್ಮದೀಯರಾಗಿರುವರು; ಬಲಪ್ರಯೋಗದಿಂದ ಅವರನ್ನು ಮುಸಲ್ಮಾನ ಮತಕ್ಕೆ ಸೇರಿಸಿದರು ಎನ್ನುವುದು ಶುದ್ಧ ತಪ್ಪು. ಜಮೀನ್‌ದಾರರ ಉಪಟಳದಿಂದ, ಪುರೋಹಿತರ ಹಿಂಸೆಯಿಂದ ತಪ್ಪಿಸಿಕೊಳ್ಳಬೇಕೆಂದು ಮುಸಲ್ಮಾನರಾದರು. ಆದಕಾರಣವೇ ಬಂಗಾಳ ದೇಶದ ರೈತರಲ್ಲಿ ಹಿಂದೂಗಳಿಗಿಂತ ಮುಸಲ್ಮಾನರೇ ಹೆಚ್ಚು. ಅಲ್ಲಿ ಹೆಚ್ಚು ಹಿಂದೂ ಜಮೀನ್‌ದಾರರು ಇದ್ದರು. ಅಧಃ ಪಾತಾಳಕ್ಕೆ ಹೋಗುವ ಕೋಟ್ಯಾನು ಕೋಟಿ ಭಾರತೀಯರನ್ನು ಮೇಲೆತ್ತಬೇಕೆಂದು ಯಾರು ಬಯಸುವರು ? ಕೆಲವು ಸಾವಿರ ಪದವೀಧರರು, ಕೆಲವು ಶ್ರೀಮಂತರು, ಇವರಿಂದ ಅಲ್ಲ ಒಂದು ಜನಾಂಗವಾಗುವುದು. ನಿಜ. ನಮಗೆ ಅನುಕೂಲವು ಅವಕಾಶ ವಿಲ್ಲ. ಆದರೇನು ? ಮೂವತ್ತು ಕೋಟಿ ಜನರ ಊಟಕ್ಕೆ, ಬಟ್ಟೆಗೆ ಬೇಕಾದಷ್ಟು ಇದೆ. ಅವರಿಗೆ ಹೆಚ್ಚು ಸೌಕರ್ಯವನ್ನು ಕೊಡಬಹುದು. ಹೆಚ್ಚು ಸುಖಿಗಳನ್ನಾಗಿ ಮಾಡಬಹುದು. ನಮ್ಮ ಜನರಲ್ಲಿ ಶೇಖಡ ತೊಂಬತ್ತರಷ್ಟು ಜನರಿಗೆ ವಿದ್ಯೆ ಇಲ್ಲ. ಇದನ್ನು ಯಾರು ಮನಸ್ಸಿಗೆ ಹಾಕಿಕೊಳ್ಳುತ್ತಾರೆ ? ಈ ಬಾಬುಗಳೂ, ದೇಶ ಭಕ್ತ ಎಂದು ಜಂಭ ಕೊಚ್ಚಿಕೊಳ್ಳುವವರು, ಇದನ್ನು ಯೋಚಿಸುತ್ತಾರೇನು ?

ಈಗ ನಾನು ನಿಮಗೆ ಇನ್ನೊಮ್ಮೆ ಹೇಳುತ್ತೇನೆ. ದೇವರು ಇನ್ನೂ ಇರುವನು. ಇದು ಹುಡುಗಾಟವಲ್ಲ. ಅತನು ನಮಗೆ ಆಜ್ಞಾಪಿಸುತ್ತಿರುವನು. ರೋಗದಿಂದ ನರಳುವವರಿಗೆ ಔಷಧಕೊಡಲು ಹೋದರೆ ಅವನ ಕೈಯನ್ನನ್ನೇ ಕಚ್ಚುವಂತೆ, ಗುಲಾಮರಿಂದ ಕೂಡಿದ ಜನಾಂಗ ನಮಗೆ ಕಿರುಕುಳ ಕೊಡದೆ ಇರುವುದಿಲ್ಲ. ಆದರೂ ಕೂಡ ನನ್ನೊಂದಿಗೆ ಸಹಾನುಭೂತಿ ತೋರಿಸಿ. ಪ್ರತಿಯೊಂದು ಒಳ್ಳೆಯ ವಿಷಯಕ್ಕೆ, ಪ್ರತಿಯೊಂದು ಮಹಾ ಕಾರ್ಯಕ್ಕೆ, ನಿಮ್ಮಂತಹ ಉದಾರ ಸ್ವಭಾವದವರೂ, ಸತ್ಯವಂತರೂ ಆದ ಒಬ್ಬರಾದರೂ ನನ್ನೊಂದಿಗೆ ಸಹಾನುಭೂತಿಯನ್ನು ಕೊಡುವಿರಿ ಎಂದು ಭಾವಿಸುತ್ತೇನೆ. ಅದಕ್ಕೇ ನನ್ನೊಡನೆ

"ಕರುಣಾಳು ಬಾ ಬೆಳಕೆ, ಮುಸುಕಿದೀ ಮಬ್ಬಿನಲಿ ದಾರಿ ತೋರಲು"
ಎಂದು ಪ್ರಾರ್ಥಿಸಿ.

ಅವರು ಏನಾದರೂ ಹೇಳಲಿ. ನಾನು ಅದನ್ನು ಲೆಕ್ಕಿಸುವುದಿಲ್ಲ. ನನ್ನ ದೇವರನ್ನು ಪ್ರೀತಿಸುತ್ತೇನೆ. ನನ್ನ ಧರ್ಮವನ್ನು ಪ್ರೀತಿಸುತ್ತೇನೆ. ನನ್ನ ದೇಶವನ್ನು ಪ್ರೀತಿಸುತ್ತೇನೆ. ಎಲ್ಲಕ್ಕಿಂತ ಹೆಚ್ಚಾಗಿ ಭಿಕಾರಿಯನ್ನು ನಾನು ಪ್ರೀತಿಸುತ್ತೇನೆ. ದೀನರನ್ನು, ದಲಿತರನ್ನು, ಮೂಢರನ್ನು ಪ್ರೀತಿಸುತ್ತೇನೆ. ಅವರಿಗಾಗಿ ಮನಕರಗುವೆನು. ನಾನೆಷ್ಟು ಅವರಿಗಾಗಿ ವ್ಯಥೆಪಡುವೆನೆಂಬುದು ದೇವರಿಗೆ ಗೊತ್ತು. ಅವನೇ ನನಗೆ ದಾರಿ ತೋರುವನು. ಜನರ ಪುರಸ್ಕಾರ ತಿರಸ್ಕಾರವನ್ನು ನಾನು ಲೆಕ್ಕಿಸುವುದಿಲ್ಲ. ಅವರೆಲ್ಲ ಬಹುಪಾಲು ಮಾತಾಳಿಗಳು ಅವರಿಗೆ ಏನೂ ಗೊತ್ತಿಲ್ಲ. ಸಹಾನುಭೂತಿಯ ಅಂತರಾಳಕ್ಕೆ ಅವರು ಹೋಗಿಲ್ಲ. ವಿಶ್ವದಲ್ಲಿ ಪ್ರೇಮಮಯ ಶಕ್ತಿಯ ಪರಿಚಯ ಅವರಿಗೆ ಇನ್ನೂ ಆಗಿಲ್ಲ.

ಶ್ರೀರಾಮಕೃಷ್ಣರ ಕೃಪಾಕಟಾಕ್ಷದಿಂದ ನನಗೆ ಅಂತಹ ದೃಷ್ಟಿಯ ಅರಿವಿದೆ. ನನ್ನದೊಂದು ಸಣ್ಣ ತಂಡ. ಎಲ್ಲರೂ ನನ್ನಂತೆ ದರಿದ್ರ ಭಿಕ್ಷುಕರು. ಇವರ ಮೂಲಕ ನಾನು ಕೆಲಸ ಮಾಡುವುದಕ್ಕೆ ಪ್ರಯತ್ನಿಸುತ್ತಿರುವೆನು. ನೀವು ಅವರನ್ನು ನೋಡಿರುವಿರಾ? ದೇವರ ಕೆಲಸ ಯಾವಾಗಲೂ ದೀನರಿಂದ, ಬಡವರಿಂದ ನೆರವೇರಿದೆ. ನನ್ನ ಗುರುವಿನಲ್ಲಿ, ನನ್ನ ದೇವರಲ್ಲಿ, ನನ್ನ ಆತ್ಮಶಕ್ತಿಯಲ್ಲಿ, ಶ್ರದ್ಧೆ ಹುಟ್ಟುವಂತೆ ನೀವು ನನಗೆ ಆಶೀರ್ವದಿಸಿ.

ಪ್ರೇಮ ಮತ್ತು ಸಹಾನುಭೂತಿಯೆ ಹಾದಿ. ಪ್ರೀತಿಯೆ ಪೂಜೆ. ನಿಮ್ಮನ್ನು, ನಿಮ್ಮ ಬಂಧುವರ್ಗವನ್ನು ಭಗವಂತ ಅನುಗ್ರಹಿಸಲಿ. ಪ್ರಾರ್ಥನೆಯಿಂದ ಕೂಡಿದ ಆಶೀರ್ವಾದಗಳು.

ವಿವೇಕಾನಂದ.

*

ನ್ಯೂಯಾರ್ಕ್,
೧೦ ನೇ ನವಂಬರ್, ೧೮೯೪.

ಮಹಾಶಯ—,

ಕಲ್ಕತ್ತೆಯ ಪೌರಸಭಾಮಂದಿರದಲ್ಲಿ ನೆರೆದ ಸಭೆಯಿಂದ ಅಂಗೀಕೃತವಾದ ಠರಾವು ಮತ್ತು ನನ್ನ ಊರಿನವರು ನನ್ನ ವಿಷಯದಲ್ಲಿ ಹೇಳಿದ ಸವಿನುಡಿಗಳೂ ಬಂದು ತಲುಪಿದವು.

ಮಹಾಶಯರೆ! ನಾನು ಮಾಡಿದ ಅಲ್ಪ ಸೇವೆಯನ್ನು ತಾವು ಮೆಚ್ಚಿದುದಕ್ಕಾಗಿ ನಾನು ಮನಃಪೂರ್ವಕ ಅರ್ಪಿಸುವ ಕೃತಜ್ಞತೆಯನ್ನು ತಾವು ಸ್ವೀಕರಿಸಬೇಕು.

ಯಾವ ವ್ಯಕ್ತಿಯಾಗಲಿ, ಜನಾಂಗವಾಗಲೀ, ಅನ್ಯರ ಸಂಪರ್ಕವಿಲ್ಲದೇ ಬೇರೆಯಾಗಿ ಜೀವಿಸುವುದಕ್ಕೆ ಆಗುವುದಿಲ್ಲವೆಂಬುದು ನನ್ನ ದೃಢವಾದ ನಂಬಿಕೆ. ದೊಡ್ಡಸ್ತಿಕೆ, ನೀತಿ, ಪವಿತ್ರತೆ ಇವುಗಳ ವಿಷಯದಲ್ಲಿ ತಪ್ಪು ತಿಳುವಳಿಕೆಯಿಂದ ಈ ಪ್ರಕಾರ ನಡೆದಾಗಲೆಲ್ಲಾ, ಬೇರೆಯಾದವರಿಗೆ ಅನರ್ಥಗಳೇ ಫಲ.

ಭಾರತ ವರ್ಷದ ಅವನತಿಗೂ ಮತ್ತು ಕುಲಗೆಟ್ಟಿತನಕ್ಕೂ ನಮ್ಮವರು, ತಮ್ಮ ಸುತ್ತಲೂ ಪದ್ಧತಿ ಎಂಬ ಗೋಡೆಯನ್ನು, ಪರದ್ವೇಷ ಎಂಬ ತಳಹದಿಯ ಮೇಲೆ ಎಬ್ಬಿಸಿದುದೇ ಮಹತ್ತಾದೊಂದು ಕಾರಣವೆಂದು ನನಗೆ ತೋರುತ್ತದೆ. ಸುತ್ತಲಿದ್ದ ಬೌದ್ಧ ಜಾತಿಯವರೊಡನೆ ಸಂಪರ್ಕವನ್ನು ತಪ್ಪಿಸುವುದೇ ಇದರ ಮುಖ್ಯ ಉದ್ದೇಶ.

ಈ ವಿಷಯವನ್ನು ಮುಚ್ಚಿಡಲು ಪ್ರಾಚೀನ ಅಥವಾ ಆಧುನಿಕ ಕುತರ್ಕ ಯಾವ ಬಗೆಯ ಮುಸುಕನ್ನು ಬೇಕಾದರೂ, ಅದರ ಮೇಲೆ ಹೊದಿಸಲು ಪ್ರಯತ್ನಪಡಲಿ. ತಪ್ಪಿಸಿಕೊಳ್ಳಲಾರದ ಫಲ ಇದರಿಂದ ಏನಾಯಿತು ಎಂದರೆ, ತಾನು ಕೆಡದೆ ಇತರರನ್ನು ದ್ವೇಷಿಸಲಾಗುವುದಿಲ್ಲ ಎಂಬ ನೈತಿಕ ಸಮರ್ಥನೆಗನುಸಾರವಾಗಿ, ಪೂರ್ವಕಾಲದ ಜಾತಿಗಳಲ್ಲಿ ಅತ್ಯಂತ ಮುಂದಾಗಿದ್ದ ಜಾತಿ, ಎಲ್ಲಾ ಜಾತಿಗಳ ತಿರಸ್ಕಾರಕ್ಕೆ ಈಗ ಗುರಿಯಾಗಿರುವುದು. ನಮ್ಮ ಹಿಂದಿನವರು ಯಾವ ನಿಯಮವನ್ನು

ಮೊದಲು ಕಂಡುಹಿಡಿದು, ವ್ಯವಹಾರದಲ್ಲಿ ಅದನ್ನು ವಿವೇಕದಿಂದ ಕಂಡರೋ, ಅದರ ಉಲ್ಲಂಘನೆಗೆ ನಾವು ದೃಷ್ಟಾಂತರು.

ಕೊಟ್ಟು ತೆಗೆದುಕೊಳ್ಳುವುದೇ ನಿಯಮ ಭಾರತವರ್ಷ ಮತ್ತೊಮ್ಮೆ ಉನ್ನತಿಯನ್ನು ಪಡೆಯಬೇಕೆಂಬ ಆಸೆಯಿದ್ದ ಪಕ್ಷದಲ್ಲಿ ಭಾರತಮಾತೆಯು ತನ್ನ ಭಂಡಾರವನ್ನು ತೆಗೆದು ಅನರ್ಘ್ಯರತ್ನಗಳನ್ನು ಜಗದ ಇತರ ಜನಾಂಗಗಳಿಗೆ ದಾನಮಾಡಬೇಕು. ಇದಕ್ಕೆ ಪ್ರತಿಯಾಗಿ ಇತರರು ತನಗೆ ಯಾವುದನ್ನು ಕೊಡುವರೋ ಅದನ್ನು ಸ್ವೀಕರಿಸುವುದು ಅತ್ಯಾವಶ್ಯಕ. ವಿಕಾಸವೇ ಬಾಳು, ಸಂಕೋಚವೇ ಸಾವು, ಪ್ರೇಮವೇ ಪ್ರಾಣ, ದ್ವೇಷವೇ ಮರಣ. ಇತರ ಜನಾಂಗಗಳನ್ನು ಎಂದು ನಾವು ದ್ವೇಷಿಸುವುದಕ್ಕೆ ಮೊದಲು ಮಾಡಿದೆವೋ, ಅಂದಿನಿಂದಲೇ ನಮ್ಮ ಅವನತಿ ಮೊದಲಾಯಿತು. ನಮ್ಮ ಹೃದಯ ವಿಕಾಸವಾಗಬೇಕು. ಇದು ಚೇತನದ ಚಿಹ್ನೆ. ಹಾಗಲ್ಲದೇ ಇದ್ದರೆ ನಮ್ಮ ನಾಶವನ್ನು ಯಾರೂ ತಡೆಯಲಾಗುವುದಿಲ್ಲ.

ಜಗದ ಸಕಲ ಜನಾಂಗದವರೊಂದಿಗೂ ನಾವು ಕಲಿಯಬೇಕು. ಪರದೇಶಗಳನ್ನು ನೋಡಲು ಹೋಗುವ ಪ್ರತಿ ಹಿಂದುವೂ, ಮೂಢಪುರಾತನ ಸ್ವಾರ್ಥಪರತೆ ಇವುಗಳ ಕಂತೆಯಾಗಿ, ತಾವೂ ಅನುಭವಿಸದೆ ಇತರರನ್ನೂ ಅನುಭವಿಸಗೊಡದೆ, ಗೂಂತಿನಲ್ಲಿರುವ ನಾಯಿಯನ್ನು ಹೋಲುವ ನೂರಾರು ಮಂದಿ ಆಚಾರಶೀಲರಿಗಿಂತ ಹೆಚ್ಚು ಉಪಕಾರವನ್ನು ತನ್ನ ದೇಶಕ್ಕೆ ಮಾಡುವನು.

ಪಾಶ್ಚಾತ್ಯ ಜನಾಂಗಗಳು ಕಟ್ಟಿರುವ ತಮ್ಮ ಜಾತಿ ಜೀವನದ ಅದ್ಭುತ ಪ್ರಾಸಾದಗಳಿಗೆ, ಶುದ್ಧಚಾರಿತ್ರವೆಂಬ ಬಲವಾದ ಕಂಬಗಳಿವೆ. ಅಂತಹ ವ್ಯಕ್ತಿಗಳನ್ನು ನಾವು ತರುವ ವರೆಗೆ ಅವರು ಇವರನ್ನು ದೂರಿ ಪ್ರಯೋಜನವಿಲ್ಲ.

ಸ್ವತಂತ್ರವನ್ನು ಇತರರಿಗೆ ಕೊಡಲು ಹಿಂಜರಿಯುವವರು ತಮ್ಮ ಸ್ವಾತಂತ್ರ್ಯಕ್ಕೆ ಅರ್ಹರೆ? ನಿಷ್ಪ್ರಯೋಜನವಾದ ಕೋಪದಲ್ಲಿ ನಮ್ಮ ಶಕ್ತಿಯನ್ನು ವ್ಯಯಮಾಡದೆ ಶಾಂತ ಮನಸ್ಸಿನಿಂದ ಧೈರ್ಯವಾಗಿ ಕೆಲಸಕ್ಕೆ ಕೈಹಾಕಬೇಕು. ಯಾರು ಯಾವುದನ್ನು ಹೊಂದಲು ಯೋಗ್ಯರೋ,

ಅವರನ್ನು ಯಾವ ಶಕ್ತಿಯೂ ಜಗತ್ತಿನಲ್ಲಿ ತಡೆಯಲಾರದೆಂದು ನಾನು ನಂಬುತ್ತೇನೆ. ನಮ್ಮ ಗತಕಾಲ ವೈಭವಶಿಖರದಲ್ಲಿತ್ತು ಎಂಬುವುದೇನೋ ನಿಜ. ಆದರೆ ಭವಿಷ್ಯ ಅದಕ್ಕಿಂತಲೂ ಹೆಚ್ಚು ವೈಭವಯುತವಾಗುವುದು. ಇದರಲ್ಲಿ ಸಂದೇಹವಿಲ್ಲ. ಪವಿತ್ರತೆ, ತಾಳ್ಮೆ, ದೃಢತೆ ನಮ್ಮಲ್ಲಿ ನೆಲೆಸಲೆಂದು ಶಂಕರನು ಆಶೀರ್ವದಿಸಲಿ.

ತಮ್ಮ ವಿಧೇಯ,
ವಿವೇಕಾನಂದ

(೩೫)

ನ್ಯೂಯಾರ್ಕ್,
೧೯ ನೇ ನವೆಂಬರ್, ೧೮೯೪

ಎನ್ನ ಕೆಚ್ಚೆದೆಯ ಯುವಕರಿರಾ!

ನಿಮ್ಮ ಕಾರ್ಯವನ್ನು ಮುಂದುವರಿಸಿರಿ. ಪ್ರೇಮ ನಿಷ್ಕಾಪಟ್ಯ ಮತ್ತು ಸಹನೆ ಇವುಗಳಲ್ಲದೆ ಏನೂಬೇಕಿಲ್ಲ. ಜೀವನ ವೆಂದರೇನು? ಬೆಳವಣಿಗೆಯಲ್ಲವೆ? ಬೆಳವಣಿಗೆಯೇ ವಿಕಾಸ; ವಿಕಾಸವೇ ಪ್ರೇಮ. ಆದ್ದರಿಂದ ಎಲ್ಲ ಪ್ರೇಮವೂ ಜೀವನ, ಇದು ಮಾತ್ರವೇ ಜೀವನಗತಿಯ ನಿಯಾಮಕ. ಸ್ವಾರ್ಥಪರತೆಯೆ ಮೃತ್ಯು. ಇದು ಇಹದಲ್ಲಿಯೂ ಮತ್ತು ಪರದಲ್ಲಿಯೂ ಸತ್ಯ. ಪರೋಪಕಾರಮಾಡುವುದೇ ಜೀವನ ಚಿಹ್ನೆ. ಪರೋಪಕಾರ ಮಾಡದೆ ಇರುವುದೇ ಸಾವು. ನೀವು ನೋಡುವ ಶೇಕಡಾ ೯೯ ಮಂದಿ ನರಪಶುಗಳು, ಸತ್ತಂತೆಯೇ. ಅವರು ಪ್ರೇತಸ್ವರೂಪರು. ನನ್ನ ಮಗು! ಯಾರು ಇನ್ನೊಬ್ಬರನ್ನು ಪ್ರೀತಿಸುವನೋ ಅವನು ಮಾತ್ರ ಬದುಕಿರುವನು. ಅವನೇ ಜೀವಂತನು. ನನ್ನ ಮಕ್ಕಳಿರಾ! ಬಡವರಿಗೆ, ಪದದಳಿತರಿಗೆ, ಮೂರ್ಖರಿಗೆ ಮನಮರುಗಿ. ನಿಮ್ಮ ಎದೆಯ ಚಲನೆ ನಿಲ್ಲುವವರೆಗೂ, ತಲೆತಿರುಗಿ ಎಲ್ಲಿ ಹುಚ್ಚರಾಗುತ್ತೀವೋ ಎನ್ನುವವರೆವಿಗೂ ಇವರಲ್ಲಿ ಅನುಕಂಪವನ್ನು ತೋರಿ. ತರುವಾಯ ನಿಮ್ಮ ಎದೆಯ ಭಾರವನ್ನೆಲ್ಲಾ ಜಗದೀಶನ ಅಡಿದಾವರೆಯಲ್ಲಿ ಹಗುರಮಾಡಿ. ಬಲ, ಸಹಾಯ ಎಂದಿಗೂ ಕುಗ್ಗದ ಶಕ್ತಿ ಆಗ ಬರುವುದು. "ಹೋರಾಟ, ಹೋರಾಟ" ಎಂಬುದೇ ಕಳೆದ ಹತ್ತು ವರ್ಷಗಳಿಂದಲೂ ನನ್ನ ಆದರ್ಶವಾಗಿತ್ತು.

ನಾನು ಈಗಲೂ ಹೇಳುವುದೇ ಹೋರಾಡಿ ಎಂದು. ಸುತ್ತಲೂ ಗಾಢಾಂಧಕಾರ ಕವಿದಿರುವಾಗ ಹೋರಾಡಿ ಎನ್ನುತ್ತಿದ್ದೆ. ಇನ್ನೇನು ಬೆಳಕು ಹರಿಯುತ್ತಿದೆ ಎನ್ನುವಾಗಲೂ ಹೋರಾಡಿ ಎನ್ನುವೆನು. ನನ್ನ ಮಕ್ಕಳಿರಾ! ಎಂದಿಗೂ ಭಯಪಡಬೇಡಿ. ಅನಂತ ತಾರಾಖಚಿತ ಆಕಾಶದೆಡೆಗೆ ಅದು ತಮ್ಮ ಮೇಲೆಬಿದ್ದು ನುಚ್ಚುನೂರು ಮಾಡುವುದೆಂದು ಅಂಜಿಕೆಯಿಂದ ನೋಡಬೇಡಿ. ಸ್ವಲ್ಪ ತಡೆಯಿರಿ. ಇನ್ನು ಕೊಂಚ ಕಾಲದಲ್ಲಿ ಅವುಗಳೆಲ್ಲವೂ ಒಂದು ನಿಮ್ಮ ಪಾದದಡಿಯಲ್ಲಿ ಬೀಳುವುವು. ಸ್ವಲ್ಪ ತಾಳಿ. ಐಶ್ವರ್ಯದಿಂದ ಪ್ರಯೋಜನವಿಲ್ಲ, ವಿದ್ಯೆಯಿಂದ ಪ್ರಯೋಜನವಿಲ್ಲ. ಪ್ರೀತಿ ಮಾತ್ರ ಫಲಕಾರಿ. ಕಡುಕಷ್ಟವೆಂಬ ಗೋಡೆಯನ್ನು ಭೇದಿಸಿ ದಾರಿಮಾಡಿಕೊಂಡು ಮುಂದೆ ಹೋಗುವುದು ಚಾರಿತ್ರಶುದ್ಧಿ, ನಿರ್ಮಲಶೀಲ.

ಈಗ ನಮ್ಮ ಮುಂದಿರುವ ಪ್ರಶ್ನೆ ಇದು. ಸ್ವಾತಂತ್ರ್ಯವಿಲ್ಲದೆ ಬೆಳವಣಿಗೆಗೆ ಸಾಧ್ಯವಿಲ್ಲ. ನಮ್ಮ ಪೂರ್ವಿಕರು ಧಾರ್ಮಿಕ ಆಲೋಚನೆಯ ಕಡೆಗೆ ಸ್ವಾತಂತ್ರ್ಯ ಕೊಟ್ಟರು. ಆದರಿಂದ ಅದ್ಭುತಧರ್ಮ ನಮ್ಮಲ್ಲಿದೆ. ಸಮಾಜವನ್ನು ನಿಯಮಗಳೆಂಬ ಸರಪಣಿಗಳಿಂದ ಬಿಗಿದರು. ಆದುದರಿಂದ ನಮ್ಮ ಸಮಾಜ ಭಯಂಕರವಾಗಿದೆ. ಅನಿಷ್ಟವಾಗಿದೆ. ಪಾಶ್ಚಾತ್ಯ ದೇಶಗಳಲ್ಲಿ ಸಮಾಜಕ್ಕೆ ಯಾವಾಗಲೂ ಸ್ವಾತಂತ್ರ್ಯವಿತ್ತು. ಆದರಿಂದ ಅಲ್ಲಿ ಅದು ಅಷ್ಟು ಚೆನ್ನಾಗಿದೆ ನೋಡಿ. ಆದರೆ ಅವರ ಧಾರ್ಮಿಕ ನೀತಿಯನ್ನು ನೋಡಿ.

ಬೆಳವಣಿಗೆಗೆ ಮೊದಲು ಅತ್ಯಾವಶ್ಯಕವಾದುದು ಸ್ವಾತಂತ್ರ್ಯ. ವ್ಯಕ್ತಿಗೆ ಮಾತನಾಡುವುದಕ್ಕೆ, ಆಲೋಚನೆ ಮಾಡುವುದಕ್ಕೆ, ಹೇಗೆ ಸ್ವಾತಂತ್ರ್ಯಬೇಕೋ ಹಾಗೆಯೇ ಆಹಾರ, ಉಡಿಗೆ, ತೊಡಿಗೆ, ವಿವಾಹ, ಇನ್ನು ಮುಂತಾದ ಇತರ ವಿಷಯಗಳಲ್ಲೂ ಸ್ವಾತಂತ್ರ್ಯವಿರಬೇಕು. ಇತರರಿಗೆ ಅವನ ಕೆಲಸದಿಂದ ಕೇಡಾಗದೆ ಇದ್ದರೆ ಸಾಕು.

ಬಾಹ್ಯ ಉಪಕರಣಗಳಲ್ಲಿ ಮುಂದುವರಿದ ನಾಗರಿಕತೆಗೆ ವಿರೋಧವಾಗಿ ನಾವು ಬಹಳ ಮಾತನಾಡುತ್ತೇವೆ. ಕೈಗೆ ಸಿಕ್ಕದ ದ್ರಾಕ್ಷಿ ಹಣ್ಣು ಹುಳಿಯೋ ಸರಿ, ಎನ್ನುವಂತೆ! ಈ ಹುಚ್ಚು ಮಾತನ್ನು ನಾವು ಒಂದು

ವೇಳೆ ಒಪ್ಪಿಕೊಂಡರೂ ಕೂಡ ಭರತ ಖಂಡದಲ್ಲೆಲ್ಲಾ ಒಂದು ಲಕ್ಷ ಆಧ್ಯಾತ್ಮಿಕ ಸಿದ್ಧಿಯುಳ್ಳ ಸ್ತ್ರೀಪುರುಷರು ಇರುತ್ತಾರೆ ಎನ್ನೋಣ. ಈ ಅಲ್ಪಮಂದಿಯ ಆಧ್ಯಾತ್ಮಿಕ ಉನ್ನತಿಗೋಸುಗವಾಗಿ ಮೂವತ್ತು ಕೋಟಿ ಜನರು ಅನಾಗರಿಕರಾಗಬೇಕೇನು? ಯಾವನೇ ಆಗಲಿ, ಅವನು ಉಪವಾಸ ದಿಂದ ಏಕೆ ಸಾಯಬೇಕು. ಮಹಮ್ಮದೀಯರು ಬಂದು ಹಿಂದೂಗಳನ್ನು ಸೋಲಿಸಿದುದು ಹೇಗೆ ಸಾಧ್ಯವಾಯಿತು ಗೊತ್ತಿದೆಯೆ? ಹಿಂದೂಗಳಿಗೆ ಬಾಹ್ಯವಸ್ತು ಪರಿಶ್ರಮ ಕಡಿಮೆಯಾದುದೇ ಕಾರಣ. ಹೊಲಿದ ಬಟ್ಟೆ ಗಳನ್ನು ಹಾಕಿಕೊಳ್ಳುವುದನ್ನು ಕೂಡ ಮಹಮ್ಮದೀಯರು ಹೇಳಿಕೊಟ್ಟರು. ಹಿಂದೂಗಳು ಊಟಮಾಡುವಾಗ ಧೂಳನ್ನು ಮಿಶ್ರಮಾಡದೆ ಊಟಮಾಡು ವುದನ್ನು ಮಹಮ್ಮದೀಯರಿಂದ ಕಲಿತಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು! ಬಾಹ್ಯಸಂಪತ್ತು ಮಾತ್ರವಲ್ಲದೆ ಭೋಗವೂ ಕೂಡ ಬಡವನಿಗೆ ಕೆಲಸವನ್ನು ಒದಗಿಸುವುದಕ್ಕೆ ಅತ್ಯಾವಶ್ಯಕ. ಬೇಕಾಗಿರುವುದು ಅನ್ನ! ಅನ್ನ! ಇಹ ಲೋಕದಲ್ಲಿ ಹೊಟ್ಟೆಗೆ ಹಿಟ್ಟನ್ನು, ಪರಲೋಕದಲ್ಲಿ ಸಾಯುಜ್ಯಪದವಿಯನ್ನು, ದಯಪಾಲಿಸದ ದೇವರಲ್ಲಿ ನನಗೆ ನಂಬಿಕೆಯಿಲ್ಲ. ಭಾರತಖಂಡ ಉದ್ಧಾರ ವಾಗಬೇಕು. ಬಡವರಿಗೆ ಹೊಟ್ಟೆತುಂಬ ಅನ್ನ ಕೊಡಬೇಕು. ವಿದ್ಯಾಭ್ಯಾಸ ಜನಸಮೂಹದಲ್ಲಿ ಹರಡಬೇಕು. ಪೌರೋಹಿತ್ಯದಿಂದ ಆಗುತ್ತಿರುವ ಅನ್ಯಾಯವನ್ನು ಕೊನೆಗಾಣಿಸಬೇಕು. ಪುರೋಹಿತರ ಕೋಟಲೆಬೇಡ. ಸಮಾಜದಲ್ಲಿ ಅತ್ಯಾಚಾರವಿರಕೂಡದು! ಪ್ರತಿಯೊಬ್ಬನಿಗೂ ಅವರ ಊಟಕ್ಕೆ ಹೆಚ್ಚು ಆಹಾರಬೇಕು. ನಮ್ಮ ಹುಚ್ಚು ಹುಡುಗರು, ಆಂಗ್ಲೇಯ ರಿಂದ ಹೆಚ್ಚು ಅಧಿಕಾರವನ್ನು ಪಡೆಯಲು ಸಭೆಯನ್ನು ಮಾಡುವರು. ಆಂಗ್ಲೇಯರು ಇದನ್ನು ನೋಡಿ ಸುಮ್ಮನೇ ನಗುವರು. ಇನ್ನೊಬ್ಬರಿಗೆ ಸ್ವಾತಂತ್ರ್ಯವನ್ನು ಕೊಡಲು ಯಾರು ಸಿದ್ಧರಾಗಿಲ್ಲವೋ, ಅವರು ಸ್ವಾತಂತ್ರ್ಯವನ್ನು ಸ್ವೀಕರಿಸಲೂ ಸಿದ್ಧರಾಗಿಲ್ಲ. ಒಂದು ವೇಳೆ ಆಂಗ್ಲೇ ಯರು ನಿಮಗೆ ಅಧಿಕಾರವನ್ನು ಕೊಟ್ಟರು ಎಂದು ಹೇಳೋಣ. ಆಗ ಅಧಿಕಾರಕ್ಕೆ ಬರುವ ನಮ್ಮವರೆ, ಪ್ರಜೆಗಳನ್ನು ಮೆಟ್ಟಿ ಅವರಿಗೆ ಸ್ವಾತಂತ್ರ್ಯ ವನ್ನು ಕೊಡುವುದಿಲ್ಲ. ಗುಲಾಮರು ಸ್ವಾತಂತ್ರ್ಯವನ್ನು ಬಯಸುವುದು ಇತರರನ್ನು ಗುಲಾಮಗಿರಿಗೆ ಎಳೆಯುವುದಕ್ಕೆ.

ಈಗಲಾದರೂ ನಮ್ಮ ಧರ್ಮವನ್ನು ಎತ್ತಿ ಹೇಳಿ. ಸಮಾಜಕ್ಕೆ ಸ್ವಾತಂತ್ರ್ಯವನ್ನು ಕೊಡುವುದರ ಮೂಲಕ ನಮ್ಮ ಇಷ್ಟಾರ್ಥ ಕ್ರಮೇಣ ಸಿದ್ಧಿಸಬೇಕು. ನಮ್ಮ ಸನಾತನ ಧರ್ಮವನ್ನು ಮುತ್ತಿಕೊಂಡಿರುವ ಪುರೋಹಿತರ ಅತ್ಯಾಚಾರ ಅನಾಚಾರಗಳೆಂಬ ಕಳೆಗಳನ್ನು ಕಿತ್ತೊಗೆದರೆ ಜಗತ್ತಿನಲ್ಲೆಲ್ಲ ಸರ್ವಶ್ರೇಷ್ಠವಾದ ಹಿಂದೂ ಧರ್ಮ ನಿಲ್ಲುವುದು. ನಾನು ಹೇಳುವುದು ತಿಳಿಯಿತೆ? ಹಿಂದೂ ಧರ್ಮದೊಂದಿಗೆ ಪಾಶ್ಚಾತ್ಯ ಸಮಾಜದ ರೀತಿಯನ್ನು ಕೂಡಿಸಬಲ್ಲಿರಾ? ಇದು ಸಾಧ್ಯ ಮತ್ತು ಆಗೇ ಆಗುತ್ತದೆ ಎಂದು ನಾನು ನಂಬುತ್ತೇನೆ. ಇದಕ್ಕೆ ಒಂದೇ ಕಾರ್ಯೋಪಾಯ ಆವಶ್ಯಕ. ಅದೇನೆಂದರೆ, ಮಧ್ಯಭಾರತದಲ್ಲಿ ಉಪನಿವೇಶ ಒಂದನ್ನು ಸ್ಥಾಪಿಸಿ, ಅಲ್ಲಿ ನಮ್ಮ ಅಭಿಪ್ರಾಯಗಳಿಗನುಸಾರವಾಗಿ ಸ್ವಾತಂತ್ರ್ಯದಿಂದ ನಡೆದುಕೊಳ್ಳುವುದು. ಸ್ವಲ್ಪ ಮೊಸರನ್ನು ಹಾಲಿಗೆ ಹಾಕಿದರೆ ಹಾಲು ಮೊಸರಾಗುವುದು. ಅದರಂತೆಯೇ ಅಭಿಪ್ರಾಯಗಳು ಕ್ರಮೇಣ ಬೇರೆ ಕಡೆಗೆ ಹರಡುವುವು. ಈ ನಡುವೆ ಒಂದು ಕೇಂದ್ರ ಸಂಘವನ್ನು ಸ್ಥಾಪಿಸಿ ನಂತರ ಇಂಡಿಯಾ ದೇಶದಲ್ಲಿ ನಾನಾ ಕಡೆಗೆ ಅದರ ಶಾಖೆಗಳು ಹರಡಬೇಕು. ಸದ್ಯಕ್ಕೆ ಧರ್ಮದ ತಳಹದಿಯ ಮೇಲೆ ಸಂಘ ನಿಲ್ಲಲಿ. ಈಗಲೇ ಯಾರೂ ಉಗ್ರ ಸಮಾಜ ಸುಧಾರಣೆಯನ್ನೂ ತರಬೇಡಿ. ಮೂಢ ಆಚಾರಗಳು ಮಾತ್ರ ಬರದಂತೆ ಮಾಡಿ. ಶ್ರೀಶಂಕರ, ಶ್ರೀರಾಮಾನುಜ, ಶ್ರೀಚೈತನ್ಯರೇ ಮುಂತಾದ ನಮ್ಮ ಪ್ರಾಚೀನ ಆಚಾರ್ಯರು, ವಿಧಿಸಿದಂತೆ ಮುಕ್ತಿ ಸರ್ವರಿಗೂ ಉಂಟು, ಸರ್ವಸಮತ್ವವುಂಟು, ಎಂಬ ಆಧಾರದ ಮೇಲೆ ಸಾಮಾಜಿಕ ಪುನರುಜ್ಜೀವನವನ್ನು ಕೈಕೊಳ್ಳಿ.

ಉತ್ಸಾಹಪೂರಿತರಾಗಿ. ಉತ್ಸಾಹದ ಕಿಡಿಗಳನ್ನು ಎಲ್ಲೆಲ್ಲಿಯೂ ಹರಡಿ. ದುಡಿಯಿರಿ, ದುಡಿಯಿರಿ. ಮುಂದಾಳಾಗಿ ನಿಂತರೂ ಸೇವಕನಂತಿರಬೇಕು. ನಿಸ್ವಾರ್ಥಪರನಾಗಿರು. ಒಬ್ಬ ಸ್ನೇಹಿತನು ರಹಸ್ಯವಾಗಿ ಇನ್ನೊಬ್ಬನ ಮೇಲೆ ಮಾಡುವ ದೂರಿಗೆ ಕಿವಿಗೊಡದಿರು. ಅನಂತ ತಾಳ್ಮೆಯನ್ನು ತಾಳು. ಕಾರ್ಯಸಿದ್ಧಿಸುವುದು. ಆದರೆ ಈ ವಿಷಯದಲ್ಲಿ ಮಾತ್ರ ಜೋಪಾನವಾಗಿರು. ಅಮೇರಿಕದವರು ಹೇಳುವಂತೆ ಇನ್ನೊಬ್ಬರ ಮೇಲೆ ನಿನ್ನ ಕೈ ಚಲಾಯಿಸಬೇಡ. ನಾನು ಯಾವಾಗಲೂ

ನಿನಗೆ ಕಾಗದ ಬರೆಯುತ್ತೇನೆಂದು ತಿಳಿದು ನೀನು ಉಳಿದವರಿಗಿಂತ ಹೆಚ್ಚು ಪ್ರೀತಿಪಾತ್ರನೆಂದು ತಿಳಿಯಬೇಡ. ಇಂತಹ ನಗೆಗೇಡಿ ನೀನು ಎಂದೂ ಆಗುವುದಿಲ್ಲವೆಂದು ನನಗೆ ಗೊತ್ತಿದೆ. ಆದರೂ ನಿನಗೆ ಎಚ್ಚರಿಕೆ ಕೊಡುವುದು ನನ್ನ ಕರ್ತವ್ಯವೆಂದು ತಿಳಿಯುತ್ತೇನೆ. ಎಲ್ಲಾ ಸಂಸ್ಥೆಯನ್ನು ಹಾಳು ಮಾಡುವುದೇ ಇದು. ದುಡಿಯಿರಿ, ದುಡಿಯಿರಿ, ಪರೋಪಕಾರಕ್ಕೆ ದುಡಿಯುವುದಕ್ಕೇ ನಮಗೆ ಜೀವನವಿರುವುದು.

ಕಾಪಟ್ಯ ವಂಚನೆ ಎಂದಿಗೂ ಇರಕೂಡದು. ನಾನು ಯಾವಾಗಲೂ ದೇವರನ್ನು ನೆಚ್ಚಿರುವೆನು. ಹಗಲಿನ ಬೆಳಕಿನಷ್ಟು ಪ್ರಕಾಶಮಾನವಾದ ಸತ್ಯವೇ ನನಗೆ ಯಾವಾಗಲೂ ಆಶ್ರಯ. ಹೆಸರಿಗಾಗಲೀ ಯಶಸ್ಸಿಗಾಗಲಿ ಅಲ್ಲ. ಒಳ್ಳೆಯದನ್ನು ಮಾಡುವುದಕ್ಕಾಗಿ ವಂಚನೆ ಮಾಡಿದನಿವನೆಂಬ ಹೃದಯ ಕಳವಳವನ್ನು ಇಟ್ಟುಕೊಂಡ ಸಾವು ನನಗೆ ಬೇಡ. ಕೆಟ್ಟನಡತೆ, ಕೆಟ್ಟಶೀಲ ಇವುಗಳ ಉಸಿರೇ ಬೇಡ. ದುರ್ಮಾರ್ಗವೇ ಬೇಡ.

ಠಕ್ಕಾಬಿಕ್ಕಿ, ರಹಸ್ಯವಾದ ನೀಚತನ, ಗೂಢತೆ, ಮೋಸ ಇವುಗಳು ಇರಕೂಡದು. ಗುರುವಿನಮೇಲೆ ವಿಶೇಷ ಪಕ್ಷಪಾತವಿರಕೂಡದು, ಹಾಗಿದ್ದಲ್ಲಿ ಗುರುವೇ ಬೇಡ. ಎನ್ನ ಕೆಚ್ಚೆದೆಯ ಯುವಕರಿರಾ! ಮುಂದೆ ನಡೆಯಿರಿ—ಹಣವಿರಲಿ ಇಲ್ಲದೆ ಇರಲಿ ಜನಬಲವಿರಲಿ ಇಲ್ಲದೇ ಇರಲಿ. ಪ್ರೀತಿಯಿದೆಯೇನು ನಿಮ್ಮಲ್ಲಿ? ದೇವರಲ್ಲಿ ನಂಬಿಕೆ ಇದೆಯೇನು?- ನುಗ್ಗಿ ನಡೆ ಮುಂದೆ. ನಿಮ್ಮನ್ನು ತಡೆಯುವರಾರು?

ಎಚ್ಚರಿಕೆ! ಸುಳ್ಳು ಯಾವ ವೇಷದಲ್ಲೇ ಇರಲಿ ಜೋಕೆ! ಸತ್ಯವನ್ನೇ ನಂಬಿ. ನಿಧಾನವಾದರೇನು, ನಿಜವಾಗಿಯೂ ನಾವು ಜಯಶೀಲರಾಗುವೆವು. ನಾನು ಇಲ್ಲವೆಂದು ತಿಳಿದು ಕಾರ್ಯವನ್ನು ಮುಂದುವರಿಸಿ. ಈ ಕೆಲಸವೆಲ್ಲ ನಿಮ್ಮ ತಲೆಯಮೇಲೆ ಬಿದ್ದಿರುವುದೆಂದು ತಿಳಿದು ಕೆಲಸಕ್ಕೆ ಕೈಹಾಕಿ. ಕಳೆದ ಐವತ್ತು ಶತಮಾನಗಳು ನಿಮ್ಮನ್ನು ನೋಡುತ್ತಿವೆ. ಭಾರತದ ಭವಿಷ್ಯ ನಿಮ್ಮ ಮೇಲಿದೆ. ಕೆಲಸಮಾಡಿ. ನಾನು ಎಂದು ಭರತಖಂಡಕ್ಕೆ ಹಿಂತಿರುಗುತ್ತೇನೆಯೋ ತಿಳಿಯದು. ಈ ದೇಶದಲ್ಲಿ ಕಾರ್ಯಕ್ಕೆ ವಿಶಾಲವಾದ ಕ್ಷೇತ್ರವಿದೆ. ಹೆಚ್ಚು ಎಂದರೆ ಭಾರತ

ಖಂಡದಲ್ಲಿ ಜನರು ಹೊಗಳುವುದು. ಯಾರೂ ಒಂದು ಕಾಸನ್ನೂ ಯಾವ ಕೆಲಸಕ್ಕೂ ಕೊಡರು. ಅವರೇ ತಿರಿದು ತಿನ್ನುವರು. ದಾನಕ್ಕೆ ಅವರಿಗೆ ಎಲ್ಲಿಂದ ಬರಬೇಕು. ಅದೂ ಅಲ್ಲದೆ ಕಳೆದ ಎರಡು ಸಾವಿರ ವರುಷಗಳಿಂದ ಅಥವಾ ಅದಕ್ಕಿಂತ ಹೆಚ್ಚಾಗಿ, ಪರೋಪಕಾರ ಬುದ್ಧಿಯೇ ನಷ್ಟವಾಗಿರುವುದು. ಸಾರ್ವಜನಿಕ, ಜನಾಂಗ, ಮುಂತಾದ ಪದಗಳನ್ನು ಈಗತಾನೆ ಕಲಿಯುತ್ತಿರುವರು. ಆದುದರಿಂದ ನಾನು ಅವರನ್ನು ನಿಂದಿಸಿ ಫಲವಿಲ್ಲ. ನಂತರ ಹೆಚ್ಚು ವಿಷಯಗಳನ್ನು ಬರೆಯುವೆನು.

ಆಶೀರ್ವಾದಗಳೊಡನೆ,

ವಿವೇಕಾನಂದ.

೪೬

೧೦ ನೇ ನವಂಬರ್

ಪ್ರಿಯ, ಅ—

ನಮ್ಮ ಧರ್ಮಸಂಸ್ಥೆಯ ವ್ಯವಹಾರಿಕ ಭಾಗವನ್ನು ಬಲವಾಗಿ ವ್ಯವಸ್ಥೆಗೊಳಿಸಬೇಕಾಗಿದೆ. ಆದರೆ ಧಾರ್ಮಿಕ ವಿಷಯಗಳಲ್ಲಿ ಮಾತ್ರ ಒಂದು ಹೊಸಜಾತಿ ಹುಟ್ಟದಂತೆ ನೋಡಿಕೊಳ್ಳಬೇಕು.

ಯಾವುದನ್ನು ಮಾಡುವುದಕ್ಕಾಗಿ ಮತ್ತು ಯಾವುದನ್ನು ಬೋಧಿಸುವುದಕ್ಕಾಗಿ ಶ್ರೀರಾಮಕೃಷ್ಣರು ಬಂದರು, ಆ ಭಾವ ವಿಚಾರವನ್ನು ಕುರಿತು, ಅವರ ಜೀವನ ಚರಿತ್ರೆಯನ್ನು ಯಾರಾದರೂ ಬರೆಯುವುದಾದರೆ ಬರೆಯಲಿ. ಇಲ್ಲದೇ ಇದ್ದರೆ ಅವರ ಜೀವನ ಮತ್ತು ಉಪದೇಶಗಳಿಗೆ ಅಪಾರ್ಥವನ್ನು ಕಲ್ಪಿಸದೇ ಇರಲಿ. ಈಗ ಪರಮಹಂಸರ, ಪ್ರೇಮ, ಜ್ಞಾನ, ಉಪದೇಶ, ಹೃದಯ ವೈಶಾಲ್ಯತೆ ಇವುಗಳನ್ನು ಅನುಷ್ಠಾನದಲ್ಲಿ ತೋರಿಸಲಿ. ಶ್ರೀರಾಮಕೃಷ್ಣರ ಜೀವನ ಚರಿತ್ರೆ ಒಂದು ಜಾಜ್ವಲ್ಯಮಾನವಾದ ದೀಪದಂತಿದೆ. ಇದರ ಬೆಳಕಿನಲ್ಲಿ ಹಿಂದೂ ಧರ್ಮದ ಉದ್ದೇಶವನ್ನು ತಿಳಿದುಕೊಳ್ಳಬಹುದು. ಶಾಸ್ತ್ರದಲ್ಲಿ ಉಕ್ತವಾಗಿರುವ ಸಕಲ ವಿದ್ಯೆಗೂ ಅವರು ಪ್ರತ್ಯಕ್ಷ ನಿದರ್ಶನ. ನಮ್ಮ ಋಷಿಗಳು ಮತ್ತು ಅವತಾರ ಪುರುಷರು ಯಾವುದನ್ನು ಜಗತ್ತಿಗೆ ಬೋಧಿಸಬೇಕೆಂದಿದ್ದರೋ

ಅದನ್ನು ತಮ್ಮ ಜೀವನದಲ್ಲಿ ಇವರು ತೋರಿರುವರು. ಶಾಸ್ತ್ರಗಳು ಕೇವಲ ಸಿದ್ಧಾಂತಗಳು. ಅವರಾದರೋ ಸಿದ್ಧರು! ಈ ಮಹಾನುಭಾವರು ತಮ್ಮ ಜೀವನದ ಐವತ್ತು ನಾಲ್ಕು ವರುಷದಲ್ಲಿ, ಭಾರತೀಯರ ಐದು ಸಾವಿರ ವರುಷಗಳ ಆಧ್ಯಾತ್ಮಿಕ ಜೀವನವನ್ನು ಜಗತ್ತಿಗೆ ಪ್ರಕಟಿಸಿದರು. ಬರುವ ಜನಾಂಗಕ್ಕೆ ಒಂದು ಮೇಲ್ಪಂಕ್ತಿಯಂತೆ ಆದರ್ಶ ಪುರುಷರ ಸ್ಥಾನಕ್ಕೆ ಏರಿದರು. ಅವರು ಸ್ಥಾಪಿಸಿದ ಅವಸ್ಥಾಭೇದ ಸಿದ್ಧಾಂತದ ಮೂಲಕವೇ ವೇದಗಳನ್ನು ಸ್ಪಷ್ಟೀಕರಿಸುವುದಕ್ಕೂ, ವೇದಗಳಿಗೂ ಶಾಸ್ತ್ರಗಳಿಗೂ ಸಮಾಧಾನವನ್ನು ಕಲ್ಪಿಸುವುದಕ್ಕೂ ಸಾಧ್ಯ. ಇತರರಲ್ಲಿ ಸಹನೆಯನ್ನು ತೋರುವುದಲ್ಲದೆ ಅವರನ್ನು ಸ್ವೀಕರಿಸಬೇಕು. ಸತ್ಯವೇ ನಾನಾ ಧರ್ಮಗಳ ಸಾಮಾನ್ಯ ತಳಹದಿ. ಈ ಪ್ರಕಾರವಾಗಿ ಅತ್ಯಂತ ಚಿತ್ತಾಕರ್ಷಕವೂ ಸುಂದರವೂ ಆದ ಅವರ ಜೀವನ ಚರಿತ್ರೆಯನ್ನು ಬರೆಯಬಹುದು. ಒಳ್ಳೆಯದು. ಎಲ್ಲಕ್ಕೂ ಕಾಲಬೇಕು. ನಿಮ್ಮ ಕಾರ್ಯವನ್ನು ಸ್ವತಂತ್ರವಾಗಿ ಮುಂದುವರಿಸಿ. "ಅಡಿಗೆಯಾದಮೇಲೆ ಊಟ ಮಾಡುವುದಕ್ಕೆ ಹಲವರು ಬರುವರು" ಜೋಕೆ! ಕಾರ್ಯ ಮುಂದೆ ಸಾಗಲಿ.

ಆಶೀರ್ವಾದಗಳೊಡನೆ ಸತತವೂ ನಿನ್ನ
ವಿವೇಕಾನಂದ.

೩೭

ಅಮೆರಿಕ,
೩೦ ನೇ ನವಂಬರ್, ೧೮೯೪

ನನ್ನ ಪ್ರಿಯ....

ನಿನ್ನ ಅತಿ ಚಮತ್ಕಾರ ಪತ್ರ ಈಗತಾನೆ ಕೈಸೇರಿತು. ನಿನಗೆ ಶ್ರೀರಾಮಕೃಷ್ಣರ ವಿಷಯ ತಿಳಿದುದು ನನಗೆ ಎಷ್ಟೋ ಸಂತೋಷ! ನಿನ್ನ ತೀವ್ರವೈರಾಗ್ಯವನ್ನು ನೋಡಿ ಎಷ್ಟೋ ಆನಂದ. ದೇವರನ್ನು ಸೇರುವುದಕ್ಕೆ ಅತಿ ಮುಖ್ಯವಾದ ಆವಶ್ಯಕತೆ ಇದು. ಯಾವಾಗಲೂ ನನಗೆ ಮದ್ರಾಸಿನ ಮೇಲೆ ಹೆಚ್ಚು ಭರವಸೆ ಇತ್ತು. ಈಗಲೂ ಭರತಖಂಡವನ್ನೆಲ್ಲಾ ಮುಳುಗಿಸುವ ಆಧ್ಯಾತ್ಮಿಕ ತರಂಗ ಮದ್ರಾಸಿನಿಂದಲೇ ಬರುವುದೆಂದು

ನಾನು ದೃಢವಾಗಿ ನಂಬುತ್ತೇನೆ. ದೇವರು ನಿನ್ನ ಸಮುದ್ದೇಶವನ್ನು ನೆರವೇರಿಸಲಿ ಎಂದು ಮಾತ್ರ ಹೇಳಬಲ್ಲೆ. ಆದರೆ, ಮಗು, ಇಲ್ಲಿ ಹಲವು ಕಷ್ಟಗಳಿವೆ. ಮೊದಲನೆಯದಾಗಿ ಯಾರೂ ಅವಸರದಿಂದ ಏನನ್ನೂ ಮಾಡಕೂಡದು. ಎರಡನೆಯದಾಗಿ ನಿನ್ನ ತಾಯಿ ಮತ್ತು ಹೆಂಡತಿಯ ಅಭಿಪ್ರಾಯಗಳಿಗೆ ಮನ್ನಣೆ ಕೊಡಬೇಕು. ನಿಜ, ನಾವು ಶ್ರೀರಾಮಕೃಷ್ಣರ ಶಿಷ್ಯರು, ತಂದೆತಾಯಿಗಳ ಸಮ್ಮತಿಗೆ ಕೆಲವುವೇಳೆ ಗೌರವವನ್ನು ಕೊಡಲಿಲ್ಲವೆಂದು ನೀನು ಹೇಳಬಹುದು. ಇದು ನನಗೆ ಗೊತ್ತಿದೆ. ಮಹಾತ್ಯಾಗದಿಂದ ಮಾತ್ರ ಮಹಾಕಾರ್ಯಸಾಧನೆ ಸಾಧ್ಯ. ಭರತಖಂಡದ ಹಿತಕ್ಕೆ ಅತ್ಯುತ್ತಮ ಅತಿ ಪವಿತ್ರ ತ್ಯಾಗಬೇಕಾಗಿದೆ ಎಂದು ನನಗೆ ಗೊತ್ತಿದೆ. ಅವರಲ್ಲಿ ಒಬ್ಬ ನೀನಾಗುವ ಭಾಗ್ಯ ನಿನ್ನದು ಎಂದು ನಾನು ನಂಬುತ್ತೇನೆ.

ಜಗದ ಇತಿಹಾಸದಲ್ಲೆಲ್ಲಾ ಮಹಾ ಪುರುಷರು ಮಹಾ ತ್ಯಾಗ ಮಾಡುತ್ತಾರೆ, ಅದರ ಫಲವನ್ನು ಜನಸಂದಣಿ ಅನುಭವಿಸುತ್ತದೆ. ಇದನ್ನು ನಾವು ನೋಡುತ್ತೇವೆ. ನಿನ್ನ ಸ್ವಂತ ಮುಕ್ತಿಗೆ ಸರ್ವಸ್ವವನ್ನೂ ತ್ಯಾಗ ಮಾಡುವುದರಲ್ಲಿ ಏನೂ ಇಲ್ಲ. ಜಗದ ಹಿತಕ್ಕಾಗಿ ನಿನ್ನ ಸ್ವಂತ ಮುಕ್ತಿಯನ್ನು ಕೂಡ ಮರೆಯಬಲ್ಲೆಯಾ? ಇದನ್ನು ಆಲೋಚಿಸಿ ನೋಡು. ನೀನೇ ದೇವರು. ನಿನಗೆ ನನ್ನ ಬುದ್ಧಿವಾದವೇನೆಂದರೆ ನಿನ್ನ ತಂದೆಯ ಮನೆಯಲ್ಲಿ ಕೆಲವುಕಾಲ ಬ್ರಹ್ಮಚರ್ಯ ಜೀವನನಡೆಸು. ಇದೇ ಕುಟೀಚಕ ಸ್ಥಿತಿ. ನಿನ್ನ ಹೆಂಡತಿ ಜಗದ ಹಿತಕ್ಕಾಗಿ ನೀನು ಮಾಡುವ ತ್ಯಾಗವನ್ನು ಮೆಚ್ಚುವಂತೆ ಪ್ರಯತ್ನಿಸು. ನಿನ್ನಲ್ಲಿ ಪ್ರಚಂಡ ಶ್ರದ್ಧೆ, ಸರ್ವವನ್ನು ಜಯಿಸಬಲ್ಲ ಪ್ರೇಮ, ಸರ್ವಶಕ್ತವಾದ ಪವಿತ್ರತೆ, ಇವು ಇದ್ದರೆ ನೀನು ಬೇಗ ಜಯಶೀಲನಾಗುವುದರಲ್ಲಿ ಸಂದೇಹವಿಲ್ಲ. ಶ್ರೀರಾಮಕೃಷ್ಣರ ಸಂದೇಶವನ್ನು ಸಾರುವ ಕಾರ್ಯಕ್ಕೆ ನಿನ್ನ ದೇಹ ಮನಸ್ಸನ್ನು ಅರ್ಪಿಸು. ಕರ್ಮ ಮೊದಲನೆ ಹಂತ. ಸಂಸ್ಕೃತ ಕಲಿ, ಭಕ್ತಿಯನ್ನು ರೂಢಿಸು. ನೀನು ಮಾನವಕೋಟಿಗೆ ಪ್ರಖ್ಯಾತ ಬೋಧಕನಾಗಬೇಕಾಗಿದೆ. ನನ್ನ ಗುರುದೇವ "ಆತ್ಮಹತ್ಯಮಾಡಿಕೊಳ್ಳುವುದಕ್ಕೆ ಒಂದು ಚಾಕು ಸಾಕು. ಆದರೆ ಮತ್ತೊಬ್ಬರನ್ನು ಕೊಲ್ಲಬೇಕಾದರೆ ಕತ್ತಿ ಬಂದೂಕ ಎಲ್ಲಾ ಬೇಕಾಗಿವೆ," ಎಂದು ಹೇಳುತ್ತಿದ್ದರು. ಸರಿಯಾದ

ಕಾಲಪ್ರಾಪ್ತವಾದಮೇಲೆ ನೀನು ಪ್ರಪಂಚದಲ್ಲಿ ಅವರ ಪವಿತ್ರ ನಾಮವನ್ನು ಬೋಧಿಸುವೆ. ನಿನ್ನ ಪ್ರತಿಜ್ಞೆ ಪವಿತ್ರವಾದುದು, ಕಲ್ಯಾಣಮಯ ವಾದುದು. ದೇವರು ನಿನ್ನನ್ನು ಆಶೀರ್ವದಿಸಲಿ. ಆದರೆ ಅವಸರದಿಂದ ಯಾವ ಕಾರ್ಯವನ್ನೂ ಮಾಡಬೇಡ. ಮೊದಲು ಭಕ್ತಿ ಮತ್ತು ಕರ್ಮ ದಿಂದ ನಿನ್ನನ್ನು ಶುದ್ಧಮಾಡಿಕೊ. ಭರತಖಂಡ ಬಹಳ ಕಾಲದಿಂದ ಅನುಭವಿಸಿದೆ. ಸನಾತನ ಧರ್ಮ ಹಲವು ಕಾಲದಿಂದ ನೊಂದಿದೆ. ದಯಾ ಮಯ ಭಗವಂತ. ಮತ್ತೊಮ್ಮೆ ತನ್ನ ಮಕ್ಕಳ ಉದ್ಧಾರಕ್ಕೆ ಬಂದಿರು ವನು. ಪತಿತ ಭರತಖಂಡ ಮೇಲೇಳುವುದಕ್ಕೆ ಮತ್ತೊಮ್ಮೆ ಎಲ್ಲಾ ಸದವಕಾಶವನ್ನು ಕೊಟ್ಟಿರುವನು. ಭರತಖಂಡ ಶ್ರೀರಾಮಕೃಷ್ಣರ ಪದತಲದಲ್ಲಿ ಕುಳಿತುಕೊಂಡು ಮಾತ್ರ ಜಾಗ್ರತವಾಗಬಲ್ಲದು. ಅವರ ಜೀವನ ಮತ್ತು ಸಂದೇಶವನ್ನು ಎಲ್ಲಾ ಕಡೆಯಲ್ಲಿಯೂ ಹರಡಬೇಕು. ಸಮಾಜದ ಅಂಗಾಂಗದಲ್ಲಿ ಪ್ರವಹಿಸುವಂತೆ ಮಾಡಬೇಕು. ಇದನ್ನು ಮಾಡುವವರು ಯಾರು? ಶ್ರೀರಾಮಕೃಷ್ಣರ ಧ್ವಜವನ್ನು ಎತ್ತಿ ಜನರ ಮುಕ್ತಿಗಾಗಿ ಯಾರು ಮುಂದೆ ಸಾಗುವರು? ಅವನತಿಯ ಪ್ರಚಂಡ ಆಘಾತವನ್ನು ಮೆಟ್ಟಿ ನಿಲ್ಲುವುದಕ್ಕೆ ತಮ್ಮ ಕೀರ್ತಿ, ಗೌರವ, ಐಶ್ವರ್ಯ, ಭೋಗ, ಈ ಪ್ರಪಂಚದ ಅಥವಾ ಬೇರೆ ಪ್ರಪಂಚದ ಸುಖಕ್ಕೆ, ಭರವಸೆಗೆ, ಯಾರು ಸರ್ವಸ್ವವನ್ನು ಅರ್ಪಿಸಬಲ್ಲರು? ಕೆಲವು ತರುಣರು ಈ ಸಾಹಸಕ್ಕೆ ತಮ್ಮ ಸರ್ವಸ್ವ ವನ್ನು ತೆತ್ತಿರುವರು. ಅವರು ಎಲ್ಲೋ ಸ್ವಲ್ಪ ಮಂದಿ. ಅಂತಹ ಕೆಲವು ಸಾವಿರ ಮಂದಿಯಾದರೂ ಬೇಕು. ಅವರು ಬಂದೇ ಬರುವರು. ನಮ್ಮ ಶ್ರೀಗುರುದೇವ, ನೀನು ಅಂತಹವರಲ್ಲಿ ಒಬ್ಬನಾಗಬೇಕೆಂಬ ಭಾವವನ್ನು ನಿನಗೆ ಕೊಟ್ಟಿರುವುದಕ್ಕೆ ಬಹಳ ಸಂತೋಷ. ಭಗವಂತನ ಇಚ್ಛೆ ಯಾರಮೇಲೆ ಬಿದ್ದಿದೆಯೋ ಅವನೇ ಧನ್ಯ. ಅಜ್ಞಾನಾಂಧಕಾರದಲ್ಲಿ ನರಳುತ್ತಿರುವ ಕೋಟ್ಯಾಂತರ ಜನರನ್ನು ಜಗದೀಶನಡಿಗೆ ಕರೆತರುವ ನಿನ್ನ ಉದ್ದೇಶ ಘನತರವಾದುದು, ಪ್ರತಿಜ್ಞೆ ಶುಭವಾದುದು, ಭರವಸೆ ಭವ್ಯವಾದುದು.

ಆದರೆ ನನ್ನ ಮಗು ಎಷ್ಟೋ ಅಡಚಣೆಗಳಿವೆ. ಯಾವುದನ್ನೂ ಅವಸರದಿಂದ ಮಾಡಬಾರದು. ಪವಿತ್ರತೆ, ಸಹನೆ, ಸತತ ಪ್ರಯತ್ನ

ಜಯನಿಧಿ ಗಳಿಸುವುದಕ್ಕೆ ಅತ್ಯಾವಶ್ಯಕವಾಗಬೇಕಾಗುವ ಮೂರು ಗುಣ. ಇವೆಲ್ಲಕ್ಕಿಂತ ಹೆಚ್ಚಾಗಿ ಪ್ರೀತಿ ಇರಬೇಕು. ಕಾಲವೆಲ್ಲ ನಿನ್ನದೆ. ಅಯುಕ್ತ ಅವಸರವೇನಿಲ್ಲ. ನೀನು ಪರಿಶುದ್ಧನಾಗಿದ್ದರೆ, ಪ್ರಾಮಾಣಿಕನಾಗಿದ್ದರೆ ಎಲ್ಲಾ ಕೂಡಿ ಬರುವುದು. ನಮಗೆ ನಿನ್ನಂತಹ ನೂರಾರು ಮಂದಿ ಸಮಾಜದ ಮೇಲೆ ಬಿದ್ದು ಹೋದೆಡೆಯಲ್ಲೆಲ್ಲಾ ಹೊಸ ಚೇತನವನ್ನು, ಬೆಳಕನ್ನು ನೀಡಬಲ್ಲವರು ಬೇಕಾಗಿರುವರು. ದೇವರು ನಿನ್ನನ್ನು ರಕ್ಷಿಸಲಿ.

ಅನಂತ ಆಶೀರ್ವಾದಗಳ ಪೂರ್ವಕ,
ವಿವೇಕಾನಂದ.

೩೮

೧೮೯೪

ಪ್ರಿಯ,

ನಿಮ್ಮ ಪತ್ರದಿಂದ ಅಲ್ಲಿನ ಸಮಾಚಾರವೆಲ್ಲ ತಿಳಿಯಿತು.—ಅವನ ವಿಯೋಗ ಶೋಕವಾರ್ತೆ ಕೇಳಿ ನನಗೆ ವ್ಯಥೆಯಾಯಿತು. ದೈವೇಚ್ಛೆ. ಇದು ಕಾರ್ಯಕ್ಷೇತ್ರ, ಭೋಗಭೂಮಿಯಲ್ಲ. ಅವರ ಕೆಲಸ ಮುಗಿದ ಮೇಲೆ ಎಲ್ಲರೂ ತಮ್ಮ ಮನೆಗೆ ಹೋಗುವರು. ಕೆಲವರು ಮುಂದೆ, ಕೆಲವರು ಹಿಂದೆ. ಪ—ತೀರಿಹೋದನು. ಅದೂ ದೈವೇಚ್ಛೆ. ಪರಮಹಂಸರ ಉತ್ಸವ ಬಹಳ ವಿಜೃಂಭಣೆಯಿಂದ ನಡೆಯಿತೆಂಬುದು ಬಹಳ ಸಂತೋಷದ ಸುದ್ದಿ. ಅವರ ಹೆಸರು ಎಷ್ಟು ಹರಡಿದರೆ ಜಗತ್ತಿಗೆ ಅಷ್ಟು ಹಿತಕಾರಿ. ಆದರೆ ನಾವು ಒಂದು ವಿಷಯವನ್ನು ನೆನಪಿನಲ್ಲಿಡಬೇಕು: ಮಹಾ ಪುರುಷರು ಜಗತ್ತಿಗೆ ಬರುವುದು ಯಾವುದೋ ಒಂದು ದಿವ್ಯ ಸಂದೇಶವನ್ನು ಜಗತ್ತಿಗೆ ಸಾರುವುದಕ್ಕೆ, ಕೀರ್ತಿಯನ್ನು ಗಳಿಸುವುದಕ್ಕಲ್ಲ. ಆದರೆ ಅವರ ಅನುಯಾಯಿಗಳು, ಅವರ ಸಂದೇಶವನ್ನು ಆಚೆಗೆ ಎಸೆದು, ಅವರ ಹೆಸರಿಗೆ ಹೊಡೆದಾಡುತ್ತಾರೆ. ಜಗತ್ತಿನ ಎಲ್ಲಾ ಕಡೆಯಲ್ಲಿಯೂ ಹೀಗೆಯೇ ಆಗಿದೆ. ಜನರು ಅವರ ಹೆಸರನ್ನು ಸ್ವೀಕರಿಸುವರೋ, ಅಲ್ಲಗಳೆಯುವರೋ ನಾವು ಅದನ್ನು ಲೆಕ್ಕಿಸುವುದಿಲ್ಲ. ಆದರೆ, ಅವರ ಉಪದೇಶ ಜೀವನ ಮತ್ತು ಸಂದೇಶವನ್ನು ಜಗತ್ತಿಗೆ ಹರಡುವುದಕ್ಕೆ ನನ್ನ

ಪ್ರಾಣವನ್ನಾದರೂ ಅರ್ಪಿಸುತ್ತೇನೆ. ನನಗೆ ತುಂಬಾ ಅಂಜಿಕೆ ಯಾವುದೆಂದರೆ ದೇವರ ಕೋಣೆ. ದೇವರ ಮನೆಯೇನೋ ಕೆಟ್ಟದಲ್ಲ. ಆದರೆ ಕೆಲವರು ಇದನ್ನೇ ಸರ್ವಸ್ವವೆಂದು ಎಣಿಸಿ ಹಳೆಯ ಮಾದರಿಯ ಹುಚ್ಚು ಕೆಲಸವನ್ನು ಪುನಃ ರೂಢಿಗೆ ತರುವುದಕ್ಕೆ ಯತ್ನಿಸುವರು. ಇದೇ ನನ್ನ ಅಂಜಿಕೆಗೆ ಕಾರಣ. ಅವರು ಪುರಾತನವೂ ಅಸಾರವೂ ಆದ ಅನುಷ್ಠಾನ ಪದ್ಧತಿಯನ್ನು ಏಕೆ ತರುವರು ಎಂಬುದು ನನಗೆ ಗೊತ್ತು. ಕೆಲಸ ಮಾಡಬೇಕೆಂದು ಅವರು ತವಕ ಪಡುವರು. ಆದರೆ ಅದಕ್ಕೆ ಯಾವ ದಾರಿಯೂ ಇಲ್ಲದೇ ಇರುವಾಗ ತಮ್ಮ ಶಕ್ತಿಯನ್ನೆಲ್ಲ ಗಂಟೆ ಬಾರಿಸುವುದರಲ್ಲಿ ಕಳೆಯುವರು.

ನಾನು ನಿಮಗೆ ಒಂದು ನೂತನ ಭಾವನೆಯನ್ನು ಕೊಡುತ್ತೇನೆ. ಅದನ್ನೇನಾದರೂ ನೀವು ಅನುಷ್ಠಾನಕ್ಕೆ ತಂದರೆ ಆಗ ನೀವು ಮನುಷ್ಯರೆಂದೂ, ನಿಮ್ಮಿಂದ ಕೆಲಸವಾಗುವುದೆಂದೂ ಎಣಿಸುತ್ತೇನೆ. ನೀವೆಲ್ಲರೂ ಸೇರಿ ಒಂದು ಸಂಚಿಕೆಯನ್ನು ಮಾಡಿ. ಇದಕ್ಕೆ ಕೆಲವು ಚಿತ್ರ, ಭೂಪಟ ಕೃತಕಗೋಳಗಳು, ರಸಾಯನಿಕ ದ್ರವ್ಯ, ಮುಂತಾದ ಉಪಕರಣ ಬೇಕಾಗಿವೆ. ನಂತರ ಅದಕ್ಕೆ ಒಂದು ದೊಡ್ಡ ಜೋಪಡಿ ಬೇಕಾಗಿದೆ. ಅಲ್ಲಿ ಕೆಲವು ಬಡಬಗ್ಗರನ್ನು ಸೇರಿಸಬೇಕು. ಅವರಿಗೆ ಖಗೋಳಶಾಸ್ತ್ರ, ಭೂಗೋಳ ಮುಂತಾದುವನ್ನು ಚಿತ್ರಗಳ ಮೂಲಕ ತೋರಿ ನಂತರ ಶ್ರೀರಾಮಕೃಷ್ಣರ ಉಪದೇಶವನ್ನು ಬೋಧಿಸಬೇಕು. ಬೇರೆಬೇರೆ ದೇಶಗಳಲ್ಲಿ ಏನು ಆಗಿದೆ, ಏನು ಆಗುತ್ತಿದೆ, ಈ ಪ್ರಪಂಚದ ಸ್ವಭಾವವೇನು ಎಂಬುದನ್ನು ಅವರಿಗೆ ತಿಳಿಸಿ ಬುದ್ಧಿಯನ್ನು ವಿಕಾಸಮಾಡಿ. ಅಲ್ಲಿ ಬೇಕಾದಷ್ಟು ಬಡವರು ಅಜ್ಞಾನಿಗಳೂ ಇರುವರು. ಸಂಜೆ ಮಧ್ಯಾಹ್ನ ಯಾವಾಗ ಅನುಕೂಲವಾದರೆ ಆಗ, ಬಾಗಿಲಿಂದ ಬಾಗಲಿಗೆ ಅವರ ಗುಡಿಸಲುಗಳಿಗೆ ಹೋಗಿ. ಅವರ ಅಜ್ಞಾನವನ್ನು ಪರಿಹರಿಸಲು ಪ್ರಯತ್ನಿಸಿ. ಪುಸ್ತಕ ಮೊದಲಾದವುಗಳಿಂದ ಪ್ರಯೋಜನವಿಲ್ಲ. ಅವರಿಗೆ ಬಾಯಿಮಾತಿನಲ್ಲಿ ಕಲಿಸಬೇಕು. ನಂತರ ಮೆಲ್ಲಮೆಲ್ಲನೆ ನಿಮ್ಮ ಕೇಂದ್ರವನ್ನು ಹೆಚ್ಚು ಮಾಡಿ. ಇದನ್ನು ನಿಮಗೆ ಮಾಡುವುದಕ್ಕೆ ಸಾಧ್ಯವೆ? ಇಲ್ಲದೆ ಸುಮ್ಮನೆ ಗಂಟೆ ಮಾತ್ರ ಬಾರಿಸುವಿರೊ?

ಬನ್ನಿ! ಕೆಲಸಕ್ಕೆ ನಿಮ್ಮ ಮನಸ್ಸನ್ನೆಲ್ಲಾ ಅರ್ಪಿಸಿ. ಗೊಡ್ಡು ಹರಟೆ ಮತ್ತು ಗಂಟೆ ಬಾರಿಸುವಕಾಲ ಆಗಿಹೋಯಿತು. ನನ್ನ ಮಗು! ಈಗ ನೀನು ಕೆಲಸಮಾಡಬೇಕು. ವಂಗೀಯನ ಧರ್ಮ ಕಾರ್ಯರಂಗದಲ್ಲಿ ಎಷ್ಟು ದೂರಹೋಗುತ್ತದೆ ಎಂಬುದನ್ನು ಈಗ ನೋಡುತ್ತೇನೆ.—ಅವನಿಗೆ ಕೆಲವು ಬಿಷ್ಟನೆ ಹೊದಿಕೆ ಬೇಕಂತೆ. ಇಲ್ಲಿಯ ಜನರು ಉಣ್ಣೆ ಬಟ್ಟೆಯನ್ನು ಯೂರೋಪ್ ಮತ್ತು ಇಂಡಿಯಾ ದೇಶಗಳಿಂದ ತರಿಸುತ್ತಾರೆ. ಇಲ್ಲಿ ಕೊಡುವ ನಾಲ್ಕನೇ ಒಂದುಪಾಲು ದುಡ್ಡಿಗೆ ಕಲ್ಕತ್ತೆಯಲ್ಲಿ ಅದೇ ಬಟ್ಟೆ ಸಿಕ್ಕುತ್ತದೆ. ನಾನು ಎಂದು ಯೂರೋಪಿಗೆ ಹೋಗುತ್ತೇನೆಯೋ ತಿಳಿಯದು. ನನ್ನ ಭವಿಷ್ಯವೆಲ್ಲ ಅನಿಶ್ಚಿತ. ನಾನು ಹೇಗೋ ಈ ದೇಶದಲ್ಲಿರುವೆನು ಅಷ್ಟೆ!

ಇದೊಂದು ವಿಚಿತ್ರ ದೇಶ. ಇದು ಬೇಸಗೆಯಕಾಲ. ಬೆಳಗಿನ ಹೊತ್ತು ಬಂಗಾಳದಲ್ಲಿ ಏಪ್ರಿಲ್ ತಿಂಗಳಲ್ಲಿ ಇರುವಷ್ಟು ಉರಿಬಿಸಿಲು. ಈಗಲಾದರೋ ಅಲಹಾಬಾದಿನಲ್ಲಿ ಫೆಬ್ರವರಿ ತಿಂಗಳಲ್ಲಿ ಇರುವಷ್ಟು ನಡುಗಿಸುವ ಚಳಿ. ನಾಲ್ಕು ಗಂಟೆಗಳಲ್ಲಿ ಇಷ್ಟು ಹೆಚ್ಚುಕಡಿಮೆ. ಇಲ್ಲಿಯ ಹೋಟೆಲುಗಳನ್ನು ವರ್ಣಿಸಲು ಅಸದಳ. ನ್ಯೂಯಾರ್ಕಿನಲ್ಲಿ ಒಂದು ಹೋಟೆಲು ಇರುವುದು. ಅಲ್ಲಿ ಇಳಿದುಕೊಳ್ಳುವುದಕ್ಕೆ ದಿನಕ್ಕೆ ಐದುಸಾವಿರ ರೂಪಾಯಿಗಳ ತನಕ ಇರುವುವು. ಊಟದ ಖರ್ಚು ಇದರಲ್ಲಿ ಸೇರಿಲ್ಲ. ಅದಕ್ಕೆ ಬೇರೆ. ಯೂರೋಪಿನಲ್ಲಿಯೂ ಭೋಗ ವಿಲಾಸದಲ್ಲಿ ಇಂತಹ ದೇಶವಿಲ್ಲ. ಪೃಥ್ವಿಯಲ್ಲೆಲ್ಲಾ ಇದು ನಿಜವಾಗಿಯೂ ಬಹಳ ಸಂಪತ್ತುಳ್ಳ ದೇಶ. ಇಲ್ಲಿ ಹಣ ನೀರಿನಂತೆ ವೆಚ್ಚವಾಗುವುದು. ನಾನು ಹೋಟೆಲುಗಳಲ್ಲಿ ಇಳಿದುಕೊಳ್ಳುವುದು ಬಹಳ ಅಪರೂಪ. ವಿಶೇಷವಾಗಿ ಯಾರಾದರೂ ಶ್ರೀಮಂತರ ಅತಿಥಿಯಾಗಿರುವೆನು. ಅವರಿಗೆ ನಾನು ಹೆಚ್ಚು ಪರಿಚಿತನಾಗಿರುವೆನು. ಈಗ ದೇಶವೆಲ್ಲ ನನ್ನದು ಬಲ್ಲಿರಾ? ಅದಕ್ಕೇ, ನಾನು ಎಲ್ಲಿ ಹೋದರೂ ಅಲ್ಲಿ ಜನರು ಆದರದಿಂದ ತಮ್ಮ ಮನೆಗೆ ಬರಮಾಡಿಕೊಳ್ಳುವರು.—ಅವರ ಮನೆ ನನ್ನ ಚಿಕಾಗೋ ನಗರದ ಕೇಂದ್ರ. ಅವರ ಪತ್ನಿಯನ್ನು ನಾನು ತಾಯಿ ಎಂದು ಕರೆಯುತ್ತೇನೆ. ಅವರ ಇಬ್ಬರು ಹೆಣ್ಣುಮಕ್ಕಳು ನನ್ನನ್ನು ಅಣ್ಣನೆಂದು

ಕರೆಯುತ್ತಾರೆ. ಅವರಷ್ಟು ಪವಿತ್ರದಯಾಳು ಕುಟುಂಬವನ್ನು ನಾನು ನೋಡಿಲ್ಲ. ಸಹೋದರನೆ, ಅವರು ಹಾಗೆ ಇಲ್ಲದೆ ಇದ್ದರೆ, ದೇವರು ಅವರಮೇಲೆ ತನ್ನ ಅನುಗ್ರಹವನ್ನು ಅಷ್ಟು ಬೀರುತ್ತಿದ್ದನೆ.? ಅವರು ಎಷ್ಟು ಅದ್ಭುತ ದಯಾಶೀಲರು! ಯಾವುದಾದರೊಂದು ಸ್ಥಳದಲ್ಲಿ ಬಡವನೊಬ್ಬನು ಕಷ್ಟದಲ್ಲಿರುವನು ಎಂದು ಕೇಳಿದರೆ, ಗಂಡಸರು, ಹೆಂಗಸರು ಅಲ್ಲಿಗೆ ಹೋಗಿ ಅವನಿಗೆ ಅನ್ನ ಬಟ್ಟೆ ಕೊಡುತ್ತಾರೆ. ಕೆಲಸವನ್ನು ಕೊಡಿಸುತ್ತಾರೆ. ಆದರೆ ಏನುಮಾಡುತ್ತೇವೆ ನಾವು!

ಅವರು ಬಿಸಿಲುಕಾಲದಲ್ಲಿ ತಮ್ಮ ಮನೆಯನ್ನು ಬಿಟ್ಟು ವಿದೇಶಕ್ಕಾಗಲಿ, ಸಮುದ್ರ ತೀರಕ್ಕೆ ಆಗಲಿ ಹೋಗುತ್ತಾರೆ. ನಾನೂ ಕೂಡ ಯಾವುದೋ ಒಂದು ಸ್ಥಳಕ್ಕೆ ಹೋಗುವೆನು. ಆದರೆ ಎಲ್ಲಿಗೆ ಎಂಬುದು ಇನ್ನೂ ಗೊತ್ತಿಲ್ಲ. ಇತರ ಸಕಲ ವಿಷಯಗಳಲ್ಲೂ ಅವರು ಆಂಗ್ಲೇಯರಂತೆ ಇರುವರು. ಇಲ್ಲಿ ಪುಸ್ತಕ ಮುಂತಾದುವು ಇರುವುವು. ಆದರೆ ಬೆಲೆ ಬಹಳ ಹೆಚ್ಚು. ಅದೇ ಬೆಲೆಗೆ ಅದರ ಎರಡರಷ್ಟು ಸಾಮಾನುಗಳನ್ನು ನೀನು ಕಲ್ಕತ್ತೆಯಲ್ಲೂ ಕೊಂಡುಕೊಳ್ಳಬಹುದು. ಈ ದೇಶದ ಜನರು ಪರದೇಶದ ಸಾಮಾನುಗಳನ್ನು ದೇಶದ ಒಳಕ್ಕೆ ಸುಮ್ಮನೆ ಬಿಡುವುದಿಲ್ಲ. ಹೆಚ್ಚು ಸುಂಕವನ್ನು ಅದರ ಮೇಲೆ ಹಾಕುವರು. ಇದರಿಂದ ಸಾಮಾನಿನ ಬೆಲೆ ಏರುವುದು. ಬಟ್ಟೆಬರೆಗಳನ್ನು ಇವರು ತಯಾರುಮಾಡುವ ಸ್ಥಿತಿಯಲ್ಲಿಲ್ಲ. ಯಂತ್ರಸಾಧನ ಮುಂತಾದುವುಗಳನ್ನು ತಯಾರು ಮಾಡುತ್ತಾರೆ. ಗೋಧಿ, ಅಕ್ಕಿ, ಹತ್ತಿ ಮುಂತಾದುವುಗಳನ್ನು ಬೆಳೆಯುವರು. ಅದರ ಬೆಲೆ ಸುಮಾರಾಗಿ ಅಗ್ಗ.

ಈಗ ಇಲ್ಲಿ "ಪಿಲ್ಚಾ" ಮೀನು ಬಹಳ ಅಗ್ಗವಾಗಿ ಸಿಕ್ಕುತ್ತದೆ. ಹೊಟ್ಟೆ ತುಂಬುವಷ್ಟು ತಿಂದರೂ ಎಲ್ಲಾ ಜೀರ್ಣವಾಗಿ ಹೋಗುವುದು. ಇಲ್ಲಿ ನಾನಾತರಹ ಹಣ್ಣುಹಂಪಲುಗಳು ಇರುವುವು. ಬಾಳೆ, ಕಿತ್ತಳೆ, ಸೀಬೆ, ಸೇಬು, ಬಾದಾಮಿ, ದ್ರಾಕ್ಷೆ ಇವು ಯತೇಚ್ಛವಾಗಿವೆ. ಇದಲ್ಲದೆ ಬೇರೆ ಹಣ್ಣುಗಳು ಕ್ಯಾಲಿಫೋರ್ನಿಯದಿಂದ ಬರುತ್ತವೆ. ಬೇಕಾದಷ್ಟು ಅನಾನಸ್ ಹಣ್ಣುಗಳಿವೆ. ಲಿಚಿ ಅಥವಾ ಮಾವಿನ ಹಣ್ಣಿನ ಜಾತಿಗೆ ಸೇರಿದವು ಮಾತ್ರ ಇಲ್ಲ.

ಇಲ್ಲಿ "ಸ್ಪಿನಾಕ್" ಎಂಬ ಒಂದು ಬಗೆಯ ತರಕಾರಿ ಇದೆ. ಅದನ್ನು ಅಡಿಗೆ ಮಾಡಿದರೆ ಅದು ನಮ್ಮ ಸೊಪ್ಪಿನ ಹಾಗೆ. "ಆಸ್ಪರೋಗಸ್" ಎಂಬ ಮತ್ತೊಂದು ತರಹ ಇದೆ. ನಮ್ಮ ಎಳೆಯ ಹಾಗೋ ಬೇರಿನಂತೆ ಇರುತ್ತದೆ. ಆದರೆ ಅದರಿಂದ ನಮ್ಮ ಚಟ್ನಿಯನ್ನು ಮಾಡುವುದಕ್ಕೆ ಆಗುವುದಿಲ್ಲ. ಇಲ್ಲಿ ಉದ್ದು ಅಥವಾ ಇನ್ನು ಯಾವುದಾದರೂ ಧಾನ್ಯವಾಗಲಿ ಇಲ್ಲ. ಇಲ್ಲಿಯ ಜನರಿಗೆ ಅದರ ಪರಿಚಯವೇ ಇಲ್ಲ. ಅನ್ನ, ರೊಟ್ಟಿ, ನಾನಾವಿಧದ ಮೀನು ಮತ್ತು ಹಲವು ಬಗೆಯ ಮಾಂಸಗಳು ಇವೆ. ಅವರ ಅಡಿಗೆ ಫ್ರೆಂಚರ ಹಾಗೆ. ಹಾಲಿನ ಮೊಸರು ಬಹಳ ಅಪೂರ್ವ. ಆದರೆ ಬೆಣ್ಣೆಯನ್ನು ತೆಗೆದುಕೊಂಡ ಹಾಲಿನ ನೀರು ಬೇಕಾದಷ್ಟು ಇದೆ. ಇಲ್ಲಿಯ ಜನರು ಕ್ರೀಮನ್ನು ಯಾವಾಗಲೂ ಉಪಯೋಗಿಸುತ್ತಾರೆ. ಅದನ್ನು ಟೀ, ಕಾಫಿ ಎಲ್ಲಕ್ಕೂ ಹಾಕುತ್ತಾರೆ. ಇದು ಹಾಲಿನ ಮೇಲಿರುವ ಕೆನೆ ಅಲ್ಲ ತಿಳಿಯಿತೆ? ಬೆಣ್ಣೆಯೂ ಇದೆ. ಬೇಕಾದಷ್ಟು ಹಿಮ ಹಾಕಿದ ನೀರಿದೆ. ಹಗಲಾಗಲೀ ರಾತ್ರಿಯಾಗಲೀ, ಬೇಸಿಗೆಯಾಗಲಿ, ಚಳಿಯಾಗಲಿ, ನೆಗಡಿಯಾಗಲಿ, ಜ್ವರವಿರಲಿ, ಕುಡಿಯುವುದಕ್ಕೆ ಯಥೇಚ್ಛವಾಗಿ ಮಂಜಿನಗಡ್ಡೆ ಹಾಕಿದ ನೀರು ಇರುತ್ತದೆ. ಮಂಜಿನ ನೀರು ನೆಗಡಿಯನ್ನು ಹೆಚ್ಚು ಮಾಡುತ್ತದೆ ಎಂದರೆ, ಇಲ್ಲಿನ ವೈಜ್ಞಾನಿಕ ಪರಿಶ್ರಮವುಳ್ಳ ಜನರು ನಗುತ್ತಾರೆ. ಎಷ್ಟು ಹೆಚ್ಚು ತೆಗೆದುಕೊಂಡರೆ ಅಷ್ಟು ಒಳ್ಳೆಯದು. ಹಲವು ಆಕಾರದ ಐಸ್ ಕ್ರೀಮ್ ಇಲ್ಲಿ ಒಬ್ಬವಾಗಿವೆ. ದೇವರ ದಯೆಯಿಂದ ನಯಾಗರ ಜಲಪಾತವನ್ನು ಎಳೆಂಟು ಸಾರಿ ನೋಡಿರುವೆನು. ದೃಶ್ಯವೇನೋ ಬಹಳ ರಮ್ಯವಾಗಿದೆ. ಆದರೆ ಅದನು ಹೊಗಳುವಷ್ಟು ಇಲ್ಲ. ಒಂದು ದಿನ ಚಳಿಗಾಲದಲ್ಲಿ ಅರೋರಾ ಬೋರಿಯಾಲಿಸ್ ಕಾಣಿಸಿಕೊಂಡಿತು. ಇದೆಲ್ಲ ಮಕ್ಕಳಾಟ. ಈ ಜನ್ಮದಲ್ಲಿ ಅವುಗಳನ್ನೆಲ್ಲ ನೋಡುವುದಕ್ಕೆ ಸಮಯವಿಲ್ಲ. ಮುಂದಿನ ಜನ್ಮದಲ್ಲಿ ಅದನ್ನು ನೋಡಿದರೆ ಸಾಕು.

ಇಷ್ಟು ಹೊತ್ತಿಗೆ ಜಿ—ಒಂದು ಸೇರಿಕೊಂಡಿರಬಹುದೆಂದು ಊಹಿಸುತ್ತೇನೆ. ಅವನಿಗೆ ತಿರುಗಾಡುವ ಬುದ್ಧಿ ಇನ್ನೂ ಬಿಟ್ಟಿಲ್ಲ ಎಂದು ಕಾಣುವುದು. ನಮಗೆ ಬೇಕಾಗಿರುವುದು ಸಂಘ ಸಂಚಾಲನ ಶಕ್ತಿ

ತಿಳಿಯಿತೆ? ಇದನ್ನು ತಿಳಿದುಕೊಳ್ಳುವಷ್ಟು ಬುದ್ಧಿ ನಿಮ್ಮಲ್ಲಿ ಯಾರಿಗಾದರೂ ಇದೆಯೋ? ಅದು ನಿಮಗೆ ಸಾಧ್ಯವಾದರೆ ನಿಮ್ಮ ಬುದ್ಧಿ ಕೆಲಸ ಮಾಡಲಿ.—ಅವನು ಇವನ್ನು ಸಾಧಿಸಬಲ್ಲ. ಸ್ವತಂತ್ರ ವಿಚಾರಬುದ್ಧಿ ಅವನಲ್ಲಿ ಅಷ್ಟು ಇಲ್ಲ. ಆದರೆ ಬಹಳ ಒಳ್ಳೆಯ ಕಷ್ಟದಾಳು, ಛಲವಂತ. ಇದು ಬಹಳ ಆವಶ್ಯಕ. ಹಿಡಿದ ಕೆಲಸವನ್ನು ಕೊನೆಗಾಣಿಸತಕ್ಕವನು. ಕೆಲವು ಶಿಷ್ಯರು ನಮಗೆ ಬೇಕಾಗಿವೆ. ಬೆಂಕಿಯ ಚೂರಿನಂತಹವರಾಗ ಬೇಕು, ಗೊತ್ತಾಯಿತೆ? ಬುದ್ಧಿವಂತರಾಗಿರಬೇಕು. ಧೈರ್ಯಶಾಲಿಗಳಾಗಿರಬೇಕು. ಮೃತ್ಯುವಿನ ದಾಡೆಯೊಳಗೆ ಪ್ರವೇಶ ಮಾಡುವುದಕ್ಕೂ ಸಿದ್ಧರಾಗಿರಬೇಕು. ಸಾಗರವನ್ನು ಕೂಡ ಈಜುವ ಸಾಹಸವಿರಬೇಕು. ನಾನು ಹೇಳುವುದು ಗೊತ್ತಾಯಿತೆ? ಅಂತಹ ನೂರಾರು ಮಂದಿ ಗಂಡಸರು ಹೆಂಗಸರು ಬೇಕಾಗಿವೆ. ಈ ಉದ್ದೇಶ ಸಾಧನೆಗಾಗಿ ಸಾಧ್ಯವಾದಷ್ಟು ಪ್ರಯತ್ನಿಸು. ಬೇಕಾದ ಹಾಗೆ ಶಿಷ್ಯರನ್ನು ಮಾಡಿ, ಅವರನ್ನು ನಿನ್ನ ಪವಿತ್ರಸಾಧನ ಯಂತ್ರದಲ್ಲಿ ಹಾಕು.

ಪರಮಹಂಸ ದೇವರು ನರೇಂದ್ರನನ್ನು ಹಾಗೆ ಕರೆಯುತ್ತಿದ್ದರು, ಹೀಗೆ ಕರೆಯುತ್ತಿದ್ದರು, ಅವನು ಅದ್ಭುತ ಪುರುಷ, ಅತಿ ಬುದ್ಧಿವಂತ ಎಂಬ ಹುಚ್ಚು ಹರಟೆಯನ್ನು ಇಂಡಿಯನ್ ಮಿರರ್‌ಗೆ ಏತಕ್ಕೆ ಕಳುಹಿಸಿದ್ದು? ಇವಲ್ಲದೆ ಅವರಿಗೆ ಇನ್ನು ಏನು ಮಾಡುವ ಕೆಲಸವಿರಲಿಲ್ಲವೇನು? ಬರೆ ಇನ್ನೊಬ್ಬರ ಮನಸ್ಸಿನಲ್ಲಿರುವುದನ್ನು ಓದುವುದು, ಭವಿಷ್ಯ ಹೇಳುವುದು ಇಂತಹ ಪುಂಗುತನ ಏತಕ್ಕೆ....ಅವರು ನಮ್ಮನ್ನು ನೋಡುವುದಕ್ಕೆ ಬರುತ್ತಿರುವುದು ಒಳ್ಳೆಯದು. ಜ....ಗೆ ಕಾಗದ ಬರೆಯುತ್ತಿರುವಿರೇನು? ನನ್ನ ಪ್ರೇಮವನ್ನು ಅವರಿಗೆ ತಿಳಿಸು.....ಅವರನ್ನು ಪ್ರೀತಿಯಿಂದ ನೋಡಿಕೊಳ್ಳಿ. ಕ್ರಮೇಣ ಎಲ್ಲವೂ ಸರಿಯಾಗುವುದು. ಹೆಚ್ಚು ಪತ್ರಗಳನ್ನು ಬರೆಯುವುದಕ್ಕೂ ನನಗೆ ಸಮಯವಿಲ್ಲ. ಉಪನ್ಯಾಸ ಮುಂತಾದವುಗಳಿಗೆ ಮುಂಚೆ ನಾನು ಅಣಿಯಾಗಿ ಬರುವುದಿಲ್ಲ. ನಾನು ಒಂದನ್ನು ಮಾತ್ರ ಬರೆದಿದ್ದು, ಅದನ್ನು ನೀವು ಮುದ್ರಿಸಿರುವಿರಿ. ಉಳಿದವುಗಳನ್ನು ಹಾಗೆಯೇ ಮಾತನಾಡುತ್ತೇನೆ. ಆ ಸಮಯಕ್ಕೆ ಯಾವ ಭಾವನೆಗಳು ಬರುವುವೋ ಅವೆಲ್ಲವನ್ನು ವ್ಯಕ್ತಪಡಿಸುವೆನು. ಶ್ರೀ

ಗುರುದೇವನು ನನ್ನ ಹಿಂದೆ ಇರುವನು. ಲೇಖನಿ ಕಾಗದಗಳ ಗೋಜೆ ಬೇಡ ನನಗೆ. ಒಂದು ದಿನ ಡೆಟ್ರಾಯಿಟ್‌ನಲ್ಲಿ ಬಿಡದೆ ಮೂರುಗಂಟೆಗಳ ಕಾಲ ಮಾತನಾಡಿದೆನು. ಕೆಲವು ಸಾರಿ ನನ್ನ ಕೆಲಸಕ್ಕೆ ನನಗೇ ಆಶ್ಚರ್ಯವಾಗುವುದು. ಈ ಸಣ್ಣ ತಲೆಯಲ್ಲಿ ಅಷ್ಟು ವಿಷಯಗಳಿವೆಯೆ ಎಂದು! ಇಲ್ಲಿ ಒಂದು ಪುಸ್ತಕವನ್ನು ಬರೆಯಬೇಕೆಂದು ಅವರು ಹೇಳುವರು. ಈಸಲವಾದರೂ ಏನಾದರೂ ಬರೆಯುವುದಕ್ಕೆ ಆಗುತ್ತದೆಯೇ ನೋಡುತ್ತೇನೆ. ಆದರೆ ಅದು ತುಂಬಾ ತೊಂದರೆಯ ಕೆಲಸ. ಕಾಗದದ ಮೇಲೆ ವಿಷಯಗಳನ್ನೆಲ್ಲ ಬರೆದಿಡುವ ತೊಂದರೆಯನ್ನು ಯಾರು ತೆಗೆದು ಕೊಳ್ಳುತ್ತಾರೆ.

ಜನಾಂಗವನ್ನು ಎಚ್ಚರಿಸಬೇಕು. ಜಗತ್ತನ್ನು ಎಚ್ಚರಿಸಬೇಕು. ಕಾಡು ಹರಟೆ, ಕೆಲಸಕ್ಕೆ ಬಾರದ ಪೂಜೆ ಮುಂತಾದುವುಗಳು ಸಾಕು. ಇವೆಲ್ಲ ಗೃಹಸ್ಥರು ಮಾಡುವ ಕೆಲಸ. ನಿಮ್ಮ ಕೆಲಸವಾದರೋ ಉದಾತ್ತ ಆಲೋಚನೆಗಳನ್ನು ಜನರಿಗೆ ಪ್ರಚಾರ ಮಾಡುವುದು. ಅದನ್ನು ನೀವು ಮಾಡಿದರೆ ಸರಿ.

ಮೊದಲು ಶೀಲ ಶುದ್ಧರಾಗಿ. ನಂತರ ನಾನು ನಿಮ್ಮ ಬಳಿಗೆ ಬರುವೆನು. ಗೊತ್ತಾಯಿತೆ? ನನಗೆ ಎರಡು ಸಾವಿರ ಅಲ್ಲ, ಹತ್ತು ಅಲ್ಲ, ಇಪ್ಪತ್ತು ಸಾವಿರ ಸನ್ಯಾಸಿಗಳು ಬೇಕು. ಸ್ತ್ರೀಯರು ಪುರುಷರು ಇರಬೇಕು. ನಮ್ಮ ಉಪಾಧ್ಯಾಯಿನಿಯರು ಏನು ಮಾಡುತ್ತಿರುವರು. ಹೇಗಾದರೂ ಆಗಲಿ ನಮಗೆ ಶಿಷ್ಯರು ಬೇಕು. ನೀವು ಹೋಗಿ ಅವರಿಗೆ ಹೇಳಿ. ನೀವು ಏಕಮನಸ್ಸಿನಿಂದ ಕೆಲಸ ಮಾಡಿ. ಗೃಹಸ್ಥ ಶಿಷ್ಯರು ನಮಗೆ ಬೇಕಾಗಿಲ್ಲ ತಿಳಿಯಿತೆ! ಸನ್ಯಾಸಿಗಳು ಬೇಕು. ನಿಮ್ಮಲ್ಲಿ ಪ್ರತಿಯೊಬ್ಬರೂ ನೂರು ನೂರು ಮಂದಿಗೆ ದೀಕ್ಷೆಯನ್ನು ಕೊಡಿ. ಶಿಕ್ಷಿತರಾದ ಯುವಕರು ಬೇಕು, ದಡ್ಡರಲ್ಲ. ಆಗ ನೀವು ಶೂರರೇ ಸರಿ. ನಾವು ಒಂದು ಕೌತುಕವನ್ನುಂಟುಮಾಡಬೇಕು. ಕೈಕಟ್ಟಿ ನಿಂತಿರುವುದನ್ನು ಬಿಟ್ಟು ಕೆಲಸಕ್ಕೆ ಸೊಂಟಕಟ್ಟಿ ಎದ್ದುನಿಲ್ಲಿ. ಕಲ್ಕತ್ತ ಮತ್ತು ಮದ್ರಾಸಿಗೆ ಬಿರುಗಾಳಿಯಂತೆ ಸಂಚರಿಸಿ ನೋಡೋಣ. ಅನೇಕ ಕಡೆ ಕೇಂದ್ರವನ್ನು ಸ್ಥಾಪಿಸಿ. ಯಾವಾಗಲೂ ಶಿಷ್ಯರನ್ನು ಮಾಡುತ್ತಾ ಹೋಗಿ.

ಯಾರು ಆಸೆ ಪಡುತ್ತಾರೊ ಅವರೆಲ್ಲರನ್ನೂ ಲಿಂಗಭೇದವಿಲ್ಲದೆ ಸನ್ಯಾಸಾಶ್ರಮಕ್ಕೆ ಸೇರಿಸಿ. ಶಂಕರ ನಾನು ಬರುತ್ತೇನೆ.

ಒಂದು ಪ್ರಚಂಡ ಆಧ್ಯಾತ್ಮಿಕ ತರಂಗ ಬರುತ್ತಿದೆ. ಯಾರು ಕೇಳರೋ ಅವರು ಉತ್ತಮರಾಗುತ್ತಾರೆ. ಮೂರ್ಖ, ಮಹಾ ಪಂಡಿತರ ಗುರುವಾಗುತ್ತಾನೆ. "ಉತ್ತಿಷ್ಠತ, ಜಾಗ್ರತ ಪ್ರಾಪ್ಯ ವರಾನ್ನಿಬೋಧತ" ಏಳಿ, ಜಾಗ್ರತರಾಗಿ, ಗುರಿ ಸೇರುವ ವರೆವಿಗೂ ನಿಲ್ಲಬೇಡಿ. ವಿಕಾಸವೇ ಜೀವನ. ಸಂಕೋಚವೆ ಮರಣ. ತನ್ನ ಸ್ವಂತ ಸುಖವನ್ನು ನೋಡಿಕೊಳ್ಳುತ್ತ ಯಾರು ಸ್ವಾರ್ಥಪರರಾಗಿ ಸೋಮಾರಿಗಳಾಗಿ ಕಾಲಕಳೆಯುತ್ತಿರುವರೋ ಅವರಿಗೆ ನರಕದಲ್ಲಿಯೂ ಸ್ಥಳವಿಲ್ಲ. ಯಾರು ಸರ್ವಭೂತಗಳಲ್ಲಿಯೂ ದಯಾಪರರಾಗಿ, ಅವರ ಮುಕ್ತಿಗಾಗಿ, ತಮ್ಮ ಮೋಕ್ಷವನ್ನು ಕೂಡ ಒತ್ತಟ್ಟಿಗಿಟ್ಟು ದುಡಿಯುವರೋ ಅವರು ಮಾತ್ರ ಶ್ರೀ ರಾಮಕೃಷ್ಣರ ಪುತ್ರರು. ಇತರರು ಕೃಪಣರು. ಇಂತಹ ಮಹಾ ಸಂಧಿ ಸಮಯದಲ್ಲಿ, ಯಾರು ಧೈರ್ಯದಿಂದ ನಿಂತು ಗುರುದೇವನ ಉಪದೇಶವನ್ನು ಮನೆಯಿಂದ ಮನೆಗೆ, ಹಳ್ಳಿಯಿಂದ ಹಳ್ಳಿಗೆ ಬೋಧಿಸುತ್ತಾ ಹೋಗುವರೋ ಅವರೇ ನನ್ನ ಸಹೋದರರು. ಅವರೇ ಶ್ರೀ ರಾಮಕೃಷ್ಣರ ಪುತ್ರರು. ಯಾರು ಶ್ರೀ ರಾಮಕೃಷ್ಣರ ಶಿಷ್ಯರೋ ಅವರು ತಮ್ಮ ಸ್ವಾರ್ಥವನ್ನು ಎಂದಿಗೂ ಬಯಸುವುದಿಲ್ಲ. ಇದೀಗ ಅವರ ಪರೀಕ್ಷೆ. "ಪ್ರಾಣಾತ್ಯಯೇಽಪಿ ಪರಕಲ್ಯಾಣ ಚಿಕೀರ್ಷವಃ." ಪ್ರಾಣ ಹೋದರೂ ಪರರ ಕಲ್ಯಾಣವನ್ನು ಅವರು ಬಯಸುವರು. ಯಾರು ತಮ್ಮ ಸ್ವಂತ ಸುಖಕ್ಕೆ ಮಾತ್ರ ಗಮನ ಕೊಡುವರೋ, ಯಾರು ಕಷ್ಟಪಡುವುದಕ್ಕೆ ಹಿಂಜರಿಯುವರೋ, ಯಾರು ತಮ್ಮ ಹಟವನ್ನು ಸಾಧಿಸಲು ಎಲ್ಲರ ತಲೆಯನ್ನು ಬಲಿಕೊಡಲು ಸಿದ್ಧರಾಗಿರುವರೋ, ಅವರು ನಮ್ಮವರಲ್ಲ. ಇನ್ನೂ ಸಮಯವಿರುವಾಗಲೇ ಅವರು ನಮ್ಮ ಗುಂಪಿನಿಂದ ಹೊರಗೆ ಹೋಗಲಿ. ಶ್ರೀ ಗುರುದೇವರ ಶೀಲ, ಅವರ ಧರ್ಮ, ಅವರ ಉಪದೇಶಗಳನ್ನು ಜನರಿಗೆ ಬೋಧಿಸಿ. ಇದೇ ಸಾಧನೆ, ಇದೇ ಪೂಜೆ. ಇದೇ ದಾರಿ. ಇದೇ ಗುರಿ.

ಏಳಿ ಜಾಗ್ರತರಾಗಿ. ಆಧ್ಯಾತ್ಮಿಕ ಮಹಾ ತರಂಗ ಒಂದು ಬರುತ್ತಿದೆ. ಮುಂದೆ ನಡೆಯಿರಿ. ಸ್ತ್ರೀಯರು ಪುರುಷರು ಚಂಡಾಲನ ಪರಿಯಂತ ಎಲ್ಲರೂ ಮುಂದೆ ಸಾಗಿ. ಅವರೆದುರಿಗೆ ಎಲ್ಲರೂ ಪವಿತ್ರರು. ಮುಂದೆ! ಮುಂದೆ! ನುಗ್ಗಿ ನಡೆಯಿರಿ. ಮುಂದೆ! ಗೌರವ, ಕೀರ್ತಿ, ಭಕ್ತಿ ಮುಕ್ತಿಗಳನ್ನು ಲಕ್ಷಿಸುವುದಕ್ಕೆ ಸಮಯವಿಲ್ಲ. ಬೇರೆ ಯಾವುದಾದರೂ ಒಂದು ಕಾಲದಲ್ಲಿ ಇವುಗಳನ್ನು ನೋಡಿಕೊಳ್ಳುವ. ಆ ಮಹಾಪುರುಷರ ಶೀಲ, ಅವರ ಪವಿತ್ರ ಜೀವನ, ಅವರ ದಿವ್ಯ ಉಪದೇಶಾಮೃತವನ್ನು ಅವಿಶ್ರಾಂತರಾಗಿ ಪ್ರಚಾರ ಮಾಡುವುದಕ್ಕೆ ಮಾತ್ರ ಈ ಒಂದು ಜನ್ಮವನ್ನು ಮೀಸಲಾಗಿಡುವ. ಇದೊಂದೇ ನಾವು ಮಾಡಬೇಕಾದ ಕೆಲಸ. ಬೇರೇನೂ ಇಲ್ಲ. ಅವರ ಹೆಸರು ಎಲ್ಲೆಲ್ಲಿ ಹರಡುವುದೋ ಅಲ್ಲಿರುವ ಕ್ರಿಮಿಕೀಟಗಳು ಕೂಡ ದೇವರ ಸ್ವರೂಪವನ್ನು ಪಡೆಯುವುವು. ಈಗಾಗಲೇ ಹೊಂದುತ್ತಿರುವರು. ನಿಮಗೆ ಕಣ್ಣುಗಳಿವೆ, ಕಾಣುವುದಿಲ್ಲವೇನು? ಇದು ಒಂದು ಮಕ್ಕಳಾಟವೇ? ಇದು ಒಂದು ಕಾಡ ಹರಟೆಯೆ? ಇದು ಒಂದು ತಮಾಷೆಯೆ? "ಉತ್ತಿಷ್ಠತ. ಜಾಗ್ರತ" ಏಳಿ. ಜಾಗ್ರತರಾಗಿ. ಹೇ ದೇವ! ಭಗವಂತ ನಿನ್ನ ಹಿಂದಿರುವನು. ನಾನು ಇನ್ನು ಹೆಚ್ಚು ಬರೆಯಲಾರೆ. ಮುಂದೆ ಅಡಿ ಇಡಿ! ಯಾರು ಈ ನನ್ನ ಪತ್ರವನ್ನು ಓದುತ್ತಾರೆಯೋ ಅವರಿಗೆ ನನ್ನ ಸ್ಫೂರ್ತಿ ಬರುವುದು ಎಂದು ಹೇಳುತ್ತೇನೆ. ಶ್ರದ್ಧೆ ಇಡಿ, ಮುಂದೆ ನಡೆಯಿರಿ! ಹೇ ಜಗದೀಶ! ಯಾರೋ ತನ್ನ ಕೈಗಳನ್ನು ಹಿಡಿದು ಈ ರೀತಿ ಬರೆಯುವಂತೆ ಪ್ರೇರೇಪಿಸುತ್ತಿರುವಂತೆ ತೋರುತ್ತದೆ. ಮುಂದೆ ನಡೆಯಿರಿ. ಹೇ ಜಗದೀಶ! ಎಲ್ಲರೂ ಆ ಮಹಾ ಪ್ರವಾಹದಲ್ಲಿ ಕೊಚ್ಚಿಕೊಂಡು ಹೋಗುವರು! ಎಚ್ಚರಿಕೆ! ಆ ಮಹಾಪುರುಷರು ಬರುತ್ತಿರುವರು. ಯಾರು ಅವರನ್ನು ಸೇವಿಸುವುದಕ್ಕೆ ಇರುವರು? ಅವರನ್ನಲ್ಲ ಅವರ ಮಕ್ಕಳನ್ನು. ದೀನರೂ ಪದದಳಿತರೂ ಪಾಪಿಗಳೂ ದುಃಖಿಗಳೂ ಕ್ರಿಮಿಕೀಟದ ವರೆಗೂ ಯಾರು ಸೇವಿಸುವುದಕ್ಕೆ ಸಿದ್ಧರಾಗಿರುವರೋ ಅವರ ಹೃದಯದಲ್ಲಿ ಗುರುದೇವನು ಆವಿರ್ಭವಿಸುವನು. ಅವರ ನಾಲಿಗೆಯ ಮೂಲಕ ಸಕಲ ಕಲಾದಿದೇವಿ ಶಾರದೆ ಮಾತನಾಡುವಳು. ಜಗನ್ಮಯಿ ಮಹಾಶಕ್ತಿ ಅವರ ಹೃದಯ

ದಲ್ಲಿ ನೆರೆಸುವಳು. ಯಾರು ನಾಸ್ತಿಕರೋ, ಯಾರು ಶ್ರದ್ಧಾಹೀನರೋ, ನರಾಧಮರೋ, ವಿಲಾಸೋನ್ಮತ್ತರೋ, ಅವರು ಶ್ರೀಗುರುದೇವನ ಪಂಗಡಕ್ಕೆ ಸೇರಿದವರೆಂದು ಏಕೆ ಕರೆದುಕೊಳ್ಳುವರು? ತೊಲಗಲಿ ಆಚೆ.

ನಿಮ್ಮ ವಿಶ್ವಾಸಪೂರ್ವಕ
ವಿವೇಕಾನಂದ

ಪಿ. ಸೂ. ಸಂಘ ಎಂದರೆ ಕಾರ್ಯವಿಭಾಗ. ಪ್ರತಿಯೊಬ್ಬರೂ ತಮ್ಮ ಪಾಲಿಗೆ ಬಿದ್ದ ಕೆಲಸವನ್ನು ಮಾಡುವರು. ಎಲ್ಲರ ಕೆಲಸವನ್ನು ಸೇರಿಸಿದರೆ, ಅದು ಒಂದು ಸಮುಷ್ಟಿಯ ಆದರ್ಶವಾಗಿ ತೋರುವುದು.

೫೯

ಜಾರ್ಜ್ ೯. ಡಬ್ಲ್ಯು, ಹೇಲ್,
೫೪೧ ಡಿಯರ್‌ಬಾರನ್ ಅವಿನ್ಯೂ,
ಚಿಕಾಗೊ ೧೮೯೪.

ಪ್ರಿಯ,—

ನಿನ್ನ ಪತ್ರ ತಲುಪಿ ಸಂತೋಷವಾಯಿತು.—ಅನನು ಮಾಡುವ ಕೆಲಸಗಳನ್ನು ಕೇಳಿ ತುಂಬಾ ವ್ಯಥೆಯಾಯಿತು. ಎಲ್ಲರನ್ನು ಮೂಲೆ ಗೊತ್ತಿ ತಾನು ಮುಂದಾಳಾಗಬೇಕೆಂದು ಬಯಸುವರ ನಡತೆಯೇ ಹೀಗೆ. ತಪ್ಪು ನನ್ನದಲ್ಲ.—ಅವನು ಹತ್ತು ವರುಷಗಳ ಹಿಂದೆ ಇಲ್ಲಿಗೆ ಬಂದನು. ಇಲ್ಲಿ ಬೇಕಾದಷ್ಟು ಕೀರ್ತಿ ಗೌರವವನ್ನು ಗಳಿಸಿದನು. ಈಗ ನನಗೆ ದೆಸೆ ತಿರುಗಿದೆ. ಗುರುದೇವನ ಇಚ್ಛೆ ಇದು. ಇದಕ್ಕೆ ನಾನೇನು ಮಾಡಲಿ. ಇದಕ್ಕೆ ಅವರು ಅಸಮಾಧಾನ ಪಟ್ಟರೆ ಅದು ಹುಡುಗತನ. ಇರಲಿ,

ಉಪೇಕ್ಷಿತವ್ಯಂ ತದ್ವಚನಂ ಭವತ್‌ಸದೃಶಾನಾಂ ಮಹಾತ್ಮನಾಮ್ ।
ಅಪಿ ಕೀಟದಂಶನಭೀರುಕಾ ವಯಂ ರಾಮಕೃಷ್ಣಾತನಯಾ
ತತ್‌ಹೃದಯರುಧಿರ ಪೋಷಿತಾಃ ।

"ಅಲೋಕಸಾಮಾನ್ಯ ಮಚಿನ್ತ್ಯ ಹೇತುಕಂ ನಿಂದನ್ತಿ ಮನ್ದಾಶ್ಚರಿತಂ ಮಹಾತ್ಮನಾಮ್" ಇತ್ಯಾದೀನಿ ಸಂಸ್ಮೃತ್ಯ ಕ್ಷನ್ತವ್ಯೋ,
ಅಯಂ ಜಾಲ್ಮಃ ॥

ತಮ್ಮಂತಹ ಮಹಾತ್ಮರು ಅವನು ಹೇಳುವುದನ್ನು ಲೆಕ್ಕಿಸ ಕೂಡದು. ಶ್ರೀ ರಾಮಕೃಷ್ಣದೇವರ ಮಕ್ಕಳಾದ ನಾವು ಅವರ ಹೃದಯ ರಕ್ತ ಪೋಷಿತರಾಗಿ, ಈ ಕೀಟಗಳ ಕಡಿತಕ್ಕೆಲ್ಲ ಅಂಜುವು ದುಂಟೆ. "ಮಹಾತ್ಮರು ಅಸಾಧಾರಣರು. ಅದಕ್ಕೇ ಅವರನ್ನು ತಿಳಿಯು ವುದು ಅಸಾಧ್ಯ. ದುಷ್ಟರು ಅವರ ಚಾರಿತ್ರವನ್ನು ನಿಂದಿಸುವರು." (ಕಾಳಿ ದಾಸನ ಕುಮಾರಸಂಭವ.) ಇದನ್ನೆಲ್ಲ ಜ್ಞಾಪಕದಲ್ಲಿಟ್ಟು ಆ ಹುಚ್ಚ ನನ್ನು ಮನ್ನಿಸಿ. ಈ ದೇಶದ ಜನರಿಗೆ ಗುರುದೇವನ ದಯೆಯಿಂದ ಒಳಗಣ್ಣು ತೆರೆದಿದೆ. ಇದರ ಕಾರ್ಯವನ್ನು ಮತ್ತು ಗತಿಯನ್ನು ತಡೆಯು ವುದಕ್ಕೆ ಯಾರಿಂದಲಾದರೂ ಸಾಧ್ಯವೆ? ನನಗೆ ಯಾವ ಕೀರ್ತಿಯೂ ಬೇಡ. ಆಕಾರಹೀನವಾದ ಧ್ವನಿಯಾಗಬೇಕೆಂಬುದೇ ನನ್ನ ಆಸೆ. ಯಾರೂ ನನ್ನ ಪಕ್ಷವನ್ನು ಸಮರ್ಥನೆ ಮಾಡುವ ಅವಶ್ಯಕವಿಲ್ಲ—

ಕೋಽಹಂ ತಸ್ಯಾದ ಪ್ರಸರಂ ಪ್ರತಿರೋದ್ಧುಂ ಸಮರ್ಥಯಿತುಂ
ವಾ, ಕೇ ವಾನ್ಯೇ?
ತಥಾಪಿ ಮಮ ಹೃದಯ ಕೃತಜ್ಞತಾ ತಾನ್ ಪ್ರತಿ

"ಆತನ ಪ್ರಭಾವವನ್ನು ತಡೆಯುವುದಕ್ಕೆ ಅಥವಾ ಸಹಾಯ ಮಾಡು ವುದಕ್ಕೆ ನಾನು ಯಾರು? ಇತರರು ತಾನೆ ಯಾರು? ಆದರೂ ಅವರಿಗೆ ನನ್ನ ಮನಃಪೂರ್ವಕವಾದ ಕೃತಜ್ಞತೆಗಳು."

ಯಸ್ಮಿನ್‌ಸ್ಥಿತೋ ನ ದುಃಖೇನ ಗುರುಣಾಪಿ ವಿಚಾಲ್ಯತೇ
ನೈಷಃ ಪ್ರಾಪ್ತವಾನ್ ತತ್ ಪದವೀಮಿತಿ ಮತ್ವಾ ಕರುಣಾ
ದೃಷ್ಟ್ಯಾದ್ರಷ್ಟವ್ಯೋ ಅಯಮಿತಿ

"ಯಾವ ಸ್ಥಿತಿಯಲ್ಲಿದ್ದು ಮಹಾ ದುಃಖ ಒದಗಿದರೂ ಕದಲದೇ ಇರು ವನೊ" ಅಂತಹ ಸ್ಥಿತಿಗೆ ಅವನು ಇನ್ನೂ ಬಂದಿಲ್ಲನೆಂದು ಆತನನ್ನು ಕರುಣಾದೃಷ್ಟಿಯಿಂದ ನೋಡತಕ್ಕದ್ದು. ಈಶ್ವರ ಕೃಪೆಯಿಂದ ಕೀರ್ತಿ ಗೌರವಗಳ ಆಸೆ ನನ್ನ ಹೃದಯದಲ್ಲಿ ಇನ್ನೂ ಮೊಳೆತಿಲ್ಲ. ಅದೆಂದೂ ಅಂಕುರಿಸುವುದಿಲ್ಲವೆಂದು ನಾನು ಧೈರ್ಯವಾಗಿ ಹೇಳಬಲ್ಲೆ. ನಾನು ಯಂತ್ರ, ಅವನು ಯಂತ್ರಿ. ಈ ಯಂತ್ರದ ಮೂಲಕ ಗುರುದೇವನು ಈ ದೂರದೇಶದಲ್ಲಿ, ಸಾವಿರಾರು ಜನರ ಎದೆಯಲ್ಲಿ ಧರ್ಮಭಾವವನ್ನು

ಉದ್ದೀಪನಗೊಳಿಸುತ್ತಿರುವನು. ಸಾವಿರಾರು ಜನ ಸ್ತ್ರೀಯರು ಪುರುಷರು ನನ್ನನ್ನು ಪ್ರೀತಿಸಿ ಗೌರವಿಸುತ್ತಾರೆ. "ಮೂಕಂಕರೋತಿ ವಾಚಾಲಂ ಪಂಗುಂ ಲಂಘಯತೆ ಗಿರಿಂ" (ಮೂಗನನ್ನು ವಾಚಾಳಿಯಂತೆ ಮಾಡುತ್ತಾನೆ. ಹೆಳವನನ್ನು ಬೆಟ್ಟ ದಾಟುವಂತೆ ಮಾಡುತ್ತಾನೆ) ಆತನ ಕೃಪೆಯನ್ನು ನೋಡಿ ನನಗೇ ಆಶ್ಚರ್ಯ? ನಾನು ಯಾವ ಊರಿಗೆ ಹೋಗಲಿ ಆಗಲೇ ಅಲ್ಲಿ ಒಂದು ಕುತೂಹಲ ನನ್ನ ವಿಷಯದಲ್ಲಿ. ಅವರು ನನಗೆ "ಪ್ರಚಂಡ ಬಿರುಗಾಳಿಯ ಹಿಂಡು" ಎಂದು ಹೆಸರು ಕೊಟ್ಟಿರುವರು.

ಇದೆಲ್ಲ ಆತನ ಇಚ್ಛೆ ಎಂಬುದನ್ನು ಜ್ಞಾಪಕದಲ್ಲಿಡಿ. "ನಾನು ಆಕಾರವಿಲ್ಲದ ಧ್ವನಿ ಮಾತ್ರ."

ನಾನು ಇಂಗ್ಲೆಂಡಿಗೆ ಹೋಗುತ್ತೇನೆಯೋ ಅಥವಾ ಇನ್ನು ಬೇರೆ ಊರಿಗೆ ಹೋಗುತ್ತೇನೆಯೋ ದೇವರಿಗೆ ಗೊತ್ತು. ಎಲ್ಲವನ್ನು ಅವನೇ ಅಣಿಮಾಡುವನು. ಇಲ್ಲಿ ಬಟ್ಟೆ ಒಂದಕ್ಕೆ ಒಂದು ರೂಪಾಯಿ. ಒಂದು ಸಾರಿ ಗಾಡಿಯನ್ನು ಹತ್ತಿದರೆ ನಾಕು ಮೂರು ರೂಪಾಯಿ ಕೊಡಬೇಕು. ಒಂದು ಕೋಟಿಗೆ ಬೆಲೆ ನೂರು ರೂಪಾಯಿಗಳು. ಹೋಟೆಲಿನಲ್ಲಿ ದಿವಸಕ್ಕೆ ಒಂಬತ್ತು ರೂಪಾಯಿಗಳು. ದೇವರೇ ಎಲ್ಲವನ್ನು ಒದಗಿಸಿಕೊಡುವನು. ಅವನಿಗೆ ಜಯವಾಗಲಿ. ನನಗೆ ಏನೂ ತಿಳಿಯದು. "ಸತ್ಯಮೇವಜಯತೆ ನ ಅನೃತಂ ಸತ್ಯೇನೈವ ಪಂಥಾ ವಿತತೊ ದೇವಯಾನಃ" ಸತ್ಯವೇ ಗೆಲ್ಲುವುದು ಸುಳ್ಳಲ್ಲ. ಸತ್ಯದಿಂದಲೇ ದೇವಯಾನ ಮಾರ್ಗ ಲಾಭ. ನೀವು ನಿರ್ಭಯರಾಗಿರಬೇಕು. ಅಂಜುವವರು, ಆತ್ಮ ಸಂರಕ್ಷಣೆ ಮಾಡಿಕೊಳ್ಳುವವರು ಹೇಡಿಗಳು. ನಮ್ಮಲ್ಲಿ ಯಾರೂ ನನ್ನನ್ನು ಸಂರಕ್ಷಣೆ ಮಾಡುವುದಕ್ಕೆ ಮುಂದೆ ಬರಬೇಕಾಗಿಲ್ಲ. ಮದ್ರಾಸು ಮತ್ತು ರಾಜಪುತ್ರ ಸ್ಥಾನಗಳಿಂದ ಆಗಿಂದಾಗ್ಗೆ ಸಮಾಚಾರ ಬರುತ್ತಿವೆ. ಹದಿನಾಲ್ಕು ಸಾವಿರ ಮೈಲಿಗಳ ದೂರದಿಂದಲೂ ನೋಡಲು ಕಣ್ಣುಗಳಿವೆ. ಇದು ನಿಜ. ಈಗ ಸುಮ್ಮನೇ ಇರಿ. ಸಕಾಲದಲ್ಲಿ ಎಲ್ಲಾ ಅವನ ಇಚ್ಛೆ ಇದ್ದಷ್ಟು ಬೈಲಿಗೆ ಬರುವುದು. ಅವರ ಮಾತೊಂದೂ ಅಸತ್ಯವಾಗಿಲ್ಲ. ನನ್ನ ಸಹೋದರನೆ! ಬೆಕ್ಕುಗಳು ಕಾದಾಡಿದರೆ ಮನುಷ್ಯರು ನೋಡಿ ವ್ಯಸನ ಪಡುವರೆ? ಆದರಂತೆಯೇ ಅಸೂಯೆ

ದ್ವೇಷ ಪೋಟಾಪೋಟಿ ಇವುಗಳನ್ನು ನೋಡಿ ನೀವು ವ್ಯಾಕುಲಿತರಾಗಬೇಡಿ. ಕಳೆದ ಆರುತಿಂಗಳಿಂದಲೂ ಅಂಧಕಾರ ಜಾರುತ್ತಿದೆ, ಸೂರ್ಯೋದಯವಾಗುತ್ತಿದೆ ಎಂದು ನಾನು ಹೇಳುತ್ತಿದ್ದೆನು. ಸ್ವಲ್ಪಸ್ವಲ್ಪವಾಗಿ ನಿಧಾನವಾದರೂ ನಿಜವಾಗಿ, ಇರುಳು ಸರಿಯುತ್ತಿದೆ. ಇದೆಲ್ಲ ಸಕಾಲದಲ್ಲಿ ನಿನಗೆ ಗೊತ್ತಾಗುವುದು. ಎಲ್ಲ ಅವನಿಗೆ ಗೊತ್ತಿದೆ. ಅವನ ಮನಸ್ಸಿನಲ್ಲಿರುವುದನ್ನು ಯಾರೂ ಹೇಳಲಾಗುವುದಿಲ್ಲ. ಇದೆಲ್ಲ ಬರವಣಿಗೆಯಲ್ಲಿ ಹೊರಗೆಡಹುವುದಲ್ಲ.

ಜೀವನದ ನಾವೆಯ ಚುಕ್ಕಾಣಿಯನ್ನು (Rudder) ಬಲವಾಗಿ ಹಿಡಿದುಕೊಳ್ಳಿ. ಬಿಡಬೇಡಿ. ನಾವು ಸರಿಯಾಗಿ ತೇಲುತ್ತಿರುವೆವು. ದಾರಿ ತಪ್ಪಿಲ್ಲ. ಎದುರ ಕರೆಯನ್ನು ಸೇರುವುದಕ್ಕೆ ಸ್ವಲ್ಪ ವಿಳಂಬವಾಗಬಹುದು ಅಷ್ಟೆ. ಸಹೋದರನೆ! ಮುಂದಾಳನ್ನು ತಯಾರು ಮಾಡಲಾಗುವುದೆ? ಹುಟ್ಟುವಾಗಲೇ ಮುಂದಾಳಿನ ಲಕ್ಷಣಗಳು ಬರುವುವು. ನಿನಗೆ ಇದು ತಿಳಿಯಿತೆ? ಮುಂದಾಳಿನ ಜವಾಬ್ದಾರಿಯನ್ನು ವಹಿಸುವುದು ಬಹಳ ಕಷ್ಟದ ಕೆಲಸ. ಒಬ್ಬನು "ದಾಸಸ್ಯ ದಾಸಃ" ಆಳುಗಳ ಆಳಾಗಬೇಕು. ಸಾವಿರಾರು ಮಂದಿಯನ್ನು ಅನುಸರಿಸಿ ನಡೆಯಬೇಕು. ಅಸೂಯೆ ಸ್ವಾರ್ಥಪರತೆ ಇವುಗಳ ನೆರಳು ಕೂಡ ಇರಕೂಡದು. ಆಗ ನೀನು ಮುಂದಾಳು. ಮೊದಲು, ಹುಟ್ಟುವಾಗಲೇ ಈ ಗುಣಗಳು ಕೂಡಿಬರಬೇಕು. ಎರಡನೆಯದಾಗಿ, ಸಂಪೂರ್ಣ ನಿಸ್ವಾರ್ಥಪರತೆ ಇರಬೇಕು. ಆಗ ಮಾತ್ರ ಮುಂದಾಳಾಗುವನು. ಎಲ್ಲ ಸರಿಯಾಗಿ ನಡೆಯುತ್ತದೆ. ಎಲ್ಲ ಕ್ರಮೇಣ ಸರಿಬರುವುದು. ಅವನು ಬಲೆಯನ್ನು ಸರಿಯಾಗಿ ಇಲ್ಲಿ ಬೀಸುವನು. ಸರಿಯಾಗಿಯೆ ಬಲೆಯನ್ನು ಎಳೆಯುವನು.—"ವಯಮನುಸರಾಮಃ, ವಯಮನುಸರಾಮಃ ಪ್ರೀತಿಃ ಪರಮಸಾಧನಮ್" ನಾವಿರುವುದು ಅವನನ್ನು ಅನುಸರಿಸುವುದಕ್ಕೆ. ಪ್ರೀತಿಯೆ ಪರಮ ಸಾಧನ. ಪ್ರೇಮವೆ ಕೊನೆಗೆ ಗೆಲ್ಲುವುದು. ಅಸಮಾಧಾನ ಪಟ್ಟರೆ ಕಾರ್ಯ ಸಾಗದು. ತಾಳಿ. ಸಹನೆ ಬಲವನ್ನು ಕೊಡಲೇಬೇಕು.

ಎನ್ನ ಸಹೋದರನೆ! ನಾನು ಹೇಳುತ್ತೇನೆ ಕೇಳು! ಯಾವ ಯಾವುದು ಹೇಗೆ ಹೇಗೆ ಹೋಗುತ್ತದೆಯೋ ಹಾಗೆ ಹಾಗೆಯೆಬಿಡು. ಯಾವ ಬಾಹ್ಯ ಅನುಷ್ಠಾನ ಪದ್ಧತಿಯೂ ಅವಶ್ಯಕವಾಗದಂತೆ ನೋಡಿಕೊಳ್ಳಿ. ಬಹುತ್ವವಿರಲಿ. ಆದರೆ ಅದರಲ್ಲಿ ಏಕತ್ವವಿರಲಿ. ಸಾರ್ವತ್ರಿಕತ್ವ ಭಾವಕ್ಕೆ ಯಾವ ಅತಂಕವೂ ಬರದಂತೆ ನೋಡಿಕೊಳ್ಳಿ. ಆವಶ್ಯಕತೆ ಬಿದ್ದರೆ ಸಾರ್ವತ್ರಿಕಭಾವದ ರಕ್ಷಣಾರ್ಥವಾಗಿ ಸಮಸ್ತವನ್ನು ತ್ಯಾಗ ಮಾಡಬೇಕು. ನಾನು ಬದುಕಲಿ, ಸಾಯಲಿ, ಭಾರತಕ್ಕೆ ಹಿಂತಿರುಗಲಿ ಹಿಂತಿರುಗದೆ ಇರಲಿ, ನೀವು ವಿಶೇಷವಾಗಿ ಸಾರ್ವತ್ರಿಕತ್ವವನ್ನು ಜ್ಞಾಪಕದಲ್ಲಿಟ್ಟುಕೊಳ್ಳಬೇಕು. ಅನ್ಯ ಧರ್ಮವನ್ನು ದ್ವೇಷಿಸುವುದಿಲ್ಲವೆಂದು ಮಾತ್ರ ನಾವು ಹೇಳುವುದಿಲ್ಲ. ಸಕಲ ಧರ್ಮಗಳು ಸತ್ಯವೆಂಬುದನ್ನು ಪರಿಪೂರ್ಣವಾಗಿ ಗ್ರಹಿಸಿ ಅದನ್ನು ಆಚರಣೆಯಲ್ಲೂ ತೋರಿಸುತ್ತೇವೆ. ಜೋಕೆ! ಇತರರ ಅತ್ಯಲ್ಪ ಹಕ್ಕಿನ ಮೇಲೂ ಕೈಹಾಕಬೇಡಿ. ಅನೇಕ ದೊಡ್ಡ ಹಡಗುಗಳು ಆ ಗಾಳಿಯಲ್ಲಿ ಮುಳುಗಿ ಹೋಗಿವೆ. ಸ್ವಮತ ಭ್ರಾಂತಿಯಿಲ್ಲದ ಪೂರ್ಣ ಭಕ್ತಿಯನ್ನು ಮಾತ್ರ ನಾವು ತೋರುವುದು. ಆತನ ದಯೆಯಿಂದ ಎಲ್ಲವೂ ಸರಿಯಾಗಿಯೇ ಆಗುವುದು. ಎಲ್ಲರೂ ತಾವು ಮುಂದಾಳಾಗಬೇಕೆಂದು ಬಯಸುವರು. ಆದರೆ ಮುಂದಾಳಾಗಬೇಕೆಂಬುದು ಹುಟ್ಟು ಲಕ್ಷಣವೆಂಬುದನ್ನು ಅವರು ತಿಳಿಯದೆ ಇರುವುದು ಇಷ್ಟು ಅನಿಷ್ಟಕ್ಕೆ ಕಾರಣ.

ನಮ್ಮ ಮಾತೆಯರೆಲ್ಲ ಆರೋಗ್ಯದಿಂದ ಇರಬಹುದು. ಶ್ರೀ ಶಾರದಾದೇವಿಯವರು ಎಲ್ಲಿರುವರು? ಅಂತಹ ಉದಾರ, ಉಜ್ವಲ ಹೃದಯರಾದ ಸಹಸ್ರ ಮಾತೆಯರು ನಮಗೆ ಬೇಕು. ನಮಗೆ ಎಲ್ಲರ ಸಹಾಯವೂ ಬೇಕು. ನಾವು ನಮ್ಮ ಗುರುದೇವನ ಮೇಲೆ ಇಟ್ಟಿರುವ ಭಕ್ತಿಯನ್ನು ಎಲ್ಲರೂ ಹೊಂದಿರಬೇಕೆಂಬ ಅವಶ್ಯಕವಿಲ್ಲ. ಎಲ್ಲಾ ಒಳ್ಳೆಯದನ್ನು ಮಾಡುವ ಶಕ್ತಿಯನ್ನು ಒಟ್ಟುಗೂಡಿಸಿ, ಕ್ಷುದ್ರಶಕ್ತಿಯ ಮೇಲೆ ಏಳಬೇಕು. ಸನ್ಯಾಸಿಗಳಲ್ಲಿರುವ ಒಂದು ದೋಷವೇನೆಂದರೆ ತಮ್ಮ ಸನ್ಯಾಸಾಶ್ರಮದಲ್ಲಿ ಅವರಿಗೆ ಇರುವ ಅಭಿಮಾನ. ಜೀವನದ ಮೊದಲಿನಲ್ಲಿ ಅದರಿಂದ ಉಪಯೋಗವೇನೋ ಆಗಬಹುದು. ಆದರೆ ಅವರು

ಈ ಜೀವನದಲ್ಲಿ ಮುಂದುವರಿದ ಮೇಲೆ ಈ ಬೇಲಿ ಅನಾವಶ್ಯಕ. ಸನ್ಯಾಸಿಗೂ ಗೃಹಸ್ಥನಿಗೂ ಯಾವ ಭೇದವನ್ನೂ ಮಾಡಬಾರದು. ಅಂತಹವನು ಮಾತ್ರ ನಿಜವಾದ ಸನ್ಯಾಸಿ.

ಕೈಯಲ್ಲಿ ಬಿಡಿಗಾಸೂ ಇಲ್ಲದ ಐದು ಆರು ಜನ ಹುಡುಗರು ಕಲೆತು ಆರಂಭಿಸಿದ ಕಾರ್ಯ, ಈಗ ಕ್ರಮೇಣ ಇಷ್ಟು ಅಭಿವೃದ್ಧಿಯಾದರೆ ಅದೇನು ಹುಡುಗಾಟವೆಂದು ತಿಳಿದಿರೇನು! ಅಥವಾ ದೈವೇಚ್ಛೆಯೊ! ಇದು ಪ್ರಭುವಿನ ಇಚ್ಛೆಯಾಗಿದ್ದ ಪಕ್ಷದಲ್ಲಿ ಪಕ್ಷಪಾತವನ್ನು ಈರ್ಷೆಯನ್ನು ಬಿಟ್ಟು ಒಟ್ಟುಗೂಡಿ ಕಾರ್ಯವನ್ನು ನಡೆಸಿರಿ.

ಒಬ್ಬನು ದೊಡ್ಡವನಾಗಬೇಕೆಂದು ನೆನೆದ ಮಾತ್ರಕ್ಕೆ ಅವನು ದೊಡ್ಡವನಾಗಲಾರ. ಭಗವಂತ ಯಾರನ್ನು ಕೈನೀಡಿ ಮೇಲಕ್ಕೆ ಎತ್ತುತ್ತಾನೋ ಅವನು ಮಾತ್ರವೇ ಮೇಲಕ್ಕೆ ಏಳುವನು. ಅವನು ಯಾರನ್ನು ಕೆಳಕ್ಕೆ ತಳ್ಳುತ್ತಾನೋ ಅವನು ಬೀಳುವನು. ಇದನ್ನು ಜನರೆಲ್ಲರೂ ಒಂದು ದಿನ ಒಂದು ನಿಮಿಷವಾದರೂ ನೆನೆದರೆ ಆಗ ಸಕಲ ತೊಂದರೆಗಳೂ ಅಡಗುವುವು. ಆದರೆ ಆ ಕೆಲಸಕ್ಕೆ ಬಾರದ ಅಹಂಕಾರವಿದೆಯಲ್ಲ! ಒಂದು ಬೆರಳನ್ನು ಕೂಡ ಅಲ್ಲಾಡಿಸಲು ಶಕ್ತಿಯಿಲ್ಲ. ಆದರೂ ಕೂಡ ನಾನು ಅವನನ್ನು ಏಳಗೊಡುವುದಿಲ್ಲ ಎನ್ನಬೇಕಾದರೆ ಎಷ್ಟು ನಾಚಿಕೆಗೇಡು. ಅಸೂಯೆ, ನಾಲ್ಕಾರೂ ಸೇರಿ ಒಂದು ಕೆಲಸವನ್ನು ಮಾಡುವ ಎಂಬ ಒಗ್ಗಟ್ಟಿನ ಅಭಾವ, ಇವು ಗುಲಾಮಜಾತಿಯವರ ಸ್ವಭಾವ. ಆದರೆ ನಾವು ಇವುಗಳಿಂದ ಪಾರಾಗುವುದಕ್ಕೆ ಪ್ರಯತ್ನಿಸಬೇಕು. ಭಯಾನಕವಾದ ಈರ್ಷೆ ನಮ್ಮ ವಿಶೇಷ ಲಕ್ಷಣ. ಪರದೇಶಗಳಿಗೆ ಹೋಗಿ ಅವುಗಳೊಂದಿಗೆ ಹೋಲಿಸಿ ನೋಡಿದಾಗ ಗೊತ್ತಾಗುವುದು. ಈ ವಿಷಯದಲ್ಲಿ ನಮ್ಮನ್ನು ಹೋಲುವರು ಯಾರೆಂದರೆ, ಅಮೇರಿಕದ ಸ್ವತಂತ್ರರಾದ ನಿಗ್ರೋ ಜನರು. ಅವರಲ್ಲಿ ಯಾವನಾದರೊಬ್ಬ ಕೊಂಚ ತಲೆ ಎತ್ತಿದರೆ ಸಾಕು, ಎಲ್ಲರೂ ಒಡನೆಯೆ ಕಲೆತು, ಅವನಿಗೆ ವಿರುದ್ಧವಾಗಿ ಬಿಳಿಯವರೊಡನೆ ಸೇರಿಕೊಂಡು ಅವನನ್ನು ನೆಲಕ್ಕೆ ತುಳಿಯುವುದಕ್ಕೆ ಪ್ರಯತ್ನಪಡುವರು.

ಏನಾದರೂ ಆಗಲಿ ಎಷ್ಟು ಬೇಕಾದರೂ ವ್ಯಯವಾಗಲಿ, ಎಷ್ಟು ಕಷ್ಟವಾಗಲೀ ಅಂತಹ ದುರ್ಬಲತೆ ನಮ್ಮಲ್ಲಿ ತಲೆದೋರದಂತೆ ನೋಡಿಕೊಳ್ಳಬೇಕು. ನಾವು ಹತ್ತುಮಂದಿ ಇರಲಿ, ಇಬ್ಬರೇ ಇರಲಿ, ಅಷ್ಟೇ ಸಾಕು. ಅವರು ಸರ್ವಾಂಗ ಸಂಪೂರ್ಣ ಚಾರಿತ್ರ್ಯವುಳ್ಳವರಾಗಿರಬೇಕು. ಭಗವಂತ ನಮ್ಮ ಹೊಟ್ಟೆಪಾಡನ್ನು ನೋಡಿಕೊಳ್ಳುವನೆ, ಎಂದು ಕೇಳುವುದು ಸರಿಯಲ್ಲ. ಈಶ್ವರ ಅದನ್ನು ನೋಡಿಕೊಳ್ಳುವನು. ಅದರ ವಿಷಯದಲ್ಲಿ ಸಂಶಯ ಬೇಡ. ಆತನ ಹೆಸರನ್ನು ರಾಜಪುತಾನ, ಪಂಜಾಬು, ವಾಯವ್ಯ ಪ್ರಾಂತ್ಯ, ಮದ್ರಾಸು ಮುಂತಾದ ಸ್ಥಳಗಳಲ್ಲಿ ಹರಡಬೇಕು. ರಾಜಪುತಾನದಲ್ಲಿ ನಿಜವಾಗಿಯೂ ಹರಡಬೇಕು. ಏಕೆಂದರೆ, "ಪ್ರಾಣ ಹೋದರೂ ಆಡಿದ ಮಾತಿಗೆ ತಪ್ಪದೆ ಇರುವುದು ಯಾವಾಗಲೂ ರಘುವಂಶದವರ ಪದ್ಧತಿ" ಎಂದು ಹೇಳಬಲ್ಲ ಜನರು ಈಗಲೂ ಅಲ್ಲಿ ಇರುವರು.

ಪಕ್ಷಿಯು ಮೇಲೆ ಮೇಲೆ ಹಾರುತ್ತ ಶಾಂತಿಯಿಂದ ಕೆಳಗೆ ನೋಡುವ ಸ್ಥಿತಿಯನ್ನು ಪಡೆಯುವುದು. ನೀವು ಅಂತಹ ಸ್ಥಳಕ್ಕೆ ಮುಟ್ಟಿರುವಿರೇನು? ಯಾರು ಅಲ್ಲಿಗೆ ಸೇರಿಲ್ಲವೋ ಅವರಿಗೆ ಮತ್ತೊಬ್ಬರಿಗೆ ಬುದ್ಧಿವಾದವನ್ನು ಹೇಳಲು ಅಧಿಕಾರವಿಲ್ಲ. ಕೈಕಾಲುಗಳನ್ನು ಆಡಿಸದೆ ಸುಮ್ಮನೆ ಪ್ರವಾಹದಲ್ಲಿ ತೇಲಿಕೊಂಡು ಹೋಗಿ. ನಿಮ್ಮ ಗುರಿಯನ್ನು ಸೇರುವುದರಲ್ಲಿ ಯಾವ ಸಂದೇಹವೂ ಇಲ್ಲ.

ಇಲ್ಲಿ ಚಳಿ ಕ್ರಮೇಣ ಕಡಿಮೆಯಾಗುತ್ತಿದೆ. ಇನ್ನು ನಾನು ಚಳಿಗಾಲವನ್ನು ಕಳೆದ ಹಾಗೆಯೆ. ಈ ದೇಶದಲ್ಲಿ ಚಳಿಗಾಲದಲ್ಲಿ ದೇಹಾದ್ಯಂತ್ಯವೂ ವಿದ್ಯುದ್ಭರಿತವಾಗುತ್ತದೆ. ಓರ್ವನ ಕೈಹಿಡಿದು ಅಲ್ಲಾಡಿಸಿದರೆ ಶಬ್ಧದೊಡನೆ ದೇಹ ಅದುರುತ್ತದೆ. ಕೈಬೆರಳಿನಿಂದ ಗ್ಯಾಸನ್ನು ಹತ್ತಿಸಬಹುದು. ಚಳಿಯ ವಿಷಯವಾಗಿ ನಾನು ಆಗಲೇ ನಿಮಗೆ ಕಾಗದ ಬರೆದಿರುವೆನು. ನಾನು ಈ ದೇಶದ ಆದ್ಯಂತವನ್ನು ಸಂಚಾರ ಮಾಡುತ್ತಿರುವೆನು. ಆದರೆ ಚಿಕಾಗೊ ನನ್ನ ಮಠ. ಸಂಚಾರವನ್ನು ಮುಗಿಸಿಕೊಂಡು ನಾನು ಯಾವಾಗಲೂ ಅಲ್ಲಿಗೆ ಬಂದು ಸೇರುವುದು. ಈಗ ನನ್ನ ಸಂಚಾರ ಪೂರ್ವಾಭಿಮುಖವಾಗಿದೆ. ದೋಣಿ ಎಂದು ಕರೆ ಸೇರುವುದೊ ದೇವರೇ ಬಲ್ಲ.

ಅವರಿಗೆ ನಿಮ್ಮ ಮೇಲೆ ಅದೇ ಬಗೆಯ ಪ್ರೀತಿ ಇರುವುದೋ? ಅವರು ನಿಮ್ಮನ್ನು ನೋಡಲು ಹಲವುವೇಳೆ ಬರುತ್ತಾರೊ. ಬ—ಹೇಗಿರುವನು? ಏನು ಮಾಡುತ್ತಿರುವನು? ನೀವು—ಅವರನ್ನು ಹೋಗಿ ನೋಡುತ್ತೀರೋ? —ಅವರಲ್ಲಿ ನಿಮಗೆ ಶ್ರದ್ಧಾ ಭಕ್ತಿಗಳಿರುವುವೆ? ಎನ್ನ ಸಹೋದರನೆ! ಹೌದು. ಸನ್ಯಾಸಿಗೂ ಗೃಹಸ್ಥನಿಗೂ ವ್ಯತ್ಯಾಸವಿರುವುದು ನಿಜ. "ಮೂಕಂಕರೋತಿ ವಾಚಾಲಂ" ಮೂಕನನ್ನು ವಾಚಾಳಿಯನ್ನಾಗಿ ಮಾಡುತ್ತಾನೆ. ಯಾರಲ್ಲಿ ಏನಿದೆ ಎಂದು ಕಂಡು ಹಿಡಿಯುವುದು ಬಹಳ ಕಷ್ಟ. ಶ್ರೀ ರಾಮಕೃಷ್ಣರು ಅವರನ್ನು ಕೊಂಡಾಡಿದ್ದಾರೆ. ಆದುದರಿಂದ ಅವರು ಪೂಜ್ಯರು. ಇಷ್ಟು ನೋಡಿ ಕೇಳಿದ್ದರೂ, ನಿಮಗೆ ನಂಬಿಕೆ ಇಲ್ಲವೇ! ಛೀ ಹೋಗಿ! ಅವರು ನಿಮ್ಮನ್ನು ಪ್ರೀತಿಸುತ್ತಾರೊ. ಅವರಿಗೆ ನನ್ನ ಮನಃಪೂರ್ವಕ ಗೌರವವನ್ನು, ಪ್ರೇಮವನ್ನು ತಿಳಿಸಬೇಕು. ಅವರಿಗೆ ನನ್ನ ಪ್ರೀತಿ ತಿಳಿಸಿ. ಅವರೊಬ್ಬರು ಉದಾರ ಹೃದಯರು.—ಅವರು ಹೇಗಿರುವರು? ಅವರಲ್ಲಿ ಕೊಂಚ ಶ್ರದ್ಧಾ ಭಕ್ತಿಗಳೇನಾದರೂ ಇರುವುದೇನು? ಅವರಿಗೆ ನನ್ನ ಕುಶಲ ಪ್ರಶ್ನೆಗಳನ್ನು ತಿಳಿಸಿ.—ಅವರು ಯಂತ್ರದಲ್ಲಿ ಚೆನ್ನಾಗಿ ಪಳಗುತ್ತಿರುವರು ಎಂದು ಊಹಿಸುತ್ತೇನೆ. ಕೊಂಚ ಸಹನೆ ಇರಲಿ. ಎಲ್ಲವೂ ಸರಿಬರುವುದೆಂದು ಹೇಳು. ಸರ್ವರಿಗೂ ನನ್ನ ಪ್ರೀತಿವಿಶ್ವಾಸಗಳು.

ಅನವರತವೂ ನಿನ್ನ ಪ್ರೇಮದ
**ವಿವೇಕಾನಂದ**

೬೦

೧೮೯೪

ಪ್ರಿಯ ಅಖಂಡಾನಂದ.

ನಿನ್ನ ಪತ್ರ ತಲುಪಿ ನನಗೆ ತುಂಬ ಸಂತೋಷವಾಯಿತು. ಖೇತ್ರಿಯ ವಾಸದಿಂದ ನಿನ್ನ ಆರೋಗ್ಯಗುಣಮುಖವಾಗಿದೆ ಎಂದು ತಿಳಿದು ಆನಂದವಾಯಿತು.

ತಾ— ಮದ್ರಾಸಿನಲ್ಲಿ ಬೇಕಾದಷ್ಟು ಕೆಲಸಮಾಡಿರುವನು. ಬಹಳ ತೃಪ್ತಿಕರವಾದ ಸಮಾಚಾರ! ಮದ್ರಾಸಿನ ಜನರು ಅವನನ್ನು ಬಹಳ ಹೊಗಳುತ್ತಿರುವುದನ್ನು ನಾನು ಕೇಳಿದೆನು.

ರಾಜಪುತಾನದ ಅನೇಕ ಕಡೆಗಳಲ್ಲಿರುವ ಠಾಕೂರರಲ್ಲಿ ಧರ್ಮಬುದ್ಧಿಯನ್ನು, ಪರೋಪಕಾರ ಭಾವನೆಯನ್ನು ಹರಡು. ನಾವು ಕೆಲಸಮಾಡಬೇಕು. ಸುಮ್ಮನೆ ಕುಳಿತುಕೊಂಡರೆ ಸಾಧ್ಯವಿಲ್ಲ. ಮಧ್ಯೆ ಮಧ್ಯೆ ಮಲಸಿಸಾರ್, ಅಲಸಿಸಾರ್ ಮತ್ತು ಅಲ್ಲಿರುವ ಎಲ್ಲಾ ಸಾರುಗಳಿಗೂ ಒಮ್ಮೊಮ್ಮೆ ಭೇಟಿಯನ್ನು ಕೊಡು. ಜೋಪಾನವಾಗಿ ಇಂಗ್ಲೀಷನ್ನು, ಸಂಸ್ಕೃತವನ್ನು ಅಭ್ಯಾಸಮಾಡು. ಜ— ಪಂಜಾಬಿನಲ್ಲಿರಬಹುದೆಂದು ಯೋಚಿಸುತ್ತೇನೆ. ನನ್ನ ವಿಶೇಷಪ್ರೇಮವನ್ನು ಅವನಿಗೆ ತಿಳಿಸು. ಖೇತ್ರಿಗೆ ಅವನನ್ನು ಕರೆದುಕೊಂಡುಬಾ. ಅವನಿಂದ ಸಂಸ್ಕೃತವನ್ನು ಕಲಿತುಕೊಂಡು ಅವನಿಗೆ ಇಂಗ್ಲೀಷನ್ನು ಹೇಳಿಕೊಡು. ಅವನ ವಿಳಾಸವನ್ನು ಹೇಗಾದರೂ ನನಗೆ ಕಳುಹಿಸು.

ಖೇತ್ರಿಯಲ್ಲಿರುವ, ದೀನರ, ಹೀನಕುಲದಲ್ಲಿ ಹುಟ್ಟಿದವರ ಮನೆಯಿಂದ ಮನೆಗೆ ಹೋಗಿ ಧರ್ಮಬೋಧೆಯನ್ನು ಮಾಡು. ಭೂಗೋಳ ಮುಂತಾದ ವಿಷಯದಮೇಲೆ ಅವರಿಗೆ ಮಾತಿನಿಂದಲೇ ಸ್ವಲ್ಪ ಸಮಾಚಾರವನ್ನು ಹೇಳು. ಊಟಕ್ಕೆ ಮೃಷ್ಟಾನ್ನವನ್ನು ಇಟ್ಟುಕೊಂಡು ಸುಮ್ಮನೆ ಕುಳಿತು "ಹೇ! ಶ್ರೀರಾಮಕೃಷ್ಣಭಗವಾನ್" ಎಂದರೆ ಪ್ರಯೋಜನವಿಲ್ಲ. ಬಡವರಿಗೆ ಏನಾದರೂ ಸ್ವಲ್ಪ ಉಪಕಾರವನ್ನು ಮಾಡಬೇಕು. ಮಧ್ಯೆ ಮಧ್ಯೆ ಉಳಿದ ಗ್ರಾಮಗಳಿಗೂ ಹೋಗು. ಅಲ್ಲಿಯ ಜನರಿಗೆ, ಉತ್ತಮ ಜೀವನ ಧರ್ಮ, ಮುಂತಾದುವುಗಳನ್ನು ಬೋಧಿಸು. ಕರ್ಮ ಪೂಜೆ ಜ್ಞಾನ ಇವು ಬೇಕು. ಮೊದಲು ಕೆಲಸ. ಇದರಿಂದ ಮನಸ್ಸು ಶಾಂತಿಯಾಗುವುದು. ಇಲ್ಲದೇ ಇದ್ದರೆ ಎಲ್ಲ ನಿಷ್ಪ್ರಯೋಜನವಾಗುವುದು. ಆಹುತಿಯನ್ನು ಉರಿಯುವ ಹೋಮಕ್ಕೆ ಹಾಕದೆ ಆರಿದ ಬೂದಿಗೆ ಹಾಕಿದಂತೆ ಆಗುವುದು. ಜ-ಬಂದಮೇಲೆ ರಜಪುತಾನದ ಪ್ರತಿಯೊಂದು ಗ್ರಾಮದಲ್ಲಿಯೂ ಬಡವರ ನಿರ್ಗತಿಕರ ಮನೆಯಿಂದ ಮನೆಗೆ ಹೋಗಿ, ನೀವು ತೆಗೆದುಕೊಳ್ಳುವ ಆಹಾರವನ್ನು ಜನರು ದೂರಿದರೆ ಆ ಆಹಾರವನ್ನು ತ್ಯಜಿಸಿ. ಪರೋಪಕಾರಕ್ಕಾಗಿ

ಹುಲ್ಲನ್ನಾದರೂ ತಿನ್ನುವುದು ಮೇಲು. ಕಾಪಿಯಬಟ್ಟೆ ಭೋಗಕ್ಕಲ್ಲ. ಇದು ವೀರ ಕರ್ಮಯೋಗಿಯ ಧ್ವಜ. "ಜಗದಕಲ್ಯಾಣಕ್ಕೋಸುಗ ವಾಗಿ" ನಿನ್ನ ದೇಹ ಮಾತು ಮನಸ್ಸು ಎಲ್ಲವನ್ನು ಕೊಡಬೇಕು. "ಮಾತೃದೇವೋಭವ, ಪಿತೃದೇವೋಭವ" ತಾಯಿಯನ್ನು ದೇವರಂತೆ ಕಾಣು, ತಂದೆಯನ್ನು ದೇವರಂತೆಕಾಣು, ಎಂಬುದನ್ನು ನೀನು ಓದಿರುವೆ. ಆದರೆ ನಾನು "ದರಿದ್ರದೇವೋಭವ, ಮೂರ್ಖದೇವೋಭವ" ಎನ್ನುತ್ತೇನೆ. ದೀನರು, ಅವಿದ್ಯಾವಂತರು, ಮೂರ್ಖರು, ದುಃಖಿಗಳೇ ನಿನಗೆ ದೇವರಾಗಲಿ. ಇವರನ್ನು ಸೇವೆಮಾಡುವುದೆ ಅತ್ಯಂತ ಪವಿತ್ರವಾದ ಧರ್ಮವೆಂದು ತಿಳಿ. ಆಶೀರ್ವಾದಗಳು.

ಅನವರತವೂ ನಿನ್ನ ವಿವೇಕಾನಂದ.

೪೧

೫೪೧, ಡಿಯರ್ ಬಾರನ್ ಅವಿನ್ಯೂ
ಚಿಕಾಗೋ ೧೮೯೪.

ಪ್ರಿಯ,—

ನಿಮ್ಮ ಪತ್ರ ಈಗತಾನೆ ತಲುಪಿತು. ಈ ದೇಶದಲ್ಲಿ, ಒಂದೆರಡು, ಮೂರು ವರುಷ ಉಪನ್ಯಾಸಮಾಡಿ ಹಣವನ್ನು ಎತ್ತಬಹುದು. ನಾನು ಸ್ವಲ್ಪ ಪ್ರಯತ್ನಿಸಿರುವೆನು. ಸಾರ್ವಜನಿಕರ ಮೆಚ್ಚುಗೆಯನ್ನು ಇದರಿಂದ ಪಡೆದರೂ ನನ್ನ ಪ್ರಕೃತಿಗೆ ಇದು ಸರಿಯಾಗುವುದಿಲ್ಲ. ನನ್ನನ್ನು ಧರ್ಮ ವಿಮುಖನನ್ನಾಗಿ ಮಾಡುವುದು.

ನೀನು ಹೇಳಿದ ವಿಷಯಗಳನ್ನು ಭಾರತೀಯ ವರ್ತಮಾನ ಪತ್ರಿಕೆಗಳಲ್ಲೂ ಮತ್ತು ಅವರ ಟೀಕೆಯಲ್ಲೂ ಓದಿದೆನು. ಇದೆಲ್ಲ ಅವರ ಸ್ವಭಾವಕ್ಕೆ ಅನುಗುಣವಾಗಿವೆ. ಗುಲಾಮಗಿರಿಯಲ್ಲಿರುವ ಪ್ರತಿಯೊಂದು ಜನಾಂಗದ ಮುಖ್ಯ ದೋಷವೇ ಅಸೂಯೆ ಎಂಬುದು. ಈ ಅಸೂಯೆ ಮತ್ತು ಒಗ್ಗಟ್ಟಿಲ್ಲದಿರುವಿಕೆಯೆ ಗುಲಾಮಗಿರಿಗೆ ಕಾರಣ. ಇವು ಎಲ್ಲಿಯ ವರೆಗೂ ಇರುವುದೋ ಅಲ್ಲಿಯವರೆವಿಗೂ ನಾವು ಗುಲಾಮಗಿರಿಯಲ್ಲಿ

ನಡಬೇಕಾಗುವುದು. ಭರತಖಂಡದಿಂದ ಹೊರಗೆಹೋದ ಹೊರತು ಈ ಮಾತಿನ ಸತ್ಯ ನಿನಗೆ ಗೊತ್ತಾಗುವುದಿಲ್ಲ. ಪಾಶ್ಚಾತ್ಯ ಜನಾಂಗದ ಪುರೋಭಿವೃದ್ಧಿಗೆ ಕಾರಣ ಏಕಮತ್ಯ. ಪರಸ್ಪರ ನಂಬಿಕೆ ಮತ್ತು ಮೆಚ್ಚುಗೆ ಇವುಗಳೇ ಅವರ ತಳಹದಿ. ಒಂದು ಜನಾಂಗ ದುರ್ಬಲವಾದಷ್ಟೂ, ಹೇಡಿಯಾದಷ್ಟೂ, ಈ ದೋಷ ಅಷ್ಟು ಮೇಲೆದ್ದು ಕಾಣುವುದು. ನನ್ನ ಮಗು! ದಾಸ್ಯದಲ್ಲಿರುವ ಜನಾಂಗದಿಂದ ನೀನು ಏನನ್ನೂ ನಿರೀಕ್ಷಿಸಕೂಡದು. ರೋಗವೇನೋ ಬಹಳ ಅಪಾಯದಲ್ಲಿದೆ. ಇದರಲ್ಲಿ ಸಂದೇಹವಿಲ್ಲ. ಆದರೆ ನಿನ್ನ ಎದುರಿಗೆ ಇದೆಲ್ಲವನ್ನು ನಾನು ವಿಷದವಾಗಿ ತಿಳಿಸುತ್ತೇನೆ. ಈ ನಿಶ್ಚೇತನವಾದ ಹೆಣಕ್ಕೆ ಜೀವಕಳೆಯನ್ನು ಕೊಡಬಲ್ಲಿರಾ! ಎಲ್ಲಾ ನೈತಿಕೋನ್ನತಿಗೂ, ರಸ್ಯೋಭಿಪಿಷ್ಟದ ವಿಕಾಸಕ್ಕೂ ಸತ್ತಂತಿರುವ ಜನಾಂಗಕ್ಕೆ ಜೀವತುಂಬ ಬಲ್ಲಿರಾ! ಯಾರು ಅವರಿಗೆ ಸಹಾಯ ಮಾಡುತ್ತಾರೋ ಅವರಮೇಲೆ ತಿರುಗಿಬೀಳುವ ಕ್ಷುದ್ರ ಜೀವಿಗಳಿಗೆ ಸಹಾಯಮಾಡಲು ಕೈಯಿತ್ತಬಲ್ಲಿರಾ! ಒದೆಯುವ, ತಂಟೆಮಾಡುವ ಜನರ ಗಂಟಲೊಳಕ್ಕೆ ಔಷಧಿಯನ್ನು ಹಾಕುವ ವೈದ್ಯನಂತೆ ಆಗಬಲ್ಲಿರಾ? ಅಮೆರಿಕಾ ಅಥವಾ ಯೂರೋಪ್ ಜನಾಂಗದವರಾದರೆ, ತಮ್ಮವರು ಪರದೇಶದಲ್ಲಿರುವಾಗ ಎಲ್ಲರೂ ಅವರನ್ನು ಪ್ರೋತ್ಸಾಹಿಸುವರು.

"ಕೆಲಸಮಾಡುವುದಕ್ಕೆ ಮಾತ್ರ ನಿನಗೆ ಅಧಿಕಾರವಿದೆ. ಅದರ ಫಲಗಳಿಗಲ್ಲ," ಎಂಬುದನ್ನು ನಿನಗೆ ಮತ್ತೊಮ್ಮೆ ಜ್ಞಾಪಿಸುತ್ತೇನೆ. ಕಲ್ಲಿನ ಬಂಡೆಯಂತೆ ಧೀರನಾಗಿ ಅಚಲನಾಗಿ ನಿಲ್ಲು. ಸತ್ಯ ಯಾವಾಗಲೂ ಜಯಿಸುವುದು. ಶ್ರೀರಾಮಕೃಷ್ಣರ ಮಕ್ಕಳು ತಮ್ಮ ಮನಸ್ಸಾಕ್ಷಿಯಾಗಿ ಸತ್ಯವಾಗಿರಲಿ. ಎಲ್ಲ ಸರಿಬರುವುದು. ಇದರ ಪರಿಣಾಮವನ್ನು ನೋಡುವವರೆವಿಗೂ ನಾವು ಬದುಕಿರುತ್ತೇವೆಯೊ ಇಲ್ಲವೊ ತಿಳಿಯದು. ನಾವು ಇಂದು, ಬದುಕಿರುವುದು ಎಷ್ಟು ನಿಜವಾಗಿದೆಯೋ, ಅಷ್ಟೇ ನಿಜವಾಗಿ ಇದು ಇಂದೋ ನಾಳೆಯೋ ಪರಿಣಾಮಕಾರಿ ಆಗಿಯೇ ಆಗುವುದು. ಭರತಖಂಡಕ್ಕೆ ಇಂದು ಬೇಕಾಗಿರುವುದು ಜನಾಂಗದ ರಕ್ತನಾಡಿಗಳಲ್ಲಿ ಹೊಸ ಸ್ಫೂರ್ತಿ ಅಂಕುರಿಸುವಂತೆ ಮಾಡುವ ಒಂದು ವಿದ್ಯುತ್ ಶಕ್ತಿ. ಇದು ಬಹಳ ಸಾವಕಾಶವಾದ ಕೆಲಸ. ಹಿಂದೆಯೂ ಹಾಗೆಯೆ ಇದ್ದಿತು.

ಮುಂದೆಯೂ ಹಾಗೆಯೇ ಇರುವುದು. ಕೆಲಸಮಾಡುವುದರಲ್ಲಿ ತೃಪ್ತಿ ಪಟ್ಟರೆ ಸಾಕು. ಎಲ್ಲಕ್ಕಿಂತ ಹೆಚ್ಚಾಗಿ ನಿನ್ನ ಆತ್ಮಸಾಕ್ಷಿಯಾಗಿಯೂ ಸತ್ಯಸಂಧನಾಗು. ಆಪಾದ ಮಸ್ತಕವೂ ಪರಿಶುದ್ಧನಾಗು. ದೃಢವ್ರತನಾಗು. ಸತ್ಯಸಂಧನಾಗು. ನಂತರ ಎಲ್ಲ ಸರಿಬರುವುದು. ನೀವು ಶ್ರೀರಾಮ ಕೃಷ್ಣರ ಶಿಷ್ಯರಲ್ಲಿ ಯಾವುದಾದರೂ ವಿಶೇಷಗುಣವನ್ನು ಕಂಡಿದ್ದರೆ, ಅದೇ, ಸ್ವತಸ್ಫೂರ್ತಕವಾದ ಸತ್ಯಸಂಧತೆ. ಅಂತಹ ಒಂದು ನೂರು ಮಂದಿಯನ್ನು ತಯಾರುಮಾಡಿ ಭರತಖಂಡದಲ್ಲಿ ಬಿಟ್ಟರೆ ಅಂದಿಗೆ ನನ್ನ ಕೆಲಸ ಕೊನೆಗೊಂಡಂತೆ. ಅಂದು ನಿಶ್ಚಿಂತನಾಗಿ ಜಗತ್ತನ್ನು ತೊರೆಯುವೆನು. ಜಗದೀಶನಿಗೆ ಮಾತ್ರ ಇದು ಚೆನ್ನಾಗಿಗೊತ್ತು. ಅಜ್ಞರು ಬಾಯಿಗೆ ಬಂದುದನ್ನು ಮಾತನಾಡಿಕೊಳ್ಳಲಿ. ನಾವು ಸಹಾಯವನ್ನು ಹುಡುಕಿಕೊಂಡು ಹೋಗುವುದಿಲ್ಲ. ಅದಾಗಿ ಬಂದರೆ ತ್ಯಜಿಸುವುದಿಲ್ಲ. ಜಗದೀಶನ ದಾಸರು ನಾವು. ಕ್ಷುದ್ರ ಮಾನವನ ಹೀನ ನಡವಳಿಕೆ ನಮ್ಮ ಗಮನಕ್ಕೆ ಬರಕೂಡದು.

ಮುಂದುವರಿ. ಒಂದು ಶೀಲವನ್ನು ನಮ್ಮ ಜೀವನದಲ್ಲಿ ಪೋಷಿಸಬೇಕಾದರೆ ಅನೇಕ ವರುಷಗಳ ಹೋರಾಟಬೇಕು. ನಿರಾಶನಾಗದಿರು. ಸತ್ಯದ ಒಂದುನುಡಿ ಕೂಡ ಎಂದಿಗೂ ನಾಶವಾಗುವುದಿಲ್ಲ. ಅನೇಕ ಶತಮಾನಗಳು ಅದು ಕಸದಗುಡ್ಡೆಯಲ್ಲಿ ಹುದುಗಿಕೊಂಡಿರಬಹುದು. ಆದರೆ ಇಂದೋ ನಾಳೆಯೋ ಎಂದಾದರೊಂದುದಿನ ಅದು ಪ್ರಕಾಶಕ್ಕೆ ಬಂದೇ ಬರುವುದು. ಸತ್ಯಕ್ಕೆ ಚ್ಯುತಿಯಿಲ್ಲ, ಶೀಲಕ್ಕೆ ಚ್ಯುತಿಯಿಲ್ಲ, ಪವಿತ್ರತೆಗೆ ಚ್ಯುತಿಯಿಲ್ಲ. ನನಗೆ ಒಬ್ಬ ವಿಶ್ವಸನೀಯ ಮನುಷ್ಯ ಸಾಕು. ಕೆಲಸಕ್ಕೆ ಬಾರದ ಒಂದು ಗುಂಪು ಬೇಕಾಗಿಲ್ಲ. ನನ್ನ ಮಗು! ಧೈರ್ಯವಾಗಿ ನಿಲ್ಲು. ನಿನಗೆ ಸಹಾಯಮಾಡುವುದಕ್ಕೆ ಬರುವ ಯಾರಿಗೂ ಕಾದುಕುಳಿತುಕೊಳ್ಳಬೇಡ. ಎಲ್ಲ ಮಾನವ ಸಹಾಯಕ್ಕಿಂತ ಮೇಲಲ್ಲವೆ ಭಗವಂತ. ಪವಿತ್ರನಾಗು. ದೇವರಲ್ಲಿ ಭಕ್ತಿ ಇಡು. ಯಾವಾಗಲೂ ಆತನನ್ನು ನಂಬು. ನೀನು ಸರಿಯಾದ ಹಾದಿಯಲ್ಲಿ ಹೋಗುವೆ. ನಿನ್ನನ್ನು ಯಾವುದೂ ಕದಲಿಸಲಾಗದು.

"ಕರುಣಾಳು ಬಾಬೆಳಕೆ ದಾರಿ ತೋರೆನಗೆ" ಎಂದು ಪ್ರಾರ್ಥಿಸು. ಗಾಢಾಂಧಕಾರದಲ್ಲಿ ಕಿರಣರಶ್ಮಿಯೊಂದು ಬರುವುದು. ನಮ್ಮನ್ನು ಗುರಿಯೆಡೆಗೆ ಸೇರಿಸಲು ಕರವೊಂದು ಕಾಣಿಸುವುದು. ನಿನ್ನ ಹಿತಕ್ಕಾಗಿ ನಾನು ಅನವರತವೂ ಪ್ರಾರ್ಥಿಸುವೆನು. ನೀನೂ ಕೂಡ ನನ್ನ ಏಳ್ಗೆಗೆ ಪ್ರಾರ್ಥಿಸಬೇಕು. ನಾವುಗಳೆಲ್ಲರೂ ದಿನ ಹಗಲು ರಾತ್ರಿ ಬಡತನ, ಪುರೋಹಿತರ ಉಪಟಳ, ಇವುಗಳಲ್ಲಿ ಸಿಕ್ಕಿ, ದಾಸ್ಯದಲ್ಲಿ ನರಳುತ್ತಿರುವ ಕೋಟ್ಯಾನುಕೋಟಿ ಭಾರತೀಯರ ಹಿತಕ್ಕಾಗಿ ಪ್ರಾರ್ಥಿಸಬೇಕು. ಇವರಿಗೆ ಧರ್ಮವನ್ನು ಬೋಧಿಸಬೇಕೆಂದು ಆಸೆ. ಶ್ರೀಮಂತರಿಗೆ ಗೌರವಸ್ಥರಿಗಲ್ಲ. ನಾನು ತಾರ್ಕಿಕನಲ್ಲ, ತತ್ವಜ್ಞಾನಿಯಲ್ಲ, ಮಹಾತ್ಮನಲ್ಲ. ನಾನೊಬ್ಬ ದೀನ. ದೀನರನ್ನು ಪ್ರೀತಿಸುತ್ತೇನೆ. ಈ ದೇಶದಲ್ಲಿ ಯಾರನ್ನು ಬಡವರೆಂದು ಕರೆಯುತ್ತಾರೋ ನಾನು ಅವರನ್ನು ನೋಡಿದ್ದೇನೆ. ಅವರಿಗಾಗಿ ಸಹಾನುಭೂತಿಯನ್ನು ತೋರುವವರು ಸ್ವಲ್ಪ ಮಂದಿ ಇರುವರು. ಆದರೆ ಭರತಖಂಡದಲ್ಲಿ ಎಷ್ಟು ವ್ಯತ್ಯಾಸ! ಅನೇಕ ಶತಮಾನಗಳಿಂದ ಬಡತನ ಮತ್ತು ಅಜ್ಞಾನದಲ್ಲಿ ತೊಳಲುತ್ತಿರುವ ಇಪ್ಪತ್ತುಕೋಟಿ ಭಾರತೀಯರಿಗಾಗಿ ಮರುಗುವವರು ಯಾರು? ಅವರ ಬಂಧನ ವಿಮೋಚನೆಗೆ ಮಾರ್ಗವಿದೆಯೇ? ಅವರಿಗಾಗಿ ಯಾರ ಎದೆ ಕರಗುವುದು? ಜ್ಞಾನಾರ್ಜನೆಗೆ ಅವಕಾಶವಿಲ್ಲ ಅವರಿಗೆ. ವಿದ್ಯೆಯ ಪ್ರಕಾಶವಿಲ್ಲ ಅವರಿಗೆ. ಯಾರು ಜ್ಞಾನವನ್ನು ಕೊಡುವರು? ಈ ನಿರ್ಭಾಗ್ಯರು, ಗತಹರ್ಷರೂ, ನಿನ್ನ ದೇವರಾಗಲಿ. ಅವರ ವಿಚಾರವಾಗಿ ಆಲೋಚನೆಮಾಡು. ಅವರಿಗಾಗಿ ಕೆಲಸಮಾಡು. ಯಾವಾಗಲೂ ಅವರ ಉದ್ಧಾರಕ್ಕಾಗಿ ಪ್ರಾರ್ಥಿಸು. ದೇವರು ನಿನಗೆ ದಾರಿತೋರುವನು. ಬಡವರ ಗೋಳಿಗೆ ಯಾರ ಹೃದಯ ಮರುಗುವುದೋ ಅವನನ್ನು ಮಹಾತ್ಮನೆಂದು ಕರೆಯುತ್ತೇನೆ. ಇಲ್ಲದೇ ಇದ್ದರೆ ಅವನು ದುರಾತ್ಮ. ನಾವೆಲ್ಲರೂ ಅವರ ಹಿತಕ್ಕೋಸುಗವಾಗಿ ಪ್ರಾರ್ಥಿಸುವುದಕ್ಕೆ ಮನಸ್ಸಂಕಲ್ಪ ಮಾಡೋಣ. ನಾವು ಅಪರಿಚಿತರಾಗಿ ಯಾರ ಕರುಣೆಗೂ ಪಾತ್ರರಾಗದೆ, ಯಾರೂ ನಮಗೆ ಮರುಗದೆ, ನಮ್ಮ ಗುರಿಯನ್ನು ಸಾಧಿಸದೆ ಸಾಯಬಹುದು. ಆದರೆ ಒಂದು ಆಲೋಚನೆ ಯಾದರೂ ವ್ಯರ್ಥವಾಗುವುದಿಲ್ಲ. ಇಂದೋ ನಾಳೆಯೋ ಅದು

ಫಲಕಾರಿಯಾಗಿಯೇ ಆಗುತ್ತದೆ. ನನ್ನ ಹೃದಯ ಕರುಣೆಯಿಂದ ತುಂಬಿ ತುಳುಕಾಡುತ್ತಿದೆ. ಹೃದಯದ ಆವೇಗ ವರ್ಣನಾತೀತವಾಗಿದೆ. ನಿನಗೆ ಅದು ಗೊತ್ತಿದೆ. ನೀನು ಅದನ್ನು ಊಹಿಸಬಹುದು. ಎಲ್ಲಿಯವರೆವಿಗೂ ಉಪವಾಸದಲ್ಲಿ ಅಜ್ಞಾನದಲ್ಲಿ ಕೋಟ್ಯಾನುಕೋಟಿ ಭಾರತೀಯರು ಸಾಯುತ್ತಿರುವರೋ, ಅಲ್ಲಿಯವರೆವಿಗೂ, ದೀನರ ದುಡಿತದಿಂದ ಕೃತವಿದ್ಯನಾದ ಪ್ರತಿಯೊಬ್ಬ ಭಾರತೀಯನು ಅವರ ಹಿತದ ಗೋಜನ್ನೇ ಚಿಂತಿಸದೆ ಇರುವನೋ ಅಂತಹ ಪ್ರತಿಯೊಬ್ಬ ಭಾರತೀಯನು ಕುಲಘಾತಕನೆಂದು ಹೇಳುತ್ತೇನೆ. ಇಂದು ವೇಷಭೂಷಣಗಳಿಂದ ಮೆರೆದಾಡುತ್ತಿರುವವರಿಗೆ ಐಶ್ವರ್ಯ ಎಲ್ಲಿಂದ ಬಂದಿತು? ದೀನರನ್ನು, ಅಜ್ಞಾನಿಗಳನ್ನು ಹಿಂಸಿಸಿ, ಶೋಷಿಸಿ ಅವರಿಂದ ಸೆಳೆದುಕೊಂಡಿದ್ದು. ಎಲ್ಲಿಯವರೆವಿಗೂ ಅವರು ಉಪವಾಸದಿಂದ ಸಾಯುತ್ತಿರುವ, ಕಾಡುಮನುಷ್ಯರಿಗೂ ಕಡೆಯಾದ, ಇಪ್ಪತ್ತು ಕೋಟಿ ಮಾನವ ನಿರ್ಭಾಗ್ಯರ ಹಿತವನ್ನು ಲಕ್ಷಿಸರೋ, ಅಲ್ಲಿಯವರೆವಿಗೂ ಕುಲಘಾತಕರವರು. ನನ್ನ ಸಹೋದರನೆ, ನಾವೆಲ್ಲ ಬಡವರು! ಕಾಸಿಲ್ಲದ ಭಿಕಾರಿಗಳು. ಆದರೇನು ಭಗವಂತನ ಕೈಯಲ್ಲಿ ಯಾವಾಗಲೂ ಯಂತ್ರವಾದವರು ನಮ್ಮಂತಹವರು. ದೇವರು ನಿಮ್ಮೆಲ್ಲರನ್ನು ಆಶೀರ್ವದಿಸಲಿ.

ಪ್ರೀತಿಪೂರ್ವಕ,
ವಿವೇಕಾನಂದ.

೪೩

ಅಮೆರಿಕ
೧೮೯೪

"ನಗೃಹಂ ಗೃಹಮುಚ್ಯತೆ ಗೃಹಿಣೀ ಗೃಹಮುಚ್ಯತೆ" ಕಟ್ಟಡವಲ್ಲ, ಗೃಹವನ್ನು ಮಾಡುವುದು. ಗೃಹಿಣಿ ಅದನ್ನು ಮಾಡುವವಳು; ಎಂದು ಸಂಸ್ಕೃತ ಕವಿಯೊಬ್ಬನು ಹೇಳುವನು. ಇದು ಎಷ್ಟು ನಿಜ! ಬಿಸಿಲು ಮಳೆ ಚಳಿಯಿಂದ ನಮ್ಮನ್ನು ಸಂರಕ್ಷಿಸುವ ಮೇಲ್ಛಾವಣಿ

ಎಂದು ಇವರಿಗೆ ಪ್ರೇರೇಪಿಸಿದಾಗಲೂ—ಪ್ರತಿ ದಿನವೂ ಅವರ ಅತ್ಯುತ್ತಮ ಸ್ನೇಹಿತರು "ಇವನೊಬ್ಬ ಅಪರಿಚಿತ ಪರದೇಶಿ, ಭಯಂಕರಶೀಲದವನಿರಬಹುದು" ಇವನಿಗೆ ಸಹಾಯ ಮಾಡಬೇಡಿ ಎಂದು ಹೇಳಿದರೂ ನನ್ನನ್ನು ಕೈಬಿಡಲಿಲ್ಲ. ಅವರು ನನ್ನ ನಡತೆ ಮತ್ತು ಜೀವನವನ್ನು ಹೆಚ್ಚು ಪರೀಕ್ಷಿಸಬಲ್ಲರು. ಶುಭ್ರ ಕನ್ನಡಿಯಲ್ಲಿ ಮಾತ್ರ ಪ್ರತಿಬಿಂಬ ಚೆನ್ನಾಗಿ ಕಾಣುವುದು.

ಎಷ್ಟು ಸುಂದರ ಗೃಹಗಳನ್ನು ನಾನು ನೋಡಿರುವೆನು. ಚಾರಿತ್ರ್ಯ ಶುದ್ಧಿ, ಮಕ್ಕಳ ಮೇಲೆ ಅವರಿಗಿರುವ ಅನುಪಮ ನಿಸ್ವಾರ್ಥಪ್ರೇಮದ ಕಾಯ್ದಿರುವರು; ಎಷ್ಟು ಜನ ಹೆಣ್ಣುಮಕ್ಕಳು, "ಡಿಯಾನ ದೇವಸ್ಥಾನ ಕಳಶದಂತೆ" ಚಾರಿತ್ರ್ಯಶುದ್ಧ ಅವಿವಾಹಿತರು—ಜತೆಗೆ ಅತ್ಯುತ್ತಮ ಸಂಸ್ಕೃತಿ, ವಿದ್ಯೆ, ಆಧ್ಯಾತ್ಮಿಕತೆ! ಆದರೆ ಅಮೆರಿಕಾ ದೇಶದಲ್ಲೆಲ್ಲಾ ರೆಕ್ಕೆಗಳಿಲ್ಲದ ದೇವತೆಗಳೇ ವಾಸಿಸುತ್ತಿರುವರೆ? ಒಳ್ಳೆಯದು ಕೆಟ್ಟದ್ದು ಎಲ್ಲಾ ಕಡೆಯಲ್ಲಿಯೂ ಇರುವುದು. ಇದು ನಿಜ. ದೇಶವನ್ನು ಅಲ್ಲಿರುವ ಪಾಪಿಗಳೆಂದು ಕರೆಯುವ ದುರ್ಬಲರನ್ನು ಮಾತ್ರ ಗಮನಕ್ಕೆ ತೆಗೆದುಕೊಂಡು ಪರೀಕ್ಷಿಸುವುದಲ್ಲ. ಇವು ಹಿಂದುಳಿದ ಕಳೆ. ಅಲ್ಲಿರುವ ಔದಾರ್ಯ ಹೃದಯವನ್ನು, ಶುದ್ಧ ಜೀವಿಗಳನ್ನು, ಯೋಗ್ಯರನ್ನು ಸ್ಪಷ್ಟವಾಗಿ ವೇಗದಿಂದ ಹರಿಯುತ್ತಿರುವ ಜನಾಂಗದ ಜೀವನ ಪ್ರವಾಹವನ್ನು, ಗಮನಕ್ಕೆ ತೆಗೆದುಕೊಳ್ಳಬೇಕು.

ಒಂದು ಜೀವನ ಮರ ಮತ್ತು ಅದರ ಹಣ್ಣಿನ ರುಚಿಯನ್ನು, ನೆಲದ ಮೇಲೆ ಕೊಳೆತುಹೋಗಿ ಬೇಕಾದಷ್ಟು ಬಿದ್ದಿರುವ ಮಾಗದ ಹುಳು ತಿಂದ ಹಣ್ಣಿನ ರುಚಿಯಿಂದ ಪರೀಕ್ಷಿಸುವಿರಾ? ಚೆನ್ನಾಗಿ ಮಾಗಿದ ಒಂದು ಹಣ್ಣು, ಅದರ ಉದ್ದೇಶವನ್ನು, ಶಕ್ತಿಯನ್ನು, ಸಾಧ್ಯತೆಯನ್ನು ತೋರುವುದೇ ಹೊರತು ಬಲಿಯದ ಕೆಳಗೆ ಬಿದ್ದ ನೂರಾರು ಕಾಯಿಗಳಲ್ಲ.

ಆಧುನಿಕ ಅಮೆರಿಕಾ ನಾರಿಯರ ಬುದ್ಧಿವೈಶಾಲ್ಯವನ್ನು ಔದಾರ್ಯವನ್ನು ನಾನು ಮೆಚ್ಚುತ್ತೇನೆ. ಈ ದೇಶದಲ್ಲಿ ವಿಶಾಲಬುದ್ಧಿಯ ಔದಾರ್ಯ ಪುರುಷರನ್ನು ನೋಡಿರುವೆನು. ಕೆಲವರನ್ನು ಅತಿ ಸಂಕುಚಿತ ಚರ್ಚಿನಲ್ಲಿಯೂ ನೋಡಿರುವೆನು. ಆದರೆ ಪುರುಷರಿಗೂ ಸ್ತ್ರೀಯರಿಗೂ

ವ್ಯತ್ಯಾಸ ಇಲ್ಲಿದೆ; ಪುರುಷರು ಆಧ್ಯಾತ್ಮಿಕತೆ, ಧರ್ಮ ಇವನ್ನು ತೊರೆದು ವಿಶಾಲವಾಗುವ ಭಯವಿದೆ. ಆದರೆ ಸ್ತ್ರೀಯರು ತಮ್ಮ ಧರ್ಮವನ್ನು ಸ್ವಲ್ಪವೂ ಕಳೆದುಕೊಳ್ಳದೆ, ಎಲ್ಲಾ ಕಡೆಯಲ್ಲಿಯೂ ಇರುವ ಒಳ್ಳೆಯದನ್ನು ಸಹಾನುಭೂತಿಯಿಂದ ನೋಡಿ ವಿಶಾಲವಾಗುವರು. ತರ್ಕ ಸಹಾಯವಿಲ್ಲದೆ ಇದನ್ನು ನಡೆಸಬೇಕು. ಬಿಡುವುದಲ್ಲ, ವಿಸ್ತಾರವಾಗಬೇಕು. ಸಂಕುಚಿತ ವಾಗುವುದಲ್ಲವೆಂಬುವುದನ್ನು ಗ್ರಹಿಸುತ್ತಾರೆ. ಪ್ರತಿಯೊಂದು ವಿಷಯ ದಲ್ಲಿಯೂ ವಿಧಿವಿಹಿತವಾದ, ನಿಷೇಧವಿಲ್ಲದುದನ್ನು ಕಾಣಿಸಬೇಕು. ಈ ಶೇಖರಿಸಿದ ಮೊತ್ತವೇ ನಮ್ಮ ಆಕ್ರಮಣಕಾರಕ ಶಕ್ತಿ. ಇದು ಪ್ರಪಂಚ ದಲ್ಲಿರುವ ಅಭಾವವನ್ನು, ನಾಶವನ್ನು, ಎದುರಿಸಿ ನಿಲ್ಲಬಲ್ಲುದು ಎಂಬುದನ್ನು ದಿನ ಕಳೆದಂತೆ ತಿಳಿಯುತ್ತಿರುವರು. ಚಿಕಾಗೊ ವಸ್ತುಪ್ರದರ್ಶನಕೂಟ ಎಷ್ಟು ಅದ್ಭುತ ಜಯಪ್ರದವಾಯಿತು! ಪ್ರಪಂಚದ ಮೂಲೆ ಮೂಲೆ ಯಿಂದ ಬಂದ ಜನಾಂಗ ತನ್ನ ತಮ್ಮ ಧರ್ಮವನ್ನು ವ್ಯಕ್ತಪಡಿಸಿದ ಆ ವಿಶ್ವಧರ್ಮ ಸಮ್ಮೇಳನ ಎಂತಹ ಪ್ರಸಂಗ! ನಾನೂ ಕೂಡ ಮಿ|| ಬರೋಸ್ ಮತ್ತು ಮಿ|| ಬೋನಿ ಅವರ ದಯೆಯಿಂದ ನನ್ನ ಅಭಿ ಪ್ರಾಯವನ್ನು ವ್ಯಕ್ತಪಡಿಸಲು ಸಾಧ್ಯವಾಯಿತು? ಬೋನಿ ಒಬ್ಬ ಅದ್ಭುತ ವ್ಯಕ್ತಿ! ಎಂತಹ ಒಂದು ಅದ್ಭುತ ಕಾರ್ಯವನ್ನು ಆಲೋಚಿಸಿ, ನಿಯೋಜಿಸಿ, ಜಯಪ್ರದವಾಗಿ ಕಾರ್ಯತಃ ನಡೆಸಿದ ಆ ಶಕ್ತಿಯನ್ನು ಆಲೋಚಿಸಿ ನೋಡು! ಅವನು ಪಾದ್ರಿಯಲ್ಲ ಒಬ್ಬ ವಕೀಲ. ಎಲ್ಲಾ ಮತದ ಸಂಸ್ಥೆಯ ಮೇಲೆ ಅಧಿಕಾರವನ್ನು ವಹಿಸುತ್ತಿದ್ದನು. ಮೃದು ಮಧುರ, ವಿದ್ಯಾವಂತ ಸಹನಶೀಲ ಬೋನಿಯ ಕಣ್ಣುಗಳಲ್ಲಿ ಅವನಾತ್ಮ ವೇ ಮಾತನಾಡುತ್ತಿತ್ತು......ನಿನ್ನ ವಿವೇಕಾನಂದ.

೯೩

ಅಮೆರಿಕ
೧೮೯೪

ಪ್ರಿಯ

ನಿನ್ನ ಪತ್ರದಿಂದ ತಿಳಿದು ಬಂದ ವಿಷಯಗಳಿಗೆಲ್ಲ ನಿನಗೆ ವಂದನೆ ಗಳು........ನಾನು ಚಿಕಾಗೊ ನಗರವನ್ನು ಬಿಟ್ಟು ಆರು ತಿಂಗಳಾಯಿತು.

ಅಲ್ಲಿಗೆ ಹಿಂತಿರುಗಿ ಹೋಗುವುದಕ್ಕೆ ಇನ್ನೂ ವಿರಾಮವಾಗಿಲ್ಲ. ನೀನು ನನ್ನ ವಿಷಯದಲ್ಲಿ ಬಹಳ ತೊಂದರೆ ತೆಗೆದುಕೊಂಡಿರುವೆ. ಇದಕ್ಕೆ ನಾನು ನಿನಗೆ ಹೇಗೆ ಕೃತಜ್ಞತೆಯನ್ನು ತೋರಬೇಕೊ ನಾನರಿಯೆ. ಕೆಲಸ ಮಾಡುವುದರಲ್ಲಿ ನೀನು ಬಹಳ ಉತ್ಸಾಹವನ್ನು ತೋರಿರುವೆ. ಹೌದು! ಶ್ರೀರಾಮಕೃಷ್ಣರ ವಚನ ಹೇಗೆ ಅಸತ್ಯವಾಗುವುದು. ನಿನ್ನಲ್ಲಿ ಒಳ್ಳೆಯ ಆಶಯಗಳಿವೆ—ಅವನ ವಿಷಯವಾಗಿ ನಾನು ಆಗಲೆ ಬರೆದಿರುವೆನು ಶ್ರೀರಾಮಕೃಷ್ಣರ ದಯೆಯಿಂದ ಯಾವುದೂ ಪತ್ತೆಯಾಗದೆ ಇರುವುದಿಲ್ಲ ಅವನು ಯಾವುದಾದರೂ ಒಂದು ಹೊಸ ಪಂಗಡವನ್ನೋ ಮತ್ತೆ ಅಥವಾ ಸಂಪ್ರದಾಯವ ಸ್ಥಾಪಿಸಲಿ. ಅದರಿಂದ ತೊಂದರೆಯೇನು? "ಶಿವಾ ವಃ ಸನ್ತು ಪನ್ಥಾನಃ" ನಿನ್ನ ಮಾರ್ಗದಲ್ಲಿ ಒಳ್ಳೆಯದಾಗಲಿ.

ಎರಡನೆಯದಾಗಿ ನಿನ್ನ ಪತ್ರದ ಅಭಿಪ್ರಾಯ ನನಗೆ ಸರಿಯಾಗಿ ಗೊತ್ತಾಗಲಿಲ್ಲ. ನನಗೋಸ್ಕರ ಒಂದು ಮಠವನ್ನು ಸ್ಥಾಪಿಸಲು ನಾನು ಸ್ವಲ್ಪ ಹಣವನ್ನು ಸಂಪಾದಿಸುತ್ತೇನೆ. ಜನರು ಇದಕ್ಕೋಸ್ಕರವಾಗಿ ನನ್ನನ್ನು ದೂರಿದರೆ ಇದರಿಂದ ಯಾವ ವಿಧದಲ್ಲಿಯೂ ಏನೂ ಪರಿಣಾಮ ವಾಗುವುದಿಲ್ಲ. ಬಹಳ ಉತ್ತಮವಾದ ಜೀವನಕ್ಕೆ ನಿನ್ನ ಜೀವನವನ್ನು ಅರ್ಪಿಸು. ಅತ್ತಿತ್ತ ಚಂಚಲನಾಗಬೇಡ. ಇದರಿಂದ ನಿನಗೆ ಏನೂ ತೊಂದರೆಯಾಗುವುದಿಲ್ಲ. ನಿಮ್ಮಲ್ಲಿ ಅನ್ಯೋನ್ಯ ಪ್ರೇಮವಿರಲಿ. ಜನರ ನಿಂದೆಗೆ ಮನಗೊಡದೆ ಇದ್ದರೆ ಸಾಕು. ತಾ—ಬಾಬುವಿಗೆ ಕೆಲಸದಲ್ಲಿ ಬಹಳ ಪ್ರೀತಿ ಇದೆ. ಅವನು ಒಳ್ಳೆಯ ಮನುಷ್ಯ. ನನ್ನ ವಿಶೇಷ ಪ್ರೀತಿಯನ್ನು ಅವನಿಗೆ ತಿಳಿಸು. ಗುರುದೇವನ ದಯೆಯಿಂದ ನಿಮ್ಮಗಳಲ್ಲಿ ಎಲ್ಲಿಯವರೆವಿಗೂ ಅನೈಕ್ಯತೆ ಬರುವುದಿಲ್ಲವೋ, ಅಲ್ಲಿಯವರೆವಿಗೂ ನೀವು ನಿಶ್ಚಿಂತರಾಗಿರಬಹುದು. "ರಣೇ ವನೇ ಪರ್ವತಮಸ್ತಕೇವಾ" ಯುದ್ಧದಲ್ಲಿ, ಅರಣ್ಯದಲ್ಲಿ, ಪರ್ವತದ ತುದಿಯಲ್ಲಿ ಎಲ್ಲಿ ಬೇಕಾದರೂ ಇರಬಹುದು.

"ಶ್ರೇಯಾಂಸಿ ಬಹುವಿಘ್ನಾನಿ" ಎಲ್ಲ ಒಳ್ಳೆಯ ಕೆಲಸಗಳಿಗೂ ವಿಘ್ನಗಳು ಬಹಳ. ಪ್ರಪಂಚದ ಸ್ವಭಾವವೇ ಹೀಗೆ. ಚಿತ್ತಸ್ಥೈರ್ಯವಿರಲಿ. ಕೆಲಸಕ್ಕೆ ಬಾರದ ಮನುಷ್ಯರು ನಿಂದಿಸುವುದಕ್ಕೆ ಸ್ವಲ್ಪವೂ ಗಮನಕೊಡ

ಬೇಡ. ನಿರ್ಭೀಕರಾಗಿ! ನಿರ್ಭೀಕರಾಗಿ! ನಿರ್ಭೀಕರಾಗಿ! ನಾನು— ಅವನಿಗೆ ಆಗಲೇ ವಿಷದವಾಗಿ ಕಾಗದ ಬರೆದಿರುವೆನು. ವೃತ್ತಪತ್ರಿಕೆಗಳು ಮತ್ತು ಅವುಗಳ ಲೇಖನವನ್ನು ಇನ್ನು ಮೇಲೆ ಕಳುಹಿಸಬೇಡ. "ಯಾತನನ್ನು ಸ್ವರ್ಗಕ್ಕೆ ಕರೆದುಕೊಂಡು ಹೋದರೂ ಅದು ಅಲ್ಲಿ ಮಾಡುವುದು ಅದೇ ಕೆಲಸವನ್ನು," ಎಂಬ ಬಂಗಾಳಿಯ ಗಾದೆಯಂತೆ, ಇಂಡಿಯಾ ದೇಶದಲ್ಲಿ ನಾನು ಕಷ್ಟಪಡುತಿದ್ದಂತೆ ಇಲ್ಲಿಯೂ ಕಷ್ಟಪಡುತ್ತಿರುವೆನು. ವ್ಯತ್ಯಾಸವೇನೆಂದರೆ ಮತ್ತೊಬ್ಬರ ಕಷ್ಟದ ಭಾರವೂ ನನ್ನ ತಲೆಯಮೇಲೆ ಬಿದ್ದಿದೆ! ಅವನ ಪುಸ್ತಕಗಳಿಗೆ ಇಲ್ಲಿ ಗಿರಾಕಿಯನ್ನು ಹೇಗೆ ಒದಗಿಸುವುದು. ಇಲ್ಲಿಸಾವಿರಾರು ಜನರು ಮನ್ನ? ನಾನೊಬ್ಬ ಸಾಧಾರಣ ಮನುಷ್ಯ. ವೃತ್ತಪತ್ರಿಕೆ ಮುಂತಾದುವು ನನ್ನ ಮೇಲೆ ಏನೇ ಬರೆಯಲಿ ಅದೆಲ್ಲವನ್ನು ಅಗ್ನಿದೇವನಿಗೆ ನೈವೇದ್ಯ ಮಾಡುವೆನು. ನೀನೂ ಹೀಗೆಯೇ ಮಾಡು. ಅದೇ ಸರಿಯಾದ ರೀತಿ.

ಶ್ರೀ ಗುರುಮಹಾರಾಜರ ಕೆಲಸಕ್ಕೆ ಸ್ವಲ್ಪ ಸಾರ್ವಜನಿಕ ಪ್ರದರ್ಶನ ಮೊದಲು ಅವಶ್ಯಕವಾಗಿತ್ತು. ಅದು ಆಯಿತು. ಇದು ಒಳ್ಳೆಯದೆ. ಈಗ ಜನರು ನನ್ನ ವಿಚಾರವಾಗಿ ಏನು ಗೊಣಗುಟ್ಟುತ್ತಿರುವರು ಎಂಬುದಕ್ಕೆ ಗಮನ ಕೊಡಬೇಕಾಗಿಲ್ಲ. ಅವರು ಹೇಳುವಂತೆ ನಾನು ಹಣದ ರಾಶಿಯನ್ನೇ ಮಾಡುತ್ತಿರಲಿ ಅಥವಾ ಇನ್ನು ಏನನ್ನೇ ಮಾಡಲಿ, ಮೂರ್ಖರ ಅಭಿಮತಗಳು, ದೇವರ ಕೆಲಸಕ್ಕೆ ಅಡ್ಡಿ ಬರುವುವೆ? ನನ್ನ ಪ್ರಿಯ ಸಹೋದರನೆ! ನೀನಿನ್ನೂ ಹುಡುಗ. ಆದರೆ ನನ್ನ ಕೂದಲಾಗಲೇ ನರೆಯುತ್ತಿದೆ. ಅಂತಹ ಮೂರ್ಖ ಮನುಷ್ಯರ ಅಭಿಮತಕ್ಕೆ ಮತ್ತು ಮಾತುಗಳಿಗೆ ಏನು ಬೆಲೆ ಕೊಡುತ್ತೇನೆಂಬುದನ್ನು ನೀನು ಇದರಿಂದಲೇ ಊಹಿಸಬಹುದು. ಎಲ್ಲಿಯವರೆವಿಗೂ ನೀನು ಸೊಂಟ ಕಟ್ಟಿ ನನ್ನ ಹಿಂದೆ ಇರುವೆಯೋ, ಅಲ್ಲಿಯವರೆವಿಗೂ ಪ್ರಪಂಚವೇ ನಮಗೆ ವಿರೋಧವಾಗಿ ನಿಂತರೂ ನೀನು ಅಂಜಬೇಕಾಗಿಲ್ಲ. ನಾನು ಬಹಳ ಉದಾತ್ತವಾದ ಭಾವವನ್ನು ಮಾತ್ರ ಅನುಸರಿಸಬೇಕೆಂಬುದು ನನಗೆ ಗೊತ್ತಿದೆ. ನಿನಗಲ್ಲದೆ ಬೇರೆಯವರಿಗೆ ನಾನು ಬರೆಯಬೇಕಾಗಿಲ್ಲವೆಂದು ತಿಳಿಯುತ್ತೇನೆ ಅದು ಹಾಗಿರಲಿ.—ಅವನು ಈಗ ಎಲ್ಲಿರುವನು.

ಅವನನ್ನು ಹುಡುಕಿ ಪ್ರೀತಿಯಿಂದ ಮಠಕ್ಕೆ ಕರೆದುಕೊಂಡು ಬಾ. ಅವನು ಬಹಳ ನಿಷ್ಕಪಟಿ ಮತ್ತು ವಿದ್ಯಾವಂತ. ಮನೆಯನ್ನು ಕಟ್ಟುವುದಕ್ಕೆ ಎರಡು ಸ್ಥಳವನ್ನು ಪಡೆಯಲು ನಿನ್ನ ಕೈಲಾದ ಪ್ರಯತ್ನವನ್ನೆಲ್ಲ ಮಾಡು. ಜನರು ಅವರ ಮನಸ್ಸಿಗೆ ಬಂದಂತೆ ಹರಟಿಕೊಳ್ಳಲಿ. ವೃತ್ತಪತ್ರಿಕೆ ನನ್ನ ಪರವಾಗಿ ಅಥವಾ ವಿರೋಧವಾಗಿ ಏನಾದರೂ ಬರೆಯಲಿ. ಅದನ್ನು ಸ್ವಲ್ಪವೂ ಗಮನಿಸಬೇಡ. ನನ್ನ ಪ್ರಿಯ ಸಹೋದರನೆ! ಕಂತೆಗಟ್ಟಲೆ ವೃತ್ತಪತ್ರಿಕೆಗಳನ್ನು ನನಗೆ ಮತ್ತೊಮ್ಮೆ ಕಳುಹಿಸಬೇಡವೆಂದು ಬಾರಿ, ಬಾರಿ, ಕೇಳಿಕೊಳ್ಳುತ್ತೇನೆ. ವಿಶ್ರಾಂತಿಯ ಸುದ್ದಿಯನ್ನು ನೀನು ಈಗ ಹೇಗೆ ಎತ್ತಬಲ್ಲೆ. ಈ ದೇಹವನ್ನು ತೊರೆದಮೇಲೆ ಮಾತ್ರ ನಮಗೆ ಸ್ವಲ್ಪ ವಿರಾಮ ಸಿಕ್ಕುವುದು. ಸಹೋದರನೆ! ಒಂದುಸಾರಿಯಾದರೂ ಶ್ರೀ ರಾಮಕೃಷ್ಣರ ಉತ್ಸವಕ್ಕೆ ಅಣಿಮಾಡಿಸು. ಸುತ್ತುಮುತ್ತಲಿರುವ ಊರೆಲ್ಲ ಉತ್ಸಾಹದಿಂದ ಪೂರಿತವಾಗಲಿ. ಶಹಬಾಸ್, ಬಹಳ ಒಳ್ಳೆಯದು! ಪ್ರೀತಿ ಎಂಬ ಮಹಾ ಪ್ರವಾಹದ ಎದುರಿಗೆ ಇಂದು ಅಣಕಿಸುವವರೆಲ್ಲ ಕೊಚ್ಚಿಕೊಂಡು ಹೋಗುವರು. ನೀವು ಆನೆಗಳಂತೆ; ಇರುವೆಯ ಕಡಿತಕ್ಕೆ ಅಂಜುವಿರೇನು?

ನೀನು ಕಳುಹಿಸಿದ ಮಾನಪತ್ರ ತಲುಪಿತು. ಅದಕ್ಕೆ ಉತ್ತರವನ್ನು ಆಗಲೇ ಬರೆದು ಕಳುಹಿಸಿದೆನು.

ಕಣ್ಣುಗಳೆರಡು, ಕಿವಿಗಳೆರಡು, ಆದರೆ ನಾಲಿಗೆ ಒಂದೇ ಎಂಬುದನ್ನು ನೆನಪಿನಲ್ಲಿಡು! ನಿರ್ಲಕ್ಷ್ಯ! ನಿರ್ಲಕ್ಷ್ಯ! ನಿರ್ಲಕ್ಷ್ಯ! "ನ ಹಿ ಕಲ್ಯಾಣ ಕೃತ್ಕಶ್ಚಿತ್ ದುರ್ಗತಿಂ ತಾತ ಗಚ್ಛತಿ" ನನ್ನ ಪ್ರಿಯನೇ ಒಳ್ಳೆಯದನ್ನು ಮಾಡುವವನು ಎಂದಿಗೂ ಕೇಡಿಗೆ ಒಳಗಾಗುವುದಿಲ್ಲ. ಏನು! ಅಂಜಿಕೆ! ಸಹೋದರನೆ, ಯಾರಿಗೆ ನೀನು ಅಂಜುವುದು. ಇಲ್ಲಿ ಪಾದ್ರಿಗಳು ಮತ್ತು ಅವರ ಬಳಗಕ್ಕೆ ಸೇರಿದವರೆಲ್ಲ ಅವರಿಗೆ ಸಾಕಾಗುವ ತನಕ ಕೂಗಾಡಿ ತೆಪ್ಪಗಿರುವರು. ಪ್ರಪಂಚವೆಲ್ಲ ಮಾಡುವುದೇ ಹೀಗೆ:

ನಿಂದಂತು ನೀತಿನಿಪುಣಾ ಯದಿ ವಾ ಸ್ತುವಂತು ।
ಲಕ್ಷ್ಮೀಃ ಸಮಾವಿಶತು ಗಚ್ಛತು ವಾ ಯಥೇಷ್ಟಮ್ ।
ಅದ್ಯೈವ ವಾ ಮರಣಮಸ್ತು ಶತಾನ್ತರೇ ವಾ ।
ನ್ಯಾಯಾತ್ಪಥಃ ಪ್ರವಿಚಲಂತಿ ಪದಂ ನ ಧೀರಾಃ ।

ನೀತಿ ನಿಪುಣರು ನಿಂದಿಸಲಿ ಹೊಗಳಲಿ, ಲಕ್ಷ್ಮಿ ಬರಲಿ ಹೋಗಲಿ, ಸಾವು ಇಂದೇ ಬರಲಿ ಅಥವಾ ನೂರು ವರುಷಗಳಾದ ಮೇಲೆ ಬರಲಿ, ಸ್ಥಿರ ಬುದ್ಧಿಯುಳ್ಳವರು ಎಂದಿಗೂ ನ್ಯಾಯ ಮಾರ್ಗದಿಂದ ಹಿಂತಿರುಗುವುದಿಲ್ಲ.

ನಾನಾ ಸ್ತ್ರೀಯರೊಂದಿಗೆ ನೀನು ಬೆರೆಯಬೇಕಾಗಿಲ್ಲ. ಯಾವ ಸಹಾಯಕ್ಕೂ ಅವರನ್ನು ಬೇಡಬೇಕಾಗಿಲ್ಲ. ಭಗವಂತನು ಎಲ್ಲವನ್ನೂ ಒದಗಿಸುತ್ತಿರುವನು. ಮುಂದೆಯೂ ಹೀಗೆಯೇ ಮಾಡುವನು. ನನ್ನ ಸಹೋದರನೆ! ಅಂಜಿಕೆ ಏತಕ್ಕೆ? ಎಲ್ಲಾ ಮಹಾ ಕಾರ್ಯಗಳೂ ಕೂಡ ಅನಂತ ಆತಂಕಗಳನ್ನು ದಾಟಿ ಜಯ ಹೊಂದಿದವು. "ಹೇ ವೀರ ಕುರು ಪೌರುಷಮಾತ್ಮನಃ ಉಪೇಕ್ಷಿತವ್ಯಾಃ ಜನಾಃ ಸುಕೃಪಣಾಃ ಕಾಮಕಾಂಚನವಶಗಾಃ" ಹೇ ವೀರ! ನಿನ್ನ ಆತ್ಮ ಪೌರುಷವನ್ನು ವ್ಯಕ್ತಪಡಿಸು. ಕಾಮಕಾಂಚನಪರರಾದ ಜೀವಿಗಳು ನಿಕೃಷ್ಟ ದೃಷ್ಟಿಗೆ ಮಾತ್ರ ಅರ್ಹರು. ಈಗ ನಾನು ಈ ದೇಶದಲ್ಲಿ ಬೇರೂರಿರುವೆನು. ಆದಕಾರಣ ಇನ್ನು ಯಾವ ಸಹಾಯವೂ ನಿನ್ನಿಂದ ಬೇಕಾಗಿಲ್ಲ. ನನಗೆ ಸಹಾಯ ಮಾಡುವುದಕ್ಕೆ ನೀವು ತೋರಿದ ಸೋದರ ಪ್ರೇಮ, ಉತ್ಸಾಹ, ಪೌರುಷವನ್ನೇ, ಭಗವಂತನ ಸೇವೆಯಲ್ಲಿ ತೋರಿಸಿ ಎಂಬುದೇ ನನ್ನ ಪ್ರಾರ್ಥನೆ. ನಿನ್ನ ಮನಸ್ಸಿನ ಅಭಿಪ್ರಾಯಗಳನ್ನು, ಅದರಿಂದ ಉಪಯೋಗವಾಗುತ್ತದೆ ಎಂದು ತೋರುವ ತನಕ ವ್ಯಕ್ತಪಡಿಸಬೇಡ. ನಿನ್ನ ಪರಮ ಶತ್ರುವಿಗೂ ಕೂಡ ಹಿತಕರವಾದ ಗಂಭೀರವಾದ ಭಾಷೆಯನ್ನು ಉಪಯೋಗಿಸು. ಕೀರ್ತಿ ಐಶ್ವರ್ಯ ಭೋಗಗಳಿಗೆ ಆಶಿಸುವುದು ಪ್ರತಿಯೊಬ್ಬ ಮಾನವನಿಗೂ ಸಹಜ. ಪ್ರಿಯ ಸಹೋದರನೆ, ಇದರಿಂದ ಇಹ ಮತ್ತು ಪರಗಳೆರಡಕ್ಕೂ ಅನುಕೂಲವಾದರೆ ಜನರೆಲ್ಲ ಏತಕ್ಕೆ ಇಷ್ಟೊಂದು ಸಡಗರವನ್ನು ತೋರಬೇಕು! ಮಹಾತ್ಮನೊಬ್ಬನು ಮಾತ್ರ ಪರರಲ್ಲಿಯೂ ಎಳ್ಳಷ್ಟು ಒಳ್ಳೆಯ ಗುಣವನ್ನು ಒಂದು ಪರ್ವತವನ್ನಾಗಿ ಮಾಡಿ, ಜಗದ್ಧಿತಕ್ಕಲ್ಲದೆ ಮತ್ಯಾವ ಆಸೆಗೂ ವಶವಾಗದೆ ಕರ್ತವ್ಯವನ್ನು ಮಾಡಬಲ್ಲ. ಆದುದರಿಂದ ಯಾರ ಬುದ್ಧಿಯು ಅಜ್ಞಾನದಲ್ಲಿ ಹೋಗುತ್ತಿದೆಯೋ, ಅನಾತ್ಮವೇ ಸ್ವತ್ವವೆಂದು ಯಾರು ತಿಳಿದುಕೊಂಡಿರುವರೋ, ಅಂತಹ ಮೂರ್ಖರು ತಮ್ಮ ಆಟವನ್ನು ಆಡಲಿ. ಇದು

ಅಸಾಧ್ಯವೆಂದು ತೋರಿದಾಗ ಅವರು ತಮ್ಮಷ್ಟಕ್ಕೆ ತಾವೇ ಬಿಟ್ಟು ಓಡುವರು. ಚಂದ್ರನನ್ನು ಅವರು ಉಗುಳಲು ಯತ್ನಿಸಲಿ. ಅದು ಅವರ ಮುಖದ ಮೇಲೆಯೇ ಬೀಳುವುದು. "ಶುಭಂ ಭವತು ತೇಷಾಂ" ಅವರಿಗೆ ಶುಭವಾಗಲಿ. ಅವರಲ್ಲಿಯಾದರೂ ಸ್ವಲ್ಪ ಸತ್ವವಿರುವ ವಸ್ತುವಿದ್ದರೆ ಅವರ ಪುರೋಭಿವೃದ್ಧಿಯನ್ನು ತಡೆಯುವರು ಯಾರು? ಅದು ಕೇವಲ ಅಸೂಯೆಯಿಂದ ಪ್ರೇರಿತವಾದ ಬರಿ ಹೂಟಿಯಾದರೆ ಎಲ್ಲ ವ್ಯರ್ಥವಾಗುವುದು. ಹ—ಜಪ ಮಾಲೆಗಳನ್ನು ಕಳುಹಿಸಿರುವೆನು. ಇದೇನೋ ಒಳ್ಳೆಯದೆ. ನಮ್ಮ ದೇಶದಲ್ಲಿ ಯಾವ ಧರ್ಮ ಪ್ರಚಾರದಲ್ಲಿದೆಯೋ ಅಂತಹ ಧರ್ಮಕ್ಕೆ ಇಲ್ಲಿ ಅವಕಾಶವಿಲ್ಲ ಎಂಬುದನ್ನು ನೀನು ತಿಳಿಯಬೇಕು. ಜನರ ಅಭಿರುಚಿಗೆ ತಕ್ಕಂತೆ ನೀನು ಅನುಸರಿಸಬೇಕು. ಅವರನ್ನು ನೀವೆಲ್ಲರೂ ಹಿಂದೂಗಳಾಗಿ ಎಂದರೆ, ದೂರ ಸರಿದು ನಮ್ಮನ್ನು ದ್ವೇಷಿಸುವರು. ನಾವು ಕ್ರೈಸ್ತ ಪಾದ್ರಿಗಳಿಗೆ ಮಾಡಿದಂತೆಯೇ. ಹಿಂದೂ ಧರ್ಮದಲ್ಲಿ ಕೆಲವು ಅಭಿಪ್ರಾಯಗಳನ್ನು ಅವರು ಮೆಚ್ಚುವರು ಅಷ್ಟೆ. ಅದಕ್ಕಿಂತ ಹೆಚ್ಚು ಏನೂ ಇಲ್ಲ. ಅದನ್ನು ನೀನು ತಿಳಿದುಕೊಳ್ಳಬೇಕು. ಧರ್ಮ ಮುಂತಾದ ವಿಷಯಗಳಲ್ಲಿ ಮುಕ್ಕಾಲುಪಾಲು ಪುರುಷರಿಗೆ ಯಾವ ಉತ್ಸಾಹವೂ ಇಲ್ಲ. ಸ್ತ್ರೀಯರಿಗೆ ಸ್ವಲ್ಪ ಇದರಲ್ಲಿ ಅಭಿರುಚಿ ಇರುವುದು; ಅಷ್ಟೆ. ಆದರೆ ಅದನ್ನು ಮಿತಿಮೀರಿ ಕೆದಕಬಾರದು! ಕೆಲವು ಸಾವಿರ ಜನರಿಗೆ ಅದ್ವೈತ ಸಿದ್ಧಾಂತದಲ್ಲಿ ನಂಬಿಕೆ ಇದೆ. ಆದರೆ ಅವರಿಗೆ ತಂತ್ರ ಮಂತ್ರ, ಜಾತಿ, ಸ್ತ್ರೀಯರು, ಇವರ ವಿಷಯವಾಗಿ ಮಾತನಾಡಿದರೆ ಅವರು ಲಕ್ಷಿಸುವುದಿಲ್ಲ. ಎಲ್ಲಾ ನಿಧಾನವಾಗಿ, ಸ್ವಲ್ಪ ಸ್ವಲ್ಪವಾಗಿ ಮುಂದುವರಿಯುವುದು. ತಾಳ್ಮೆ, ಶ್ರದ್ಧೆ, ದೃಢತೆಗಳಿರಲಿ......ನಿನ್ನ ವಿವೇಕಾನಂದ.

೪೪

ಅಮೆರಿಕ
೧೮೯೪

ಪ್ರಿಯ,

ಈಗ ತಾನೆ ನಿನ್ನ ಪತ್ರ ತಲುಪಿತು. ಬಹುಶಃ ಇಷ್ಟು ಹೊತ್ತಿಗೆ ನನ್ನ ಕಾಗದಗಳು ಸೇರಿ, ಇನ್ನುಮೇಲೆ ಅಮೆರಿಕಾ ದೇಶಕ್ಕೆ ನನಗೋ

ಸುಗವಾಗಿ ಏನನ್ನು ಕಳುಹಿಸುವ ಅವಶ್ಯಕತೆ ಇಲ್ಲವೆಂಬ ಅಭಿಪ್ರಾಯ ಗೊತ್ತಾಗಿರಬಹುದು. ಯಾವುದಾದರೂ ಅತಿಯಾದರೆ ಕೆಟ್ಟದ್ದು. ವೃತ್ತ ಪತ್ರಿಕೆಗಳ ಶ್ಲಾಘನೆಗಳ ಮೂಲಕ ನಾನೇನೋ ಪ್ರಖ್ಯಾತನಾಗಿರುವುದು ನಿಜ. ಆದರೆ ಅದರ ಪರಿಣಾಮ ಇಲ್ಲಿಗಿಂತ ಇಂಡಿಯಾ ದೇಶದಲ್ಲಿ ಹೆಚ್ಚು. ಯಾವಾಗಲೂ ಹೊಗಳುತ್ತಿದ್ದರೆ ಅದರಿಂದ ಒಂದು ವಿಧವಾದ ಜಿಗುಪ್ಸೆ ವಿದ್ಯಾವಂತರಲ್ಲಿ ಹುಟ್ಟುವುದು. ಅದಕ್ಕೋಸ್ಕರ ಅಷ್ಟೇನಾಕು. ಈ ಸಭೆ ಗಳ ಮೇಲ್ಪಂಕ್ತಿಯನ್ನು ಅನುಸರಿಸಿ ಭರತಖಂಡದಲ್ಲಿ ವ್ಯವಸ್ಥೆಗೊಳಿಸಿ. ಈ ದೇಶಕ್ಕೆ ಹಣ ಇನ್ನು ಏನನ್ನು ಹೆಚ್ಚಾಗಿ ಕಳುಹಿಸಬೇಕಾಗಿಲ್ಲ. ಶ್ರೀ ಮಾತೆಯವರಿಗೆ (ಶ್ರೀ ಶಾರದಾದೇವಿ) ಒಂದು ಮನೆಯನ್ನು ಮೊದಲು ಕಟ್ಟಬೇಕೆಂದು ನಾನಿಚ್ಛಿಸುತ್ತೇನೆ. ಸ್ತ್ರೀಯರ ಅವಶ್ಯಕತೆ ಹೆಚ್ಚು. ಅದಕ್ಕೋಸ್ಕರವಾಗಿ ಬಹುಮಾನದ ರೂಪಾಯಿಗಳನ್ನು ಕಳುಹಿಸುತ್ತೇನೆ. ಮೊದಲು ಅವರಿಗೆ ಒಂದು ಸ್ಥಳ ಸಿಕ್ಕಿದರೆ ಮತ್ತಾವುದಕ್ಕೂ ನಾನು ಅಷ್ಟು ಯೋಚಿಸುವುದಿಲ್ಲ. ನಾನು ಈ ದೇಶದಿಂದ ಹೋದ ಮೇಲೂ ವರುಷಕ್ಕೆ ಸಾವಿರದ ಆರುನೂರು ರೂಪಾಯಿಗಳು ಬರುವುದೆಂದು ಯೋಚಿಸುತ್ತೇನೆ. ಅದನ್ನು ಸ್ತ್ರೀಯರ ಏಳಿಗೆಗಾಗಿ ಕೊಡುತ್ತೇನೆ. ನಂತರ ಅದು ತಾನೇ ಅಭಿವೃದ್ಧಿಯಾಗುವುದು. ಒಂದು ಸ್ಥಳವನ್ನು ಕೊಂಡುಕೊಳ್ಳುವಂತೆ ನಾನು ಆಗಲೇ ನಿನಗೆ ಕಾಗದ ಬರೆದಿದ್ದೇನೆ.

ನಾನು ಇಷ್ಟು ಹೊತ್ತಿಗೆ ಇಂಡಿಯಾ ದೇಶಕ್ಕೆ ಹಿಂತಿರುಗಿ ಬರಬಹುದಾಗಿತ್ತು. ಆದರೆ ಇಂಡಿಯಾ ದೇಶದಲ್ಲಿ ದುಡ್ಡಿಗೆ ಅಭಾವ. ಸಾವಿರಾರು ಜನ ಶ್ರೀ ರಾಮಕೃಷ್ಣರನ್ನೇನೋ ಗೌರವಿಸುವರು. ಆದರೆ ಯಾರೂ ಒಂದು ಬಿಡಿಗಾಸನ್ನೂ ಕೊಡರು. ಇದು ಇಂಡಿಯ! ನಾನು ಬರುವ ವರೆಗೂ ಹೇಗಾದರೂ ಮಾಡಿ ಸೌಹಾರ್ದದಲ್ಲಿರಿ. ಸಿದ್ಧಾಂತಗಳನ್ನು ಪ್ರಪಂಚ ಲೆಕ್ಕಿಸುವುದಿಲ್ಲ. ಅದಕ್ಕೆ ಬೇಕಾಗಿರುವುದು ಸಿದ್ಧಿ. ತನಗೆ ಯಾವ ಪ್ರೀತಿಯ ಮಿತ್ರನೋ ಅವನು ಎಂತಹ ಅಸಂಬದ್ಧ ಮಾತನಾಡಲಿ ಅದನ್ನು ಸಾವಧಾನದಿಂದ ಕೇಳುವರು. ತನಗೆ ಯಾರನ್ನು ಕಂಡರೆ ಆಗದೋ ಅವರು ಏನುಮಾತನಾಡಿದರೂ ಕೇಳುವುದಿಲ್ಲ. ಇದನ್ನು ಆಲೋಚನೆಮಾಡಿ ಇದರಂತೆ ನಿನ್ನ ನಡವಳಿಕೆಯನ್ನು ಸರಿಪಡಿಸಿಕೊ. ಎಲ್ಲ

ಹೊಂದುವುದು. ನೀನು ಮುಂದಾಳಾಗಬೇಕಾದರೆ, ಆಳಾಗಬೇಕು ಗುಟ್ಟಿರುವುದಲ್ಲಿ. ನಿನ್ನ ಮಾತು ಒರಟಾಗಿದ್ದರೂ ಪ್ರೀತಿ ಪರಿಣಾಮಕಾರಿಯಾಗುವುದು. ಪ್ರೀತಿಯನ್ನು ಮನುಷ್ಯನು ಸ್ವಾಭಾವಿಕವಾಗಿಯೇ ಯಾವ ಭಾಷೆಯ ವೇಷದಲ್ಲಿದ್ದರೂ ಕಂಡುಹಿಡಿಯಬಲ್ಲನು.

ನನ್ನ ಪ್ರಿಯಸಹೋದರನೆ! ಶ್ರೀ ರಾಮಕೃಷ್ಣಪರಮಹಂಸರು ಭಗವಂತನ ಅವತಾರ. ಇದರ ವಿಚಾರವಾಗಿ ನನಗೆ ಲೇಶವೂ ಸಂಶಯವಿಲ್ಲ. ಆದರೆ ಜನರಿಗೆ, ಅವರ ವಿಮರ್ಶನಾ ಶಕ್ತಿಯಿಂದಲೇ ಶ್ರೀ ರಾಮಕೃಷ್ಣರು ಏನನ್ನು ಉಪದೇಶಿಸುತ್ತಿದ್ದರು ಎಂಬುದನ್ನು ಕಂಡುಹಿಡಿಯಲು ಅವಕಾಶಕೊಡಿ. ಇಂತಹ ವಿಷಯಗಳನ್ನೆಲ್ಲ ಅವರ ಮೇಲೆ ಬಲವಂತ ಮಾಡುವುದಕ್ಕೆ ಆಗುವುದಿಲ್ಲ. ಇದೇ ನನ್ನ ಆಕ್ಷೇಪಣೆ.

ಜನರು ತಮ್ಮ ತಮ್ಮ ಅಭಿಪ್ರಾಯಗಳನ್ನು ರೂಪಿಸಿಕೊಳ್ಳಲಿ. ನಾವೇಕೆ ಒತ್ತಬೇಕು. ಶ್ರೀ ರಾಮಕೃಷ್ಣರನ್ನು ಮೊದಲು ನಾವು ತಿಳಿದುಕೊಳ್ಳದೆ, ವೇದ, ವೇದಾಂತ, ಭಾಗವತ ಮತ್ತು ಇತರ ಪುರಾಣಗಳ ಅಂತರಾರ್ಥವನ್ನು ಗ್ರಹಿಸುವುದಕ್ಕೆ ಆಗುವುದಿಲ್ಲ. ಭರತಖಂಡದ ಧಾರ್ಮಿಕ ವಿಚಾರಗಳೆಲ್ಲವನ್ನು ತಿಳಿದುಕೊಳ್ಳುವಂತೆ ಮಾಡುವ ಒಂದು ಅನಂತ ಶಕ್ತಿಯ ಅದ್ಭುತ ಜ್ಯೋತಿ ಅವರ ಜೀವನ. ವೇದ ಮತ್ತು ಅವುಗಳ ಗುರಿಗೆ ಇವರು ಒಂದು ಸಜೀವ ಭಾಷ್ಯ. ಭರತಖಂಡದಲ್ಲಿ ಆದಿಯಿಂದ ಆಧುನಿಕ ಕಾಲದವರೆಗೆ ಅಭಿವೃದ್ಧಿಯಾಗಿ ಬಂದ ಧರ್ಮವನ್ನೆಲ್ಲ ಅವರು ಒಂದು ಜೀವಮಾನದಲ್ಲಿ ಬಾಳಿದರು.

ಭಗವಾನ್ ಶ್ರೀ ಕೃಷ್ಣ ಜನ್ಮತಾಳಿದರೋ ಇಲ್ಲವೋ ಅದೇ ಸಂದೇಹ. ಬುದ್ಧ ಮತ್ತು ಜಿನರು ಏಕಮುಖವಾಗಿದೆ. ಶ್ರೀ ರಾಮಕೃಷ್ಣಪರಮಹಂಸರು ಅತಿನೂತನ ಮತ್ತು ಪರಿಪೂರ್ಣರೀತಿ. ಜ್ಞಾನ, ಭಕ್ತಿ, ಹೃದಯ ವೈಶಾಲ್ಯತೆ, ತ್ಯಾಗ, ಮಾನವ ಸೇವಾತತ್ಪರತೆ ಇವೆಲ್ಲ ಅವರ ಜೀವನದಲ್ಲಿ ಅಡಕವಾಗಿದೆ. ಇವರೊಂದಿಗೆ ಹೋಲಿಸುವ ಮತ್ತೊಂದು ವ್ಯಕ್ತಿ ಎಲ್ಲಿರುವುದು? ಯಾರು ಅವರನ್ನು ಮೆಚ್ಚಲಾರರೋ ಅವರ ಬಾಳು ವ್ಯರ್ಥ. ಅನೇಕ ಜನ್ಮಗಳಿಂದಲೂ ನಾನು ಅವರ ದಾಸನಾಗಿರುವೆನೆಂಬುದೆ ನನ್ನ ಪರಮ ಅದೃಷ್ಟ. ಅವರ ಒಂದು ಮಾತು ನನಗೆ ವೇದವೇದಾಂತಗಳ

ಗಿಂತ ಹೆಚ್ಚು ಬೆಲೆ ಬಾಳತಕ್ಕದ್ದು. "ತಸ್ಯ ದಾಸದಾಸದಾಸೋಽಹಂ." ಅವರ ದಾಸರ ದಾಸರ ದಾಸ ನಾನು. ಆದರೆ ಕ್ಷುದ್ರ ಮತ ಭ್ರಾಂತಿಗೂ ಅವರಿಗೂ ದೂರ. ಇದನ್ನು ಕಂಡರೆ ನನಗೆ ಆಗದು. ಅವರ ಹೆಸರು ಮರೆತು ಹೋದರೂ ಚಿಂತೆಯಿಲ್ಲ. ಅವರ ಉಪದೇಶ ಫಲಕಾರಿಯಾಗಲಿ. ಅವರೇನು ಕೀರ್ತಿಯ ದಾಸರಾಗಿದ್ದರೆ? ಕೆಲವರು ಬೆಸ್ತರು ಮತ್ತು ಅವಿದ್ಯಾವಂತರು ಏಸುಕ್ರಿಸ್ತನನ್ನು ದೇವರೆಂದು ಕರೆದರು. ಆದರೆ ವಿದ್ಯಾವಂತರು ಅವನನ್ನು ಶಿಲುಬೆಗೆ ಏರಿಸಿದರು. ಬುದ್ಧನು ತನ್ನ ಜೀವಿತ ಕಾಲದಲ್ಲಿ ಕೆಲವು ವರ್ತಕರಾದ ಗೊಲ್ಲರಿಂದ ಗೌರವಿಸಲ್ಪಟ್ಟನು. ಹತ್ತೊಂಬತ್ತನೆ ಶತಮಾನದ ಅಂತ್ಯಭಾಗದಲ್ಲಿ ವಿಶ್ವವಿದ್ಯಾನಿಲಯದ ಪ್ರೌಢಪಂಡಿತರು ಪದವೀಧರರು ಶ್ರೀ ರಾಮಕೃಷ್ಣರನ್ನು ದೇವರ ಅವತಾರವೆಂದು ಪೂಜಿಸಿರುವರು. ಕೃಷ್ಣ, ಬುದ್ಧ, ಕ್ರೈಸ್ತರ ವಿಚಾರವಾಗಿ ಪುಸ್ತಕದಲ್ಲಿ ಎಲ್ಲೋ ಸ್ವಲ್ಪ ಬರುವುದು. "ನಾವು ಯಾರೊಂದಿಗೆ ಇನ್ನೂ ಊಳಿಗ ಮಾಡಿಲ್ಲವೊ ಅವನು ಅತ್ಯುತ್ತಮವಾದ ಯಜಮಾನನಾಗಿರಬಹುದು" ಎಂಬುದು ಬಂಗಾಳಿಗಾದೆ. ಈ ಮಹಾಪುರುಷರೊಂದಿಗೆ ನಾವು ಹಗಲಿರುಳು ವಾಸವಾಗಿದ್ದೆವು. ಆದರೂ ಉಳಿದವರೆಲ್ಲರಿಗಿಂತಲೂ ಮಹಾ ಅದ್ಭುತ ಜೀವನವೆಂದು ಗೊತ್ತಾಗಿದೆ. ಈ ಸಂಗತಿ ನಿನಗೆ ಗೊತ್ತಾಗುವುದೆ?

ಶ್ರೀ ಶಾರದಾದೇವಿಯವರ ಅದ್ಭುತ ಜೀವನದ ಪ್ರಾಮುಖ್ಯತೆಯನ್ನು, ನೀವು ಯಾರೂ ಇನ್ನೂ ತಿಳಿದುಕೊಂಡಿಲ್ಲ. ಕ್ರಮೇಣ ನಿಮಗೆ ಗೊತ್ತಾಗುವುದು. ಶಕ್ತಿಯಿಲ್ಲದೆ ಜಗತ್ತು ಉದ್ಧಾರವಾಗುವಂತೆ ಇಲ್ಲ. ಎಲ್ಲಾ ದೇಶಗಳಿಗಿಂತ ನಮ್ಮ ದೇಶ ಏತಕ್ಕೆ ಹಿಂದಿರುವುದು? ಏತಕ್ಕೆ ದುರ್ಬಲವಾಗಿರುವುದು? ಶಕ್ತಿಗೆ ಗೌರವವಿಲ್ಲದೇ ಇರುವುದೇ ಕಾರಣ. ಶಕ್ತಿ ಆರಾಧನೆಯನ್ನು ಪುನಃ ಸ್ಥಾಪನೆ ಮಾಡುವುದಕ್ಕಾಗಿ ಶ್ರೀ ಶಾರದಾದೇವಿಯವರು ಜನ್ಮವೆತ್ತಿದರು. ಅವರ ಸುತ್ತಲೂ ಗಾರ್ಗೀಯಿ, ಮೈತ್ರೇಯಿಗಳಂತಹ ವ್ಯಕ್ತಿಗಳು ಮತ್ತೊಮ್ಮೆ ಜಗದಲ್ಲಿ ಜನ್ಮಧಾರಣೆ ಮಾಡುವರು. ಪ್ರಿಯಸಹೋದರನೆ! ನಿನಗೆ ಈಗ ಎಲ್ಲೋ ಸ್ವಲ್ಪ ತಿಳಿಯುವುದು. ಕ್ರಮೇಣ ಅದೆಲ್ಲ ಗೊತ್ತಾಗುವುದು. ಅದಕ್ಕೋಸ್ಕರವೆ ಅವರ ಮಠ ನನಗೆ ಮೊದಲು ಬೇಕಾಗಿದೆ. ಶಕ್ತಿಯ ಅನುಗ್ರಹವಿಲ್ಲದೆ

ಏನನ್ನೂ ಸಾಧಿಸಲು ಆಗುವುದಿಲ್ಲ. ಅಮೆರಿಕ ಯೂರೋಪ್ ದೇಶಗಳಲ್ಲಿ ನನಗೆ ಕಾಣುವುದೇನು? ಶಕ್ತಿಯ ಆರಾಧನೆ! ಶಕ್ತಿಯ ಆರಾಧನೆ! ಅಜ್ಞಾನದಿಂದ ಅವರು ಇಂದ್ರಿಯ ತೃಪ್ತಿಯ ಮೂಲಕವಾಗಿ ಸ್ತ್ರೀಯರನ್ನು ಪೂಜಿಸುವರು. ನಿರ್ಮಲ ಅಂತಃಕರಣರಾಗಿ, ಸಾತ್ವಿಕ ಬುದ್ಧಿಯಿಂದ ಅವರನ್ನು ತಮ್ಮ ತಾಯಿಯೆಂದು ತಿಳಿದು ಪೂಜಿಸಿದರೆ ಎಷ್ಟು ಕಲ್ಯಾಣವಾಗುವುದೆಂಬುದನ್ನು ನೀನೇ ಆಲೋಚಿಸು! ದಿನಕಳೆದಂತೆಲ್ಲ ವಿಷಯಗಳು ನನಗೆ ಚೆನ್ನಾಗಿ ಗೊತ್ತಾಗುತ್ತಿವೆ. ನನ್ನ ಅಂತರ್ದೃಷ್ಟಿ ವಿಶಾಲವಾಗುತ್ತ ಬರುತ್ತಿದೆ. ಆದಕಾರಣ ಮೊದಲು ಶ್ರೀ ಶಾರದಾದೇವಿಯವರಿಗೆ ಒಂದು ಮಠವನ್ನು ಕಟ್ಟಬೇಕು. ಮೊದಲು ತಾಯಿ ಮತ್ತು ಹೆಣ್ಣು ಮಕ್ಕಳು, ನಂತರ ತಂದೆ ಮತ್ತು ಗಂಡುಮಕ್ಕಳು. ನಿನಗೆ ಇದು ಗೊತ್ತಾಗುವುದೇನು? ನನಗೆ ತಾಯಿಯ ಆಶೀರ್ವಾದ ತಂದೆಯ ಆಶೀರ್ವಾದಕ್ಕಿಂತ ಲಕ್ಷಪಾಲು ಶ್ರೇಯಸ್ಕರ. ಶ್ರೀಮಾತೆಯವರ ಕೃಪೆ ಮತ್ತು ಆಶೀರ್ವಾದ ನನಗೆ ಅತ್ಯಂತ ಮುಖ್ಯವಾದುದು. ದಯವಿಟ್ಟು ನನ್ನನ್ನು ಕ್ಷಮಿಸಿ. ಶ್ರೀಮಾತೆಯವರ ಮೇಲೆ ನನ್ನದು ಸ್ವಲ್ಪ ಅಂಧಪ್ರೇಮ. ಶ್ರೀಮಾತೆಯವರು ಏನಾದರೂ ಅಪ್ಪಣೆ ಮಾಡಿದರೆ ಅವರ ದೂತರಾದ ನಾವು ಏನು ಮಾಡುವುದಕ್ಕೂ ಸಿದ್ಧ. ಸಹೋದರನೆ, ನಾನು ಅಮೆರಿಕಾ ದೇಶಕ್ಕೆ ಹೋಗುವುದಕ್ಕೆ ಮುಂಚೆ ನನ್ನನ್ನು ಆಶೀರ್ವದಿಸಬೇಕೆಂದು ಅವರಿಗೆ ಪತ್ರವನ್ನು ಬರೆದೆನು. ಅವರು ಆಶೀರ್ವದಿಸಿದರು. ಒಂದೇ ಸಲ ಅನಂತ ಸಾಗರವನ್ನು ದಾಟಿದೆನು. ಇದನ್ನು ನೋಡು. ಈ ಸಹಿಸಲಸದಳವಾದ ಚಳಿಗಾಲದಲ್ಲಿ ಊರಿಂದ ಊರಿಗೆ ಹೋಗಿ ಉಪನ್ಯಾಸ ಮಾಡುತ್ತಿರುವೆನು. ಎಷ್ಟೋ ಅಂತಂಕಗಳೊಂದಿಗೆ ಹೋರಾಡುತ್ತಿರುವೆನು. ಇದೆಲ್ಲ ಶ್ರೀಮಾತೆಯವರ ಮಠಕ್ಕೆ ಹಣವನ್ನು ಕೂಡಿಡುವುದಕ್ಕೆ.— ಅವನು ಸ್ವಲ್ಪ ಉಗ್ರಸ್ವಭಾವದವನು. ಆದರೆ ಶ್ರೀಮಾತೆಯವರ ಮೇಲೆ ಅವನಿಗೆ ಬಹಳ ಭಕ್ತಿ. ಅದಕ್ಕೋಸ್ಕರವೇ ಅವನ ಇತರ ನ್ಯೂನತೆಗಳನ್ನು ನಾನು ಸಹಿಸುವೆನು. ಅವನು ಈಗ ಅತ್ಯಂತ ಶ್ಲಾಘನೀಯವಾದ ಕೆಲಸವನ್ನು ಮಾಡುತ್ತಿರುವನು. ಸಮಾಚಾರವೆಲ್ಲ ಇಂದಿನವರೆವಿಗೂ ನನಗೆ ಚೆನ್ನಾಗಿ ಗೊತ್ತಿದೆ. ಮದ್ರಾಸಿನ ಜನರೊಂದಿಗೆ ಸಹಕರಿಸುವುದ

ರಲ್ಲಿ ನೀನು ಚೆನ್ನಾಗಿ ನಡೆದುಕೊಂಡಿರುವೆ. ನನ್ನ ಪ್ರಿಯಸಹೋದರನೆ, ನಿನ್ನಿಂದ ಇನ್ನೂ ಹೆಚ್ಚು ಕೆಲಸವಾಗಬೇಕಾಗಿದೆ. ನೀವೆಲ್ಲರೂ ಕೂಡಿ ಕೆಲಸ ಮಾಡುವುದಕ್ಕೆ ವ್ಯವಸ್ಥೆಮಾಡಬೇಕು. ಶ್ರೀಮಾತೆಯವರ ಮನೆ ಕಟ್ಟಲು ನೀನು ಸ್ಥಳವನ್ನು ಪಡೆದ ತಕ್ಷಣವೇ ನಾನು ಇಂಡಿಯಾ ದೇಶಕ್ಕೆ ಹೊರಟುಬರುತ್ತೇನೆ. ಸ್ಥಳ ವಿಶಾಲವಾಗಿರಬೇಕು. ಮೊದಲು ಒಂದು ಮಣ್ಣಿನ ಮನೆ ಇರಲಿ. ಕ್ರಮೇಣ ಒಂದು ಸುಂದರ ಕಟ್ಟಡವನ್ನು ಕಟ್ಟುವೆನು. ಇದರ ವಿಷಯದಲ್ಲಿ ನಿನಗೆ ಅಂಜಿಕೆಬೇಡ........ಮುಂದುವರಿಯಿರಿ, ಮುಂದುವರಿಯಿರಿ, ಕೆಲಸಮಾಡಿ, ಕೆಲಸಮಾಡಿ. ಇದಿನ್ನೂ ಪ್ರಾರಂಭಮಾತ್ರ.

ನಿನ್ನ ವಿವೇಕಾನಂದ.

೪೫

ಅಮೆರಿಕ,
೧೮೯೪

ಪ್ರಿಯ

ಭರತಖಂಡದಲ್ಲಿ ಧರ್ಮವೇನಾದರೂ ಉಳಿದುಕೊಂಡಿರುವುದು ಎಂದು ತಿಳಿದುಕೊಂಡಿರುವಿಯೇನು! ಜ್ಞಾನ, ಭಕ್ತಿ, ಯೋಗಗಳ ಮಾರ್ಗವೆಲ್ಲ ಹೋಯಿತು. ಈಗ ಉಳಿದಿರುವುದೊಂದೇ ಧರ್ಮ. ಅದೇ "ಮುಟ್ಟಬೇಡ, ಮುಟ್ಟಬೇಡ, ಮುಟ್ಟಬೇಡ." ಪ್ರಪಂಚವೆಲ್ಲ ಮೈಲಿಗೆ, ನಾನೊಬ್ಬನೇ ಮಡಿ! ಆಹಾ! ಎಷ್ಟು ತಿಳಿಯಾದ ಬ್ರಹ್ಮಜ್ಞಾನ! ಬಹಳ ಧೈರ್ಯಶಾಲಿಗಳು! ಅಯ್ಯೋ ದೇವರೆ! ಬ್ರಹ್ಮನು ಇಂದಿನ ಕಾಲದಲ್ಲಿ ಹೃದಯಾಂತರಾಳದಲ್ಲೂ ಇಲ್ಲ, ಸ್ವರ್ಗದಲ್ಲೂ ಇಲ್ಲ. ಯಾರ ಹೃದಯದಲ್ಲೂ ನೆಲೆಸಿಲ್ಲ. ಈಗ ಅವನಿರುವುದು ಅಡಿಗೆ ಮಾಡುವ ಪಾತ್ರೆಯಲ್ಲಿ. ಹಿಂದೆ ಮಹಾಪುರುಷನ ಲಕ್ಷಣ "ತ್ರಿಭುವನಮುಪಕಾರಶ್ರೇಣಿಭಿಃ ಪ್ರೀಯಮಾಣಃ" ವಿಶ್ವವನ್ನು ತನ್ನ ಅನಂತ ಉಪಕಾರಗಳಿಂದ ಮೆಚ್ಚಿಸುವುದು ಎಂದು ಇದ್ದಿತು. ಆದರೆ ಇಂದೋ ಏನಾಗಿರುವುದು! ನಾನು ಒಬ್ಬನೇ ಪವಿತ್ರ ಪ್ರಪಂಚವೆಲ್ಲವೂ ಅಪವಿತ್ರ.....ಹೋಗಿ ಹಣ ಸಂಪಾದನೆ ಮಾಡಿಕೊಂಡು ನನ್ನ ಪದತಳದಲ್ಲಿಡಿ! ಅವನು ನನ್ನ ಬೋಧನೆಯ ಕೆಲಸವನ್ನು

ಬಿಟ್ಟು, ಇಂಡಿಯಾದೇಶಕ್ಕೆ ಹಿಂದಿರುಗು ಎಂದು ಕಾಗದ ಬರೆದ. ಆ ಜಾಣನಂತೆ ತೋರುವ ಬುದ್ಧಿವಂತನಿಗೆ ಹೀಗೆಂದು ಹೇಳು: "ಈ ದೇಶವೇ ನನ್ನ ಮೆಚ್ಚಿನ ತಾಯ್ನಾಡು. ಭರತಖಂಡದಲ್ಲಿ ಏನಿರುವುದು? ಧರ್ಮವನ್ನು ಯಾರು ಮೆಚ್ಚುವರು? ವಿದ್ಯೆಯನ್ನು ಯಾರು ಮೆಚ್ಚುವರು?"

ಮನೆಗೆ ಹಿಂತಿರುಗಬೇಕಂತೆ! ಮನೆ ಎಲ್ಲಿರುವುದು! ನನಗೆ ಮುಕ್ತಿ ಬೇಕಾಗಿಲ್ಲ. "ವಸಂತವಲ್ಲೋಕಹಿತಂ ಚರನ್ತಃ" ವಸಂತ ಋತುವಿನಂತೆ ಮೌನದಿಂದ ಪರೋಪಕಾರ ಮಾಡುವುದೇ ನನ್ನ ಧರ್ಮ. ಸೋಮಾರಿಗಳೂ, ಶುಷ್ಕ ಹೃದಯರೂ, ದುಷ್ಟರೂ, ಸ್ವಾರ್ಥಪರರೂ ಆದ ಜನರೊಡನೆ ನನಗೆ ಯಾವ ಸಂಬಂಧವೂ ಇಲ್ಲ. ಯಾರು ಅದೃಷ್ಟವಂತರೋ ಅವರು ಈ ಮಹಾ ಕಾರ್ಯಕ್ಕೆ ಸಹಾಯ ಮಾಡಬಹುದು.

ನನ್ನ ಪ್ರೀತಿಯನ್ನು ದಯವಿಟ್ಟು ಎಲ್ಲರಿಗೂ ತಿಳಿಸು. ಎಲ್ಲರ ಸಹಾಯವೂ ನನಗೆ ಬೇಕಾಗಿದೆ. ಯಶ, ಕೀರ್ತಿ, ಗೌರವ, ಪಾಂಡಿತ್ಯದಿಂದ ಪ್ರಯೋಜನವಿಲ್ಲ. ವಜ್ರೋಪಮ ಕಡುಕಷ್ಟದ ಗೋಡೆಯ ಮೇಲೂ ಕೂಡ ತೂರಿಕೊಂಡು ಹೋಗುವುದು ಚಾರಿತ್ರಶುದ್ಧಿ. ಇದನ್ನು ಜ್ಞಾಪಕದಲ್ಲಿಡು. ಯಾವಾಗಲೂ ನಿನ್ನನ್ನು ಪ್ರೀತಿಸುವ,

ವಿವೇಕಾನಂದ.

೪೬

೫೪೧ ಡಿಯರ್ ಬಾರನ್ ಅವಿನ್ಯೂ
ಚಿಕಾಗೊ
೩ ನೇ ಜನವರಿ ೧೮೯೫.

ಪ್ರಿಯ ಮಹಾಶಯರೆ,

ಪ್ರೇಮ, ಕೃತಜ್ಞತೆ, ನಂಬಿಕೆಗಳು, ಹೃದಯದಲ್ಲಿ ತುಂಬಿ ತುಳುಕಾಡುತ್ತಿರುವಾಗ, ನಿಮಗೆ ಪತ್ರವನ್ನು ಬರೆಯಲು ಲೇಖನಿಯನ್ನು ಎತ್ತಿರುವೆನು. ನನ್ನ ಜೀವಮಾನದಲ್ಲಿ ಕಂಡ, ತಮ್ಮ ಅಭಿಪ್ರಾಯಗಳಲ್ಲಿ ಖಂಡಿತ ಮತಿಗಳಾದ ಕೆಲವರಲ್ಲಿ ನೀವೊಬ್ಬರು ಎಂದು ಮೊದಲು ನಾನು ನಿಮಗೆ ಹೇಳುತ್ತೇನೆ. ಅನುಭವ ಮತ್ತು ವಿಚಾರಗಳ ಒಂದು ಅಮೋಘವಾದ

ಸಮ್ಮೇಳನ ನಿಮ್ಮಲ್ಲಿದೆ. ಜೊತೆಗೆ ಉದಾತ್ತ ಭಾವಗಳನ್ನು ಅನುದಿನದ ಕಾರ್ಯರಂಗಕ್ಕೆ ತರುವ ಅನುಷ್ಠಾನ ಬುದ್ಧಿ ನಿಮ್ಮಲ್ಲಿದೆ. ಎಲ್ಲಕ್ಕಿಂತ ಹೆಚ್ಚಾಗಿ ನೀವು ನಿಷ್ಕಪಟಿಗಳು. ಆದಕಾರಣ ಸ್ಪಷ್ಟವಾಗಿಯೇ ನನ್ನ ಕೆಲವು ಅಭಿಪ್ರಾಯಗಳನ್ನು ನಿಮಗೆ ತಿಳಿಸುತ್ತೇನೆ.

ಭರತಖಂಡದಲ್ಲಿ ಕೆಲಸವೇನೋ ಚೆನ್ನಾಗಿ ಮಾಡಲಾಗಿದೆ. ಇದನ್ನು ಈ ರೀತಿಯಲ್ಲಿಯೇ ಇಟ್ಟುಕೊಂಡಿರುವುದು ಮಾತ್ರವಲ್ಲ, ನಮ್ಮ ಶಕ್ತಿಯನ್ನೆಲ್ಲಾ ಉಪಯೋಗಿಸಿ ಅದು ಇನ್ನೂ ಮುಂದುವರಿಯುವಂತೆ ಮಾಡಬೇಕು. ಹಾಗೆ ಮಾಡಲು ಇದೇ ಸಮಯ. ಇದನ್ನು ಬಿಟ್ಟರೆ ಬೇರೆ ಸಮಯ ಒದಗದು. ಪ್ರಸ್ತುತ ವಿಷಯದ ಮೇಲೆ ಅತಿ ದೀರ್ಘವಾಗಿ ಮತ್ತು ವಿಶಾಲವಾಗಿ ಆಲೋಚಿಸಿದ ಮೇಲೆ ಈ ರೀತಿಯ ಒಂದು ನಿರ್ಣಯಕ್ಕೆ ಬಂದಿರುವೆನು. ಮೊದಲು ಮದ್ರಾಸಿನಲ್ಲಿ ಒಂದು ವೇದಾಂತದ ಪ್ರೌಢ ಪಾಠಶಾಲೆಯನ್ನು ಸ್ಥಾಪಿಸುವುದು ಒಳ್ಳೆಯದು. ನಂತರ ಅದರ ಉದ್ದೇಶವನ್ನು ವಿಶಾಲಗೊಳಿಸಬೇಕು. ಯುವಕರಿಗೆ ವೇದಗಳಲ್ಲಿ, ಬೇರೆಬೇರೆ ಭಾಷ್ಯಗಳಲ್ಲಿ, ಸಿದ್ಧಾಂತಗಳಲ್ಲಿ ಮತ್ತು ಪ್ರಪಂಚದಲ್ಲಿರುವ ಅನ್ಯಧರ್ಮದ ಪರಿಚಯಕ್ಕಾಗಿಯೂ ಪ್ರೌಢ ಶಿಕ್ಷಣವನ್ನು ಕೊಡಬೇಕು. ಅದೇ ಸಮಯದಲ್ಲಿ ಇಂಗ್ಲಭಾಷೆಯಲ್ಲಿ ಮತ್ತು ದೇಶೀ ಭಾಷೆಯಲ್ಲಿ ಒಂದು ಮಾಸಪತ್ರಿಕೆಯನ್ನು ಪ್ರೌಢ ವಿದ್ಯಾಶಾಲೆಯ ಒಂದು ಅಂಗವಾಗಿ ಸ್ಥಾಪಿಸಬೇಕು.

ನಾವು ಕೈಕೊಳ್ಳಬೇಕಾದ ಮೊದಲನೇ ಕಾರ್ಯಕ್ರಮವೇ ಇದು. ಅತ್ಯಲ್ಪ ಸಮಾರಂಭದಿಂದ ಮಹತ್ ಕಾರ್ಯಗಳು ಬೆಳೆಯುವುವು. ಪ್ರಾಚೀನ ಮತ್ತು ಆಧುನಿಕ ಜೀವನದ ಗುಣಗ್ರಹಣ ಮಾಡುತ್ತಿರುವುದರಿಂದ ಈಗ ಮದ್ರಾಸು ಒಳ್ಳೆಯ ಮಧ್ಯಮಾರ್ಗದಲ್ಲಿ ಹೋಗುತ್ತಿದೆ.

ಸಮಾಜದ ಸಂಪೂರ್ಣ ಪುನರ್ರಚನೆಯು ಅತ್ಯಾವಶ್ಯಕವೆಂದು ಹೇಳುವ ಭರತಖಂಡದ ವಿದ್ವಾಂಸರೊಂದಿಗೆ ನಾನು ಒಪ್ಪುತ್ತೇನೆ ಆದರೆ ಅದನ್ನು ಮಾಡುವುದು ಹೇಗೆ? ಸಮಾಜಸುಧಾರಕರ ಧ್ವಂಸ ಮಾರ್ಗದ ಕಾರ್ಯಕ್ರಮಗಳು ನಿಷ್ಪ್ರಯೋಜಕವಾಗಿವೆ. ಇದು ನನ್ನ ಎಣಿಕೆ. ಪೂರ್ವದಲ್ಲಿ ನಮ್ಮ ಸಮಾಜವೇನೂ ಅಷ್ಟು ಕುಲಗೆಟ್ಟ

ಸ್ಥಿತಿಗೆ ಬಂದಿರಲಿಲ್ಲ; ನಿಜವಾಗಿಯೂ ಇಲ್ಲ. ನಮ್ಮ ಸಮಾಜ ಇಂದೂ ಕೆಟ್ಟಿಲ್ಲ, ಉತ್ತಮವಾಗಿರುವುದು. ಆದರೆ ಇದು ಮತ್ತೂ ಉತ್ತಮತರ ವಾಗಬೇಕೆಂಬುದೇ ನನ್ನ ಬಯಕೆ. ತಪ್ಪಿನಿಂದಲ್ಲ ಸತ್ಯಕ್ಕೆ ಪ್ರಯಾಣ. ಕೆಟ್ಟದ್ದರಿಂದ ಒಳ್ಳೆಯದಕ್ಕೆ ಪ್ರಯಾಣ. ಸತ್ಯದಿಂದ ಉತ್ತಮತರ ಸತ್ಯಕ್ಕೆ; ಶ್ರೇಷ್ಠದಿಂದ ಶ್ರೇಷ್ಠತರ, ಶ್ರೇಷ್ಠತಮಕ್ಕೆ. ನನ್ನ ದೇಶ ಬಾಂಧವರೆ! ಇಂದಿನವರೆವಿಗೂ ಅವರ ನಡತೆ ಉತ್ತಮವಾಗಿದೆ. ಅದನ್ನು ಉತ್ತಮತರವಾಗಿ ಮಾಡುವುದಕ್ಕೆ ಇದೇ ಸಮಯ.

ಈಗ ಸಂಸ್ಕೃತದಲ್ಲಿ ಜಾತಿ ಅಂದರೆ, ಬಗೆ, ವೈವಿಧ್ಯ, ಇದನ್ನು ತೆಗೆದು ಕೊಳ್ಳೋಣ. ಸೃಷ್ಟಿ ಎಂಬ ಪದಕ್ಕೆ ಮೊದಲನೇ ಅರ್ಥವೇ ಇದು, ವೈವಿಧ್ಯ (ವಿಚಿತ್ರ). ಜಾತಿ ಎಂದರೆ ಸೃಷ್ಟಿ. "ನಾನು ಏಕ, ಬಹು ವಾಗುತ್ತೇನೆ" ಏಕ್ಯತೆ ಸೃಷ್ಟಿಗೆ ಮೂಲ. ವೈವಿಧ್ಯವೇ ಸೃಷ್ಟಿ. ವೈವಿಧ್ಯತೆ ಎಂದು ಕೊನೆಗಾಣುವುದೋ ಅಂದೇ ಸೃಷ್ಟಿಯೂ ಕೊನೆ ಗೊಂಡಂತೆ. ಎಲ್ಲಿಯವರೆವಿಗೂ ಒಂದುವರ್ಗ (Species) ಪ್ರಬಲವಾಗಿ ಚೇತನಪೂರಿತವಾಗಿರುವುದೋ, ಅಲ್ಲಿಯವರೆವಿಗೂ ಅದು ಅನೇಕ ವೈವಿಧ್ಯ ರೂಪಗಳನ್ನು ಹೊರಗೆಡವಬೇಕು. ಅದು ಎಲ್ಲಿ ನಿಲ್ಲುವುದೋ, ಅಥವಾ ವೈವಿಧ್ಯತೆಯ ಉತ್ಪತ್ತಿಗೆ ಕುಂದುಬರುವುದೋ, ಆಗ ಆ ವರ್ಗ ಸತ್ತಂತೆಯೇ. ಜಾತಿಯ ಮೊತ್ತಮೊದಲು ಅಭಿ ಪ್ರಾಯವೇ, ವ್ಯಕ್ತಿಗೆ ತನ್ನ ಸ್ವಭಾವ ಅಥವಾ ಪ್ರಕೃತಿಯನ್ನು ವ್ಯಕ್ತಪಡಿಸುವ ಸ್ವಾತಂತ್ರ್ಯವಿರಬೇಕು. ಅನೇಕ ಸಾವಿರಾರು ವರುಷಗಳ ವರೆವಿಗೂ ಇದೇ ಅರ್ಥವೇ ಇದಕ್ಕೆ ಇದ್ದಿತು. ಅನ್ಯ ಜಾತಿಯವರು ಕಲೆತು ಊಟಮಾಡುವುದನ್ನು ಅತ್ಯಂತ ಆಧುನಿಕ ಪುಸ್ತಕಗಳೂ ಕೂಡ ನಿಷೇಧಿಸಿಲ್ಲ. ಅತ್ಯಂತ ಪುರಾತನ ಗ್ರಂಥಗಳಲ್ಲಿ ಕೂಡ ಅಂತರ್ಜಾತಿ ವಿವಾಹವನ್ನು ನಿಷೇಧಿಸಿಲ್ಲ. ಹಾಗಾದರೆ ಭರತಖಂಡದ ಹೀನಸ್ಥಿತಿಗೆ ಕಾರಣವೇನು. ಈ ಜಾತಿ ಎಂಬ ಅರ್ಥವನ್ನು ಮರೆತದ್ದೇ. ಎಂದು ಜಾತಿ ನಾಶವಾಗುವುದೋ ಅಂದು ಸೃಷ್ಟಿಯೇ ನಾಶವಾದಂತೆ ಎಂದು ಗೀತೆಯಲ್ಲಿ ಹೇಳಿರುವುದು. ಈ ವೈವಿಧ್ಯತೆಗೆ ಭಂಗ ಬಂದರೆ ಸೃಷ್ಟಿಯೇ ನಾಶವಾಗುವುದೆಂಬುದು ಈಗ ಸತ್ಯವಾಗಿ ಕಾಣುವುದೆ? ಈಗಿರುವ

ಜಾತಿ ನಿಜವಾದ ಜಾತಿಯಲ್ಲ. ಇದು ಜಾತಿಯ ವಿಕಾಸಕ್ಕೆ ತಂದೊಡ್ಡಿದ ಆತಂಕ. ಜಾತಿ ಅಂದರೆ, ವೈವಿಧ್ಯತೆಯ ಸ್ವತಂತ್ರ ಚಲನಕ್ಕೆ, ಇದು ನಿಜವಾಗಿಯೂ ಆತಂಕ ತಂದಿರುವುದು. ಯಾವುದಾದರೂ ರೂಢಿಯಾಗಿ ಬಂದ ನಡವಳಿಕೆಯಾಗಲೀ, ಅಥವಾ ಒಬ್ಬನಿಗೇ ಇರುವ ಹಕ್ಕಾಗಲೀ, ವಂಶಪಾರಂಪರ್ಯವಾಗಿ ಬಂದ ಜಾತಿಯಾಗಲೀ, ಇವು ಯಾವ ರೀತಿಯಲ್ಲಾದರೂ ಇರಲಿ, ಜಾತಿಯ ಸ್ವತಂತ್ರ ಚಲನೆಗೆ ಅಡ್ಡಿ ತರುವುವು. ಯಾವ ಜನಾಂಗದಲ್ಲಾದರೂ ಆಗಲಿ, ಎಂದು ಈ ವೈವಿಧ್ಯತೆಯ ಉತ್ಪತ್ತಿಗೆ ಭಂಗ ಬರುವುದೋ ಅಂದು ಆ ಜನಾಂಗ ಸಾಯಲೇ ಬೇಕು! ನನ್ನ ದೇಶಬಾಂಧವರೇ! ನಾನು ನಿಮಗೆ ಹೇಳಬೇಕೆಂದಿರುವುದು, ಜಾತಿಯ ಸ್ವತಂತ್ರಚಲನೆಗೆ ನೀವು ಆತಂಕವನ್ನು ತಂದೊಡ್ಡಿದಿರಿ; ಜಾತಿಯನ್ನೇ ನೀವು ವಜಾಮಾಡಿದಿರಿ. ಇದೇ ಭರತಖಂಡದ ಅವನತಿಗೆ ಕಾರಣ. ಎಲ್ಲಾ ವಂಶಪಾರಂಪರ್ಯವಾಗಿ ಬಂದ ಶ್ರೀಮಂತತನ ಮತ್ತು ಎಲ್ಲಾ ವಿಧದ ಆಜನ್ಮ ಹಕ್ಕುಗಳೂ ಕೂಡ ನಿಜವಾಗಿ ಜಾತಿಯಲ್ಲ. ಜಾತಿಗೆ ಭಂಗ ತರಲು ಕೊಟ್ಟ ಪಟ್ಟು. ಜಾತಿಗೆ ಪೂರ್ಣ ಸ್ವತಂತ್ರವಿರಲಿ. ಜಾತಿಯ ಸ್ವಾತಂತ್ರ್ಯ ವಿಕಾಸಕ್ಕೆ ಭಂಗತರುವ ಆತಂಕಗಳನ್ನೆಲ್ಲಾ ಕಿತ್ತೊಗೆಯಿರಿ. ನಂತರ ನಾವು ಮುಂದುವರಿಯುತ್ತೇವೆ.

ಈಗ ಯೂರೋಪ್ ದೇಶದ ಕಡೆ ನೋಡಿ. ಜಾತಿಯ ಉದ್ದೇಶಕ್ಕೆ ಅವಕಾಶ ಕಲ್ಪಿಸಿ ಅದಕ್ಕೆ ಇದ್ದ ಆತಂಕಗಳೆಲ್ಲವನ್ನು ಎಂದು ಅವರು ದೂರ ಮಾಡಿದರೋ, ಅಂದು ಪ್ರತಿಯೊಬ್ಬನೂ ತನ್ನ ಜಾತಿಯನ್ನು ವಿಕಾಸಗೊಳಿಸಲು ಅನುವಾದನು. ಇದರಿಂದ ದೇಶವೇ ಅಭಿವೃದ್ಧಿಯಾಯಿತು. ಜಾತಿಯ ಉದ್ದೇಶಕ್ಕೆ ಅಮೆರಿಕಾದಲ್ಲಿ ಬೇಕಾದಷ್ಟು ಅವಕಾಶವಿರುವುದು. ಆದುದರಿಂದಲೇ ಜನರು ಉತ್ತಮರಾಗಿರುವರು. ಜ್ಯೋತಿಶ್ಶಾಸ್ತ್ರಜ್ಞರು ಪ್ರತಿಯೊಬ್ಬ ಹುಡುಗ ಅಥವಾ ಹುಡುಗಿಯ ಜಾತಿಯನ್ನು ಅವರು ಹುಟ್ಟಿದ ಗಳಿಗೆಯ ಮೇಲೆ ನಿಶ್ಚಯಿಸುವರೆಂಬುದು ಪ್ರತಿಯೊಬ್ಬ ಭಾರತೀಯನಿಗೂ ತಿಳಿದಿದೆ. ಇದೇ ನಿಜವಾದ ಜಾತಿ, ವ್ಯಕ್ತಿತ್ವ. ಇದನ್ನು ಜ್ಯೋತಿಶ್ಶಾಸ್ತ್ರ ತಿಳಿದಿತ್ತು. ಪುನಃ, ಜಾತಿಯ

ವಿಕಾಸಕ್ಕೆ ಸ್ವಾತಂತ್ರ್ಯವನ್ನು ಕಲ್ಪಿಸುವುದರಿಂದಲೇ ನಾವು ಹೀನಸ್ಥಿತಿಯಿಂದ ಮೇಲೇಳಬಹುದು. ವೈವಿಧ್ಯತೆ ಎಂದರೆ ಒಂದು ಹೆಚ್ಚು ಒಂದು ಕಡಿಮೆ ಎಂದು ಅರ್ಥವಲ್ಲ; ಅಥವಾ ಕೆಲವು ಪಂಗಡಗಳಿಗೆ ವಿಶೇಷ ಹಕ್ಕು ಇರಬೇಕೆಂತಲೂ ಅಲ್ಲ. ಭಾರತೀಯರು ತಮ್ಮಲ್ಲಿರುವ ಯಾವುದನ್ನು ನಿರಾಕರಿಸಬೇಕಾಗಿಲ್ಲ. ಹಿಂದಿನ ಋಷಿಗಳು ನಮಗೆ ತೋರಿದ ಮಾರ್ಗದಲ್ಲಿಯೇ ನಡೆಯಬೇಕು. ಅನೇಕ ಶತಮಾನಗಳ ಗುಲಾಮಗಿರಿಯ ಪರಿಣಾಮವಾಗಿ ಬಂದ ಸೋಮಾರಿತನದಿಂದ ಪಾರಾಗಬೇಕು. ಮಹಮ್ಮದೀಯರ ಅತ್ಯಾಚಾರ ಕಾಲದಲ್ಲಿ ನಾವು ಮುಂದುವರಿಯುವುದನ್ನೇನೋ ನಿಲ್ಲಿಸಬೇಕಾಯಿತು. ಆಗ ಮುಂದುವರಿಯುವುದು ಮುಖ್ಯವಾದ ಪ್ರಶ್ನೆಯಾಗಿರಲಿಲ್ಲ. ಉಳಿಯಬೇಕೇ ಅಳಿಯಬೇಕೇ ಎಂಬುದು ಮುಖ್ಯವಾದ ಪ್ರಶ್ನೆಯಾಗಿತ್ತು. ಅಂದಿನ ಅಡಚಣೆ ಇಂದು ಮಾಯವಾಗಿದೆ. ನಾವು ಇಂದು ಮುಂದುವರಿಯಬೇಕು. ಪಾದ್ರಿಗಳು, ಮತ್ತು ನಮ್ಮ ಮತದಿಂದ ಅನ್ಯಮತಕ್ಕೆ ಸೇರಿದ ದ್ರೋಹಿಗಳು, ತೋರಿಸುವ ಧ್ವಂಸಮಾರ್ಗವನ್ನು ಅನುಸರಿಸಕೂಡದು. ನಮ್ಮ ದೇಶಕ್ಕೆ ಹಿತವೆನಿಸುವ ನಮ್ಮದೇ ಸ್ವಂತಮಾರ್ಗವನ್ನು ಅನುಸರಿಸಬೇಕು. ಎಲ್ಲಾ ವಿಕಾರವಾಗಿ ಕಾಣುತ್ತಿದೆ. ಏಕೆಂದರೆ ಕಟ್ಟಡ ಇನ್ನೂ ಪೂರ್ತಿಯಾಗಿಲ್ಲ. ಅನೇಕ ಶತಮಾನಗಳ ದಬ್ಬಾಳಿಕೆಗೆ ಒಳಗಾದಾಗ ನಮ್ಮ ಪುರೋಗಮನವನ್ನು ನಾವು ನಿಲ್ಲಿಸಬೇಕಾಯಿತು. ಈಗ ಕಟ್ಟಡವನ್ನು ಪೂರೈಸೋಣ. ಎಲ್ಲವೂ ಆಯಾ ಸ್ಥಳಗಳಲ್ಲಿ ಸುಂದರವಾಗಿ ಕಾಣುವುವು. ಇದೇ ನನ್ನ ಹಂಚಿಕೆ. ಇದರ ವಿಚಾರವಾಗಿ ನಾನು ದೃಢನಿಶ್ಚಯವಾಗಿರುವೆನು.

ಪ್ರತಿ ಜನಾಂಗಕ್ಕೂ ಜೀವನದಲ್ಲಿ ಒಂದು ಮುಖ್ಯವಾದ ಕಾರ್ಯವಿಭಾಗವಿದೆ. ಭರತಖಂಡದಲ್ಲಿ ಅದು ಧರ್ಮ. ಇದನ್ನು ಬಲಪಡಿಸಿದರೆ ಉಳಿದೆಲ್ಲವೂ ಅದರೊಂದಿಗೆ ಸರಿಹೋಗುವುದು. ಇದು ನನ್ನ ಆಲೋಚನೆಯ ಒಂದು ಭಾಗ. ಕಾಲಕ್ರಮೇಣ ನಾನು ಎಲ್ಲವನ್ನು ಪ್ರಕಟಪಡಿಸುತ್ತೇನೆಂದು ತಿಳಿದಿರುವೆನು. ಆದರೆ ಸದ್ಯಕ್ಕೆ ಈ ದೇಶದಲ್ಲಿಯೂ ನಾನು ಮಾಡಬೇಕಾದ ಕೆಲಸ ಸ್ವಲ್ಪವಿರುವುದು. ಅದೂ ಅಲ್ಲದೆ ಇಲ್ಲಿಂದಲೇ ನಾನು ಸಹಾಯವನ್ನು ನಿರೀಕ್ಷಿಸುತ್ತೇನೆ. ಆದರೆ ಇಂದಿನ

ವರೆಗೆ ವಿಷಯಗಳನ್ನು ಮಾತ್ರ ಪ್ರಚಾರಮಾಡಿದ್ದಾಯಿತು. ಇನ್ನೇನೂ ಆಗಲಿಲ್ಲ. ಈಗ ಭರತಖಂಡದಲ್ಲಿಯೂ ಒಮ್ಮೆ ಪ್ರಯತ್ನ ಪಡಬೇಕೆಂದಿರುವೆನು. ಭರತಖಂಡಕ್ಕೆ ಎಂದು ನಾನು ಹಿಂದಿರುಗುವೆನೋ ತಿಳಿಯದು. ದೇವರು ಹೇಳಿದಂತೆ ನಾನು ಕೇಳುವೆನು. ನಾನು ಅವನ ಕೈಗಳಲ್ಲಿ ಇರುವೆನು.

"ಈ ಜಗತ್ತಿನಲ್ಲಿ ನಿಧಿಯನ್ನು ಅರಸುತ್ತಿರುವಾಗ, ಹೇ ದೇವ! ನನಗೆ ಸಿಕ್ಕಿದ ಪರಮ ಉತ್ಕೃಷ್ಟ ರತ್ನ ನೀನು. ನಿನಗೋಸುಗವಾಗಿ ನಾನು ಎಲ್ಲವನ್ನೂ ನಿವೇದಿಸುವೆನು."

"ಪ್ರೀತಿಸುವುದಕ್ಕಾಗಿ ನಾನು ಒಬ್ಬನನ್ನು ಅರಸುತ್ತಿರುವಾಗ ನನಗೆ ಸಿಕ್ಕಿದ ಪ್ರಿಯತಮನು ನೀನು. ನಿನಗೋಸುಗವಾಗಿ ನಾನು ಸರ್ವವನ್ನೂ ನಿವೇದಿಸುವೆನು."

ಚಿರಕಾಲವೂ ಜಗದೀಶ ನಿಮ್ಮನ್ನು ಆಶೀರ್ವದಿಸಲಿ. ಕೃತಜ್ಞತಾಪೂರ್ವಕ.

ಯಾವಾಗಲೂ ನಿಮ್ಮ,
ವಿವೇಕಾನಂದ.

೪೭

ಚಿಕಾಗೋ,
೧೧ನೇ ಜನವರಿ ೧೮೯೪.

ಪ್ರಿಯ ಜ—

ನಿನ್ನ ಪತ್ರ ಈಗತಾನೆ ಕೈಸೇರಿತು. ವಿಶ್ವಧರ್ಮ ಸಮ್ಮೇಳನವನ್ನು ಸೇರಿಸಿದ್ದು ಕ್ರೈಸ್ತಧರ್ಮ ಉಳಿದ ಎಲ್ಲಾ ಧರ್ಮಗಳಿಗಿಂತಲೂ ಹೆಚ್ಚು ಎಂಬುದನ್ನು ಜಗತ್ತಿಗೆ ತೋರಿಸುವುದಕ್ಕಾಗಿ. ಆದರೂ ತತ್ವಶಾಸ್ತ್ರ ಪೋಷಿತವಾದ ಹಿಂದೂ ಧರ್ಮ ತನ್ನ ಸ್ಥಳದ ಮಾನವನ್ನು ಕಾಪಾಡಿಕೊಂಡಿತು. ಡಾಕ್ಟರ್ ಬ—ಮತ್ತು ಅವರ ಗುಂಪಿಗೆ ಸೇರಿದ ಇತರರೆಲ್ಲರೂ ಬಹಳ ಪೂರ್ವಾಚಾರಪರಾಯಣರು. ಅವರಿಂದ ಯಾವ ಸಹಾಯಕ್ಕೂ ನಾನು ಕಾದು ಕುಳಿತಿಲ್ಲ. ದೇವರು ಈ ದೇಶದಲ್ಲಿ

ನನಗೋಸುಗವಾಗಿ ಅನೇಕ ಜನ ಸ್ನೇಹಿತರನ್ನು ಕಳುಹಿಸಿರುವನು. ಅವರು ಕ್ರಮೇಣ ಹೆಚ್ಚುತ್ತಿರುವರು. ದೇವರು ಅವರೆಲ್ಲರನ್ನು ಆಶೀರ್ವದಿಸಲಿ. ನನ್ನ ಕಾಲವೆಲ್ಲ ಬಾಸ್ಟನ್ನಿನಿಂದ ನ್ಯೂಯಾರ್ಕಿಗೆ ಸುತ್ತಾಡುವುದರಲ್ಲೇ ಕಳೆಯುತ್ತಿದೆ. ಇವೆರಡೂ ಈ ದೇಶದ ದೊಡ್ಡ ನಗರಗಳು. ಬಾಸ್ಟನ್ ನಗರವನ್ನು ಅಮೇರಿಕಾ ದೇಶದ ಮೆದುಳೆಂತಲೂ, ನ್ಯೂಯಾರ್ಕ್ ನಗರವನ್ನು ಈ ದೇಶದ ಲಕ್ಷ್ಮೀಪುತ್ರರಿರುವ ಸ್ಥಳವೆಂದೂ ಕರೆಯಬಹುದು. ಎರಡು ನಗರಗಳಲ್ಲೂ ನನ್ನ ಜಯ ಸಾಧಾರಣಕ್ಕಿಂತ ಮೇಲಾಗಿರುವುದು. ವೃತ್ತಪತ್ರಿಕೆಗಳ ಸುದ್ದಿಯನ್ನು ನಾನು ಲಕ್ಷ್ಯಮಾಡುವುದಿಲ್ಲ. ನೀವು ನನ್ನಿಂದ ಯಾವ ವೃತ್ತಪತ್ರಿಕೆಯನ್ನೂ ನಿರೀಕ್ಷಿಸಬೇಡಿ. ಕೆಲಸದ ಆರಂಭದಲ್ಲಿ ಇಂತಹ ಒಂದು ಗದ್ದಲ ಅವಶ್ಯವಿತ್ತು. ಆದರೆ ನಮಗೆ ಬೇಕಾದುದಕ್ಕಿಂತ ಹೆಚ್ಚು ಪಡೆದದ್ದಾಯಿತು.

ಮ—ಗೆ ನಾನು ಆಗಲೇ ಕಾಗದ ಬರೆದಿರುವೆನು, ನನ್ನ ಸಲಹೆಗಳನ್ನು ನಿನಗೆ ಕೊಟ್ಟಿರುವೆನು. ಈಗ ನಿನ್ನ ಕೈಯಿಂದ ಏನುಮಾಡಲು ಸಾಧ್ಯವೆಂಬುದನ್ನು ತೋರಿಸು. ಇದು ಕಾಡುಹರಟೆಯ ಸಮಯವಲ್ಲ. ಬೇಕಾಗಿರುವುದು ಕೆಲಸ. ಹಿಂದೂಗಳು ತಮ್ಮ ಮಾತನ್ನು ನಿಜವಾದ ಕೆಲಸದಲ್ಲಿ ತೋರಿಸಬೇಕು. ಹಾಗೆ ಅವರು ಮಾಡದೆ ಇದ್ದರೆ ಯಾವುದಕ್ಕೂ ಅವರು ಅರ್ಹರಲ್ಲ, ಅಷ್ಟೆ. ನನ್ನ ಕೆಲಸವೇನೆಂದರೆ ಸತ್ಯವನ್ನು ಉಪದೇಶಮಾಡುವುದು. ಅದು ಇಲ್ಲಿಯೇ ಅಥವಾ ಬೇರೆ ಕಡೆಯೇ ಆದು ನನಗೆ ಬೇಕಾಗಿಲ್ಲ.

ಇನ್ನು ಮುಂದೆ ಜನರು ನನ್ನ ಅಥವಾ ನಿನ್ನ ವಿಚಾರದಲ್ಲಿ, ಪರವಾಗಿ ಅಥವಾ ವಿರೋಧವಾಗಿ ಮಾತನಾಡುತ್ತಾರೆ ಎಂಬ ವಿಚಾರವನ್ನು ಗಮನಿಸದಿರು. ಕಾರ್ಯದಲ್ಲಿ ತತ್ಪರರಾಗಿ, ಕೆಚ್ಚೆದೆಯವರಾಗಿ, ದೇವರು ನಿಮ್ಮನ್ನು ಹರಸುವನು. ನಾನು ಸಾಯುವವರೆಗೂ ಸತತವೂ ದುಡಿಯುವೆನು. ನಾನು ಸತ್ತಮೇಲೂ ಕೂಡ ಜನರ ಹಿತಕ್ಕೋಸುಗವಾಗಿ ಪ್ರಯತ್ನಪಡುವೆನು. ಅಸತ್ಯಕ್ಕಿಂತ ಸತ್ಯ ಅತ್ಯಂತ ತೂಕವುಳ್ಳದ್ದು. ಒಳ್ಳೆಯದೂ ಹಾಗೆಯೇ. ಇವೆರಡೂ ನಿನ್ನಲ್ಲಿದ್ದರೆ ತಮ್ಮಷ್ಟಕ್ಕೆ ತಾವೇ ದಾರಿಯನ್ನು ಮಾಡಿಕೊಳ್ಳುವುವು.

ಸಾವಿರಾರು ಉತ್ತಮ ಜನರು ನನ್ನ ವಿಚಾರದಲ್ಲಿ ಕುತೂಹಲಿಗಳಾಗಿರುವರು. ಇದನ್ನು ತಿಳಿದು ದೇವರಲ್ಲಿ ನಂಬು. ಈ ದೇಶದಲ್ಲಿ ಎಲ್ಲಾ ವೃತ್ತಾಂತ ಪತ್ರಿಕೆಗಳು ನನ್ನನ್ನು ಹೊಗಳುವುದಕ್ಕಿಂತ ಹೆಚ್ಚಾಗಿ ನನ್ನ ಪ್ರಭಾವವನ್ನು ಜನರಲ್ಲಿ ಬೀರುತ್ತಿರುವೆನು . . . . .

ಚಾರಿತ್ರಶುದ್ಧಿ, ಪವಿತ್ರತೆ, ಸತ್ಯಸಂಧತೆ ಇವು ಬೇಕಾಗಿರುವುದು. ಎಲ್ಲಿಯವರೆವಿಗೂ ಇವುಗಳು ಇರುವುವೋ, ನೀನು ಅಲ್ಲಿಯವರೆವಿಗೂ ನನ್ನ ವಿಚಾರದಲ್ಲಿ ಅಂಜಬೇಕಾಗಿಲ್ಲ. ಯಾರಿಂದಲೂ ನನ್ನ ದೇಹದ ಒಂದು ರೋಮವನ್ನು ಕೂಡ ಹಿಂಸಿಸಲು ಆಗುವುದಿಲ್ಲ. ಅವರು ಪ್ರಯತ್ನಪಟ್ಟರೆ ನಿರಾಶರಾಗುವರು ಎಂಬುದು ದೇವರ ವಾಣಿ. ಪಾಂಡಿತ್ಯ, ಸಿದ್ಧಾಂತ ಸಾಕು. ಜನರ ಹೃದಯವನ್ನು ಮುಟ್ಟಬೇಕಾದರೆ ಚಾರಿತ್ರಶುದ್ಧಿ ಬಹಳ ಮುಖ್ಯವಾದುದು. ಇದರಲ್ಲಿ ಜನಸಮ್ಮೋಹನ ಶಕ್ತಿ ಇದೆ. ಜಗದೀಶನು ದಿನಕಳೆದಂತೆಲ್ಲ ನನ್ನ ತಿಳಿವಳಿಕೆಯನ್ನು ವಿಕಾಸಗೊಳಿಸುತ್ತಿರುವನು. ಕೆಲಸ—ಕೆಲಸ—ಕೆಲಸ—ಕಾಡು ಹರಟೆ ಕೊನೆಗಾಣಲಿ. ದೇವರ ವಿಚಾರವಾಗಿ ಮಾತನಾಡಿ. ಮೋಸ, ಮೂರ್ಖತನ ಇವುಗಳ ವಿಚಾರವಾಗಿ ಮಾತನಾಡುತ್ತಾ ಕಾಲಕಳೆಯುವುದು ವ್ಯರ್ಥ. ನಮ್ಮ ಆಯಸ್ಸು ಅಲ್ಪ.

ಪ್ರತಿಯೊಂದು ಜನಾಂಗವೂ ತನ್ನನ್ನು ತಾನು ಉದ್ಧಾರಮಾಡಿಕೊಳ್ಳಬೇಕೆಂಬುದನ್ನು ನೀನು ಮರೆಯಕೂಡದು. ಅದರಂತೆಯೇ ಪ್ರತಿಯೊಂದು ವ್ಯಕ್ತಿಯೂ ಕೂಡ. ಮತ್ತೊಬ್ಬರ ಸಹಾಯಕ್ಕೆ ಕಾದು ಕುಳಿತುಕೊಳ್ಳಬೇಡ. ನಾನು ಕಷ್ಟಪಟ್ಟು ಕೆಲಸಮಾಡಿ ನಿಮ್ಮಗಳಿಗೆ ಆಗಿಂದಾಗ್ಗೆ ಸ್ವಲ್ಪ ಹಣವನ್ನು ಕಳುಹಿಸುತ್ತೇನೆ, ಅಷ್ಟೆ. ಅದಕ್ಕೆ ಹೆಚ್ಚಿಲ್ಲ, ನೀನು ಅದನ್ನೇ ಕಾದು ಕುಳಿತುಕೊಳ್ಳುವಹಾಗಿದ್ದರೆ ಕೆಲಸಕ್ಕೆ ಕೈ ಹಾಕಬೇಡ. ನನ್ನ ಆಲೋಚನೆಗಳನ್ನು ಬಿತ್ತುವುದಕ್ಕೆ ಇದು ಒಂದು ಒಳ್ಳೆಯ ನೆಲವೆಂಬುದನ್ನು ನೀನು ತಿಳಿದಿರಬೇಕು. ಅವರು ಹಿಂದೂಗಳಾಗಲೀ, ಮಹಮ್ಮದೀಯರಾಗಲೀ, ಕ್ರೈಸ್ತರಾಗಲೀ ನಾನು ಯಾವುದನ್ನೂ ಲೆಕ್ಕಿಸುವುದಿಲ್ಲ. ಆದರೆ ಯಾರು ದೇವರನ್ನು ಪ್ರೀತಿಸುತ್ತಾರೊ ಅವರ ಅಧೀನದಲ್ಲಿರುವುದು ನನ್ನ ಸೇವೆಯೆಲ್ಲ.

ಶಾಂತಿಯಿಂದ ಮೌನವಾಗಿ ನೀವು ಕೆಲಸಮಾಡಲು ಬಯಸು ತ್ತೇನೆ. ದೇವರು ಯಾವಾಗಲೂ ನನ್ನೊಂದಿಗೆ ಇರುವನು. ನಿನ್ನ ಕೈಲಾದರೆ ಸಂಪೂರ್ಣ ನಿಷ್ಕಪಟಿಯಾಗಿ, ನಿಸ್ವಾರ್ಥಪರನಾಗಿ, ಎಲ್ಲಕ್ಕಿಂತ ಹೆಚ್ಚಾಗಿ ಪರಿಶುದ್ಧನಾಗಿ ನನ್ನನ್ನು ಹಿಂಬಾಲಿಸು. ನನ್ನ ಆಶೀರ್ವಾದ ನಿನ್ನ ಮೇಲಿರುವುದು. ಈ ಕೆಲವುದಿನದ ಬಾಳುವೆಯಲ್ಲಿ ಒಬ್ಬರು ಇನ್ನೊಬ್ಬರನ್ನು ಹೊಗಳುವುದಕ್ಕೆ ಕಾಲವಿಲ್ಲ. ಕೆಲಸವಾದ ಮೇಲೆ ಒಬ್ಬರು ಇನ್ನೊಬ್ಬರೊಡನೆ ಹೋಲಿಸಿ ನೋಡಬಹುದು. ಮನಃಪೂರ್ತಿ ಯಾಗಿ ಒಬ್ಬರು ಇನ್ನೊಬ್ಬರನ್ನು ಆಗ ಹೊಗಳಬಹುದು. ಈಗ ಮಾತು ಸಾಕು. ಕೆಲಸ! ಕೆಲಸ! ಕೆಲಸ! ನೀವು ಇಂಡಿಯಾ ದೇಶದಲ್ಲಿ ಮಾಡಿದ ಶಾಶ್ವತವಾದ ಕೆಲಸ ಯಾವುದೂ ಕಾಣುವುದಿಲ್ಲ. ನೀವು ಸ್ಥಾಪಿಸಿದ ಯಾವ ಕೇಂದ್ರವೂ ಇಲ್ಲ. ನೀವು ಕಟ್ಟಿಸಿದ ಗುಡಿಯಾ ಗಲೀ ಪ್ರಾಂಗಣವಾಗಲೀ ಯಾವುದೂ ಇಲ್ಲ. ನಿಮ್ಮೊಂದಿಗೆ ಬೇರೆ ಯವರು ಯಾರೂ ಕಲಿಯುವುದು ಕಾಣುವುದಿಲ್ಲ. ಬೇಕಾದಷ್ಟು ಕಾಡು ಹರಟೆ ಇದೆ. ಬರೀ ಹರಟೆ ಮತ್ತೇನೂ ಇಲ್ಲ! ನಾವು ಬಹಳ ಉತ್ತ ಮರು! ನಾವು ಬಹಳ ಉತ್ತಮರು! ಅರ್ಥವಿಲ್ಲ! ನಾವು ಅತಿ ಮೂರ್ಖರು! ಅದು ಬೇರೇನೂ ಅಲ್ಲ! ಕೀರ್ತಿ ಗೌರವ ಮುಂತಾದುವು ಗಳಿಗೆ ಕಾಯುತ್ತ ಕುಳಿತುಕೊಳ್ಳುವುದು ಯಾರಿಗೆ ಬೇಕು? ಅವುಗಳಿಂದ ನನಗೇನು ಆಗಬೇಕು? ನಾನು ಏತಕ್ಕೆ ಅವುಗಳನ್ನು ಲಕ್ಷಿಸಬೇಕು? ನೂರಾರು ಜನ ದೇವರ ಸಮೀಪಕ್ಕೆ ಬರುವುದನ್ನು ನಾನು ನೋಡಬೇಕು! ಅವರೆಲ್ಲಿ? ನನಗೆ ಅವರು ಬೇಕಾಗಿದೆ. ನಾನು ಅವರನ್ನು ನೋಡಬೇಕು. ನೀವು ಅವರನ್ನು ಹುಡುಕಬೇಕು. ನೀವು ನನಗೆ ಕೇವಲ ಕೀರ್ತಿ ಗೌರವಗಳನ್ನು ಮಾತ್ರ ಕೊಡುತ್ತೀರಿ. ಕೀರ್ತಿ ಗೌರವ ಕೊನೆಗಾಣಲಿ. ನನ್ನ ಕೆಚ್ಚೆದೆಯ ಮಕ್ಕಳೆ! ಕೆಲಸಕ್ಕೆ ಕೈಹಾಕಿ. ನನ್ನ ಸ್ಫೂರ್ತಿ ನಿಮಗಿನ್ನೂ ತಾಕಿಲ್ಲ. ನನ್ನನ್ನು ನೀವು ಇನ್ನೂ ತಿಳಿದುಕೊಂಡಿಲ್ಲ. ನೀವು ಇನ್ನೂ ಸೋಮಾರಿತನ ಭೋಗವೆಂಬ ಹಳೆಯ ಮಾರ್ಗದಲ್ಲಿ ನಡೆ ಯುತ್ತಿರುವಿರಿ. ಕೊನೆಗಾಣಲಿ ಆಲಸ್ಯವೆಲ್ಲ. ಈಗ ಮತ್ತು ಮುಂದಿನ

ಭೋಗಕ್ಕೆಲ್ಲ ತಿಲಾಂಜಲಿಯನ್ನು ಕೊಡಿ. ಬೆಂಕಿಯಲ್ಲಿ ನುಗ್ಗಿರಿ. ಜನರನ್ನು ದೇವರೆಡೆಗೆ ಕರೆದುಕೊಂಡು ಬನ್ನಿ.

ನನ್ನ ಸ್ಫೂರ್ತಿಯ ಕಿಚ್ಚು ನಿನಗೆ ತಾಕಲಿ. ಸಂಪೂರ್ಣವಾಗಿ ನಿಷ್ಕಪಟನಾಗು. ಕಾರ್ಯಸಮರಂಗಣದಲ್ಲಿ ವೀರ ಯೋಧನ ಸಾವು ನಿನಗೆ ಸಿದ್ಧಿಸಲಿ ಎಂಬುದೇ ನನ್ನ ಅನವರತ ಪ್ರಾರ್ಥನೆ.

ಮಿಸ್ ಅ—ಕ—ಡಾಕ್ಟರ್ ಬ ಮತ್ತು ಇನ್ನೂ ಇತರರಿಗೆ, ಟಾಮ್ ಡಿಕ್ ಹ್ಯಾರಿ ಮುಂತಾದವರು, ನನ್ನ ಪರವಾಗಿಯಾಗಲೀ ವಿರೋಧವಾಗಿಯಾಗಲೀ ಏನು ಹೇಳುತ್ತಾರೆಯೊ ಅದನ್ನು ನಂಬಿ ಕುಳಿತುಕೊಳ್ಳದೆ, ತಮ್ಮ ಶಕ್ತಿಯನ್ನೆಲ್ಲಾ ಕಾರ್ಯರಂಗಕ್ಕೆ ತಿರುಗಿಸುವಂತೆ ಹೇಳು.

ನಿನ್ನ ವಿವೇಕಾನಂದ,

೪೮

೫೪. ಪ. ೩೩ನೇ ಬೀದಿ. ನ್ಯೂಯಾರ್ಕ್,
೧ನೇ ಫೆಬ್ರವರಿ ೧೮೯೫.

ಪ್ರಿಯ ಸಹೋದರ,

ಈಗತಾನೆ ನಿಮ್ಮ ಸುಂದರ ಪತ್ರ ಸೇರಿತು. ಹೌದು: ಕೆಲವು ಸಮಯದಲ್ಲಿ ಕರ್ಮಕ್ಕೋಸುಗವಾಗಿ ಕರ್ಮವನ್ನು, ಅದರ ಫಲಾಪೇಕ್ಷೆಗೆ ಅವಕಾಶವಿಲ್ಲದೆ ಮಾಡುವುದರಿಂದ ಒಳ್ಳೆಯ ಶಿಸ್ತು ಬರುವುದು. ನಿಮ್ಮ ಟೀಕೆಯನ್ನು ನೋಡಿ ಸಂತೋಷವಾಯಿತು. ಆದರೆ ನಾನು ಹಾಗೆ ವರ್ತಿಸಿದುದಕ್ಕೆ ವ್ಯಥೆಪಡುವುದಿಲ್ಲ. ಕೆಲವು ದಿನಗಳ ಹಿಂದೆ ಶ್ರೀಮತಿ ಟಿ—ಅವರ ಮನೆಯಲ್ಲಿ ಪ್ರೆಸ್ಬಿಟೀರಿಯನ್ ಸಮಾಜಕ್ಕೆ ಸೇರಿದ ಒಬ್ಬ ದೊಡ್ಡಮನುಷ್ಯರೊಂದಿಗೆ ಉದ್ವೇಗದವಾದ ನಡೆಯಿತು. ಆತನು ಎಂದಿನಂತೆ ದುಡುಕಿ ಕೋಪಗೊಂಡು ನಿಂದಿಸಲು ಮೊದಲುಮಾಡಿದನು. ಇದು ಹೇಗಾದರೂ ಆಗಲಿ. ನಂತರ ಶ್ರೀಮತಿ ಬ—ಅವರು ನನ್ನ ಮೇಲೆ ಇದಕ್ಕೋಸುಗವಾಗಿ ಬಹಳ ಸಿಟ್ಟುಗೊಂಡರು. ಇಂತಹ ಪ್ರಸಂಗಗಳು ನನ್ನ ಕೆಲಸಕ್ಕೆ ಅಡ್ಡಿಯನ್ನು ತರುತ್ತಿವೆ ಎಂಬುದು ಅವರ ಮತ. ನಿಮ್ಮ ಅಭಿಮತವೂ ಹಾಗೆಯೇ ಎಂದು ಕಾಣುತ್ತಿದೆ.

ಆ ಪ್ರಸಂಗದ ವಿಚಾರವಾಗಿ ನೀವು ಈಗತಾನೆ ಬರೆದಿರುವುದು ಒಳ್ಳೆಯದು. ಏಕೆಂದರೆ ನಾನು ಅದನ್ನೇ ವಿಮರ್ಶಿಸುತ್ತಿದ್ದೆ. ಮೊದಲು ನೆಯದಾಗಿ ನಾನು ಇದಕ್ಕೆ ವ್ಯಥೆಪಡುವುದಿಲ್ಲ. ಇದರಿಂದ ನಿಮಗೆ ಜಿಗುಪ್ಸೆಯಾಗಬಹುದು. ಬಹುಶಃ, ಪ್ರಪಂಚದಲ್ಲಿ ಉಭಯರ ದೃಷ್ಟಿಯಿಂದ, ಮೃದುವಾಗಿರುವುದು ಎಷ್ಟು ಒಳ್ಳೆಯದೆಂಬುದು ನನಗೆ ಗೊತ್ತು. ಮೃದುವಾಗಿರುವುದಕ್ಕೆ ನಾನು ಸಾಧ್ಯವಾದಷ್ಟು ಪ್ರಯತ್ನ ಪಡುವೆನು. ಆದರೆ ಎಂದು ಹೃದಯದ ಸತ್ಯದೊಂದಿಗೆ ರಾಜಿಮಾಡಿಕೊಳ್ಳಬೇಕಾಗಿ ಬರುವುದೋ ಆಗ ನಿಲ್ಲಿಸುವೆನು. ನಾನು ನಮ್ರತೆಯಲ್ಲಿ ನಂಬುವುದಿಲ್ಲ. ಎಲ್ಲಾ ವಸ್ತುಗಳನ್ನು ಏಕ ದೃಷ್ಟಿಯಿಂದ ನೋಡುವ ಸಮದರ್ಶಿತ್ವ ದಲ್ಲಿ ನಂಬುವೆನು. ಸಾಧಾರಣ ಮನುಷ್ಯನ ಕರ್ತವ್ಯವಾದರೋ ತನ್ನ ದೇವರಂತಿರುವ ಸಮಾಜ ಹೇಳಿದಂತೆ ಕೇಳುವುದು. ಆದರೆ ಜ್ಞಾನಿಗಳು ಇದನ್ನು ಎಂದೂ ಲೆಕ್ಕಿಸುವುದಿಲ್ಲ. ಇದು ಒಂದು ಶಾಶ್ವತವಾದ ನಿಯಮ. ನೆರೆಹೊರೆಯ ಜನರ ಅಭಿಪ್ರಾಯಗಳಿಗೆ ಮತ್ತು ಸಾಮಾಜಿಕ ನಿಯಮಕ್ಕೆ ಅಡಿಯಾಳಾಗಿ ಒಬ್ಬನು ಸಮಾಜದ ಎಲ್ಲಾ ಉಪಕಾರವನ್ನು ಹೊಂದುತ್ತಾನೆ. ಇನ್ನೊಬ್ಬನು ಏಕಾಂಗಿಯಾಗಿ ನಿಂತು ಸಮಾಜವನ್ನೇ ತನ್ನೆಡೆಗೆ ಆಕರ್ಷಿಸುವನು. ಯಾರು ಸಮಾಜದ ಅಭಿಪ್ರಾಯದಂತೆ ನಡೆಯುವರೋ ಅವರ ದಾರಿ ಸುಗಮವಾಗಿರುವುದು. ಯಾರು ಇದ ರೊಂದಿಗೆ ಸಹಕರಿಸುವುದಿಲ್ಲವೋ, ಅವರ ಮಾರ್ಗ ಅತಿ ಕಠಿಣ. ಆದರೆ ಯಾರು ಜನಾಭಿಪ್ರಾಯವನ್ನು ಪೂಜಿಸುವರೋ ಅವರು ಕ್ಷಣದಲ್ಲಿ ನಾಶ ವಾಗುವರು. ಸತ್ಯವನ್ನು ಪೂಜಿಸುವವರ ಹೆಸರು ಶಾಶ್ವತವಾಗಿ ನಿಲ್ಲು ವುದು.

ಸತ್ಯವನ್ನು ನಾನು ಅನಂತ ಶಕ್ತಿಯುಳ್ಳ ಎಲ್ಲಾ ವಸ್ತುವನ್ನು ಸುಡುವ ವಸ್ತುವಿನೊಂದಿಗೆ ಹೋಲಿಸುತ್ತೇನೆ. ಮೆತ್ತಗಿರುವ ವಸ್ತುವನ್ನು ಕ್ಷಣದಲ್ಲಿ, ವಜ್ರೋಪಮಯ ಕಠಿಣವಾಗಿರುವ ವಸ್ತುವನ್ನು ನಿಧಾನವಾಗಿ ಯಾದರೂ ನಿಶ್ಚಯವಾಗಿ ಕರಗಿಸುವುದು. ನಡೆದದ್ದು ನಡೆದುಹೋಯಿತು. ಸಹೋದರಿಯೆ! ಪ್ರತಿಯೊಂದು ಸುಳ್ಳನ್ನು ಎದುರಿಸುವಾಗಲೂ ನಾನು ಮೃದುವಾಗಿರಲಾರೆ. ಅದರೊಂದಿಗೆ ರಾಜಿಮಾಡಿಕೊಳ್ಳಲಾರೆ. ಇದು

ನನ್ನಿಂದ ಸಾಧ್ಯವಿಲ್ಲ. ಕೊನೆಗೆ ಅದನ್ನೇ ಬಿಟ್ಟುಬಿಟ್ಟಿರುವೆನು. ದೇವರು ದೊಡ್ಡವನು. ಅವನು ನನ್ನನ್ನು ಕಪಟಿಯಾಗುವುದಕ್ಕೆ ಬಿಡುವುದಿಲ್ಲ. ಈಗ ನನಗೆ ಏನು ಕಾದುಕೊಂಡಿರುವುದೋ ಅದು ಬರಲಿ. ಎಲ್ಲರನ್ನು ಮೆಚ್ಚಿಸುವ ಒಂದು ದಾರಿ ನನಗೆ ಸಿಕ್ಕಿಲ್ಲ. ನನ್ನ ನಿಜಸ್ಥಿತಿಗನು ಸಾರವಾಗಿ ಅಲ್ಲದೆ ಬೇರೆ ವೇಶವನ್ನು ನಾನು ಧರಿಸಲಾರೆನು. "ಯೌವನ ಸೌಂದರ್ಯಗಳು ನಾಶವಾಗುವುವು. ಜೀವನ ಐಶ್ವರ್ಯಗಳು ನಾಶವಾಗುವುವು. ಕೀರ್ತಿ ಗೌರವಗಳು ನಾಶವಾಗುವುವು. ಪರ್ವತಗಳೂ ಕೂಡ ಕಾಲಕ್ರಮದಲ್ಲಿ ಧೂಳಾಗಿಹೋಗುವುವು. ಸ್ನೇಹ, ಪ್ರೀತಿ ಮಾಯವಾಗುವುವು. ಸತ್ಯವೊಂದೇ ನಿಲ್ಲುವುದು." ಹೇ ಸತ್ಯನಾರಾಯಣನೆ, ನೀನೊಬ್ಬನೇ ನನಗೆ ಆಸರೆಯಾಗು! ಈಗ ಮೃದು ಮಧುರವಾಗಲು ವಯಸ್ಸು ಮೀರಿರುವುದು. ನಾನು ಈಗ ಇರುವ ಸ್ಥಿತಿಯಲ್ಲೇ ಇರುವಂತೆ ಬಿಡಿ. "ಅಂಜಿಕೆ ಇಲ್ಲದೆ, ಕೊಟ್ಟುತೆಗೆದುಕೊಳ್ಳುವ ಬುದ್ಧಿಯಿಲ್ಲದೆ, ಸತ್ಯಪಥವನ್ನು ಹಿಡಿ. ಹೇ ಸಂನ್ಯಾಸಿ! ಈ ಕ್ಷಣದಿಂದಲೇ, ಈ ಲೋಕವನ್ನೂ ಮುಂದೆ ಬರುವ ಲೋಕಗಳನ್ನು ಅವುಗಳ ಭೋಗ ವ್ಯರ್ಥ ಆಡಂಬರಗಳೆಲ್ಲವನ್ನೂ ತ್ಯಜಿಸು. ಹೇ ಸತ್ಯ! ನೀನೊಬ್ಬನೇ ನನಗೆ ದಾರಿತೋರು." ಸಹೋದರಿ! ಐಶ್ವರ್ಯ, ಕೀರ್ತಿ, ಗೌರವ ಭೋಗಗಳಲ್ಲಿ ನನಗೆ ಆಶೆಯಿಲ್ಲ. ಅವೆಲ್ಲ ನನಗೆ ಮಣ್ಣಿನ ಸಮಾನ. ನನ್ನ ಸಹೋದರರಿಗೆ ಸಹಾಯಮಾಡಬೇಕೆಂದಿದ್ದೆ. ಹಣವನ್ನು ಸಂಪಾದನೆಮಾಡುವ ಉಪಾಯ ನನಗೆ ತಿಳಿಯದು. ದೇವರು ದೊಡ್ಡವನು! ನನ್ನ ಅಂತರಂಗದ ಸತ್ಯವಾಣಿಯನ್ನು ಕೇಳದೆ ಸುತ್ತುಮುತ್ತಲಿರುವ ಜನರಂತೆ ವ್ಯರ್ಥ ಕಾಲ್ಪನಿಕ ಪ್ರಪಂಚದಲ್ಲಿ ಏಕೆ ಜೀವಿಸಬೇಕು. ಸಹೋದರಿ! ಮನಸ್ಸು ಇನ್ನೂ ದುರ್ಬಲವಾಗಿದೆ. ಕೆಲವು ವೇಳೆ ಪ್ರಪಂಚದ ಸಹಾಯವನ್ನು ನಿರೀಕ್ಷಿಸುವುದು. ಆದರೆ ಇದರಿಂದ ನಾನು ಅಂಜುವುದಿಲ್ಲ. ಅಂಜಿಕೆಯೆ ಪರಮ ಪಾತಕವೆಂದು ನನ್ನ ಧರ್ಮ ಬೋಧಿಸುತ್ತದೆ.

ಪ್ರೆಸ್ಬಿಟೀರಿಯನ್ ಪಾದ್ರಿಯೊಂದಿಗೆ ಆದ ಕೊನೆಯ ಕಲಹ, ಮತ್ತು ಆಕೆಯೊಂದಿಗೆ ಆದ ದೀರ್ಘ ಚರ್ಚೆ ಇವು, ಮನು, ಸಂನ್ಯಾಸಿಗೆ ಉಪದೇಶಿಸಿದ "ಏಕಾಂಗಿಯಾಗಿರು, ಏಕಾಂಗಿಯಾಗಿ ನಡೆ" ಎಂಬ

ಮಾತುಗಳು ನನಗೆ ಚೆನ್ನಾಗಿ ಮಂದಟ್ಟಾಯಿತು. ಎಲ್ಲಾ ಸ್ನೇಹಕ್ಕೂ ಎಲ್ಲಾ ಪ್ರೀತಿಗೂ ಒಂದು ಮೇರೆ ಇದೆ. ಪವಿತ್ರಸ್ನೇಹವೆಂದಿಗೂ ಇರಲಿಲ್ಲ, ಅದರಲ್ಲೂ ಹೆಂಗಸಿನ ಸ್ನೇಹ ನಕ್ಷತ್ರಕನಂತೆ. ಸ್ವಲ್ಪವನ್ನೂ ಬಿಡದೆ ಕಸಿದುಕೊಳ್ಳುವರು. ಓ! ಋಷಿವರ್ಯರೇ! ನೀವೆಂದಮಾತು ಸತ್ಯ! ಮತ್ತೊಬ್ಬರ ಆಸರೆ ಯಾರಿಗೆ ಆವಶ್ಯಕವೋ, ಅವರೆಂದಿಗೂ ಸತ್ಯವೆಂಬ ದೇವರನ್ನು ಸೇವಿಸಲಾರರು. ಶಾಂತವಾಗು ನನ್ನಾತ್ಮವೆ! ಏಕಾಂಗಿಯಾಗು. ದೇವರು ನಿನ್ನೊಂದಿಗೆ ಇರುವನು. ಜೀವನದಲ್ಲಿ ಏನೂ ಇಲ್ಲ. ಮರಣವೆಂಬುದೊಂದು ಭ್ರಾಂತಿ. ಇದಾವುದೂ ಸತ್ಯವಲ್ಲ. ದೇವರೊಬ್ಬನೇ ಸತ್ಯ! ನನ್ನಾತ್ಮವೇ ಅಂಜದಿರು! ಏಕಾಂಗಿಯಾಗು! ಸಹೋದರಿ! ನಡೆವ ದಾರಿ ಇನ್ನೂ ದೂರವಿರುವುದು. ಆದರೆ ಕಾಲವಿರುವುದು ಅಲ್ಪ. ಆಗಲೇ ಸಂಜೆಯಾಗುತ್ತಿದೆ. ಬೇಗ ನಾನು ಮನೆಯನ್ನು ಸೇರಬೇಕಾಗಿದೆ. ನನ್ನ ನಡತೆಗಳಿಗೆ ಮೆರಗುಕೊಡುವುದಕ್ಕೆ ಸಮಯವಿಲ್ಲ. ನೀವು ಒಳ್ಳೆಯವರು. ಬಹಳ ದಯಾಳುಗಳು. ನಿಮಗೋಸುಗವಾಗಿ ನಾನು ಏನನ್ನು ಬೇಕಾದರೂ ಮಾಡಲು ಸಿದ್ಧವಾಗಿರುವೆನು. ಆದರೆ ಕೋಪವನ್ನು ಮಾತ್ರ ಮಾಡಬೇಡಿ. ನಿಮ್ಮೆಲ್ಲರನ್ನೂ ನಾನು ಮಕ್ಕಳಂತೆ ನೋಡುತ್ತೇನೆ.

ಕನಸುಗಳನ್ನು ಇನ್ನು ಕಾಣಬೇಡ! ಎಲೈ, ನನ್ನಾತ್ಮವೇ ಇನ್ನು ಕನಸುಗಳಲ್ಲಿ ಹೆಚ್ಚು ಸಂಚರಿಸಬೇಡ! ಈ ಒಂದು ಮಾತಿನಲ್ಲಿ ನಾನು ಕೊಡುವ ಉಪದೇಶ ಅಡಗಿದೆ. ಜಗತ್ತಿಗೆ ಮೃದುವಾಗಿ ಕಾಣಿಸಿಕೊಳ್ಳುವುದಕ್ಕೆ ನನಗೆ ಹೇಸುತ್ತಿಲ್ಲ. ಮೃದುವಾಗಿರಬೇಕೆಂದು ಮಾಡಿದ ಪ್ರತಿಯೊಂದು ಪ್ರಯತ್ನವೂ, ನನ್ನನ್ನು ಕಪಟಿಯನ್ನಾಗಿ ಮಾಡುವುದು. ನನ್ನ ದೇಶವಾಗಲೀ, ಅನ್ಯದೇಶವಾಗಲೀ ಈ ಮೂರ್ಖ ಜಗತ್ತಿನ ಜನರ ಅಭಿಪ್ರಾಯಗಳಿಗೆಲ್ಲ ಸೋಲುತ್ತ ಇದ್ದೆಡೆಯೆ ಬಿದ್ದಿರುವ ಜೀವನಕ್ಕಿಂತ ಸಾವಿರಸರಿಯಾದರೂ ನಾನು ಸಾಯಲು ಸಿದ್ಧನಾಗಿರುವೆನು. ಶ್ರೀಮತಿ ಬ—ಅವರು ತಿಳಿಯುವಂತೆ ನನಗೆ ಒಂದು ಕೆಲಸವಿದೆ ಎಂದು ನೀವು ತಿಳಿದುಕೊಂಡಿದ್ದರೆ ಅದು ತಪ್ಪು. ಈ ಪ್ರಪಂಚದಲ್ಲಾಗಲೀ, ಅಥವಾ ಬೇರೆ ಪ್ರಪಂಚದಲ್ಲಾಗಲೀ, ನನಗೆ ಯಾವ ಕೆಲಸವೂ ಇಲ್ಲ. ನಾನು ಜಗತ್ತಿಗೆ

ಒಂದು ಸಂದೇಶವನ್ನು ಕೊಡಬೇಕಾಗಿರುವುದು. ಅದನ್ನು ನನ್ನದೇ ಒಂದು ರೀತಿಯಲ್ಲಿ ಕೊಡುವೆನು. ಅದನ್ನು ಹಿಂದೂ ಧರ್ಮವೆಂದಾಗಲೀ, ಕ್ರೈಸ್ತಧರ್ಮವೆಂದಾಗಲೀ ಅಥವಾ ಇನ್ನು ಯಾವುದೋ ಧರ್ಮವೆಂದಾಗಲೀ ಕರೆಯುವುದಿಲ್ಲ. ಅದನ್ನು ಕೇವಲ ನನ್ನ ಧರ್ಮವೆಂದು ಕರೆಯುತ್ತೇನೆ. ಸ್ವಾತಂತ್ರ್ಯ, ಮುಕ್ತಿ, ಇವೇ ನನ್ನ ಧರ್ಮದ ಸರ್ವಸ್ವ. ಅದನ್ನು ಅಡಚಣೆ ಮಾಡುವುದಕ್ಕೆ ಬರುವ ಎಲ್ಲರೊಂದಿಗೆ ಕಾದಾಡಿ ನಿವಾರಿಸುವೆನು. ಇಲ್ಲವೆ ಅದರಿಂದ ಸರಿದು ಪಾರಾಗುವೆನು. ಪಾಪ! ನಾನು ಪಾದ್ರಿಗಳನ್ನು ಸಮಾಧಾನ ಮಾಡಬೇಕೆ? ಸಹೋದರಿ, ದಯವಿಟ್ಟು ಇದನ್ನು ತಪ್ಪು ತಿಳಿದುಕೊಳ್ಳಬೇಡ. ನೀವೆಲ್ಲ ಇನ್ನು ಮಕ್ಕಳು. ಮಕ್ಕಳು ಬುದ್ಧಿವಾದವನ್ನು ಕಲಿಯುವುದಕ್ಕೆ ಸಿದ್ಧರಾಗಬೇಕು. "ವಿಚಾರವನ್ನು ಅವಿಚಾರವನ್ನಾಗಿ ಮಾಡುವ, ಜಗತ್ತನ್ನೇ ಶೂನ್ಯವಾಡಿ, ಮಾನವನನ್ನು ದೇವನನ್ನಾಗಿ ಮಾಡುವ ಚಿಲುಮೆಯ ಬಲವನ್ನು" ನೀವು ಇನ್ನೂ ಪಾನ ಮಾಡಿಲ್ಲ. ಪ್ರಪಂಚವೆಂಬ ಅಜ್ಞಾನದ ಬಲೆಯಿಂದ ಸಾಧ್ಯವಾದರೆ ಹೊರಗೆ ಬನ್ನಿ. ಆಗ ನಿಮ್ಮನ್ನು ನಿಜವಾಗಿಯೂ ಸ್ವತಂತ್ರರು ಮತ್ತು ಧೈರ್ಯಶಾಲಿಗಳು ಎಂದು ಕರೆಯುತ್ತೇನೆ. ಅದು ನಿಮ್ಮಿಂದ ಸಾಧ್ಯವಿಲ್ಲದೇ ಇದ್ದರೆ, ಸಮಾಜವೆಂಬ ಸುಳ್ಳು ದೇವರನ್ನು, ಅದರ ಕೊನೆಮೊದಲಿಲ್ಲದ ಆಷಾಢಭೂತಿತನವನ್ನು ಸೊಕ್ಕೆ ಮೆಟ್ಟಿ ಮುಂದುವರಿಯುವವರನ್ನು ಹುರಿದುಂಬಿಸಿ. ಹಾಗೆ ಹುರಿದುಂಬಿಸುವುದಕ್ಕೆ ನಿಮಗೆ ಸಾಧ್ಯವಿಲ್ಲದೇ ಇದ್ದರೆ, ದಯವಿಟ್ಟು ಸುಮ್ಮನಿರಿ. ರಾಜಿ, ಮೃದುಮಧುರ ಎಂಬ ಕೆಲಸಕ್ಕೆ ಬಾರದ ವಿಷಯಗಳ ನೆವದಲ್ಲಿ ಮುಂದೆ ಹೋಗುವವರನ್ನು ಎಳೆದು ಪ್ರಪಂಚವೆಂಬ ಕೆಸರಿಗೆ ಬೀಳದಂತೆ ಮಾಡಿ.

ಚರ್ಚು ಮತ್ತು ಕುಯುಕ್ತಿಗಳು, ಧರ್ಮಗ್ರಂಥಗಳು ಮತ್ತು ಮೋಸ ಒಳತಂತ್ರಗಳು, ನೋಡಲು ಮನೋಹರವಾದ ರೂಪು ಒಳಗಡೆ ನಂಬಿಸಿ ಕೆಡಿಸುವ ಹೃದಯಗಳು, ಮೇಲೆ ಶಬ್ದಮಯ ನೀತಿಯ ನಡತೆ, ಒಳಗಡೆ ಯಾವ ತಿರುಳೂ ಇಲ್ಲದೇ ಇರುವುದು, ಎಲ್ಲಕ್ಕಿಂತಹೆಚ್ಚಾಗಿ ಧರ್ಮದ ವಿಕ್ರಯ ಇವನ್ನು ಕೂಡಿದ ಈ ಪ್ರಪಂಚವನ್ನು, ಈ ಕನಸನ್ನು, ಈ ದುಸ್ವಪ್ನವನ್ನು ನಾನು ದ್ವೇಷಿಸುತ್ತೇನೆ. ಸಹೋದರಿ; ನನ್ನ

ಹೃದಯದಾಳವನ್ನು ಪ್ರಾಪಂಚಿಕತೆಯಲ್ಲಿ ಬಿದ್ದು ನರಳುತ್ತಿರುವವರು ಹೇಳುವ ಮಾತಿನಿಂದ ಅಳೆಯುವಿರೇನು? ಅಯ್ಯೋ ಪಾಪ, ನಿಮಗೆ ಸನ್ಯಾಸಿಯ ಪರಿಚಯವಿಲ್ಲ. "ಅವನು ವೇದಗಳನ್ನು ಮೀರಿ ನಿಲ್ಲುವನು" ಎಂದು ವೇದಗಳು ಸಾರುತ್ತವೆ. ಯಾತಕ್ಕೆಂದರೆ, ಚರ್ಚ್, ಪಂಗಡ, ಧರ್ಮಗ್ರಂಥ, ದೇವದೂತರು ಮತ್ತು ಪವಿತ್ರಗ್ರಂಥ ಇವುಗಳ ಆವಶ್ಯಕತೆಯೇ ಇಲ್ಲ ಅವನಿಗೆ. ಪಾದ್ರಿಯೋ ಇಲ್ಲವೊ ಅವರು ಬೇಕಾದಷ್ಟು ಬಗುಳಲಿ. ತಮ್ಮ ಕೈಲಾದುದೆಲ್ಲವನ್ನು ಸೇರಿಸಿ ಎದುರಿಸಲಿ. "ಹೇ! ಸನ್ಯಾಸಿ, ನಿನ್ನ ದಾರಿಯಲ್ಲಿ ನೀನು ಹೋಗು. ಕೆಲವರು ಈ ಹುಚ್ಚನು ಯಾರೆಂದು ಕರೆಯುವರು, ಕೆಲವರು ಈ ಚಂಡಾಲನಾರೆಂದು ಕರೆಯುವರು. ಕೆಲವರು ನಿನ್ನನ್ನು ಜ್ಞಾನಿಯೆಂದು ತಿಳಿಯುವರು." ಪ್ರಪಂಚದ ಒಸರ ಕಾಡು ಹರಟೆಯನ್ನು ಕೇಳಿ ಸುಮ್ಮನಿರು. ಆನೆ ಪೇಟೆಯ ಬೀದಿಯಲ್ಲಿ ಹೋಗುತ್ತಿರುವಾಗ ಎಷ್ಟೋ ನಾಯಿಗಳು ಬಗುಳುವುವು. ಆದರೆ ಇದಾವುದನ್ನು ಅದು ಲೆಕ್ಕಿಸುವುದಿಲ್ಲ. ತನ್ನ ದಾರಿಯನ್ನು ಹಿಡಿದು ನೇರ ಹೋಗುವುದು. ಯಾರಾದರೂ ಒಬ್ಬ ಮಹಾವ್ಯಕ್ತಿ ಅವತರಿಸಿದರೆ ಅವರ ಸುತ್ತಲೂ ನಾಯಿಯಂತೆ ಬಗುಳುವರು ಹಲವರು ಇರುತ್ತಾರೆ.

ನಾನು ಲ—ವೊಂದಿಗೆ ೫೪ ನೇ ಪ. ೩೩ ನೇ ಬೀದಿಯಲ್ಲಿರುತ್ತೇನೆ. ಆತನು ಧೈರ್ಯವಂತ ದಯಾವಂತ, ದೇವರು ಆತನಿಗೆ ಒಳ್ಳೆಯದನ್ನು ಮಾಡಲಿ. ಕೆಲವುವೇಳೆ ಜ—ಮನೆಗೆ ಮಲಗಲು ಹೋಗುತ್ತೇನೆ.

ಸತತವೂ ದೇವರು ನಿಮ್ಮನ್ನು ಆಶೀರ್ವದಿಸಲಿ. ಪ್ರಪಂಚವೆಂಬ ಒಂದು ಸುಳ್ಳುಕನಸಿನಿಂದ ನಿಮ್ಮನ್ನು ಬೇಗ ಪಾರುಗಾಣಿಸಲಿ! ಪ್ರಪಂಚವೆಂಬ ಮೋಹಿನಿಗೆ ಮತ್ತೊಮ್ಮೆ ವಶವಾಗದಿರಿ. ಶ್ರೀಶಂಕರ ನಿಮಗೆ ಸಹಾಯಮಾಡಲಿ. ಸತ್ಯದಬಾಗಿಲನ್ನು ಉಮಾದೇವಿ ನಿಮಗೋಸ್ಕರ ತೆರೆಯಲಿ. ಮಾಯಾಮೋಹವನೆಲ್ಲ ನಿಮ್ಮಿಂದ ಬಿಡಿಸಲಿ. ಪ್ರಿಯ ವಿಶ್ವಾಸಗಳು. ನಿಮ್ಮ ವಿವೇಕಾನಂದ.

೪೯

೧೯ ಜ. ೨೮ ನೇ ಜೂನ್
ನ್ಯೂಯಾರ್ಕ್, ೧೮೯೫

ಪ್ರೀಯ—,

ಸಮಾಜ ಸುಧಾರಣೆಯ ಗೋಜಿಗೆ ಹೋಗಬೇಡ. ಮೊದಲು ಆಧ್ಯಾತ್ಮಿಕಸುಧಾರಣೆಯಿಲ್ಲದೆ ಬೇರೆ ಯಾವ ಸುಧಾರಣೆಯೂ ಆಗಲಾರದು. ದೇವರ ವಿಷಯವಾಗಿ ಬೋಧಿಸಿ. ಸಾಮಾಜಿಕ ಕುಂದುಕೊರತೆಯ ವಿಚಾರವಾಗಿಯಾಗಲೀ, ಅಥವಾ ಮೂಢನಡತೆಯ ವಿಚಾರವಾಗಿ ಆಗಲಿ, ಅವುಗಳ ಪರವಾಗಿ ಆಗಲಿ, ಅಥವಾ ವಿರೋಧವಾಗಿ ಆಗಲಿ, ಏನನ್ನೂ ಹೇಳಬೇಡಿ. ಎಂದಿಗೂ ಗುರುವಿನಲ್ಲಿಟ್ಟ ಭಕ್ತಿ ಕುಗ್ಗದಿರಲಿ. ದೇವರಲ್ಲಿಟ್ಟ ನಂಬಿಕೆ ಜಾರದಿರಲಿ—ನನ್ನ ಮಗು! ಎಲ್ಲಿಯವರೆವಿಗೂ ಈ ಮೂರು ಗುಣಗಳು ನಿನ್ನಲ್ಲಿರುತ್ತವೆಯೋ ಅಲ್ಲಿಯವರೆವಿಗೆ ಯಾವುದೂ ನಿನ್ನನ್ನು ತೊಂದರೆಮಾಡಲಾರದು. ದಿನಕಳೆದಂತೆಲ್ಲ ನಾನು ಬಲಾಢ್ಯನಾಗುತ್ತಿರುವೆನು. ನನ್ನ ಕೆಚ್ಚೆದೆಯ ಮಕ್ಕಳಿರಾ! ಕೆಲಸಮಾಡಿ. ಆಶೀರ್ವಾದಗಳು. ಸತತವೂ ನಿನ್ನ ವಿವೇಕಾನಂದ.

೫೦

ನ್ಯೂಯಾರ್ಕ್
೨೪ ನೇ ಏಪ್ರಿಲ್ ೧೮೯೫.

ಈಚೆಗೆ ಪಾಶ್ಚಾತ್ಯದೇಶಕ್ಕೆ ಬಂದಿರುವ ರಹಸ್ಯಾರ್ಥದ ರಾಶಿಯೊಳಗೆ ಸ್ವಲ್ಪಸತ್ಯ ಹುದುಗಿಕೊಂಡಿದೆ ಎಂಬುದು ನನಗೆ ಗೊತ್ತು. ಆದರೂ, ಅದರ ಅಧಿಕಾಂಶ ಕೆಲಸಕ್ಕೆಬಾರದವು ಅಥವಾ ಎಲ್ಲ ಹುಚ್ಚುತನ. ಈ ಕಾರಣಗಳಿಂದಲೇ ಇಂತಹ ಧಾರ್ಮಿಕವಿಚಾರಗಳೊಂದಿಗೆ, ಇಂಡಿಯದಲ್ಲಿ ಆಗಲೀ ಅಥವಾ ಅನ್ಯದೇಶೀಯರೊಂದಿಗೆ ಆಗಲಿ ಯಾವ ವ್ಯವಹಾರವನ್ನೂ ಇಟ್ಟುಕೊಂಡಿರಲಿಲ್ಲ. ನನಗೇನೋ ರಹಸ್ಯಾರ್ಥವಾದಿಗಳ ಗುಂಪನ್ನು ಕಂಡರೆ ಅಷ್ಟು ಆಗುವುದಿಲ್ಲ.

ಅದ್ವೈತ ತತ್ತ್ವವೊಂದೇ ಮಾನವ ಜನಾಂಗವನ್ನು ಪೌರಾತ್ಯದಲ್ಲಿ ಆಗಲಿ, ಅಥವಾ ಪಾಶ್ಚಾತ್ಯದಲ್ಲಿ ಆಗಲಿ, "ಭೂತಗಳ ಆರಾಧನೆ" ಮತ್ತು ಇದಕ್ಕೆ ಸೇರಿದ ಉಳಿದ ಮೂಢನಂಬಿಕೆಗಳಿಂದ ಬಿಡಿಸಿ, ವ್ಯಕ್ತಿಗೆ ಧೈರ್ಯವನ್ನೂ ಮತ್ತು ಸಹಜತೆಯನ್ನು ಕೊಟ್ಟು ಕಾಪಾಡಬಲ್ಲದು, ಎಂದು ನಾನೂ ನಿಮ್ಮೊಂದಿಗೆ ಒಪ್ಪಿಕೊಳ್ಳುತ್ತೇನೆ. ಭರತಖಂಡಕ್ಕೆ ಇದು ಬೇಕಾಗಿದೆ. ಪಾಶ್ಚಾತ್ಯದೇಶಗಳಲ್ಲೂ ಹೆಚ್ಚು ಬೇಕು. ಆದರೂ ಇದು ಬಹಳ ಕಷ್ಟವಾದ ಕೆಲಸ. ಏಕೆಂದರೆ ಮೊದಲು ಜನರಲ್ಲಿ ಇದರ ವಿಚಾರವಾಗಿ ಒಂದು ಅಭಿರುಚಿಯನ್ನು ಹುಟ್ಟಿಸಬೇಕು. ನಂತರ ಬೋಧಿಸಬೇಕು. ನಂತರ ಪೂರ್ತಿ ಕಟ್ಟಡವನ್ನು ಕಟ್ಟಬೇಕಾಗಿದೆ.

ಸಂಪೂರ್ಣ ನಿಷ್ಕಾಪಟ್ಯತೆ, ಹೃದಯ ನೈರ್ಮಲ್ಯತೆ, ಅದ್ಭುತ ಬುದ್ಧಿಶಕ್ತಿ ಮತ್ತು ಎಲ್ಲವನ್ನು ಜಯಿಸುವ ಒಂದು ಇಚ್ಛಾಶಕ್ತಿ ಬೇಕು. ಇವುಗಳನ್ನು ಹೊಂದಿದ ಕೊಂಚ ಜನರು ಪ್ರಯತ್ನಪಟ್ಟರೆ ಸಾಕು; ವಿಶ್ವವನ್ನೇ ಜಾಗ್ರತಗೊಳಿಸಬಹುದು. ಕಳೆದವರುಷ ನಾನು ಈ ದೇಶದಲ್ಲಿ ಬೇಕಾದಷ್ಟು ಉಪನ್ಯಾಸಕೊಟ್ಟು ಜನರಿಂದ ಬಹಳ ಮೆಚ್ಚಿಗೆಯನ್ನು ಪಡೆದೆ. ಆದರೆ ನಂತರ ನನಗೋಸ್ಕರ ನಾನು ಕೆಲಸಮಾಡುತ್ತಿರುವೆನೆಂದು ತಿಳಿದೆ. ಸಮಾಧಾನದಿಂದ ಚಾರಿತ್ರ ಶುದ್ಧಿಯನ್ನುಂಟುಮಾಡಿಕೊಳ್ಳುವುದು, ಸತ್ಯಸಾಕ್ಷಾತ್ಕಾರಕ್ಕೆ ತನ್ನ ಕೈಲಾದಪ್ರಯತ್ನವನ್ನೆಲ್ಲ ಮಾಡಿಕೊಳ್ಳುವುದು, ಇವೇ ಮುಂದೆ ಬರುವ ಜನಾಂಗದಮೇಲೆ ತಮ್ಮ ಪ್ರಭಾವವನ್ನು ಬೀರುವುದು. ಆದಕಾರಣ ಈ ವರುಷ ಹೇಳಿದ ಮಾರ್ಗದಲ್ಲಿ ಹೋಗಬೇಕೆಂದು ಮನಸ್ಸುಮಾಡಿರುವೆನು. ಅದ್ವೈತವನ್ನು ಅನುಷ್ಠಾನದಲ್ಲಿ ಸಾಕ್ಷಾತ್ಕಾರ ಮಾಡಿಕೊಳ್ಳುವಂತಹ ಕೆಲವುಮಂದಿ ಸ್ತ್ರೀಯರನ್ನು ಮತ್ತು ಪುರುಷರನ್ನು ತರಬೇತುಮಾಡುತ್ತಿರುವೆನು. ಎಷ್ಟುಮಟ್ಟಿಗೆ ನಾನು ಇದರಲ್ಲಿ ಜಯಶೀಲನಾಗುತ್ತೇನೋ ತಿಳಿಯದು. ತನ್ನ ಪಂಗಡ, ತನ್ನ ದೇಶ, ಇವುಗಳನ್ನು ಮೀರಿ ಪ್ರಪಂಚಕ್ಕೆ ಒಳ್ಳೆಯದನ್ನು ಮಾಡಬೇಕೆಂಬ ಉದ್ದೇಶವಿದ್ದರೆ ಅಂತಹ ಕೆಲಸಕ್ಕೆ ಪಾಶ್ಚಾತ್ಯದೇಶ ಒಳ್ಳೆಯ ಕ್ಷೇತ್ರ. ಮಾಸಪತ್ರಿಕೆಯ ವಿಷಯದಲ್ಲಿ ನಿಮ್ಮ ಅಭಿಪ್ರಾಯದೊಂದಿಗೆ ನಾನು ಒಪ್ಪುತ್ತೇನೆ. ಆದರೆ ಸಾಧಿಸುವುದಕ್ಕೆ ವ್ಯವಹಾರ ಚತುರತೆ

ಬೇಕು. ಅದು ನನ್ನಲ್ಲಿ ಇಲ್ಲ. ನಾನು ಇನ್ನೊಬ್ಬರಿಗೆ ಕಲಿಸಬಲ್ಲೆ ಬೋಧನೆ ಮಾಡಬಲ್ಲೆ, ಕೆಲವುವೇಳೆ ಬರೆಯಬಲ್ಲೆ. ಆದರೆ ಸತ್ಯದಲ್ಲಿ ನನಗೆ ಪೂರ್ಣ ನಂಬಿಕೆ ಇದೆ. ನಿಮ್ಮೊಂದಿಗೆ ಕೆಲಸಮಾಡುವುದಕ್ಕೆ ಬೇಕಾದಸಹಾಯವನ್ನು ದೇವರೇ ಒದಗಿಸುವನು. ನನ್ನ ಹೃದಯ ಅತಿನಿರ್ಮಲವಾಗಿ ನಿಷ್ಕಪಟವಾಗಿ, ಸಂಪೂರ್ಣ ನಿಸ್ವಾರ್ಥವಾಗಿದ್ದರೆ ಸಾಕು.

"ಸತ್ಯವೇ ಜಯಿಸುವುದು. ಅಸತ್ಯವಲ್ಲ, ಸತ್ಯದಮೂಲಕ ವಾಗಿಯೇ ದೇವಯಾನಕ್ಕೆ ಮಾರ್ಗ." ಜಗದ ಹಿತಕ್ಕೋಸುಗವಾಗಿ ತನ್ನ ಅಲ್ಪ ಜೀವವನ್ನು ಯಾರು ದಾನಮಾಡುವರೋ ಅವರು ಪ್ರಪಂಚವನ್ನು ತನ್ನದೆಂದು ತಿಳಿಯುವರು. ಇಂಗ್ಲೆಂಡಿಗೆ ಎಂದು ಬರುವೆನೋ ಗೊತ್ತಿಲ್ಲ. ನನಗೆ ಅಲ್ಲಿ ಯಾರೂ ಪರಿಚಿತರಿಲ್ಲ. ಇಲ್ಲಿಯಾದರೋ ನಾನು ಸ್ವಲ್ಪ ಕೆಲಸಮಾಡುತ್ತಿರುವೆನು. ದೇವರೆ ತನಗೆ ಮನಸ್ಸು ಬಂದಾಗ ದಾರಿ ತೋರುವನು.

೫೧

ನ್ಯೂಯಾರ್ಕ್

"ಸತ್ಯ ಒಂದೇ ಜಯಿಸುವುದು ಅಸತ್ಯವಲ್ಲ. ದೇವಯಾನಕ್ಕೆ ಸತ್ಯವೇ ದಾರಿ"—ಸತ್ಯಕ್ಕೆ ಸ್ವಲ್ಪ ಅಸತ್ಯದ ಸಿಹಿ ಬೆರಸಿದರೆ ಸತ್ಯಹರಡುವುದು ಎಂಬ ಭಾವನೆ ತಪ್ಪು. ಕೊನೆಗೆ ವಿಷದ ಒಂದು ಬಿಂದು ಎಲ್ಲವನ್ನು ವಿಷಮಯವಾಗಿ ಮಾಡುವುದು. ಯಾರುಪವಿತ್ರಾತ್ಮರೋ ಸಾಹಸಿಗಳೋ ಅವರೇ ಎಲ್ಲವನ್ನು ಸಾಧಿಸುವುದು. ದೇವರು ನಿನ್ನನ್ನು ಸದಾಕಾಲ ದಲ್ಲಿಯೂ ಮೋಸದಿಂದ, ಭ್ರಾಂತಿಯಿಂದ ಪಾರುಮಾಡಲಿ. ನಾನು ನಿಮ್ಮೊಂದಿಗೆ ಕೆಲಸಮಾಡುವುದಕ್ಕೆ ಸದಾ ಸಿದ್ಧನಾಗಿರುವೆನು. ಮೊದಲು ನಾವು ಆತ್ಮಬಂಧುಗಳಾದರೆ ನೂರಾರುಜನ ಸ್ನೇಹಿತರನ್ನು ಕಳುಹಿಸುವನು. "ಆತ್ಮೈವ ಆತ್ಮನೋ ಬಂಧು."

ಯೂರೋಪು ಯಾವಾಗಲೂ ಸಾಮಾಜಿಕ ಶಕ್ತಿಗೆ ಕೇಂದ್ರ; ಏಷ್ಯ ಆಧ್ಯಾತ್ಮಿಕ ಶಕ್ತಿಗೆ ಕೇಂದ್ರವಾಗಿದೆ. ಈ ಎರಡುಶಕ್ತಿಯೂ ಹೆಚ್ಚು ಕಡಿಮೆ ಯಾಗುತ್ತಿರುವ ಸಂಯೋಗವೇ ಇಡೀ ವಿಶ್ವಚರಿತ್ರೆ. ಮಾನವಕೋಟಿಯ ಇತಿಹಾಸದಲ್ಲಿ ಬೇರೊಂದು ಘಟ್ಟ ನಿಧಾನವಾಗಿ ತೆರೆಯುತ್ತಿದೆ. ಇದರ ಚಿಹ್ನೆ ಎಲ್ಲೆಡೆಯಲ್ಲಿಯೂ ಕಾಣುವುದು. ನೂರಾರು ಹೊಸ ಹಂಚಿಕೆ ಗಳು ಸೃಷ್ಟಿಯಾಗಿ ನಾಶವಾಗುವುವು. ಯೋಗ್ಯವಾಗಿರುವುದು ಮಾತ್ರ ಉಳಿಯುವುದು. ಸತ್ಯವೂ ಶುಭವೂ ಅದುದಲ್ಲದೆ ಮತ್ತಾವುದು ಯೋಗ್ಯ?

೫೭

೬ ನೇ ಮೇ ೧೮೯೫.

ಪ್ರಿಯ ಅ—

ಈದಿನ ಬೆಳಿಗ್ಗೆ ನನ್ನ ಕೊನೆಯ ಕಾಗದದ ಜೊತೆಗೆ ರಾಮಾನುಜಾ ಚಾರ್ಯರ ಭಾಷ್ಯದ ಮೊದಲನೆಭಾಗ ತಲಪಿತು. ಹಿಂದೂಗಳೇ ನಿದ್ದೆ ಮಾಡುವುದಕ್ಕೆಹೋದರೆ ನಾನೇಕೆ ಹಿಂದೂಧರ್ಮದ ರಕ್ಷಣೆಯಲ್ಲಿ ಶಕ್ತಿ ಯನ್ನು ವ್ಯಯಮಾಡಲಿ. ಮೂವತ್ತುಕೋಟಿ ಜನರು ಅಲ್ಲಿ ಏನು ಮಾಡುತ್ತಿರುವರು? ಅದರಲ್ಲೂ ವಿದ್ಯಾವಂತರು ಪಂಡಿತರು ಎಂದು ಹೆಮ್ಮೆ ಕೊಚ್ಚಿಕೊಳ್ಳುತ್ತಿರುವವರು ಏನುಮಾಡುತ್ತಿರುವರು? ನೀವು ಏತಕ್ಕೆ ಅದರ ರಕ್ಷಣೆಯ ಭಾಗವನ್ನು ವಹಿಸಿ, ಧರ್ಮಬೋಧನೆಯ ಕೆಲಸಕ್ಕೆ ನನ್ನನ್ನು ಬಿಡಕೂಡದು. ಹಗಲಿರುಳು ನಾನು ಅಪರಿಚಿತರಲ್ಲಿ ದುಡಿಯುತ್ತಿರುವೆನು. ಭರತಖಂಡ ನನಗೆ ಯಾವ ಸಹಾಯವನ್ನು ಕಳುಹಿಸುವುದು. ಭಾರತೀ ಯರಿಗಿಂತ ಕಡಿಮೆ ದೇಶಭಕ್ತಿಯುಳ್ಳವರನ್ನು, ಪ್ರಪಂಚ ಮತ್ತೆ ಯಾರ ಲ್ಲಿಯಾದರೂ ನೋಡಿದೆಯೆ? ಯೂರೋಪ್ ಮತ್ತು ಅಮೇರಿಕಾ ದೇಶದಲ್ಲಿ ಧರ್ಮಬೋಧನೆ ಮಾಡುವುದಕ್ಕಾಗಿ, ಹತ್ತಾರುಜನ ವಿದ್ಯಾವಂತರಾಗಿರುವ ವರನ್ನು ದೃಢಕಾಯರನ್ನು ಕಳುಹಿಸಿ. ಇಲ್ಲಿ ಅವರು ಇರುವುದಕ್ಕೆ ಖರ್ಚು ಕಳುಹಿಸಿದರೆ, ಇದರಿಂದ ರಾಜಕೀಯದೃಷ್ಟಿಯಿಂದಲೂ ನೈತಿಕ

ದೃಷ್ಟಿಯಿಂದಲೂ ಭರತಖಂಡಕ್ಕೆ ಒಳಳೆ ಸಹಾಯವಾಗುವುದು. ಅನೇಕ ಪಾಶ್ಚಾತ್ಯರು ನಿಮ್ಮನ್ನು ಇನ್ನೂ ಅರ್ಧ ಬೆತ್ತಲೆ ಕಾಡುಮನುಷ್ಯರೆಂದೂ, ನಿಮ್ಮನ್ನು ಬಲಾತ್ಕರಿಸಿದಲ್ಲದೆ ನಾಗರಿಕರಾಗುವವರಲ್ಲವೆಂದೂ, ತಿಳಿದುಕೊಂಡಿರುವರು. ಅವರ ಅಭಿಪ್ರಾಯವನ್ನು ಏಕೆ ನೀವು ಬದಲಾಯಿಸಕೂಡದು. ಈ ದೂರ ದೇಶದಲ್ಲಿ ಒಬ್ಬನು ಎಷ್ಟು ಕೆಲಸವನ್ನು ಮಾಡಬಲ್ಲೆನು? ನಾನು ನಿಮಗೆ ಮಾಡಿರುವಷ್ಟು ಕೆಲಸಕ್ಕೆ ಕೂಡ ನೀವು ಅರ್ಹರಲ್ಲ.

ಇಂದಿಗೂ ಪಾಶ್ಚಾತ್ಯ ದೇಶಗಳಿಗೆ ಬಂದ ಹಿಂದೂಗಳು, ತಮ್ಮ ಧರ್ಮವನ್ನು ಮತ್ತು ದೇಶವನ್ನು, ಕೀರ್ತಿ ದ್ರವ್ಯ ಗಳಿಸಬೇಕೆಂಬ ಆಸೆಯಿಂದ ದೂರಿರುವರು. ನಾನು ಕೀರ್ತಿ ಗೌರವಗಳನ್ನು ಗಳಿಸಬೇಕೆಂದು ಇಲ್ಲಿಗೆ ಬರಲಿಲ್ಲವೆನ್ನುವುದು ನಿನಗೆ ಗೊತ್ತಿದೆ. ನನಗೆ ಅದರ ಮೇಲೆ ಆಸೆ ಇಲ್ಲದೇ ಇದ್ದರೂ ಬಲವಂತವಾಗಿ ಅವು ನನ್ನೆಡೆಗೆ ಬಂದವು. ಭರತಖಂಡಕ್ಕೆ ನಾನು ಏತಕ್ಕೆ ಹಿಂತಿರುಗಬೇಕು? ಯಾರು ನನಗೆ ಸಹಾಯಮಾಡುತ್ತಾರೆ? ಧರ್ಮಬೋಧಿಸುವುದಕ್ಕಾಗಿ ಪ್ರಪಂಚವನ್ನು ತೊರೆಯಲು ಸಿದ್ಧರಾಗಿರುವ ಮದ್ರಾಸಿನವರೆಲ್ಲಿ? ತನ್ನ ದೇಶದ ಮಾನವನ್ನು ಕಾಪಾಡುವುದಕ್ಕೆ ಧೈರ್ಯವಾಗಿ ನಿಂತವನು ನಾನೊಬ್ಬ. ಹಿಂದೂಗಳಿಂದ ಅವರು ಎಂದೂ ನಿರೀಕ್ಷಿಸದ ಭಾವಗಳನ್ನು ನಾನು ಅವರಿಗೆ ಕೊಟ್ಟಿರುವೆನು. ಈ ದೇಶದಲ್ಲಿ ನನ್ನ ಸ್ನೇಹಿತರಾಗಿರುವವರು ಸಹಸ್ರಾರು ಮಂದಿ ಇರುವರು. ಪ್ರತಿ ವರುಷವು ಅವರ ಸಂಖ್ಯೆ ಹೆಚ್ಚುವುದು. ನಾನು ಅವರೊಂದಿಗೆ ಇದ್ದು ಕೆಲಸಮಾಡಿದರೆ ನನ್ನ ಜೀವನ ಮತ್ತು ಧಾರ್ಮಿಕ ಆದರ್ಶ ಸಫಲವಾಗುವುದು. ಇದು ನಿನಗೆ ಕಾಣುವುದೆ?

ಅಮೇರಿಕಾದೇಶದಲ್ಲಿ ಕಟ್ಟಬೇಕೆಂದಿದ್ದ ವಿಶ್ವಧರ್ಮದ ದೇವಾಲಯ ವಿಚಾರವಾಗಿ ನಾನು ಈಗ ಏನನ್ನು ಹೆಚ್ಚು ಕೇಳುತ್ತಿಲ್ಲ. ಆದರೂ ಅಮೇರಿಕಾ ಜೀವನದ ಕೇಂದ್ರವಾದ ನ್ಯೂಯಾರ್ಕಿನಲ್ಲಿ ನಾನು ಚೆನ್ನಾಗಿ ಬೇರೂರಿರುವೆನು. ಆದಕಾರಣ ನನ್ನ ಕೆಲಸ ಮುಂದೆ ಸಾಗುವುದು. ಯೋಗ, ಭಕ್ತಿ ಮತ್ತು ಜ್ಞಾನದಲ್ಲಿ ತಮ್ಮ ಅಭ್ಯಾಸವನ್ನು ಪೂರೈಸುವುದಕ್ಕೆ ಬೇಸಗೆಯ ಒಂದು ವಿಶ್ರಾಂತಿ ಸ್ಥಳಕ್ಕೆ ನನ್ನ ಅನೇಕ ಶಿಷ್ಯರನ್ನು

ಕರೆದುಕೊಂಡು ಹೋಗುತ್ತೇನೆ. ನಂತರ ಅವರು ಕೆಲಸವನ್ನು ಮುಂದೆ ಸಾಗಿಸುವುದಕ್ಕೆ ಸಹಾಯಕರಾಗುವರು. ನನ್ನ ಮಕ್ಕಳಿರಾ! ಈಗ ಕೆಲಸಕ್ಕೆ ಹೋಗಿ.

ಮಾಸಪತ್ರಿಕೆಗೆ ಇನ್ನು ಒಂದು ತಿಂಗಳೊಳಗಾಗಿ ಸ್ವಲ್ಪ ಹಣ ವನ್ನು ಕಳುಹಿಸುವ ಸ್ಥಿತಿಯಲ್ಲಿರುತ್ತೇನೆ. ಭಾರತೀಯ ತಿರುಪೆಗಾರರನ್ನು ಬೇಡುವುದಕ್ಕೆ ಹೋಗಬೇಡಿ. ನನ್ನ ಸ್ವಂತ ಮೇಧಾಶಕ್ತಿಯಿಂದ, ಬಲ ವಾದ ಬಲಕೈಯಿಂದ, ಎಲ್ಲವನ್ನು ನಾನೇ ಮಾಡುವೆನು. ಇಲ್ಲಿ ಅಥವಾ ಭರತಖಂಡದಲ್ಲಿ ಯಾವ ಮನುಷ್ಯನ ಸಹಾಯವೂ ಬೇಕಾಗಿಲ್ಲ. ರಾಮ ಕೃಷ್ಣರ ಅವತಾರ ವಿಚಾರವಾಗಿ ಹೆಚ್ಚು ಬೋಧಿಸಬೇಡಿ.

ನಾನು ಹೊಸದಾಗಿ ಕಂಡುಹಿಡಿದಿರುವುದನ್ನು ನಿನಗೆ ಹೇಳುತ್ತೇನೆ. ವೇದಾಂತದಲ್ಲಿ ಧರ್ಮದ ತಿರುಳೆಲ್ಲ ಅಡಕವಾಗಿದೆ. ಅಂದರೆ, ಅವೆಲ್ಲ ದ್ವೈತ, ವಿಶಿಷ್ಟಾದ್ವೈತ, ಅದ್ವೈತ ಈ ಮೂರು ಸ್ಥಿತಿಗಳಲ್ಲಿರುವುದು. ಇವು ಒಂದಾದಮೇಲೊಂದು ಬರುವುವು. ಮಾನವನ ಆತ್ಮವಿಕಾಸದ ಮೂರು ಬೆಳವಣಿಗೆ ಸ್ಥಿತಿಗಳಿವು. ಪ್ರತಿಯೊಂದು ಸಿದ್ಧಾಂತವೂ ಅತ್ಯಾವಶ್ಯಕ. ವೇದಾಂತವನ್ನು ಭರತಖಂಡದ ನಾನಾ ಜಾತಿ ಮತ್ತು ಆಚಾರಗಳೊಡನೆ ಪ್ರಯೋಗಿಸಿದಾಗ ಅದು ಹಿಂದೂ ಧರ್ಮವಾಗುತ್ತದೆ. ಮೊದಲನೇ ಮೆಟ್ಟಿಲಾದ ದ್ವೈತವನ್ನೇ ಯೂರೋಪಿನ ಜನಾಂಗಗಳೊಂದಿಗೆ ಸೇರಿಸಿದರೆ ಅದು ಕ್ರೈಸ್ತಧರ್ಮವಾಗುವುದು. ಅದ್ವೈತವನ್ನು ಯೋಗದ ಗ್ರಹಣ ಶಕ್ತಿಯೊಂದಿಗೆ ಬೆರಸಿದಾಗ ಅದು ಬೌದ್ಧಧರ್ಮವಾಗುವುದು, ಇತ್ಯಾದಿ. ಇಲ್ಲಿ ಧರ್ಮವೆಂದರೆ ವೇದಾಂತ ಎಂದು ಅರ್ಥ. ದೇಶ ಕಾಲ ನಿಮಿತ್ತಗಳಿ ಗನುಸಾರವಾಗಿ ಅದರ ಪ್ರಯೋಗ ಬೇರೆ ಬೇರೆ ರೂಪುತಾಳುವುದು. ತತ್ತ್ವವೆಲ್ಲ ಒಂದೇ ಆದರೂ, ಸಿಕ್ಕರು, ಶೈವರು ಮತ್ತು ಇನ್ನುಳಿದವರು ತಮ್ಮ ಜಾತಿ ವ್ಯವಹಾರಗಳಿಗೆ ಸರಿಯಾಗುವಂತೆ ಉಪಯೋಗಿಸುವರು. ಈಗ ನಿಮ್ಮ ಮಾಸಪತ್ರಿಕೆಯಲ್ಲಿ ಈ ಮೂರು ತತ್ತ್ವ ಸಂಪ್ರದಾಯದ ಮೇಲೆ ಲೇಖನಗಳನ್ನು ಬರೆದು, ಅವು ಹೇಗೆ ಒಂದಾದ ಮೇಲೊಂದು ಬರುತ್ತವೆ ಎಂದು ತೋರಿಸಬೇಕು. ಬಾಹ್ಯ ಆಚಾರಗಳಾವುದನ್ನೂ ಗಮನಕ್ಕೆ ತೆಗೆದುಕೊಳ್ಳಕೂಡದು. ಅಂದರೆ ತತ್ತ್ವವನ್ನು, ಆಧ್ಯಾತ್ಮಿಕಭಾಗ

ವನ್ನು ಮಾತ್ರ ಬೋಧಿಸಿ. ಜನರು ತಮ್ಮ ತಮ್ಮ ಆಚಾರ ವ್ಯವಹಾರಗಳಿಗೆ ತಾವೇ ಅದನ್ನು ಹೊಂದಿಸಿಕೊಳ್ಳಲಿ. ನಾನು ಈ ವಿಷಯದ ಮೇಲೆ ಒಂದು ಪುಸ್ತಕವನ್ನು ಬರೆಯಬೇಕೆಂದಿದ್ದೆ. ಆದಕ್ಕಾಗಿ ನನಗೆ ಮೂರು ಭಾಷ್ಯಗಳೂ ಬೇಕಾಗಿತ್ತು. ಇಲ್ಲಿಯವರೆವಿಗೂ ರಾಮಾನುಜಾಚಾರ್ಯರ ಒಂದು ಭಾಗ ಮಾತ್ರ ತಲುಪಿದೆ.

ನಾನು ಹೆಚ್ಚು ಬರವಣಿಗೆಗಾರನಲ್ಲ ಎಂಬುದು ನಿನಗೆ ಗೊತ್ತಿದೆ. ಮನೆಯಿಂದ ಮನೆಗೆ ಭಿಕ್ಷೆ ಬೇಡಲು ಹೋಗುವ ಸ್ವಭಾವದವನಲ್ಲ. ನಾನು ಸುಮ್ಮನೇ ಕುಳಿತುಕೊಳ್ಳುವೆನು. ವಸ್ತುಗಳು ನನ್ನಲ್ಲಿಗೇ ಬರಲಿ. ನನ್ನ ಪ್ರಿಯ ಮಕ್ಕಳಿರಾ! ನಾನು ಪ್ರಾಪಂಚಿಕ ಕಪಟಿಯಾಗಿದ್ದರೆ, ಇಲ್ಲಿ ಎಲ್ಲವನ್ನೂ ಆಕರ್ಷಿಸುವಂತೆ ಆಣೆಮಾಡುವುದರಲ್ಲಿ ದೊಡ್ಡ ಜಯವನ್ನು ಸಂಪಾದಿಸುತ್ತಿದ್ದೆ. ಅಯ್ಯೋ! ಧರ್ಮವೆಂಬುದೆಲ್ಲ ಇಲ್ಲಿ ಆಟ. ಪಾದ್ರಿಗಳಿಗೆ ಬೇಕಾದುದು ಕೀರ್ತಿ, ಹಣ, ಗೃಹಸ್ಥನಿಗೆ ಹಣ, ಭೋಗ. ದೇವರಲ್ಲೇ ಪರಮ ನಂಬಿಕೆಯನ್ನಿಟ್ಟು, ಪ್ರಪಂಚದ ಯಾವ ವಸ್ತುವಿನ ಆಸೆಯೂ ಇಲ್ಲದೆ ಇರುವ, ಒಂದು ಹೊಸ ಮಾನವ ಜನಾಂಗವನ್ನು ನಾನು ನಿರ್ಮಾಣಮಾಡಬೇಕಾಗಿದೆ. ಇದು ಬಹಳ ನಿಧಾನವಾದ ಕೆಲಸ. ಅದುವರೆವಿಗೂ ನಿಮ್ಮ ಕೆಲಸವನ್ನು ನೀವು ಮಾಡಿ. ನಾನು ನನ್ನ ಗುರಿ ಎಡೆಗೆ ನೇರವಾಗಿ ಹೋಗುವೆನು. ಮಾಸಪತ್ರಿಕೆ ಬರಿಯ ಕ್ಷಣಕಾಲದ ಸ್ಫೂರ್ತಿಯಾಗಿರಕೂಡದು. ಮಾಸಪತ್ರಿಕೆ ಸ್ಥಿರವಾಗಿರಬೇಕು, ಶಾಂತವಾಗಿರಬೇಕು, ಉತ್ತಮ ವಿಷಯಗಳನ್ನು ಒಳಗೊಂಡಿರಬೇಕು. ಕೆಲವು ಜನ ಚೆನ್ನಾಗಿ ಸ್ಥಿರವಾಗಿ ಬರೆಯಬಲ್ಲವರನ್ನು ಕರೆದುಕೊಳ್ಳಿ. ಸಂಪೂರ್ಣ ನಿಸ್ವಾರ್ಥರಾಗಿ, ದೃಢಚಿತ್ತರಾಗಿ, ಕೆಲಸಮಾಡಿ. ನಾವು ಮಹಾಕಾರ್ಯವನ್ನು ಸಾಧಿಸುತ್ತೇವೆ. ನೀವು ಅಂಜಬೇಡಿ. ಮತ್ತೊಂದು ವಿಷಯವಿದೆ. ಎಲ್ಲರ ದಾಸನಾಗಿ ಇನ್ನೊಬ್ಬರ ಮೇಲೆ ಸ್ವಲ್ಪವೂ ಅಧಿಕಾರವನ್ನು ಚಲಾಯಿಸದೆ ಇರುವುದಕ್ಕೆ ಪ್ರಯತ್ನಪಡಿ. ಇನ್ನೊಬ್ಬರ ಮೇಲೆ ನಮ್ಮ ಅಧಿಕಾರವನ್ನು ಉಪಯೋಗಿಸುವುದರಿಂದ ಅಸೂಯೆ ಹುಟ್ಟುವುದು. ಅದು ಹುಟ್ಟಿದರೆ ಕೆಲಸವೆಲ್ಲ ವ್ಯರ್ಥವಾಗುವುದು. ಮುಂದುವರಿಯಿರಿ. ನೀವು ಬಹಳ ಚೆನ್ನಾಗಿ ಕಷ್ಟಪಟ್ಟಿರುವಿರಿ. ನನ್ನ ಮಗು! ಈ ಕೆಲಸವನ್ನು

ನಾವು ಸಾಧಿಸುತ್ತೇವೆ. ಸ್ವಾವಲಂಬಿಯಾಗು, ಭಕ್ತಿಯುಳ್ಳವನಾಗು, ಶಾಂತನಾಗು. ನನ್ನ ಇತರ ಸ್ನೇಹಿತರೊಂದಿಗೆ ಮನಸ್ತಾಪವನ್ನು ತಂದುಕೊಳ್ಳಬೇಡ. ಎಲ್ಲರೊಂದಿಗೂ ಸೌಹಾರ್ದದಿಂದ ಬಾಳು. ಎಲ್ಲರಿಗೂ ನನ್ನ ಅನಂತ ಪ್ರೇಮ.

ಆಶೀರ್ವಾದಗಳೊಡನೆ, ಸತತವೂ ನಿನ್ನ
ವಿವೇಕಾನಂದ.

ಪಿ.ಸೂ.—ಮುಂದಾಳೆಂದು ನೀನೇ ಮುಂದೆ ನಿಂತರೆ ಯಾರೂ ನಿನಗೆ ಸಹಾಯ ಮಾಡುವುದಕ್ಕೆ ಬರುವುದಿಲ್ಲ. ನೀನು ಮುಂದುವರಿಯಬೇಕೆಂದಿದ್ದರೆ, ನಾನು ಎಂಬ ಅಹಂಕಾರವನ್ನು ನಾಶಮಾಡು.

### ೫೬

೧೮೯೫

ಪ್ರಿಯ—,

ನ—ಏನು ಮಾಡುತ್ತಿರುವನೋ ಅದನ್ನು ನಾನು ಸಂಪೂರ್ಣ ಒಪ್ಪುತ್ತೇನೆ. ಶ್ರೀ ರಾಮಕೃಷ್ಣ ಪರಮಹಂಸರು ಅವತಾರ ಇತ್ಯಾದಿಗಳನ್ನು ಬೋಧಿಸಬೇಕಾಗಿಲ್ಲ. ಜನದ ಹಿತಕ್ಕೋಸ್ಕರವಾಗಿ ಅವರು ಬಂದರೆ ಹೊರತು, ಕೀರ್ತಿ ಗೌರವದ ಆಸೆಗೆ ಬರಲಿಲ್ಲ. ಇದನ್ನು ಯಾವಾಗಲೂ ನೀವು ಮರೆಯಬಾರದು. ಶಿಷ್ಯರು ಯಾವಾಗಲೂ ತಮ್ಮ ಗುರುವಿನ ಕೀರ್ತಿ ಉಳಿಯಬೇಕೆಂದು ಬಯಸಿ ಅವರ ಉಪದೇಶವನ್ನು ಮೂಲೆಗೊತ್ತುವರು. ಇದರಿಂದ ಜಾತಿದ್ವೇಷ ಮುಂತಾದುವು ಬರುವುವು. ಅವನು, ನ—ನ ವಿಚಾರವಾಗಿ ಬರೆಯುತ್ತಾನೆ. ಆದರೆ ನನಗೆ ಅವನ ಜ್ಞಾಪಕವೇ ಸಿಕ್ಕುವುದಿಲ್ಲ. ಅವನ ವಿಚಾರವಾಗಿ ಸಂಪೂರ್ಣವಾಗಿ ಎಲ್ಲವನ್ನೂ ಬರೆದು ನನ್ನ ವಂದನೆಗಳನ್ನು ಆತನಿಗೆ ತಿಳಿಸು. ಎಲ್ಲರ ವಿಷಯವಾಗಿ ವಿಶದವಾದ ಕಾಗದ ಬರೆ. ಕಾಡು ಹರಟೆಗೆ ನನಗೆ ಸಮಯವಿಲ್ಲ. ಬಾಹ್ಯ ಆಚಾರಗಳನ್ನು ಬಿಡಲು ಪ್ರಯತ್ನಮಾಡಿ. ಇದೆಲ್ಲ ಸನ್ಯಾಸಿಗಳಿಗೆ

ಆವಶ್ಯಕವಿಲ್ಲ. ಎಲ್ಲಿಯವರೆವಿಗೂ ಒಬ್ಬನಿಗೆ ಸತ್ಯ ಸಾಕ್ಷಾತ್ಕಾರವಾಗಿ ಲ್ಲವೋ, ಅಲ್ಲಿಯವರೆವಿಗೆ ಮಾತ್ರ ಅವನು ಕೆಲಸಮಾಡಬೇಕು. ನಾನು ಇನ್ನು ಏನನ್ನು ಬೇಕಾದರೂ ಮಾಡುವೆನು. ಆದರೆ ಮತಕಲಹ, ಪಂಗಡ ಗಳನ್ನು ಸ್ಥಾಪಿಸುವುದು, ಕೂಪಮಂಡೂಕದಂತೆ ಇರುವುದು, ಇವು ಗಳೊಂದಿಗೆ ಸಂಬಂಧಪಟ್ಟುಕೊಳ್ಳಲಾರೆ. ಶ್ರೀ ರಾಮಕೃಷ್ಣ ಪರಮಹಂಸರ ಉದಾರ ಬೋಧನೆಯನ್ನು ಉಪದೇಶಿಸುವುದು, ಅದೇ ಸಮಯದಲ್ಲಿ ಒಂದು ಪಂಗಡವನ್ನು ಮಾಡುವುದು, ಇವೆರಡೂ ಒಮ್ಮೆಯೇ ಸಾಧ್ಯವಿಲ್ಲ. ನನಗೆ ಒಂದುಬಗೆಯ ಕೆಲಸಮಾತ್ರ ತಿಳಿಯುತ್ತದೆ. ಅದೇ ಪರೋಪ ಕಾರ. ಉಳಿದೆಲ್ಲವೂ ಪಾಪವನ್ನು ಮಾಡಿದಂತೆ. ಆದಕಾರಣ ನಾನು ಭಗವಾನ್ ಬುದ್ಧದೇವನಿಗೆ ನಮಸ್ಕಾರ ಮಾಡುತ್ತೇನೆ. ನಾನು ವೇದಾಂತಿ, ನನಗೆ ಸಚ್ಚಿದಾನಂದನೇ ದೇವರು. ನನ್ನ ಆತ್ಮದ ಗಂಭೀರ ವಾದ ಆಕಾರವಲ್ಲದೆ, ಮತ್ತೆ ಬೇರೆಯಾವ ದೇವರು ಕಾಣುವುದು ಅಪ ರೂಪ. "ಅವತಾರ" ಎಂದರೆ ಯಾರು ಬ್ರಹ್ಮತ್ವವನ್ನು ಪಡೆದಿರುವರೋ ಅವರು ಎಂದು. ಅವತಾರಗಳ ವಿಚಾರದಲ್ಲಿ ನನಗೆ ಬೇರೆ ಏನೂ ವಿಶೇಷವಾಗಿ ಕಾಣುವುದಿಲ್ಲ. ಬ್ರಹ್ಮನಿಂದಹಿಡಿದು ತೃಣದವರೆಗೆ ಎಲ್ಲವೂ ಕಾಲಾನುಕಾಲದಲ್ಲಿ ಮೋಕ್ಷವನ್ನು ಪಡೆದೇ ಪಡೆಯುವುವು. ಎಲ್ಲರೂ ಆ ಸ್ಥಿತಿಗೆ ಬರುವಂತೆ ಅವರಿಗೆ ಸಹಾಯಮಾಡುವುದೇ ನಮ್ಮ ಕೆಲಸ. ಈ ಸಹಾಯ ಒಂದೇ ಧರ್ಮ. ಉಳಿದವೆಲ್ಲವೂ ಪಾಪಕರ್ಮ. ಬೇರೇನೂ ನನಗೆ ಕಾಣುವುದಿಲ್ಲ. ವೈದಿಕ ತಾಂತ್ರಿಕ ಮುಂತಾದ ಬೇರೆತರಹ ಕೆಲಸಗಳಿಂದಲೂ ಪ್ರತಿಫಲವುಂಟಾಗುವುದು. ಆದರೆ ಅವುಗಳ ನ್ನೆಲ್ಲ ಮಾಡುವುದು ಸುಮ್ಮನೇ ಜೀವನವನ್ನು ವ್ಯರ್ಥಮಾಡಿದಂತೆ. ಕರ್ಮದ ಗುರಿಯಾದ ಚಿತ್ತಶುದ್ಧಿ ಪರೋಪಕಾರದಿಂದ ಮಾತ್ರ ಸಿದ್ಧಿಸು ವುದು. ಯಾಗ ಯಜ್ಞಗಳಿಂದ ಭೋಗವೇನೊ ಸಿಕ್ಕಬಹುದು. ಆದರೆ ಚಿತ್ತಶುದ್ಧಿಯಾಗುವುದಿಲ್ಲ. ಎಲ್ಲವೂ ಆಗಲೇ ಎಲ್ಲರ ಅಂತರಾತ್ಮದಲ್ಲಿ ಇರುವುದು. ಯಾರು ಅದನ್ನು ಪ್ರತಿಪಾದಿಸುತ್ತಾರೋ ಅವರು ಮುಕ್ತರು, ಮುಕ್ತರಾಗಿಯೇ ಆಗುತ್ತಾರೆ. ತಾನು ಬದ್ಧನೆಂದು ಯಾರು ಹೇಳಿಕೊಳ್ಳುತ್ತಾನೋ ಅವನು ಬದ್ಧನಾಗಿಯೇ ಇರುವನು.

ನನಗೆ, ಒಬ್ಬನು ತಾನು ನೀಚ ದೀನ ಎಂದು ಹೇಳಿಕೊಳ್ಳುವುದೇ ಪಾಪ, ಅಜ್ಞಾನ. "ನಾಯಮಾತ್ಮಾ ಬಲಹೀನೇನ ಲಭ್ಯಃ" ಬಲಹೀನನಿಗೆ ಆತ್ಮನೆಂದಿಗೂ ಲಭಿಸುವುದಿಲ್ಲ. "ಅಸ್ತಿ ಬ್ರಹ್ಮ ವದಸಿ ಚೇದಸ್ತಿ ಭವಿಷ್ಯತಿ. ನಾಸ್ತಿ ಬ್ರಹ್ಮ ವದಸಿ ಚೇನ್ನಾಸ್ತ್ಯೇವ ಭವಿಷ್ಯತಿ." ಬ್ರಹ್ಮನಿರುವನೆಂಬುದು ಹೇಳಿದರೆ ಆಗ ಅದನ್ನು ಸಿದ್ಧಿಸುವುದು. ಬ್ರಹ್ಮನಿಲ್ಲವೆಂದರೆ ಶೂನ್ಯ ಸಿದ್ಧಿಸುವುದು. ಯಾರು ತಾನು ದುರ್ಬಲನೆಂದು ಯಾವಾಗಲೂ ಚಿಂತಿಸುತ್ತಿರುವನೋ ಅವನು ಎಂದಿಗೂ ಬಲಾಢ್ಯನಾಗುವುದಿಲ್ಲ. ಆದರೆ ಯಾರು ತಾನು ಸಿಂಹವೆಂದು ತಿಳಿದುಕೊಂಡಿರುವನೋ "ನಿರ್ಗಚ್ಛತಿ ಜಗಜ್ಜಾಲಾತ್ ಪಿಂಜರಾದಿವ ಕೇಸರಿ," ಸಿಂಹವು ತನ್ನ ಪಂಜರವನ್ನು ಸೀಳಿಕೊಂಡು ಬರುವಂತೆ ಪ್ರಪಂಚದ ಬಂಧನಗಳನ್ನು ಹರಿದು ಹೊರಗೆ ಬರುವನು. ಮತ್ತೊಂದು ವಿಷಯವೇನೆಂದರೆ, ಶ್ರೀ ರಾಮಕೃಷ್ಣ ಪರಮಹಂಸರ ಆಗಮನದಿಂದ ಹಳೆಯ ಸತ್ಯಗಳೇನೊ ಬೆಳಕಿಗೆ ಬಂದರೂ ಯಾವುದೊಂದು ಹೊಸದನ್ನು ಅವರು ಬೋಧಿಸಲಿಲ್ಲ. ಬೇರೆ ಮಾತುಗಳಲ್ಲಿ ಹೇಳುವುದಾದರೆ ಭರತಖಂಡದ ಕಳೆದ ಎಲ್ಲಾ ಧರ್ಮಸಿದ್ಧಾಂತಗಳು ಅವರಲ್ಲಿ ಮೂರ್ತಿಗೊಂಡಿದ್ದುವು. ಶಾಸ್ತ್ರವೆಂದರೆ ಏನು, ಅವುಗಳ ರಚನೆ, ಅವುಗಳ ಉದ್ದೇಶ ಇವುಗಳನ್ನು, ಇವರ ಜೀವನದ ಬೆಳಕಿನಿಂದಲೇ ತಿಳಿದುಕೊಳ್ಳಲು ಸಾಧ್ಯವಾಯಿತು.

ಈ ದೇಶದಲ್ಲಿ ನನಗೆ ಪರೋಕ್ಷವಾಗಿ ಪಾದ್ರಿಗಳು ಮತ್ತು ಇತರರು ಏನೂ ಕೆಡುಕು ಮಾಡಲಾಗಲಿಲ್ಲ. ದೇವರ ದಯೆಯಿಂದ ಇಲ್ಲಿಯ ಜನರು ನನ್ನನ್ನು ಬಹಳವಾಗಿ ಪ್ರೀತಿಸುವರು. ಇವರು ಹೇಳುವ ಚಾಡಿಗೆ ಕಿವಿಕೊಡುವವರಲ್ಲ. ನನ್ನ ಸ್ವದೇಶದ ಜನರು ಕೂಡ ಮೆಚ್ಚಲಾರದಷ್ಟು ಇಲ್ಲಿಯ ಜನರು ನನ್ನ ಆಲೋಚನೆಗಳನ್ನು ಶ್ಲಾಘಿಸುವರು. ಅವರು ಸ್ವಾರ್ಥಪರರಲ್ಲ. ಕೆಲಸದ ಸಮಯಬಂದರೆ ಪರಸ್ಪರ ಈರ್ಷ್ಯೆ ಅಸೂಯೆಗಳನ್ನು ಬಿಡುವರು. ಯೋಗ್ಯವುಳ್ಳ ಮುಂದಾಳುವಿನ ನೇತೃತ್ವದಲ್ಲಿ ಎಲ್ಲರೂ ಒಪ್ಪಿ ಕೆಲಸಮಾಡಲು ಸಿದ್ಧರಾಗಿರುವರು. ಅವರನ್ನು ದೊಡ್ಡವರನ್ನಾಗಿ ಮಾಡಿರುವುದೇ ಇದು. ಆದರೆ ಅವರೆಲ್ಲ ಕುಬೇರನನ್ನು ಪೂಜಿಸುವ ಜನಾಂಗ. ಹಣ ಎಲ್ಲಕ್ಕಿಂತ ಮೊದಲು ಬರುವುದು.

ಹಣಕಾಸಿನ ವಿಚಾರದಲ್ಲಿ ನಮ್ಮ ಜನ ಸ್ವಲ್ಪ ಧಾರಾಳಿಗಳು, ಈ ಜನರು ಅಷ್ಟು ಧಾರಾಳಿಗಳಲ್ಲ. ಪ್ರತಿಯೊಂದು ಮನೆಯಲ್ಲಿಯೂ ಒಬ್ಬ ಜಿಪುಣ ಇದ್ದೇ ಇರುವನು. ಇದೇ ಒಂದು ಧರ್ಮವಾಗಿದೆ ಇಲ್ಲಿ. ಏನಾದರೂ ಪಾಪಕೃತ್ಯವನ್ನು ಮಾಡಿದಾಗ ಪಾದ್ರಿಯ ಕೈಗೆ ಬೀಳುವರು. ಆಗ ಸ್ವರ್ಗಕ್ಕೆ ಹೋಗಲು ಅಪ್ಪಣೆ ಚೀಟಿ ಪಡೆಯುವುದಕ್ಕೆ ಹಣಸುರಿಯುವರು. ಪೌರೋಹಿತ್ಯವೆಂಬುದು ಎಲ್ಲಾ ದೇಶದಲ್ಲಿಯೂ ಒಂದೇ. ನಾನು ಇಂಡಿಯಾದೇಶಕ್ಕೆ ಹಿಂತಿರುಗುತ್ತೇನೆಯೇ, ಹಾಗೆ ಹಿಂತಿರುಗಿದರೆ ಎಂದು, ಎಂಬ ವಿಚಾರಗಳಮೇಲೆ ನಾನು ಯಾವುದನ್ನು ಹೇಳಲಾರೆ. ಇಲ್ಲಿಯಂತೆ ಅಲ್ಲಿಯೂ ಕೂಡ ಅಲೆಯುವ ಜೀವನವನ್ನು ನಡೆಸಬೇಕು. ಆದರೆ ಇಲ್ಲಿ ಸಾವಿರಾರುಜನರು ನಾನು ಹೇಳಿದುದನ್ನು ಕೇಳುವರು, ಮತ್ತು ತಿಳಿದುಕೊಳ್ಳುವರು. ಇವರಿಗೆಲ್ಲರಿಗೂ ಉಪಯೋಗವಾಗಿದೆ. ಆದರೆ ಇಂಡಿಯಾದೇಶದ ವಿಚಾರವಾಗಿ ನೀವು ಹೀಗೆ ಹೇಳುವುದಕ್ಕೆ ಆಗುವುದೆ? ಜಿ- ಮಾಡುತ್ತಿರುವುದನ್ನು ನಾನು ಸಂಪೂರ್ಣ ಒಪ್ಪುತ್ತೇನೆ. ಆತನಿಗೆ ಸಾವಿರ ವಂದನೆಗಳು. ಮದ್ರಾಸು ಮತ್ತು ಬೊಂಬಾಯಿನಲ್ಲಿ ನನಗೆ ಬೇಕಾದವರು ಹಲವರು ಇರುವರು. ಅವರು ವಿದ್ಯಾವಂತರು. ನಾನು ಹೇಳುವುದು ಅವರಿಗೆ ಅರ್ಥವಾಗುವುದು. ಹೇಗಾದರೂ ಅವರು ದಯಾಪರರು. ಪರೋಪಕಾರದ ಭಾವವನ್ನು ಮೆಚ್ಚುವರು. ಪುಸ್ತಕ ಮುಂತಾದುವುಗಳನ್ನೇನು ನಾನು ಅಚ್ಚು ಹಾಕಿಸಿಲ್ಲ. ನಾನು ಸುಮ್ಮನೆ ಉಪನ್ಯಾಸಮಾಡುತ್ತ ಹೋಗುವೆನು. ಇದುವರೆವಿಗೂ ಮಾಡಿದುದನ್ನು ಕುರಿತು ಚಿಂತಿಸಿದರೆ ನನಗೆ ಯಾವ ವ್ಯಸನವೂ ಆಗುವುದಿಲ್ಲ. ಅಲ್ಲಿಯ ಜನರಿಗೆ ಏನಾದರೂ ಸ್ವಲ್ಪ ಬೋಧನೆಮಾಡುತ್ತ, ಅವರು ಒದಲಾಗಿಕೊಡುವ ಆಹಾರವನ್ನು ಸ್ವೀಕರಿಸಿ, ಒಂದು ದೇಶವಾದ ಮೇಲೆ ಮತ್ತೊಂದು ದೇಶವನ್ನು ಸುತ್ತುತ್ತಿರುವೆನು. ನಾನೇನಾದರೂ ಏನೂ ಕೆಲಸಮಾಡದೆ ಜನರಿಗೆ ಹೊರೆಯಾಗಿ ಅವರಿಂದ ಆಹಾರವನ್ನು ಸ್ವೀಕರಿಸಿದನೆಂದು ತಿಳಿದಿದ್ದರೆ ಇಂದು ನಾನು ಆತ್ಮಹತ್ಯಮಾಡಿಕೊಳ್ಳುತ್ತಿದ್ದೆ. ತಮ್ಮ ಜನರಿಗೆ ತಾವು ಬೋಧನೆಮಾಡಲು ಅರ್ಹರಲ್ಲವೆಂದು ತಿಳಿದವರು, ಗುರುವಿನ ವೇಷವನ್ನು ಏತಕ್ಕೆ ತಾಳಬೇಕು? ಜನರನ್ನು

ಮೋಸಗೊಳಿಸಿ ನಾವು ಆಹಾರವನ್ನು ಏತಕ್ಕೆ ಸಂಪಾದಿಸಬೇಕು ? ಅದು ಘೋರಪಾತಕವಲ್ಲವೆ ?

ನಿಮ್ಮ ವಿವೇಕಾನಂದ.

೫೪

ಅಮೆರಿಕಾ.
೧ ನೇ ಜುಲೈ. ೧೮೯೫.

ನಿಮ್ಮನ್ನು ನೀವೇ ಉದ್ಧಾರಮಾಡಿಕೊಳ್ಳಬೇಕೆಂದು ಹೇಳುತ್ತೇನೆ. ಮಕ್ಕಳಂತೆ ಏತಕ್ಕೆ ಅಳುವಿರಿ? ನಿಮ್ಮ ಧರ್ಮವನ್ನು ಯಾರಾದರೂ ಖಂಡಿಸಿದರೆ ನೀವು ಅದನ್ನು ಏತಕ್ಕೆ ರಕ್ಷಿಸಬಾರದು. ನನಗೋಸುಗವಾಗಿ ನೀವೇನೂ ಅಂಜಬೇಕಾಗಿಲ್ಲ. ವೈರಿಗಳಿಗಿಂತ ಹೆಚ್ಚು ಸ್ನೇಹಿತರು ನನಗೆ ಇಲ್ಲಿರುವರು. ಈ ದೇಶದಲ್ಲಿ ಮೂರನೆ ಒಂದುಭಾಗ ಮಾತ್ರ ಕ್ರೈಸ್ತರು. ಅವರಲ್ಲಿ ಎಲ್ಲೋ ಕೆಲವರು ವಿದ್ಯಾವಂತರು ಮಾತ್ರ ಪಾದ್ರಿಗಳಿಗೆ ಗೌರವ ಕೊಡುತ್ತಾರೆ. ಯಾವುದನ್ನು ಪಾದ್ರಿಗಳು ದ್ವೇಷಿಸುವರೊ ಅದೇ ವಿದ್ಯಾವಂತರನ್ನು ಪ್ರೀತಿಸುವಂತೆ ಮಾಡುತ್ತದೆ. ಇಲ್ಲಿ ಸದ್ಯಕ್ಕೆ ಅವರಿಂದ ಏನೂ ನಡೆಯುವ ಹಾಗಿಲ್ಲ. ಕ್ರಮೇಣ ಅವರ ಶಕ್ತಿ ಉಡುಗುತ್ತಿದೆ. ಅವರು ನನ್ನನ್ನು ದೂರುವುದರಿಂದ ನಿನಗೆ ವ್ಯಸನವಾದರೆ ಎಳೆಯ ಮಗುವಿನಂತೆ ನನಗೆ ಏತಕ್ಕೆ ಬಂದು ಹೇಳುವಿರಿ. ಹೇಡಿತನ ಎಂದೂ ಒಂದು ಸುಗುಣವಲ್ಲ.

ಇಲ್ಲಿ ಆಗಲೇ ಅನೇಕಜನ ಗೌರವಸ್ಥರು ನನ್ನ ಅನುಯಾಯಿಗಳಾಗಿರುವರು. ಬರುವ ವರುಷ ಇದೆಲ್ಲವನ್ನು ಕೆಲಸಕ್ಕೆ ಅನುಕೂಲವಾದ ತಳಹದಿಯಮೇಲೆ ವ್ಯವಸ್ಥೆಮಾಡುತ್ತೇನೆ. ನಂತರ ಕೆಲಸ ಮುಂದುವರಿಯುತ್ತದೆ. ನಾನು ಭರತಖಂಡಕ್ಕೆ ಹಿಂತಿರುಗಿದಮೇಲೆ ಇಲ್ಲಿ ನನಗೆ ಸಹಾಯಮಾಡಿ, ಭರತಖಂಡದಲ್ಲೂ ಸಹಾಯ ಮಾಡುವ ಸ್ನೇಹಿತರು ಇರುವರು. ಅದಕ್ಕೋಸ್ಕರವಾಗಿ ನೀವೇನು ಅಂಜಬೇಕಾಗಿಲ್ಲ.

ಪಾದ್ರಿಗಳ ಪ್ರಯತ್ನಕ್ಕೆ ನೀವು ಎಲ್ಲಿಯವರೆವಿಗೂ ಕೂಗಾಡುತ್ತ ಕೆಲಸ ಮಾಡದೆ ಕುಣಿದಾಡುವಿರೋ, ಅಲ್ಲಿಯವರೆವಿಗೂ ನಾನು ನಿಮ್ಮನ್ನು ನೋಡಿ ನಗಬೇಕಾಗಿದೆ. ನೀವೆಲ್ಲ ಇನ್ನೂ ಎಳೆಯ ಹಾಲುಕುಡಿಯುವ ಮಕ್ಕಳು. ಅದಲ್ಲದೆ ಬೇರೇನೂ ಅಲ್ಲ. ಈ ವಯಸ್ಸುಬಂದ ಎಳೆ ಮಕ್ಕಳಿಗೆ ಸ್ವಾಮಿ ಏನುಮಾಡಬೇಕು ?

ನಾನು ಬಂದು ನಿಮ್ಮನ್ನು ಹುರಿದುಂಬಿಸಿ ಪುರುಷಸಿಂಹರನ್ನಾಗಿ ಮಾಡಬೇಕೆಂಬುದು ನನಗೆ ಗೊತ್ತಿದೆ. ಭರತಖಂಡದಲ್ಲಿ ಇರುವವರೆಲ್ಲ ಬರಿಯ ಶಿಖಂಡಿಗಳು, ಮತ್ತು ಸ್ತ್ರೀಯರು ಎಂಬುದು ನನಗೆಗೊತ್ತಿದೆ. ಅದಕ್ಕೇನೂ ಗೊಣಗಾಡಬೇಡಿ. ಅಲ್ಲಿ ಕೆಲಸಮಾಡುವುದಕ್ಕೆ ನನಗೆ ಸ್ವಲ್ಪ ಸಹಾಯಬೇಕಾಗಿದೆ. ಮೂರ್ಖರ ಕೈಯಲ್ಲಿ ನಾನು ಬೀಳುವುದಿಲ್ಲ. ನೀವು ಚಿಂತೆಪಡಬೇಕಾಗಿಲ್ಲ. ನಿಮ್ಮ ಕೈಯಲ್ಲಿ ಎಷ್ಟು ಸ್ವಲ್ಪ ಸಾಧ್ಯವಾದರೆ ಅಷ್ಟನ್ನು ಮಾಡಿ. ಆಪಾದಮಸ್ತಕದವರೆವಿಗೂ ನಾನೆ ಕೆಲಸಮಾಡಬೇಕಾಗುವುದು. "ಬಲಹೀನರಿಗೆ ಆತ್ಮಲಭ್ಯವಾಗುವುದಿಲ್ಲ." ನನಗೋಸುಗವಾಗಿ ನೀವು ಅಂಜಬೇಕಾಗಿಲ್ಲ. ದೇವರು ನನ್ನೊಂದಿಗೆ ಇರುವನು. ನಿಮ್ಮನ್ನು ನೀವು ಕಾಪಾಡಿಕೊಂಡರೆ ಸಾಕು. ನಿಮ್ಮಿಂದ ಅದು ಸಾಧ್ಯವೆಂದು ತೋರಿಸಿದರೆ ನನಗೆ ಅದರಿಂದಲೇ ತೃಪ್ತಿಯಾಗುವುದು. ಯಾರು ನನ್ನ ಮೇಲೆ ಏನು ದೂರುತ್ತಾರೆ ಎಂದು ಹೇಳುವುದರಿಂದ ವೃಥಾ ನನಗೆ ತೊಂದರೆ ಕೊಡಬೇಡ. ಮೂರ್ಖರು ನನ್ನ ಮೇಲೆ ಕೊಡುವ ನಿರ್ಣಯಕ್ಕೆ ನಾನು ಕಾದುಕುಳಿತಿಲ್ಲ. ಎಳೆ ಮಕ್ಕಳೆ! ಮಹತ್ ಕಾರ್ಯಸಾಧನೆಗೆ ಕಡುದಿಟ್ಟತನ ಮತ್ತು ಮಹಾಪ್ರಯತ್ನಗಳು ಬೇಕಾಗಿವೆ.

ಧೀರರುಮಾತ್ರ ಮಹತಾ ಕಾರ್ಯಗಳನ್ನು ಸಾಧಿಸಬಲ್ಲರು. ಹೇಡಿಗಳಲ್ಲ. ಶ್ರದ್ಧಾವಿಹೀನರೆ! ನೀವು ಖಂಡಿತ ತಿಳಿಯಿರಿ, ನಾನು ದೇವರ ಕೈಯಲ್ಲಿರುವೆನು. ನಾನು ಎಲ್ಲಿಯವರೆವಿಗೂ ಪರಿಶುದ್ಧನಾಗಿರುವೆನೋ ಅಲ್ಲಿಯವರೆವಿಗೂ ನನ್ನ ತಲೆಯ ಒಂದು ಕೂದಲನ್ನು ಕೂಡ ಯಾರೂ ಮುಟ್ಟಲಾರರು. ದೇಶದ ಹಿತಕ್ಕೆ ನೀವು ಏನಾದರೂ ಕೆಲಸಮಾಡಿ,

ನಂತರ ಜನಾಂಗ ನಿಮಗೆ ಸಹಾಯಮಾಡುವುದು. ನಂತರ ದೇಶವೇ ನಿಮ್ಮ ಪರವಾಗಿರುವುದು. ಧೀರರಾಗಿ! ಧೀರರಾಗಿ! ಮನುಷ್ಯ ಮಡಿಯುವು ದೊಂದೇ ಬಾರಿ: ನನ್ನ ಶಿಷ್ಯರು ಹೇಡಿಗಳಾಗಬಾರದು.

ಅನವರತವು ನಿನ್ನ ಪ್ರೀತಿಪೂರ್ವಕ.
ವಿವೇಕಾನಂದ.

೨೮೪

ಸಹಸ್ರದ್ವೀಪೋದ್ಯಾನ.
ಆಗಸ್ಟ್ ೧೮೯೫

ಪ್ರಿಯ—,

ಮಿ॥ ಸ್ಟರ್ಡಿಯಿಂದ ಮತ್ತೊಂದು ಪತ್ರ ತಲಪಿತು. ಅದನ್ನು ನಿನಗೆ ಕಳುಹಿಸುತ್ತೇನೆ. ನೋಡು, ಭವಿಷ್ಯ ಹೇಗೆ ಅಣಿಯಾಗುತ್ತದೆ. ಇದ ರೊಂದಿಗೆ ಮಿ॥ ಲ....ಅವರ ನಿಮಂತ್ರಣ ಸೇರಿದರೆ, ಇದೊಂದು ದೇವ ಕರೆಯೆಂದು ಭಾವಿಸುವುದಿಲ್ಲವೆ? ನಾನು ಇದನ್ನು ಹೀಗೆಯೆ ಭಾವಿಸುತ್ತೇನೆ ಮತ್ತು ಅನುಸರಿಸುತ್ತೇನೆ. ಮಿ॥ ಲ....ಅವರೊಂದಿಗೆ ಆಗಸ್ಟ್ ಅಂತ್ಯದಲ್ಲಿ ಪ್ಯಾರಿಸ್ಸಿಗೆ ಹೋಗುತ್ತೇನೆ, ನಂತರ ಲಂಡನ್ನಿಗೆ.

ನನ್ನ ಸಹೋದರರಿಗೆ ಮತ್ತು ನನ್ನ ಕಾರ್ಯಕ್ಕೆ ಆಗುವ ಅಲ್ಪ ಸಹಾಯವನ್ನೆ ನಾನು ಈಗ ನಿನ್ನಿಂದ ಆಶಿಸುವುದು. ನಾನು ನನ್ನವ ರೊಂದಿಗೆ ಕರ್ತವ್ಯವನ್ನು ಚೆನ್ನಾಗಿಮಾಡಿರುವೆನು. ಈಗ ನನ್ನ ಕರ್ತವ್ಯ, ದೇಹಕ್ಕೆ ಜನ್ಮವಿತ್ತ ನಾಡಿಗೆ, ಭಾವನೆಯಿತ್ತ ದೇಶಕ್ಕೆ, ತನ್ನಲ್ಲಿ ಒಬ್ಬನು ಎಂದು ಭಾವಿಸುವ ಮಾನವಕೋಟಿಗೆ!

ನನಗೆ ವಯಸ್ಸಾದಂತೆಲ್ಲ ಮಾನವನೆ ಪ್ರಾಣಿಗಳಲ್ಲಿ ಸರ್ವೋ ತ್ಕೃಷ್ಟ ಎಂಬ ಹಿಂದೂ ಭಾವನೆಯಲ್ಲಿ ಎಷ್ಟೋ ಅರ್ಥ ತೋರುವುದು. ಮಹಮ್ಮದೀಯರೂ ಹೀಗೆಯೇ ಹೇಳುವರು. ಅಲ್ಲನು ದೇವತೆಗಳಿಗೆ, ಆಡಮ್‌ಗೆ ನಮಸ್ಕಾರ ಮಾಡುವಂತೆ ಹೇಳಿದನು. ಇಬ್ಲಿಸ್ ಇದಕ್ಕೆ ಒಪ್ಪಲಿಲ್ಲ. ಅದಕ್ಕೇ ಅವನು ಸೈತಾನನಾದನು. ಇದೇ ಎಲ್ಲಾ ಸ್ವರ್ಗಕ್ಕಿಂತ

ಮೇಲು. ವಿಶ್ವದ ಅತ್ಯುತ್ತಮ ಕಾರಿಯೇ ಇದು. ಬುಧ ಅಥವಾ ಗುರು ಗ್ರಹದ ಜನ ನಮಗಿಂತ ಮೇಲಲ್ಲ. ಏಕೆಂದರೆ ಅವರು ನಮ್ಮೊಂದಿಗೆ ಯಾವ ವ್ಯವಹಾರವನ್ನೂ ನಡೆಸಲಾರರು. ನಮಗಿಂತ ಮೇಲಾದವರೆಂದರೆ ಪಿತೃಗಳು. ಇವರು ನಮ್ಮಂತೆ ಬೇರೊಂದು ದೇಹವನ್ನು ಪಡೆದ ಮಾನವರು. ಅದು ಸೂಕ್ಷ್ಮ ದೇಹ ನಿಜ. ಆದರೂ ಕೈಕಾಲುಗಳಿಂದ ಕೂಡಿದ ಮಾನವದೇಹವೆ ಅದು. ಅವರು ಇದೇ ಪ್ರಪಂಚದಲ್ಲಿ ಬೇರೊಂದು ಆಕಾರದಲ್ಲಿ ಸಂಪೂರ್ಣ ಮಾಯವಾಗದ ಸ್ಥಿತಿಯಲ್ಲಿರುವರು. ಅವರು ಆಲೋಚಿಸುವರು, ಅವರಿಗೂ ಪ್ರಜ್ಞೆ ಇದೆ, ಉಳಿದೆಲ್ಲವೂ ನಮ್ಮಂತೆಯೇ ಇದೆ. ಅವರೂ ನಮ್ಮಂತೆಯೇ ಮಾನವರು. ಹಾಗೆಯೆ ದೇವತೆಗಳು, ಗಾಂಧರ್ವರೂ ಎಲ್ಲರೂ. ಆದರೆ ಮಾನವನೊಬ್ಬನೇ ದೇವರಾಗಬಲ್ಲ. ಉಳಿದವರೆಲ್ಲರೂ ದೇವರಾಗಬೇಕಾದರೆ ಮಾನವರಾಗಲೇಬೇಕು.

ನಿನ್ನ ವಿವೇಕಾನಂದ.

೫೭

ಅಮೆರಿಕಾ.
ಆಗಸ್ಟ್ ೧೮೯೫.

ಪ್ರಿಯ—,

ನಿನಗೆ ಈ ಪತ್ರ ಸೇರುವಹೊತ್ತಿಗೆ ನಾನು ಪ್ಯಾರಿಸ್ಸಿನಲ್ಲಿರುವೆನು. ಈ ವರುಷ ನಾನು ಬೇಕಾದಷ್ಟು ಕೆಲಸಮಾಡಿರುವೆನು. ಬರುವ ವರುಷ ಇದಕ್ಕಿಂತ ಹೆಚ್ಚಾಗಿಮಾಡುವೆನೆಂದು ತಿಳಿದಿರುವೆನು. ಪಾದ್ರಿಗಳ ವಿಚಾರವನ್ನು ನೀನು ಮನಸ್ಸಿಗೆ ಹಚ್ಚಿಕೊಳ್ಳಬೇಡ. ಅವರು ಕಿರುಚುವುದು ಸಹಜವಾಗಿಯೇ ಇದೆ. ಅವರ ಅನ್ನ ಕಡಿಮೆಯಾಗುತ್ತಿದ್ದರೆ ಯಾರು ತಾನೆ ಕಿರುಚುವುದಿಲ್ಲ. ಕಳೆದ ಎರಡು ವರುಷಗಳಿಂದ ಪಾದ್ರಿಗಳ ಬಂಡವಾಳ ಬಹಳ ಕಡಿಮೆಯಾಗಿದೆ. ಕ್ರಮೇಣ ಅದು ಕಡಿಮೆಯಾಗುತ್ತಿದೆ. ಹೇಗಾದರೂ ಆಗಲಿ ಪಾದ್ರಿಗಳಿಗೆ ಜಯವಾಗಲಿ ಎಂಬುದೇ ನನ್ನ ಕೋರಿಕೆ. ನನ್ನ ಮಗು! ಎಲ್ಲಿಯವರೆವಿಗೆ ನಿನಗೆ ದೇವರಲ್ಲಿ ಪ್ರೀತಿ,

ಗುರುವಿನಲ್ಲಿ ಭಕ್ತಿ, ಸತ್ಯದಲ್ಲಿ, ನಂಬಿಕೆ ಇರುವುದೋ ಅಲ್ಲಿಯವರೆವಿಗೂ ಯಾವುದೂ ನಿನಗೆ ತೊಂದರೆಮಾಡಲಾರದು. ಆದರೆ ಇವುಗಳಲ್ಲಿ ಯಾವುದಾದರೊಂದು ನಷ್ಟವಾದರೂ ಅಪಾಯ ಬಹಳ. ನೀನು ಚೆನ್ನಾಗಿಯೇ ಹೇಳಿರುವೆ. ಭರತಖಂಡಕ್ಕಿಂತ ಪಾಶ್ಚಾತ್ಯ ದೇಶದಲ್ಲಿ ನನ್ನ ಆಲೋಚನೆ ಕೆಲಸಮಾಡುವುದು. ಭರತಖಂಡ ನನಗೆ ಮಾಡಿದ ಉಪಕಾರಕ್ಕಿಂತ ನಾನು ಅದಕ್ಕೆಮಾಡಿದ ಉಪಕಾರ ಬಹಳ. ನಾನು ಸತ್ಯದಲ್ಲಿ ನಂಬುತ್ತೇನೆ. ನಾನು ಎಲ್ಲಿಹೋದರೆ ಅಲ್ಲಿ ನೂರಾರು ಜನ ಕೆಲಸಗಾರರನ್ನು ದೇವರು ನನ್ನಬಳಿಗೆ ಕಳುಹಿಸುತ್ತಾನೆ. ಅವರು.... ಅವರ ಶಿಷ್ಯರಂತೆ ಅಲ್ಲ. ಗುರುವಿಗೋಸುಗವಾಗಿ ಪ್ರಾಣವನ್ನಾದರೂ ತೆರಲು ಸಿದ್ಧರಾಗಿರುವರು. ಸತ್ಯವೇ ನನ್ನದೇವರು. ವಿಶ್ವವೇ ನನ್ನ ದೇಶ. ಕರ್ತವ್ಯದಲ್ಲಿ ನನಗೆ ನಂಬಿಕೆ ಇಲ್ಲ. ಗೃಹಸ್ಥನಿಗೆ ಕರ್ತವ್ಯದ ಭಯ. ಸಂನ್ಯಾಸಿಗಲ್ಲ. ಕರ್ತವ್ಯವೆಂಬುದೊಂದು ಮೋಸ; ನಾನು ಮುಕ್ತ. ನನ್ನ ಬಂಧನಗಳು ಕಳಚಿಬಿದ್ದಿವೆ. ಈ ದೇಹ ಎಲ್ಲಿಹೋಗುತ್ತದೆ, ಎಲ್ಲಿ ಹೋಗುವುದಿಲ್ಲ, ಎಂಬುದನ್ನು ಕಟ್ಟಿಕೊಂಡು ನನಗೇನು. ಮೊದಲಿನಿಂದಲೂ ನೀನು ನನಗೆ ಸಹಾಯಮಾಡಿಕೊಂಡಿರುವೆ. ದೇವರೇ ನಿನಗೆ ಬಹುಮಾನವನ್ನು ಮಾಡುವನು. ಭರತಖಂಡದಿಂದಾಗಲೀ, ಅಮೇರಿಕಾ ದೇಶದಿಂದಲಾಗಲೀ ನಾನು ಕೀರ್ತಿಯನ್ನು ಆಶಿಸಲಿಲ್ಲ. ಅಂತಹ ನೀರಗುಳ್ಳೆಗಳನ್ನು ನಾನು ಆಶಿಸುವುದೂ ಇಲ್ಲ. ಈ ಪ್ರಪಂಚಕ್ಕೆ ಬೋಧಿಸುವ ಸಲುವಾಗಿ ನನ್ನಲ್ಲಿ ಸತ್ಯವಿದೆ. ನಾನು ದೇವರ ಮಗು. ಯಾರು ನನಗೆ ಸತ್ಯವನ್ನು ಕೊಟ್ಟನೋ ಅವನೆ ಕೆಲಸಗಾರರನ್ನು ನನಗೆ ಪ್ರಪಂಚದ ಅತಿಧೀರರಿಂದ, ಅತ್ಯುತ್ತಮರಿಂದ ಆಯ್ದು ಕಳುಹಿಸುವನು. ಹಿಂದೂಗಳೆ! ಪಾಶ್ಚಾತ್ಯ ದೇಶಗಳಲ್ಲಿ ದೇವರು ಇನ್ನು ಕೆಲವು ವರುಷಗಳಲ್ಲಿ ಏನು ಮಾಡುತ್ತಾನೆ ಎಂಬುದನ್ನು ನೋಡುವಿರಿ. ನೀವು ಪುರಾತನಕಾಲದ ಯೆಹೂದ್ಯರಂತೆ. ದನದ ಗೊಂತಿನಲ್ಲಿರುವ ನಾಯಿಗಳಂತೆ. ನೀವೂ ತಿನ್ನುವುದಿಲ್ಲ; ತಿನ್ನುವವರಿಗೂ ಕೊಡುವುದಿಲ್ಲ. ನಿಮ್ಮಲ್ಲೇನೂ ಧರ್ಮವಿಲ್ಲ. ಅಡಿಗೆಯ ಮನೆಯೆ ನಿಮ್ಮ ದೇವರು. ಅಡಿಗೆಮಾಡುವ ಪಾತ್ರೆಯೆ ನಿಮ್ಮ ಪವಿತ್ರಗ್ರಂಥ. ನೀವುಗಳೆಲ್ಲೋ ಅಲ್ಪಸ್ವಲ್ಪವಾದಿ

ಧೀರರು. ಮಕ್ಕಳಿರಾ! ಮುಂದೆ ಸಾಗಿ. ನನ್ನ ಮಕ್ಕಳಲ್ಲಿ ಯಾರೂ ಹೇಡಿಗಳಾಗದಿರಲಿ. ಮಹತ್ ಕಾರ್ಯವನ್ನು ಎಂದಾದರೂ ಸುಲಭವಾಗಿ ಮಾಡಲು ಸಾಧ್ಯವೆ? ಕಾಲ, ತಾಳ್ಮೆ, ಎಂದಿಗೂ ಕುಗ್ಗದ ಧೈರ್ಯ, ಇವು ಬೇಕು. ನಿನಗೆ ಅತ್ಯಾನಂದವಾಗುವಂತಹ ವಿಷಯಗಳನ್ನು ಇನ್ನೂ ಹೇಳಬಹುದಾಗಿತ್ತು, ಆದರೆ ನಾನು ಹೇಳುವುದಿಲ್ಲ. ನನಗೆ ವಜ್ರೋಪಮ ಇಚ್ಛಾ ಶಕ್ತಿ, ಎಂತಹ ಪ್ರಸಂಗದಲ್ಲಿಯೂ ತಲ್ಲಣಗೊಳ್ಳದ ಹೃತ್ ಶಕ್ತಿಗಳೂ ಬೇಕು. ಕಾರ್ಯಮುಖರಾಗಿ. ಬಿಡಬೇಡಿ. ದೇವರು ನಿಮ್ಮನ್ನು ಆಶೀರ್ವದಿಸಲಿ. ಅನವರತವೂ ನಿನ್ನವನು. ಆಶೀರ್ವಾದಗಳು.

ವಿವೇಕಾನಂದ.

೫೦

ಪ್ಯಾರಿಸ್

೯ನೇ ಸೆಪ್ಟಂಬರ್ ೧೮೯೫

ಪಾದ್ರಿಗಳು ಹೇಳುವ ಕೆಲಸಕ್ಕೆಬಾರದ ವಿಷಯಕ್ಕೆಲ್ಲ ನೀನು ಅಷ್ಟೊಂದು ಮಹತ್ವವನ್ನು ಕೊಡುವುದನ್ನು ನೋಡಿ ನನಗೆ ಆಶ್ಚರ್ಯವಾಗಿದೆ. ಇಂಡಿಯಾದೇಶದ ಜನರು ಹಿಂದೂ ರೀತಿಯ ಭೋಜನವನ್ನೇ ನನಗೆ ತಪ್ಪದೆ ಅನುಸರಿಸಬೇಕೆಂದು ಹೇಳಿದರೆ ಅವರಿಗೆ ದಯವಿಟ್ಟು ಒಬ್ಬ ಅಡಿಗೆಯವನನ್ನು ಮತ್ತು ಅವನನ್ನು ಸಂರಕ್ಷಿಸಲು ಸಾಕಾದಷ್ಟು ಹಣವನ್ನು ಕಳುಹಿಸುವಂತೆ ಹೇಳು. ಎಳ್ಳಷ್ಟೂ ಸಹಾಯಮಾಡದೆ ಬೇಕಾದಷ್ಟು ಬುದ್ಧಿವಾದ ಹೇಳುವುದನ್ನು ನೋಡಿ ನನಗೆ ನಗು ಬರುತ್ತದೆ. ಅದಲ್ಲದೆ ಪಾದ್ರಿಗಳು ಸಂನ್ಯಾಸ ಧರ್ಮದ ಎರಡು ಪ್ರತಿಜ್ಞೆಗಳಾದ, ಬಡತನ ಮತ್ತು ಬ್ರಹ್ಮಚರ್ಯ ಇವುಗಳಿಂದ ಬಿದ್ದಿರುವನೆಂದು ಹೇಳಿದರೆ ಅದೆಲ್ಲ ಅಪ್ಪಟ ಸುಳ್ಳೆಂದು ಹೇಳು. ದಯವಿಟ್ಟು ಆ ಮಿಶನರಿಗೆ ನನ್ನ ನಡತೆಯಲ್ಲಿ ಯಾವ ವಿಧವಾದ ಅನುಮಾನವನ್ನು ಆತನು ನೋಡಿದನು, ಅಥವಾ ಈ ವಿಚಾರವಾಗಿ ಅವನಿಗೆ ಸುದ್ದಿ ಕೊಟ್ಟವರ ಹೆಸರನ್ನು ತಿಳಿಸುವಂತೆ ಹೇಳು. ಆ ಸಮಾಚಾರವನ್ನು ಪ್ರತ್ಯಕ್ಷ ನೋಡಿದವನು ಹೇಳಿದುದೇ ಎಂಬುದನ್ನು ಖಂಡಿತವಾಗಿ ಪ್ರಶ್ನೆಮಾಡಿ ಕಾಗದ ಬರೆಯಿರಿ. ಅದೇ ಪ್ರಶ್ನೆಯನ್ನು ಬಗೆಹರಿಸುವುದು. ಗುಟ್ಟೆಲ್ಲವನ್ನು ರಟ್ಟುಮಾಡುವುದು.

ನಾನಾದರೋ ಯಾರ ಅಣತಿಯನ್ನೂ ಪಾಲಿಸುವವನಲ್ಲವೆಂಬು ದನ್ನು ಜ್ಞಾಪಕದಲ್ಲಿಡು. ನನ್ನ ಜೀವನದ ಉದ್ದೇಶವೇನೆಂಬುದು ನನಗೆ ಗೊತ್ತಿದೆ. ನನ್ನ ವಿಷಯದಲ್ಲಿ ಯಾವ ನಿಷ್ಕಪಟತೆಯೂ ಇಲ್ಲ. ನಾನು ಎಷ್ಟು ಮಟ್ಟಿಗೆ ವಿಶ್ವಕ್ಕೆ ಸೇರಿರುವೆನೋ ಅಷ್ಟೇ ಮಟ್ಟಿಗೆ ಇಂಡಿಯಾ ದೇಶಕ್ಕೆ ಸೇರಿರುವೆನು. ಆ ವಿಚಾರವಾಗಿ ಏನೂ ಮೋಸವಿಲ್ಲ. ಸಾಧ್ಯವಾದ ಮಟ್ಟಿಗೂ ನಿಮಗೆಲ್ಲ ನಾನು ಸಹಾಯಮಾಡಿರುವೆನು. ಈಗ ನಿಮ್ಮನ್ನು ನೀವೇ ಕಾಪಾಡಿಕೊಳ್ಳಬೇಕು. ನನ್ನ ಮೇಲೆ ಯಾವ ದೇಶಕ್ಕೆ ತಾನೆ ವಿಶೇಷ ಅಧಿಕಾರವಿದೆ? ನಾನು ಯಾವುದಾದರೊಂದು ಜನಾಂಗದ ಗುಲಾಮನೆ? ಶ್ರದ್ಧಾಹೀನರಾದ ನಾಸ್ತಿಕರೆ! ಕೆಲಸಕ್ಕೆ ಬಾರದ ಮಾತನ್ನು ಹೆಚ್ಚು ಆಡಬೇಡಿ. ನಾನು ಕಷ್ಟಪಟ್ಟು ಕೆಲಸಮಾಡಿ ಸಿಕ್ಕಿದ ಹಣ ವನ್ನೆಲ್ಲ ಮದ್ರಾಸು ಕಲ್ಕತ್ತೆಗಳಿಗೆ ಕಳುಹಿಸಿದೆನು. ಇಷ್ಟೆಲ್ಲವನ್ನು ಮಾಡಿ ಯಾದಮೇಲೆ ಈ ಮೂರ್ಖರ ಮಾತನ್ನು ಕೇಳಲೇನು ನಾನು? ನಿಮಗೆ ನಾಚಿಕೆಯಾಗುವುದಿಲ್ಲವೆ? ನಾನು ಅವರಿಗೆ ಏನನ್ನು ಕೊಡಬೇಕಾಗಿದೆ. ಏನು? ಅವರ ಕೀರ್ತಿಗೆ ನಾನು ಆಸೆಪಡುತ್ತೇನೆಯೊ? ಅವರ ನಿಂದೆಗೆ ಅಂಜುವೆನೊ? ನನ್ನ ಮಗು, ನಾನು ಏಕಾಂಗಿ. ನೀನೂ ಕೂಡ ನನ್ನನ್ನು ತಿಳಿದುಕೊಂಡಿಲ್ಲ. ನಿನ್ನ ಕೆಲಸವನ್ನು ಮಾಡು. ಸಾಧ್ಯವಿಲ್ಲದೆ ಇದ್ದರೆ ನಿಲ್ಲಿಸು. ನಿನ್ನ ಕೆಲಸಕ್ಕೆ ಬಾರದ ಕಾಡುಹರಟೆಯಿಂದ ನನ್ನನ್ನು ಆಳಲು ಯತ್ನಿಸಬೇಡ. ಮಾನವನಿಗಿಂತ, ದೇವನಿಗಿಂತ, ಭೂತಗಳಿಗಿಂತ, ಬಲ ವಾದ ಯಾವುದೋ ಒಂದು ಶಕ್ತಿ ನನ್ನ ಹಿಂದೆ ಇರುವುದು. ನನಗೆ ಯಾರ ಸಹಾಯವೂ ಬೇಕಾಗಿಲ್ಲ. ಇದುವರೆವಿಗೂ ನಾನು ಇನ್ನೊಬ್ಬರಿಗೆ ಸಹಾಯವನ್ನು ಮಾಡುತ್ತಿರುವೆನು. ಭರತಖಂಡದಲ್ಲಿ ಜನ್ಮತಾಳಿದ ಮಹಾಪುರುಷರಲ್ಲಿ ಅಗ್ರಗಣ್ಯರು ಶ್ರೀರಾಮಕೃಷ್ಣ ಪರಮಹಂಸರು. ಅಂತ ಹವರ ಕೆಲಸಕ್ಕೆ ಸಹಾಯಮಾಡಲು ಸ್ವಲ್ಪ ಹಣವನ್ನು ಕೊಡಲಾರರು. ಆದರೆ ಬೇಕಾದಷ್ಟು ಕಾಡುಹರಟೆ ಹೊಡೆಯುವರು. ಯಾರಿಗೆ ತಾವು ಎಳ್ಳಷ್ಟೂ ಸಹಾಯಮಾಡಿಲ್ಲವೋ ಅವರಿಗೆ ನಾನು ಸಾಧ್ಯವಾದಷ್ಟು ಸಹಾಯಮಾಡಿರುವೆನು. ಅಂತಹವನ ಮೇಲೆ ತಮ್ಮ ಅಧಿಕಾರವನ್ನು ಚಲಾಯಿಸಲು ಯತ್ನಿಸುವರು. ಎಷ್ಟು ಕೃತಘ್ನರು!

ಕೃತವಿದ್ಯರಾದ ಹಿಂದೂಗಳಲ್ಲಿ ಇಂದು ಕಾಣುವ, ಜಾತಿ ಬಂಧನದಲ್ಲಿಸಿಕ್ಕಿ ಮೂಢರಾಗಿ, ನಿರ್ದಯರಾಗಿ, ಕಪಟಿಗಳಾಗಿ, ನಾಸ್ತಿಕರಾದ ಹೇಡಿಗಳಂತೆ ನಾನು ಹುಟ್ಟಿಸಾಯುವೆನೆಂದು ತಿಳಿದಿರುವೆಯ? ಹೇಡಿತನವನ್ನು ದ್ವೇಷಿಸುವೆನು ನಾನು. ಹೇಡಿಗಳೊಂದಿಗೆ, ಕೆಲಸಕ್ಕೆಬಾರದ ರಾಜಕೀಯ ವ್ಯವಹಾರಗಳೊಂದಿಗೆ, ನನಗೆ ಏನೂ ಸಂಬಂಧವಿಲ್ಲ. ಯಾವ ರಾಜತಂತ್ರದಲ್ಲಿಯೂ ನನಗೆ ನಂಬಿಕೆ ಇಲ್ಲ. ಜಗತ್ತಿನಲ್ಲಿ ದೇವರು ಮತ್ತು ಸತ್ಯ ಇವೆರಡೇ ರಾಜತಂತ್ರಗಳು. ಉಳಿದುವೆಲ್ಲವೂ ಕೆಲಸಕ್ಕೆ ಬಾರದವು.

ನಾನು ನಾಳೆ ಲಂಡನ್ನಿಗೆ ಪ್ರಯಾಣಮಾಡುವೆನು. ಆಶೀರ್ವಾದಗಳು.

ನಿನ್ನ ವಿವೇಕಾನಂದ.

೫೮

## ಜೈ ಭಗವಾನ್ ಶ್ರೀರಾಮಕೃಷ್ಣ.

೧೮೯೫

ಪ್ರಿಯಸಹೋದರನೆ,—

ಇದಕ್ಕೆ ಮುಂಚೆ ನಾನು ನಿನಗೆ ಒಂದು ಪತ್ರವನ್ನು ಬರೆದಿದ್ದೆ. ಸಮಯದೊರೆಯದೇ ಇದ್ದುದರಿಂದ ಅದು ಪೂರ್ತಿಯಾಗಲಿಲ್ಲ. ಜ— ಮತ್ತು ಕ— ಇವರುಗಳು ಲಕ್ನೋವಿನಿಂದ, ಹಿಂದೂಪತ್ರಿಕೆಗಳು ನನ್ನನ್ನು ಹೊಗಳುತ್ತಿವೆ ಎಂದು ಕಾಗದ ಬರೆದಿರುವರು. ಇಪ್ಪತ್ತುಸಾವಿರ ಜನರು ಶ್ರೀರಾಮಕೃಷ್ಣರ ಜನ್ಮೋತ್ಸವದ ಸಮಯದಲ್ಲಿ ಪ್ರಸಾದವನ್ನು ಸ್ವೀಕರಿಸಿದರೆಂದೂ, ಅದರಿಂದ ಬಹಳ ಸಂತೋಷವಾಗಿದೆ ಎಂದೂ, ಹೇಳುವರು. ನಾನು ಇನ್ನೂ ಹೆಚ್ಚು ಕೆಲಸಮಾಡಬಹುದಾಗಿತ್ತು. ಆದರೆ ಬ್ರಹ್ಮಸಮಾಜದವರು ಮತ್ತು ಕ್ರೈಸ್ತ ಪಾದ್ರಿಗಳು ನನ್ನನ್ನು ಸಂತತವೂ ಎದುರಿಸುತ್ತಿರುವರು. ಭರತಖಂಡದ ಹಿಂದೂಗಳು ಕೂಡ ನನಗೆ ಏನೂ ಸಹಾಯ ಮಾಡಲಿಲ್ಲ. ನಾನು ಹೇಳುವುದೇನೆಂದರೆ ಕಲ್ಕತ್ತೆ ಅಥವಾ ಮದ್ರಾಸಿನ ಹಿಂದೂಗಳು ಒಂದು ಸಭೆ ಸೇರಿಸಿ, ನಾನು ಅವರ ಪ್ರತಿನಿಧಿಯೆಂದು ಒಪ್ಪಿ

ಕೊಂಡು, ಅಮೇರಿಕಾದೇಶವು ನನ್ನನ್ನು ಪ್ರೀತಿಯಿಂದ ಬರಮಾಡಿಕೊಂಡುದಕ್ಕೆ ಅವರಿಗೆ ಕೃತಜ್ಞತೆಯನ್ನು ತೋರಿ ಒಂದು ಪತ್ರವನ್ನು ಬರೆದಿದ್ದರೆ ಸ್ಥಿತಿಯು ಇದಕ್ಕಿಂತ ಬಹಳ ಸುಲಭವಾಗುತ್ತಿತ್ತು. ಆದರೆ ಆಗಲೇ ಒಂದು ವರುಷವಾಯಿತು. ಇನ್ನೂ ಏನನ್ನೂ ಮಾಡಲಿಲ್ಲ. ಬಂಗಾಳೀಯರನ್ನು ನಾನು ಎಂದೂ ನೆಚ್ಚಿರಲಿಲ್ಲ. ಆದರೆ ಮದ್ರಾಸಿನವರಿಗೆ ಕೂಡ ಏನನ್ನೂ ಮಾಡಲಾಗಲಿಲ್ಲ.

ನಮ್ಮ ಜನಾಂಗಕ್ಕೆ ಯಾವ ಭರವಸೆಯೂ ಇಲ್ಲ. ಯಾರ ತಲೆಯಲ್ಲೂ ಒಂದು ಹೊಸ ಸ್ವತಂತ್ರ ಆಲೋಚನೆ ಸುಳಿಯುವಂತೆ ಇಲ್ಲ. ಎಲ್ಲ ಹಳೆಯ ಕಂತೆಯ ಪುರಾಣದಮೇಲೆಯೇ ಇನ್ನೂ ಕಾದಾಡುತ್ತಿರುವರು. ಶ್ರೀರಾಮಕೃಷ್ಣಪರಮಹಂಸರು ಅಂತಹ ಮಹಾತ್ಮರಾಗಿದ್ದರು. ತಲೆಯಿಲ್ಲದ ಬಾಲವಿಲ್ಲದ ಇಂತಹ ಕಾಗಕ್ಕಗುಬ್ಬಕ್ಕನ ಕಥೆಗಳೇ! ಅಯ್ಯೋ ದೇವರೆ! ಸಾಧಾರಣ ಮನುಷ್ಯರಿಗಿಂತ ನೀವು ಮೇಲು ಎಂದು ತೋರುವುದಕ್ಕೆ ಏನನ್ನಾದರೂ ಮಾಡಲಾರಿರೇನು? ಹುಚ್ಚುತನದಲ್ಲೇ ಕಾಲಕಳೆಯುವುದು! ಇವತ್ತು ದೇವರ ಕೋಣೆಯಲ್ಲಿ ನಿಮ್ಮ ಘಂಟೆ ಇದೆ. ನಾಳೆ ಒಂದು ಕೊಂಬನ್ನು ಸೇರಿಸುತ್ತೀರಿ. ನಾಡಿದ್ದು ಒಂದು ಚಾಮರವನ್ನು ಸೇರಿಸುತ್ತೀರಿ. ಅಥವಾ ಇವತ್ತು ಒಂದು ಮಂಚ, ನಾಳೆ ಅದರ ಕಾಲಿಗೆ ಒಂದು ಬೆಳ್ಳಿಯ ಕಟ್ಟು ; ಜನಗಳಿಗೆ ಬೇಕಾದಷ್ಟು ಪ್ರಸಾದ; ಹೀಗೆ ಮಾಡಿ ಒಂದೆರಡು ಸಾವಿರ ಕಟ್ಟು ಕಥೆಗಳನ್ನು ನೇಯುತ್ತೀರಿ. ಸ್ವಲ್ಪದರಲ್ಲಿ ಹೇಳಬೇಕಾದರೆ, ನಿಮ್ಮಲ್ಲಿರುವುದು ಬಾಹ್ಯ ಆಚಾರವಲ್ಲದೆ ಮತ್ತೇನೂ ಇಲ್ಲ. ಇದಕ್ಕೆ ಆಂಗ್ಲಭಾಷೆಯಲ್ಲಿ Imbecility (ಮಾನಸಿಕ ದೌರ್ಬಲ್ಯ) ಎಂದು ಹೆಸರು. ಯಾರ ಬುದ್ಧಿಗೆ ಇಂತಹ ಕೆಲಸಕ್ಕೆ ಬಾರದ ಕಥೆಗಳಲ್ಲದೆ ಬೇರೆ ರುಚಿಸದೋ ಅವರನ್ನು ಕಡುಮೂರ್ಖರೆಂದು ಕರೆಯುತ್ತಾರೆ. ಘಂಟೆಯನ್ನು ಬಲಗಡೆ ಬಾರಿಸುವುದೇ ಅಥವಾ ಎಡಗಡೆಯಲ್ಲಿ ಬಾರಿಸುವುದೇ, ಚಂದನದ ಗುರುತನ್ನು ತಲೆಯ ಮೇಲೆ ಇಡುವುದೋ ಅಥವಾ ಇನ್ನು ಎಲ್ಲಿಯಾದರೂ ಇಡುವುದೋ, ಮಂಗಳಾರತಿಯನ್ನು ಎರಡು ಸಲ ಬೆಳಗುವುದೋ ಅಥವಾ ನಾಲ್ಕು ಸಲ ಬೆಳಗುವುದೋ, ಇಂತಹ ಮಹಾ ಪ್ರಶ್ನೆಗಳನ್ನು

ಯಾರ ಮೆದಳು ಹಗಲಿರಳು ಆಲೋಚಿಸುತ್ತಿರುವುದೋ, ಇಂತಹವರನ್ನು ದುರ್ಭಾಗ್ಯರೆಂದು ಕರೆಯಬೇಕಾಗಿರುವುದು. ಇಂತಹ ಅಭಿಪ್ರಾಯಗಳು ನಮಗೆ ಇರುವುದರಿಂದಲೇ ನಾವು ಭಾಗ್ಯಹೀನರಾಗಿರುವುದು. ಪಾಶ್ಚಾತ್ಯ ದೇಶಗಳವರು ಪ್ರಪಂಚದ ಒಡೆಯರಾದರೆ, ನಾವು ಇನ್ನೊಬ್ಬರಿಂದ ಒದೆಸಿಕೊಳ್ಳುತ್ತಿರುವೆವು. ಅವರ ಧಿಃಕಾರಕ್ಕೆ ಪಾತ್ರರಾಗಿರುವೆವು. ಸೋಮಾರಿತನಕ್ಕೂ ತ್ಯಾಗಕ್ಕೂ ಸಾಗರದಷ್ಟು ಭೇದವಿರುವುದು.

ನಿಮಗೆ ಏನಾದರೂ ಒಳ್ಳೆಯದಾಗಬೇಕೆಂಬ ಆಸೆಯಿದ್ದರೆ, ನಿಮ್ಮ ಬಾಹ್ಯಾಚಾರಗಳೆಲ್ಲವನ್ನು ಆಚೆಗೆ ಕಿತ್ತೊಗೆಯಿರಿ. ಬದುಕಿರುವ ದೇವರನ್ನು, ಮಾನವನ ರೂಪನ್ನು ತಾಳಿದ ಪ್ರತಿಬಿಂಬವನ್ನು, ವ್ಯಷ್ಟಿ ದೃಷ್ಟಿಯಿಂದಲೂ ಮತ್ತು ಸಮಷ್ಟಿ ದೃಷ್ಟಿಯಿಂದಲೂ ಆರಾಧಿಸಿ. ದೇವರ ಸಮಷ್ಟಿಯ ದೃಷ್ಟಿ ಎಂದರೆ ಜಗತ್ತು. ಅದನ್ನು ಪೂಜಿಸುವುದೆಂದರೆ ಸೇವಿಸುವುದು. ಇದೇ ನಿಜವಾದ ಕರ್ಮ, ಕೇವಲ ಬಾಹ್ಯ ಆಚಾರಗಳಲ್ಲಿ ಮಗ್ನರಾಗಿರುವುದಲ್ಲ. ದೇವರ ಮುಂದೆ ಅನ್ನದ ತಟ್ಟೆಯನ್ನು ಹತ್ತು ನಿಮಿಷಗಳು ಇಟ್ಟಿರುವುದೆ ಅಥವಾ ಅರ್ಧ ಗಂಟೆ ಇಟ್ಟಿರುವುದೆ, ಎಂದು ಅನುಮಾನಿಸುವುದು ಕರ್ಮವಲ್ಲ. ಹುಚ್ಚುತನವೆಂದು ಅದಕ್ಕೆ ಹೆಸರು. ಕಾಶಿಯ ಅಥವಾ ಬೃಂದಾವನದ ಗುಡಿಯ ಬಾಗಿಲನ್ನು ದಿನವೆಲ್ಲ ತೆರೆಯುವಾಗ ಘಂಟೆ ಹೊಡೆಯಲಿ ಎಂದು ಅದಕ್ಕೋಸ್ಕರ ಲಕ್ಷಾಂತರ ರೂಪಾಯಿಗಳನ್ನು ಖರ್ಚುಮಾಡಿರುವರು! ದೇವರು ಈಗ ಸ್ನಾನ ಮಾಡುತ್ತಿರುವನು, ಈಗ ಅವನು ಭೋಜನಮಾಡುತ್ತಿರುವನು, ಈಗ ನಮಗೆ ತಿಳಿಯದ ಯಾವುದೋ ಕಾರ್ಯದಲ್ಲಿ ನಿರತನಾಗಿರುವನು. ನಿಜವಾಗಿ ಬದುಕಿರುವ ದೇವರು ಹೊಟ್ಟೆಗಿಲ್ಲದೆ ವಿದ್ಯೆಯಿಲ್ಲದೆ ಸಾಯುತ್ತಿರುವಾಗ ಬೊಂಬಾಯಿನ ಮಾರ್ವಾಡಿಗಳು ತಿಗಣೆಗೆ ಆಸ್ಪತ್ರೆಯನ್ನು ಕಟ್ಟಿಸುತ್ತಿರುವರು. ಅವರು ಮನುಷ್ಯನಿಗೆ ಅವನು ಸತ್ತರೂ ಕೂಡ ಏನೂ ಮಾಡುವುದಿಲ್ಲ! ಇಷ್ಟು ಸರಳವಾದ ವಿಷಯವನ್ನು ತಿಳಿದುಕೊಳ್ಳುವುದಕ್ಕೆ ನಿಮಗೆ ಬುದ್ಧಿಯಿಲ್ಲ. ಇದೇ ನಮ್ಮ ದೇಶದಲ್ಲಿರುವ ಒಂದು ಸಾಂಕ್ರಾಮಿಕ ಜಾಡ್ಯ. ದೇಶದಲ್ಲೆಲ್ಲ ಹುಚ್ಚರ ಮನೆಗಳು ಹೆಚ್ಚಿವೆ. ನಿಮ್ಮಲ್ಲಿ ಕೆಲವರು ಬೆಂಕಿಯಂತೆ ಹರಡಿ. ಭಗವಂತನ ವಿರಾಟ ಸ್ವರೂಪದ ಆರಾಧನೆಯನ್ನು

ಬೋಧಿಸಿ. ನಮ್ಮ ದೇಶದಲ್ಲಿ ಇದನ್ನು ಹಿಂದೆ ಯಾರೂ ಮಾಡಿರಲಿಲ್ಲ. ಜನಗಳೊಂದಿಗೆ ಜಗಳ ಬೇಡ. ಎಲ್ಲರೊಂದಿಗೂ ನಾವು ಸ್ನೇಹದಿಂದ ಇರಬೇಕು.

ಈ ವಿಷಯಗಳನ್ನು ಜನರಿಗೆ ತಿಳಿಸಿ. ಹಳ್ಳಿಯಿಂದ ಹಳ್ಳಿಗೆ ಹೋಗಿ. ಮನೆಯಿಂದ ಮನೆಗೆ ಹೋಗಿ. ಆಗತಾನೆ ನಿಜವಾದ ಕೆಲಸ ವಿರುವುದು. ಹಾಗಲ್ಲದೆ ನಿರಾತಂಕವಾಗಿ ಹಾಸಿಗೆಯ ಮೇಲೆ ಮಲಗಿ ಮಧ್ಯೆ ಮಧ್ಯೆ ಗಂಟೆಯನ್ನು ಬಾರಿಸಿದರೆ ಅದು ಒಂದು ಖಾಯಿಲೆ, ಮತ್ತೇನೂ ಅಲ್ಲ. ಸ್ವತಂತ್ರರಾಗಿ. ಸ್ವತಂತ್ರವಾದ ನಿರ್ಣಯಗಳಿಗೆ ಬರುವುದನ್ನು ಅಭ್ಯಾಸಮಾಡಿ. ಯಾವುದೋ ಒಂದು ತಂತ್ರ ಶಾಸ್ತ್ರದಲ್ಲಿ ಗಂಟೆಯ ಹಿಡಿ ಇಷ್ಟೇ ಉದ್ದವಿರಬೇಕೆಂದು ಹೇಳಿದೆ. ಆದರೆ ಅದನ್ನು ಕಟ್ಟಿಕೊಂಡು ನನಗೇನು. ದೇವರ ದಯೆಯಿಂದ ನಿಮ್ಮ ಬಾಯಿಯಿಂದಲೇ ಕೋಟ್ಯಾನುಕೋಟಿ ವೇದಗಳು, ತಂತ್ರಗಳು, ಪುರಾಣಗಳು ಹೊರ ಬೀಳುವುವು. ಈಗ ನೀವು ಇದನ್ನು ಖಂಡಿತ ತೋರಿದರೆ, ಒಂದು ವರುಷದಲ್ಲಿ ಭರತ ಖಂಡದಲ್ಲಿ ನೀವುಗಳು ಮೂರು ನಾಲ್ಕು ಲಕ್ಷ ಶಿಷ್ಯರನ್ನು ಮಾಡಿದರೆ, ಆಗ ಮಾತ್ರ ನನಗೆ ನಿಮ್ಮ ಮೇಲೆ ಸ್ವಲ್ಪ ನಂಬಿಕೆ ಹುಟ್ಟುವುದು.

ಇನ್ನೊಂದು ಸಮಾಚಾರ. ಬೊಂಬಾಯಿನಿಂದ ರಾಮೇಶ್ವರಕ್ಕೆ ತ—ಒಂದಿಗೆ ಹೋದ ಕ್ಷೌರಮಾಡಿಸಿಕೊಂಡಿದ್ದ ಹುಡುಗನೊಬ್ಬನು ನಿನಗೆ ಗೊತ್ತಿದೆಯೇನು? ಅವನು ರಾಮಕೃಷ್ಣಪರಮಹಂಸರ ಶಿಷ್ಯ ನೆಂದು ಹೇಳುತ್ತಾನೆ! ತ—ಅವನಿಗೆ ದೀಕ್ಷೆಯನ್ನು ಕೊಡಲಿ. ರಾಮ ಕೃಷ್ಣರನ್ನು ಅವನು ತನ್ನ ಜೀವನದಲ್ಲೇ ಕಂಡಿರಲಿಲ್ಲ. ಆದರೂ ಅವರ ಶಿಷ್ಯನಂತೆ! ಎಷ್ಟು ಧೂರ್ತತನ. ಗುರು ಪರಂಪರೆಯಿಲ್ಲದೆ ಏನನ್ನೂ ಮಾಡುವುದಕ್ಕೆ ಆಗುವುದಿಲ್ಲ. ಇದೇನು ಮಕ್ಕಳಾಟವೇನು? ಸರಿ ಯಾದ ದಾರಿಯಲ್ಲಿ ಹೋಗಲು ಇಚ್ಛೆ ಇಲ್ಲದೇ ಇದ್ದರೆ ಅವನನ್ನು ಆಚೆಗೆ ಅಟ್ಟಿ. ಗುರು ಪರಂಪರೆ ಇಲ್ಲದೆ ಏನನ್ನೂ ಮಾಡುವುದಕ್ಕಾಗುವು ದಿಲ್ಲವೆಂದು ನಾನು ಹೇಳುತ್ತೇನೆ. ಅಂದರೆ ಗುರುವಿನ ಶಕ್ತಿ ಶಿಷ್ಯನಲ್ಲಿ ಆವಿರ್ಭೂತವಾಗುವುದು. ಅತನಿಂದ ಪುನಃ ಅವನ ಶಿಷ್ಯನಲ್ಲಿ, ಹೀಗೆ.

—ಅವನು ಇಲ್ಲಿ ಬಂದು ತಾನು ಶ್ರೀ ರಾಮಕೃಷ್ಣರ ಶಿಷ್ಯನೆಂದು ಹೇಳಿಕೊಳ್ಳುತ್ತಾನೆ. ಇದೇನು ಹುಡುಗರಾಟವೋ? ಜ—ಯಾರೋ ಒಬ್ಬನು ನನ್ನ ಗುರುಭಾಯಿಯೆಂದು ಹೇಳಿಕೊಳ್ಳುತ್ತಿರುವನೆಂದು ಹೇಳಿದನು. ಆ ಹುಡುಗನೇ ಹೀಗೆ ಮಾಡುತ್ತಿರುವನೆಂದು ಸಂದೇಹ. ಗುರುಭಾಯಿಯಂತೆ ನಟಿಸುವುದು, ತಾನು ಶಿಷ್ಯನೆಂದು ಹೇಳಿಕೊಳ್ಳುವುದಕ್ಕೆ ಅವಮಾನವೆಂದು ಕಾಣುತ್ತದೆ. ಒಂದೇ ಸಲ ಗುರುವಾಗಿಯೇ ಬಿಡಬಹುದು! ಸಿದ್ಧಾಂತ ಮಾಡಿದ ನಿಯಮಗಳನ್ನು ಪಾಲಿಸದೇ ಇದ್ದರೆ ಆಚೆಗೆ ನೂಕಿ.

—ಅವನ ಮನಸ್ಸಿನ ಅಸ್ಥಿರತೆಯನ್ನು ನೋಡಿದರೆ ಅವನಿಗೆ ಮಾಡುವುದಕ್ಕೆ ಏನೂ ಕೆಲಸವಿಲ್ಲವೆಂದು ಕಾಣುತ್ತದೆ. ಹಳ್ಳಿಯಿಂದ ಹಳ್ಳಿಗೆ ಹೋಗಿ, ಇಡೀ ಜನಾಂಗಕ್ಕೆ ಒಳ್ಳೆಯದನ್ನು ಮಾಡಿ, ಉಳಿದವರಿಗೆ ಮೋಕ್ಷವನ್ನು ಸಂಪಾದಿಸಲು ನೀವೇ ನರಕಕ್ಕಾದರೂ ಹೋಗಿ. ನನ್ನ ಸ್ವಂತ ಮುಕ್ತಿಯೆಂದು ಹೇಳಿಕೊಳ್ಳುವುದು ಜಗತ್ತಿನಲ್ಲಿ ಇಲ್ಲ. ಯಾವಾಗ ನೀನು ಅದನ್ನು ಆಲೋಚನೆ ಮಾಡುವೆಯೋ ಅಲ್ಲಿಯವರೆವಿಗೂ ನೀನು ಚಂಚಲನಾಗುವುದೇ ಖಂಡಿತ. ನನ್ನ ಮಗು! ಶಾಂತಿಯೊಂದಿಗೆ ನಿನ್ನ ಕೆಲಸವೇನು? ನೀನು ಎಲ್ಲವನ್ನು ತ್ಯಾಗ ಮಾಡಿದೆ. ಬಾ, ಶಾಂತಿಯನ್ನು, ಮುಕ್ತಿಯನ್ನು ಕೂಡ ತ್ಯಜಿಸುವ ಸಮಯ ಒಂದಿದೆ! ಸ್ವಲ್ಪವೂ ಆತಂಕಪಡಬೇಡ. ಸ್ವರ್ಗವೊ ನರಕವೊ, ಭಕ್ತಿಯೋ ಮುಕ್ತಿಯೋ, ಯಾವುದನ್ನೂ ಗಮನಿಸಬೇಡ. ನನ್ನ ಮಗು! ಹೋಗು ಆದರೆ. ಮನೆಯಿಂದ ಮನೆಗೆ ದೇವರ ಹೆಸರನ್ನು ಹರಡು. ಇನ್ನೊಬ್ಬನಿಗೆ ಒಳ್ಳೆಯದನ್ನು ಮಾಡುವುದರಿಂದ ಮಾತ್ರವೇ ತನ್ನ ಒಳ್ಳೆಯದನ್ನು ಸಾಧಿಸಬಹುದು. ಇನ್ನೊಬ್ಬನಿಗೆ ಭಕ್ತಿ ಮುಕ್ತಿಗಳು ಸಿಕ್ಕುವಂತೆ ಮಾಡುವುದರಿಂದಲೇ ತನಗೆ ಭಕ್ತಿ ಮುಕ್ತಿಗಳು ಸಿಕ್ಕುವುವು. ಇದನ್ನು ಅನುಸರಿಸು. ಅದಕ್ಕೋಸ್ಕರವಾಗಿ ನಿನ್ನನ್ನು ಮರೆ. ಅದರಲ್ಲೇ ತನ್ಮಯನಾಗಿ ಹುಚ್ಚನಾಗು. ಶ್ರೀ ರಾಮಕೃಷ್ಣರು ನಿನ್ನನ್ನು ಯಾವ ರೀತಿ ಪ್ರೀತಿಸುತ್ತಿದ್ದರೋ ಅದರಂತೆ, ನಾನು ನಿನ್ನನ್ನು ಹೇಗೆ ಪ್ರೀತಿಸುವೆನೋ ಅದರಂತೆ, ನೀನು ಜಗತ್ತನ್ನು ಪ್ರೀತಿಸು ಬಾ. ಎಲ್ಲರನ್ನು

ಟ್ಟಿಗೆ ಸೇರಿಸು. ಜಿ—ಎಲ್ಲಿ? ನಿನ್ನೊಂದಿಗೆ ಅವನೂ ಇರಬೇಕು. ಅವನಿಗೆ ನನ್ನ ಅನಂತ ಪ್ರೀತಿಯನ್ನು ತಿಳಿಸಿ. ಸ—ಎಲ್ಲಿರುವನು? ಇಚ್ಛೆ ಪಟ್ಟರೆ ಅವನೂ ಸೇರಲಿ. ನನ್ನ ಹೆಸರಿನಲ್ಲಿ ಅವನನ್ನು ಕರೆದು ಹೇಳು.

ಈ ಕೆಲವು ವಿಷಯಗಳನ್ನು ಗಮನದಲ್ಲಿಟ್ಟಿರು.

(೧) ಸರ್ವಸ್ವವನ್ನು, ಭಕ್ತಿ ಮುಕ್ತಿ ಭೋಗ ಇವುಗಳೆಲ್ಲವನ್ನೂ ತ್ಯಜಿಸಿದ ಸಂನ್ಯಾಸಿಗಳು ನಾವು.

(೨) ಚಂಡಾಲನಸಹಿತ ವಿಶ್ವಕ್ಕೆ ನಾವು ಹಿತವನ್ನು ಮಾಡಬೇಕು. ಇದು ನಮ್ಮ ಶಪಥ. ಮುಕ್ತಿಯೋ ನರಕವೋ ಯಾವುದಾದರೂ ಬರಲಿ. ಎಲ್ಲವನ್ನೂ ಸ್ವೀಕರಿಸಿ.

(೩) ಜಗದ ಹಿತಕ್ಕೋಸುಗವಾಗಿ ಶ್ರೀ ರಾಮಕೃಷ್ಣಪರಮಹಂಸರು ಬಂದರು. ಅವರನ್ನು ಮಾನವರೆಂದಾದರೂ ಕರೆಯಿರಿ, ದೇವರೆಂದಾದರೂ ಕರೆಯಿರಿ, ಅವತಾರವೆಂದಾದರೂ ಕರೆಯಿರಿ, ನಿಮ್ಮ ಇಚ್ಛೆ ಬಂದ ರೀತಿಯಲ್ಲಿ ಕರೆಯಿರಿ, ನಿಮ್ಮ ದೃಷ್ಟಿಗನುಸಾರವಾಗಿ ಅವರನ್ನು ಸ್ವೀಕರಿಸಿ.

(೪) ಯಾರು ಅವರ ಮುಂದೆ ಮಣಿಯುವರೋ ಆ ಕ್ಷಣವೇ ಅವರು ಅತಿ ನಿರ್ಮಲರಾಗುವರು. ನನ್ನ ಮಗು, ಸಾಧ್ಯವಾದರೆ ಈ ಸಂದೇಶವನ್ನು ಮನೆಯಿಂದ ಮನೆಗೆ ಸಾರು. ನಿನ್ನ ಅಶಾಂತಿ ಎಲ್ಲ ಕೊನೆಗಾಣುವುದು. ಎಂದಿಗೂ ಅಂಜಬೇಡ ಅಂಜುವುದಕ್ಕೆ ಅವಕಾಶವೆಲ್ಲಿದೆ. ಯಾವುದಕ್ಕೂ ಅಂಜದಿರುವುದೇ ನಮ್ಮ ಬಾಳಿನ ಒಂದು ಭಾಗ. ಇದುವರೆವಿಗೂ ನೀನು ಅವರ ಹೆಸರನ್ನು ಮತ್ತು ನಿನ್ನ ಶೀಲವನ್ನು ಸುತ್ತಲೂ ಹರಡಿರುವಿ. ಅದು ಒಳ್ಳೆಯದು. ಈಗ ಅದನ್ನು ಸರಿಯಾಗಿ ಆಲೋಚಿಸಿ ಶಿಸ್ತಿನಿಂದ ಹರಡು. ದೇವರು ನಿನ್ನಲ್ಲಿರುವನು. ಧೈರ್ಯತಾಳು.

ನಾನು ಬದುಕಿದರೇನು ಸತ್ತರೇನು, ನಾನು ಭರತಖಂಡಕ್ಕೆ ಹೋದರೇನು ಹೋಗದೇ ಇದ್ದರೇನು! ನೀವು ಪ್ರೇಮವನ್ನು, ಯಾವ ಮೇರೆಯೂ ಇಲ್ಲದ ಪ್ರೇಮವನ್ನು ಹರಡಿ. ಸ—ನನ್ನು ಈ ಕಾರ್ಯಕ್ಕೆ ಸೇರಿಸು. ಇನ್ನೊಬ್ಬರನ್ನು ಗೆಲ್ಲುವುದಕ್ಕೆ ಅಸ್ತ್ರಗಳು ಬೇಕೆಂಬುದನ್ನು

ಜ್ಞಾಪಕದಲ್ಲಿಡು, "ಸಾವು ಎಂದಿದ್ದರೂ ನಿಶ್ಚಯವಾಗಿರುವಾಗ, ಒಂದು ಒಳ್ಳೆಯ ಕಾರ್ಯಕ್ಕೆ ಮಡಿಯುವುದು ಮೇಲು.

ನಿನ್ನ ವಿಶ್ವಾಸಪೂರ್ವಕ,
ವಿವೇಕಾನಂದ.

ಪಿ. ಸೊ.—ಕಳೆದ ಪತ್ರವನ್ನು ನೀನು ಜ್ಞಾಪಕದಲ್ಲಿಡು. ನಮಗೆ ಸ್ತ್ರೀಯರೂ ಪುರುಷರೂ ಇಬ್ಬರೂ ಬೇಕಾಗಿದೆ. ಆತ್ಮನಲ್ಲಿ ಲಿಂಗ ಭೇಧವಿಲ್ಲ. ಶ್ರೀ ರಾಮಕೃಷ್ಣರನ್ನು ಒಬ್ಬ ಅವತಾರ ಪುರುಷರೆಂದರೆ ಸಾಲದು. ನೀವು ಶಕ್ತಿಯನ್ನು ತೋರಿಸಬೇಕು. —ಅವರುಗಳೆಲ್ಲಿ? ಈ ಭಾವನೆಗಳನ್ನು ಹರಡುವಂತೆ ಅವರಿಗೆ ಹೇಳು. ನಮಗೆ ಸಾವಿರಾರು ಪುರುಷರು, ಸ್ತ್ರೀಯರು ಕಾಡುಕಿಚ್ಚಿನಂತೆ ಹಿಮಾಲಯದಿಂದ ಕನ್ಯಾ ಕುಮಾರಿಯವರೆವಿಗೂ, ಉತ್ತರ ಧ್ರುವದಿಂದ ದಕ್ಷಿಣ ಧ್ರುವದವರೆವಿಗೂ ಪ್ರಪಂಚದ ಎಲ್ಲಾ ಕಡೆಗಳಲ್ಲೂ ಹರಡಬೇಕಾಗಿದೆ. ಮಕ್ಕಳ ಆಟದಲ್ಲಿ ಮೈಮರೆತರೆ ಪ್ರಯೋಜನವಿಲ್ಲ. ಅದಕ್ಕೆ ಸಮಯವೂ ಇಲ್ಲ. ಕೇವಲ ಆಟ ಕ್ಕೋಸುಗವಾಗಿ ಯಾರು ಬಂದಿರುವರೋ ಅವರು ಸಮಯವಿರುವಾಗಲೇ ಹೊರಟು ಹೋಗಲಿ. ಇಲ್ಲದೇ ಇದ್ದರೆ ಮುಂದೆ ವ್ಯಥೆಪಡಬೇಕಾದೀತು. ನಮಗೆ ಒಂದು ಸಂಸ್ಥೆ ಬೇಕಾಗಿದೆ. ಸೋಮಾರಿತನದಿಂದ ಪಾರಾಗಿ. ಹಬ್ಬಿ! ಹಬ್ಬಿ! ಬೆಂಕಿಯಂತೆ ಎಲ್ಲಾ ಸ್ಥಳಗಳಿಗೂ ಹೋಗಿ. ನನ್ನನ್ನು ಕಾದು ಕುಳಿತುಕೊಳ್ಳಬೇಡಿ. ನಾನು ಬದುಕಿದರೇನು ಸತ್ತರೇನು? ನೀವುಗಳು ವಿಸ್ತಾರವಾಗಿ ಹರಡುತ್ತಹೋಗಿ.

ವಿಶ್ವಾಸ ಪೂರ್ವಕ,
ವಿವೇಕಾನಂದ.

೧೮೯೫

ಪ್ರಿಯ—,

ಬೇಕಾದಷ್ಟು ವೃತ್ತಪತ್ರಿಕೆಗಳು ನನ್ನಲ್ಲಿವೆ. ಹೆಚ್ಚಿಗೆ ಇನ್ನೇನು ನನಗೆ ಕಳುಹಿಸಬೇಕಾಗಿಲ್ಲ. ಈಗ ಚಳುವಳಿಯು ಇಂಡಿಯಾ ದೇಶಕ್ಕೆ ಮಾತ್ರ ಅನ್ವಯಿಸಲಿ.

ಪ್ರತಿದಿನವೂ ಒಂದು ಕೌತುಕದ ಸುದ್ದಿಯನ್ನು ಹರಡುವುದರಿಂದ ಪ್ರಯೋಜನವಿಲ್ಲ. ದೇಶದ ಮೇಲೆಲ್ಲ ಇರುವ ಉತ್ಸಾಹದ ಸಹಾಯವನ್ನು ನಿಮ್ಮ ಉಪಯೋಗಕ್ಕೆ ಹೊಂದಿಸಿಕೊಳ್ಳಿ. ಮೂಲೆ ಮೂಲೆಯಲ್ಲಿ ನೀವು ಹರಡಿಕೊಳ್ಳಿ. ಅಂದರೆ ಬೇರೆ ಬೇರೆ ಸ್ಥಳಗಳಲ್ಲಿ ಕೇಂದ್ರಶಾಖೆಯನ್ನು ಸ್ಥಾಪಿಸಲು ಪ್ರಯತ್ನಪಡಿ. ಕೇವಲ ಇದು ಬರೀ ಮಾತು ಆಗದಿರಲಿ. ನೀವು ಮದ್ರಾಸಿನವರೊಂದಿಗೆ ಸೇರಿಕೊಂಡು ಬೇರೆ ಸ್ಥಳಗಳಲ್ಲಿ ಸಂಘವನ್ನು ಸ್ಥಾಪಿಸಬೇಕು. ಒಂದು ಮಾಸಪತ್ರಿಕೆಯನ್ನು ಹೊರಡಿಸುತ್ತೀರಿ ಎಂದು ಕೇಳಿದ್ದೆನಲ್ಲ, ಅದು ಏನಾಯಿತು? ಅದನ್ನು ನಡೆಸುವ ವಿಚಾರದಲ್ಲಿ ನಿನಗೆ ಏಕೆ ಅಷ್ಟು ಅಂಜಿಕೆ? ಬನ್ನಿ! ಏನಾದರೂ ಒಂದು ಶೌರ್ಯದ ಕೆಲಸವನ್ನು ಮಾಡಿ. ಸಹೋದರನೆ ನಿನಗೆ ಮುಕ್ತಿ ಸಿಕ್ಕದೇ ಇದ್ದರೆ ಏನು? ಕೆಲವು ವೇಳೆ ನರಕಕ್ಕೆ ಇಳಿದರೇನಂತೆ?

**ಮನಸಿ ವಚಿಸಿಕಾಯೆ ಪುಣ್ಯ ಪೀಯೂಷಪೂರ್ಣಾಃ**
**ತ್ರಿಭುವನ ಉಪಕಾರ ಶ್ರೇಣಿಭಿಃ ಪ್ರೀಯಮಾನಃ**
**ಪರಗುಣ ಪರಮಾಣು ಪರ್ವತೀಕೃತ್ಯಕೇಚಿತ್**
**ನಿಜಹೃದಿ ವಿಕಸಂತ್ಃ ಸಂತಿ ಸಂತಃ ಕಿಯಂತಃ**

ಕಾಯಾ ವಾಚಾ ಮನಸಾ ಪವಿತ್ರರಾದ ಕೆಲವು ಮಹಾತ್ಮರು ಇರುವರು. ಅವರು ತಮ್ಮ ಅನೇಕ ಉಪಕಾರಗಳಿಂದ ಭುವನತ್ರಯವನ್ನು ಮೆಚ್ಚಿಸಿರುವರು. ಅನ್ಯರಲ್ಲಿ ಕಣಮಾತ್ರವಿರುವ ಒಳ್ಳೆಯದನ್ನು ಪರ್ವತೋಪಮವಾಗಿ ಕಂಡು ತಮ್ಮ ಹೃದಯವನ್ನು ವಿಕಾಸಗೊಳಿಸುವರು; ಎಂಬ ನೀತಿ ಸುಳ್ಳೇನು?

ನಿನಗೆ ಮುಕ್ತಿ ದೊರಕದೆ ಇದ್ದರೆ ಏನಂತೆ? ಎಂತಹ ಮಕ್ಕಳಾಟ ವಿದು! ಹೇ ಜಗದೀಶ! ಕೃಷ್ಣಸರ್ಪನ ವಿಷವನ್ನು ಕೂಡ, ಕಚ್ಚಲಿಲ್ಲ ವೆಂದು ಸಾಧಿಸಿದರೆ, ಇಲ್ಲದಂತೆ ಮಾಡಬಹುದೆಂದು ಹೇಳುತ್ತಾರೆ. ಇದು ಸತ್ಯವಲ್ಲವೆ? "ನನಗೆ ಏನೂ ಗೊತ್ತಿಲ್ಲ. ನಾನು ಯಾವುದಕ್ಕೂ ಕೆಲಸಕ್ಕೆ ಬಾರದ ವಸ್ತು" ಎಂದು ಹೇಳಿಕೊಳ್ಳುವುದು ಎಂತಹ ಸಮ್ರತೆ! ಇದು ಕಪಟ ತ್ಯಾಗ. ಹಾಸ್ಯಕರವಾದ ವಿಷಯ ಎಂದು ಹೇಳುತ್ತೇನೆ. ಅಂತಹ ಆತ್ಮ ಅವಹೇಳನದ ಸ್ಥಿತಿಯಿಂದ ಪಾರಾಗು. "ನನಗೆ ಅದು ಗೊತ್ತಿಲ್ಲದೇ ಇದ್ದರೆ ಪ್ರಪಂಚದಲ್ಲಿ ಅದು ಮತ್ತಾರಿಗೆ ಗೊತ್ತಿದೆ!" ಈಗ, ನನಗೆ ಏನೂ ಗೊತ್ತಿಲ್ಲವೆಂದು ಹೇಳಿದರೆ ಇದುವರೆವಿಗೂ ಏನು ಮಾಡುತ್ತಿದ್ದೆ? ಇದೆಲ್ಲ ನಾಸ್ತಿಕನ ಮಾತು. ಇದೆಲ್ಲ ದಿಕ್ಕೆಟ್ಟು ಅಲೆಯುವವನ ವಿಷಯ—ನಾವು ಏನನ್ನು ಬೇಕಾದರೂ ಮಾಡಬಹುದು. ಎಲ್ಲವನ್ನು ಸಾಧಿಸುವೆವು. ಯಾರು ಅದೃಷ್ಟಶಾಲಿಗಳೋ ಅವರು ನಮ್ಮನ್ನು ಧೈರ್ಯವಾಗಿ ಸೇರುವರು. ಕೆಲಸಕ್ಕೆ ಬಾರದವರು ಮೂಲೆ ಗಳಲ್ಲಿ ನಿಂತು ಬೆಕ್ಕಿನಂತೆ ಅರಚಿಕೊಳ್ಳಲಿ. ಹೌದು; "ನಿನಗೆ ಬೇಕಾದಷ್ಟು ಪ್ರಖ್ಯಾತಿ ಸಿಕ್ಕಿದೆ. ಈಗ ಮನೆಗೆ ಹಿಂತಿರುಗು" ಎಂದು—ಅವನು ಬರೆಯುತ್ತಾನೆ. ಆತನು ನನಗೆ ವಾಸಮಾಡುವುದಕ್ಕೆ ಒಂದು ಮನೆ ಯನ್ನು ಕಟ್ಟಿ ಕರೆದಿದ್ದರೆ, ಅವನನ್ನು ಮನುಷ್ಯನೆಂದು ಹೇಳುತ್ತಿದ್ದೆ. ಇಂತಹ ಹತ್ತು ವರುಷಗಳ ಅನುಭವದಿಂದ ನಾನು ಬುದ್ಧಿವಂತನಾಗಿರು ವೆನು. ಮಾತಿನಿಂದ ನನ್ನನ್ನು ಮರಳು ಮಾಡಲು ಆಗುವುದಿಲ್ಲ. ಯಾರ ಮನಸ್ಸಿನಲ್ಲಿ ಧೈರ್ಯವಿದೆಯೋ, ಯಾರ ಹೃದಯದಲ್ಲಿ ಪ್ರೇಮ ವಿದೆಯೋ ಅವರು ನನ್ನೊಂದಿಗೆ ಬರಲಿ. ಉಳಿದವರಾರೂ ನನಗೆ ಬೇಕಿಲ್ಲ. ಜಗನ್ಮಾಯಿಯ ದಯೆಯಿಂದ ಈಗ ನಾನು ಏಕಾಂಗಿಯಾದರೂ ಒಂದು ಲಕ್ಷಕ್ಕೆ ಸಮವಾಗಿರುವೆನು. ಮುಂದೆ ಇಪತ್ತು ಲಕ್ಷಕ್ಕೆ ಸಮವಾಗುವೆನು. ನಾನು ಭರತಖಂಡಕ್ಕೆ ಹಿಂತಿರುಗುವ ವಿಚಾರ ಇನ್ನೂ ನಿರ್ದಿಷ್ಟವಾಗಿಲ್ಲ. ನಾನು ಇಲ್ಲಿ ಜೀವಿಸುವ ಹಾಗೆಯೆ ಅಲ್ಲೂ ಕೂಡ ಅಲೆದಾಡುವ ಜೀವನವನ್ನು ಮಾಡಬೇಕಾಗುವುದು. ಇಲ್ಲಿ ವಿದ್ಯಾವಂತರ ಸಂಘದಲ್ಲಿ ಇರಬಹುದು. ಅಲ್ಲಾದರೋ ಮೂರ್ಖರೊಂದಿಗೆ ಇರಬೇಕು. ಇದೇ

ಮೇರುವಿಗಿರುವಷ್ಟು ವ್ಯತ್ಯಾಸ. ಈ ದೇಶದ ಜನರು ಕಲೆತು ಶಿಸ್ತಿನಿಂದ ಕೆಲಸ ಮಾಡುವರು. ಆದರೆ ನಮ್ಮ ಉದ್ಯಮಗಳಾದರೋ ಸೋಮಾರಿ ತನ, ಕಪಟತ್ಯಾಗ, ಅಸೂಯೆ, ಇವುಗಳ ಸಂಪರ್ಕದಿಂದ ಎಲ್ಲ ನಿಷ್ಪ್ರಯೋಜನವಾಗುವುದು.

ಆಗಿಂದಾಗ್ಯೆ—ಅವನು ದೊಡ್ಡ ಪತ್ರವನ್ನು ಬರೆಯುವನು. ಆದರೂ ಅರ್ಧಭಾಗ ಅರ್ಥವೇ ಆಗುವುದಿಲ್ಲ. ಇದು ನನ್ನ ಪಾಲಿಗೆ ಒಳ್ಳೆಯದೇ ಆಯಿತು. ಅವನು ಬರೆಯುವ ಸಮಾಚಾರದಲ್ಲೆಲ್ಲಾ ಮುಕ್ಕಾಲು ಪಾಲು ಇಂತಹ ಸುದ್ದಿಗಳೇ : ಯಾವುದೋ ಒಂದು ಸ್ಥಳದಲ್ಲಿ ಯಾರೋ ಒಬ್ಬನು ನನ್ನನ್ನೂ ನಿಂದಿಸುತ್ತಿದ್ದನು ; ಇದನ್ನು ತಡೆಯಲಾರದೆ ಅವನು ಇವನೊಂದಿಗೆ ಜಗಳವಾಡಿದನು; ಇತ್ಯಾದಿ. ಅವನು ನನ್ನನ್ನು ರಕ್ಷಣೆ ಮಾಡಿದುದಕ್ಕೆ ಅನೇಕ ವಂದನೆಗಳು! ನನ್ನ ವಿಷಯವಾಗಿ ಕೆಲವು ಜನರು ಏನು ಮಾತನಾಡುತ್ತಿರುವರು ಎಂಬುದನ್ನು ಕೇಳುವುದಕ್ಕೆ ನನಗೆ ಸಮಯವಿಲ್ಲ. ಅದಕ್ಕೆ ಇದೇ ಕಾರಣ. "ಸ್ವಲ್ಪಶ್ಚ ಕಾಲೋ ಬಹವಶ್ಚ ವಿಘ್ನಾಃ" ಕಾಲವಿರುವುದು ಸ್ವಲ್ಪ, ಆದರೆ ವಿಘ್ನಗಳು ಬಹಳ.

ಒಂದು ಸುವ್ಯವಸ್ಥಿತವಾದ ಸಂಘ ಬೇಕಾಗಿದೆ.—ಅವನು ಮನೆಯ ಕೆಲಸಗಳನ್ನು ನೋಡಿ ಕೊಳ್ಳಲಿ.—ಅವನು ಕಾರ್ಯದರ್ಶಿಯಾಗಲಿ, ಅಂದರೆ ಪತ್ರ ವ್ಯವಹಾರವನ್ನು ನೋಡಿಕೊಳ್ಳಲಿ. ಒಂದು ಶಾಶ್ವತವಾದ ಕೇಂದ್ರವನ್ನು ಸ್ಥಾಪಿಸಿ. ಈಗ ಮಾಡುವಂತೆ ಸಿಕ್ಕಾಪಟ್ಟೆ ಪ್ರಯತ್ನ ಪಟ್ಟರೆ ಪ್ರಯೋಜನವಿಲ್ಲ. ನಾನು ಹೇಳುವುದು ಗೊತ್ತಾಯಿತೆ? ಒಂದು ರಾಶಿ ವೃತ್ತಪತ್ರಿಕೆಗಳು ನನ್ನಲ್ಲಿ ಬಿದ್ದಿವೆ. ಈಗ ನೀವು ಏನಾದರೂ ಕೆಲಸ ಮಾಡಬೇಕೆಂದು ಬಯಸುತ್ತೇನೆ. ನೀವು ಏನಾದರೂ ಒಂದು ಮಠವನ್ನು ಕಟ್ಟಿದರೆ ಧೀರರೆನ್ನುತ್ತೇನೆ. ಇಲ್ಲದೆ ಇದ್ದರೆ ನೀವು ಯಾವ ಕೆಲಸಕ್ಕೂ ಬಾರದವರು. ನೀವು ಕೆಲಸ ಮಾಡುವಾಗ ಮದ್ರಾಸಿನವರೊಂದಿಗೆ ಆಲೋಚಿಸಿ. ಕೆಲಸಮಾಡುವುದರಲ್ಲಿ ಅವರು ದಕ್ಷರು. ಈ ವರುಷ ಶ್ರೀರಾಮಕೃಷ್ಣರ ಜಯಂತ್ಯುತ್ಸವವನ್ನು ಹಿಂದೆ ಎಂದೂ ನಡೆದಿ

ಲ್ಲದಂತೆ ವಿಜೃಂಭಣೆಯಿಂದ ಮಾಡಿ. ಊಟ ಉಪಚಾರಗಳು ಕಡಿಮೆ ಇದ್ದಷ್ಟೂ ಒಳ್ಳೆಯದು. ಕೈಗೆ ಪ್ರಸಾದವನ್ನು ಹಂಚಿದರೆ ಸಾಕು.

ಇಂಗ್ಲೀಷಿನಲ್ಲಿ ಶ್ರೀ ರಾಮಕೃಷ್ಣರ ಜೀವನ ಚರಿತ್ರೆಯನ್ನು ಸಂಕ್ಷೇಪವಾಗಿ ಬರೆಯುತ್ತೇನೆ. ಅದನ್ನು ವಂಗ ಭಾಷೆಗೆ ಪರಿವರ್ತಿಸಿ ಮುದ್ರಿಸಿ. ಉತ್ಸವದ ಸಮಯದಲ್ಲಿ ಹಂಚಿ. ಸುಮ್ಮನೆ ಹಂಚಿದ ಪುಸ್ತಕವನ್ನು ಜನರು ಓದುವುದಿಲ್ಲ. ಪುಸ್ತಕಕ್ಕೆ ಕನಿಷ್ಟಪಕ್ಷ ಒಂದು ಬೆಲೆಯನ್ನು ಇಡಿ.

ಕಾರ್ಯವನ್ನು ಸಾಮರ್ಥ್ಯದಿಂದ ಮಾಡಬೇಕಾದರೆ ಬುದ್ಧಿಯು ನಾನಾ ಭಾಗ ಚೆನ್ನಾಗಿ ಅಭಿವೃದ್ಧಿಗೊಂಡಿರಬೇಕು. ನೀನು ಹೋಗುವ ಯಾವುದಾದರೊಂದು ಊರಿನಲ್ಲಿಯೇ ಆಗಲಿ, ಹಳ್ಳಿಯಲ್ಲೇ ಆಗಲಿ, ಎಲ್ಲಿ ಶ್ರೀ ರಾಮಕೃಷ್ಣರನ್ನು ಕೆಲವರು ಗೌರವಿಸುತ್ತಿರುವರೋ ಅಲ್ಲಿ ಒಂದು ಸಂಘವನ್ನು ಸ್ಥಾಪನೆ ಮಾಡು. ನೀನು ಅಷ್ಟೊಂದು ಹಳ್ಳಿಗಳಲ್ಲಿ ತಿರುಗಾಡಿದ್ದು ಏನೂ ಪ್ರಯೋಜನವಿಲ್ಲ. ನಾವು ಕ್ರಮೇಣ ಹರಿಸಭಾ ಮುಂತಾದುವುಗಳನ್ನು ನಮ್ಮಲ್ಲಿ ತಲ್ಲೀನ ಮಾಡಿಕೊಳ್ಳಬೇಕು. ಎಲ್ಲವನ್ನು ನಾನು ನಿನಗೆ ಹೇಳುವುದಕ್ಕೆ ಆಗುವುದಿಲ್ಲ. ನನ್ನಂತೆ ಮತ್ತೊಬ್ಬ ರಾಕ್ಷಸನಂತೆ ಕೆಲಸ ಮಾಡುವವನು ಸಿಕ್ಕಿದ್ದರೆ! ದೇವರು ಎಲ್ಲವನ್ನು ಸಕಾಲದಲ್ಲಿ ಒದಗಿಸುವನು. ಶಕ್ತಿ ಯಾವನಲ್ಲಾದರೂ ಇದ್ದರೆ ಅದನ್ನು ಕಾರ್ಯತಃ ತೋರಬೇಕು. ನಿನ್ನ ಮುಕ್ತಿ ಭಕ್ತಿಗಳೆಂಬ ಆಸೆಗಳನ್ನು ತ್ಯಜಿಸು. "ಪರೋಪಕಾರಕ್ಕಾಗಿಯೇ ಸತ್ಪುರುಷರು ಬಾಳುವರು" ಮಹಾತ್ಮರು ಇತರರಿಗೆ ತ್ಯಾಗ ಮಾಡಬೇಕು. ಇದಲ್ಲದೆ ಜಗತ್ತಿನಲ್ಲಿ ಬೇರೇ ಮಾರ್ಗವಿಲ್ಲ. ಮತ್ತೊಬ್ಬನಿಗೆ ಯಾವುದು ಒಳ್ಳೆಯದೋ ಅದನ್ನು ನಾನು ಮಾಡುವುದರಿಂದ ಮಾತ್ರ ನನ್ನ ಒಳ್ಳೆಯದನ್ನು ಸಾಧಿಸಬಹುದು, ಬೇರೆ ಮಾರ್ಗವೇ ಇಲ್ಲ. ನೀನು ದೇವರು, ನಾನು ದೇವರು, ಮಾನವನೇ ದೇವರು. ಮಾನವನ ಮೂಲಕ ಆವಿರ್ಭವಿಸಿರುವ ದೇವರೇ ಪ್ರಪಂಚದಲ್ಲಿ ಎಲ್ಲವನ್ನು ಮಾಡುತ್ತಿರುವನು. ಎಲ್ಲಿಯೋ ಬೇರೆ ಮೇಲೊಂದು ಲೋಕದಲ್ಲಿ ಕುಳಿತುಕೊಂಡಿರುವ ದೇವರಿರುವನೆ? ಅದಕ್ಕೇ ಕೆಲಸಕ್ಕೆ ಕೈ ಹಾಕು.

ಸ—ಬರೆದ ಒಂದು ಪುಸ್ತಕವನ್ನು ಬ—ನನಗೆ ಕಳುಹಿಸಿರುವನು. ಪ್ರಪಂಚದಲ್ಲಿರುವ ಜನರೆಲ್ಲರೂ ಕೆಟ್ಟವರು. ಸ್ವಭಾವತಃ ಅವರಿಗೆ ಎಳ್ಳಷ್ಟು ಧರ್ಮವನ್ನು ಪಡೆಯಲು ಅಧಿಕಾರವಿಲ್ಲ. ಇಂಡಿಯಾ ದೇಶದಲ್ಲಿರುವ ಕೆಲವು ಜನ ಬ್ರಾಹ್ಮಣರಿಗೆ ಮಾತ್ರ ಅದಕ್ಕೆ ಸಂಪೂರ್ಣ ಅಧಿಕಾರವಿದೆ. ಅದರಲ್ಲೂ ಬ—ಮತ್ತು ಸ—ಇವರು ಸೂರ್ಯ ಚಂದ್ರರು. ಹೀಗೆಂಬ ಅಭಿಪ್ರಾಯ ಆ ಪುಸ್ತುಕವನ್ನು ಓದಿಯಾದಮೇಲೆ ಬಂದಿರುವುದು. ಭಲೆ! ಅದು ನಿಜವಾಗಿಯೂ ಎಷ್ಟು ಪ್ರಬಲವಾದ ಧರ್ಮ! ಅಂತಹ ಧರ್ಮವನ್ನು ಅದರಲ್ಲೂ ಬಂಗಾಳ ದೇಶದಲ್ಲಿ ಅಭ್ಯಾಸ ಮಾಡುವುದು ಬಹಳ ಸುಲಭ. ತಪಸ್ಸು ಆಧ್ಯಾತ್ಮಿಕ ಸಾಧನೆ ಇವುಗಳ ಸತ್ಯವೆಲ್ಲ ಒಂದು ಸಂಕ್ಷಿಪ್ತ ಮಾತಿನಲ್ಲಿ ಅಡಗಿದೆ. ಅದೇ, ನಾನೇ ಶುದ್ಧ ಉಳಿದವರೆಲ್ಲರೂ ಅಶುದ್ಧ ರೆಂಬುದು. ಮೃಗೀಯ ರಾಕ್ಷಸೀಧರ್ಮ! ನರಕಕ್ಕೆ ಸದೃಶವಾದ ಧರ್ಮ ಅದು. ಧರ್ಮಕ್ಕೆ ಅಮೇರಿಕಾ ದೇಶದವರು ಯೋಗ್ಯರಲ್ಲದೆ ಇದ್ದರೆ, ಇಲ್ಲಿ ಧರ್ಮವನ್ನು ಬೋಧನೆ ಮಾಡುವುದು ತಪ್ಪಾಗಿದ್ದರೆ, ಅವರ ಸಹಾಯ ವನ್ನು ಏತಕ್ಕೆ ಕೇಳುವುದು? ಅಂತಹ ರೋಗವನ್ನು ಯಾವುದು ಗುಣ ಮಾಡಬಲ್ಲದು? ಆಗಲಿ ಸ—ನನ್ನು ಮಲಬಾರಿಗೆ ಹೋಗು ಎಂದು ಹೇಳು. ಅಲ್ಲಿಯ ರಾಜನು ಪ್ರಜೆಗಳ ಭೂಮಿಯನ್ನೆಲ್ಲ ತೆಗೆದುಕೊಂಡು ಬ್ರಾಹ್ಮಣರ ಅಡಿದಾವರೆಗೆ ಸಮರ್ಪಿಸಿರುವನು. ಅಲ್ಲಿ ಪ್ರತಿಯೊಂದು ಹಳ್ಳಿಯಲ್ಲಿಯೂ ದೊಡ್ಡ ಮಠಗಳಿವೆ. ಎಲ್ಲಾ ಬ್ರಾಹ್ಮಣರೂ ಮೃಷ್ಟಾನ್ನದ ಜೊತೆಗೆ ದಕ್ಷಿಣೆ ಇತ್ಯಾದಿಗಳು . . . ಬ್ರಾಹ್ಮಣನ ಸ್ವಂತ ಕೆಲಸ ಸಿದ್ಧಿಸುವುದಾ ದರೆ ಬ್ರಾಹ್ಮಣೇತರರನ್ನು ಬೇಕಾದರೂ ಮುಟ್ಟಬಹುದು. ನಿಮ್ಮ ಕೆಲಸವಾದ ಮೇಲೆ ಮುಳುಗಿ ಸ್ನಾನ ಮಾಡಿಬಿಡಬಹುದು. ಏನೆಂದರೆ ಬ್ರಾಹ್ಮಣೇತರರ ಜಾತಿಯೇ ಅಶುದ್ಧ. ಬೇರೆ ಸಮಯಗಳಲ್ಲಿ ಅವರನ್ನು ಮುಟ್ಟಬಾರದು! ಬೈರಾಗಿಗಳು, ಸಂನ್ಯಾಸಿಗಳು, ಒಂದು ಪಂಗಡದ ಬ್ರಾಹ್ಮಣರು ಈ ದೇಶವನ್ನು ಹಾಳುಮಾಡಿರುವರು. ಕಳ್ಳತನ ಮೋಸ ಇವುಗಳನ್ನೇ ಯಾವಾಗಲೂ ಆಲೋಚಿಸುತ್ತ ಆ ಜನರು ಧರ್ಮ ಬೋಧಕರಂತೆ ನಟಿಸುವರು! ಇತರ ಜನರಿಂದ ದಾನವನ್ನು ಸ್ವೀಕರಿಸುವರು. ತಕ್ಷಣವೇ ನಮ್ಮನ್ನು ಮುಟ್ಟಬೇಡ ಎಂದು ಕಿರಚುವರು. ಎಂತಹ

ಮಹತ್ ಕಾರ್ಯವನ್ನು ಅವರು ಮಾಡುತ್ತಿರುವರು !—ಏನಾದರೂ ಒಂದು ಆಲೂಗೆಡ್ಡೆ ಬದನೆಯಕಾಯನ್ನು ಮುಟ್ಟಿದರೆ ಇನ್ನೇನು ಪ್ರಳಯದ ಸಮಯ ಬಂದಿತು. ಪ್ರಪಂಚ ಇನ್ನು ಎಷ್ಟು ದಿನಗಳು ಬಾಳುವುದು ! ತಮ್ಮ ಕೈಯನ್ನು ತೊಳೆದುಕೊಳ್ಳುವುದಕ್ಕೆ ಮಣ್ಣನ್ನು ಹನ್ನೆರಡು ಸಲಿ ಉಪಯೋಗಿಸದೇ ಇದ್ದರೆ, ಹದಿನಾಲ್ಕು ತಲಾಂತರದವರೆವಿಗೂ ನರಕಕ್ಕೆ ಹೋಗುವರೋ ಅಥವಾ ಇಪ್ಪತ್ತು ತಲಾಂತರದವರೆವಿಗೂ ನರಕಕ್ಕೆ ಹೋಗುವರೋ ? ಕಳೆದ ಎರಡು ಸಾವಿರ ವರುಷಗಳಿಂದಲೂ ನಾಲ್ಕನೇ ಒಂದು ಪಾಲು ಜನ ಸಾಯುತ್ತಿರುವಾಗ, ಇಂತಹ ಗಹನ ಸಮಸ್ಯೆಗಳಿಗೆ ಶಾಸ್ತ್ರೀಯವಾದ ವಿವರಣೆಯನ್ನು ಕಂಡುಹಿಡಿಯುತ್ತಿರುವರು ! ಎಂಟು ವರುಷದ ಹುಡುಗಿಯನ್ನು ಮೂವತ್ತು ವರುಷದ ವರನಿಗೆ ಕೊಟ್ಟು ಮದುವೆ ಮಾಡಿ, ತಂದೆ ತಾಯಿಗಳು ಹಿಗ್ಗುವರು. ಇದನ್ನು ಯಾರಾ ದರೂ ವಿರೋಧಿಸಿದರೆ "ನಮ್ಮ ಧರ್ಮವನ್ನು ತಲೆಕೆಳಕು ಮಾಡುತ್ತಿರುವರು" ಎಂಬ ಆಕ್ಷೇಪಣೆಯನ್ನು ತೆಗೆಯುವರು. ಮೈನೆರೆಯುವುದಕ್ಕೆ ಮುಂಚೆ ತಮ್ಮ ಹೆಣ್ಣು ಮಕ್ಕಳು ತಾಯಂದಿರಾಗುವುದನ್ನು ನೋಡಿ ಅದಕ್ಕೆ ಶಾಸ್ತ್ರಿಯವಾಗಿ ವಿವರಣೆಯನ್ನು ಕೊಡುವವರಿಗೆ ಎಂತಹ ಧರ್ಮವಿದೆ ? ಪುನಃ, ಅನೇಕರು, ಇದಕ್ಕೆಲ್ಲ ಮಹಮ್ಮದೀಯರೇ ಕಾರಣವೆಂದು ದೂರುವರು. ನಿಜವಾಗಿಯೂ ಅವರ ಮೇಲೆ ದೋಷಾರೋಪಣೆಯೆ ! ಗೃಹ್ಯ ಸೂತ್ರವನ್ನು ಓದಿ, ಹುಡುಗಿಯರ ಮದುವೆಯ ವಯಸ್ಸು ಎಷ್ಟಿದೆ ಎಂಬುದನ್ನು ನೋಡು. ಹುಡುಗಿ ಇನ್ನೂ ಚಿಕ್ಕವಳಾಗಿರುವಾಗಲೇ ಅವಳಿಗೆ ಮದುವೆ ಮಾಡಬೇಕೆಂದು ಸ್ಪಷ್ಟವಾಗಿ ಬರೆದಿದೆ. ಗೃಹ್ಯಸೂತ್ರ ವೆಲ್ಲಾ ಹೀಗೆಯೇ ಆಜ್ಞಾಪಿಸಿದೆ. ವೇದಗಳಲ್ಲಿ ಬರುವ ಅಶ್ವಮೇಧ ಯಾಗದಲ್ಲಿ ಇನ್ನೂ ಹೀನಾಯವಾದ ಆಚರಣೆಗಳನ್ನು ಮಾಡುವರು. ಬ್ರಾಹ್ಮಣಗಳೆಲ್ಲವೂ ಅದನ್ನು ಹೇಳುತ್ತವೆ. ಭಾಷ್ಯಾಚಾರ್ಯರುಗಳೆಲ್ಲ ಅದನ್ನು ಒಪ್ಪುತ್ತಾರೆ—ಅದನ್ನು ನೀನು ಹೇಗೆ ಇಲ್ಲವೆನ್ನುವೆ ?

ಇವುಗಳನ್ನೆಲ್ಲ ನಾನು ಏತಕ್ಕೆ ಹೇಳಿದುದು ಅಂದರೆ, ಪೂರ್ವದ ಆಚಾರದಲ್ಲಿ ಎಷ್ಟೋ ಒಳ್ಳೆಯದಿದ್ದವು ; ಅದರಂತೆಯೇ ಎಷ್ಟೋ ಕೆಲಸಕ್ಕೆ ಬಾರದವೂ ಇದ್ದವು. ಒಳ್ಳೆಯದನ್ನು ನಾವು ಇಟ್ಟುಕೊಳ್ಳ

ಬೇಕು. ಮುಂದೆ ಬರುವ ಭಾರತ ಪುರಾತನ ಭಾರತಕ್ಕಿಂತ ಅತಿಶಯುವಾಗಬೇಕು. ಶ್ರೀ ರಾಮಕೃಷ್ಣರು ಹುಟ್ಟಿದ ದಿನದಿಂದಲೇ ನವೀನ ಭಾರತದ ಮತ್ತು ಸ್ವರ್ಣಯುಗದ ದಿನ ಮೊದಲಾದಂತೆ. ಈ ಸ್ವರ್ಣ ಯುಗವನ್ನು ಜಗತ್ತಿಗೆ ತರುವ ಬಾಲಕರು ನೀವು. ಈ ದೃಢ ನಂಬಿಕೆಯನ್ನು ಹೃದಯದಲ್ಲಿಟ್ಟು ಕೆಲಸಮಾಡಿ.

ಅದಕ್ಕೋಸ್ಕರವೆ, ನೀನು ಶ್ರೀರಾಮಕೃಷ್ಣರನ್ನು ಅವತಾರ ಪುರುಷರೆಂದು ಕರೆದು, ಅದೇ ಉಸಿರಿನಲ್ಲಿ ನಿನ್ನ ಅಜ್ಞಾನವನ್ನು ತೋರಿದರೆ ನೀನು ನಿಜವಾಗಿಯೂ ಸತ್ಯವಾಗಿ ಆಚರಿಸುತ್ತಿಲ್ಲವೆಂದು ಸಂಶಯವಿಲ್ಲದೆ ಹೇಳಬೇಕಾಗುತ್ತದೆ. ಶ್ರೀರಾಮಕೃಷ್ಣಪರಮಹಂಸರು ನಿಜವಾದರೆ ನೀನೂ ಕೂಡ ನಿಜ. ಆದರೆ ಅದನ್ನು ನೀನು ತೋರಿಸಬೇಕು, ನಿಮ್ಮಲ್ಲೆಲ್ಲಾ ಬೇಕಾದಷ್ಟು ಶಕ್ತಿ ಇದೆ. ನಾಸ್ತಿಕನಲ್ಲಿ ಏನೂ ಇಲ್ಲ, ಬರೀ ಕೊಳೆಯೊಂದೆ. ಯಾರು ನಂಬುತ್ತಾರೊ ಅವರು ಧೀರರು. ಅದ್ಭುತವಾದ ಶಕ್ತಿಯನ್ನು ಅವರು ತೋರುವರು. ಅವರೆದುರಿಗೆ ಪ್ರಪಂಚವೇ ತಲೆಬಾಗುವುದು. "ಬಡವರಿಗೆ ದಯೆತೋರಿ. ಸಹಾಯಮಾಡಿ" "ಮಾನವನೆ ದೇವರು. ಅವನೇ ನಾರಾಯಣ" "ಆತ್ಮನಲ್ಲಿ ಗಂಡಸು ಹೆಂಗಸು, ಬ್ರಾಹ್ಮಣ, ಕ್ಷತ್ರಿಯರೆಂಬ ಭೇದಗಳಿಲ್ಲ." "ಸೃಷ್ಟಿಕರ್ತನಿಂದ ಹಿಡಿದು ತೃಣಕಾಷ್ಟದವರೆವಿಗೂ ಎಲ್ಲವೂ ನಾರಾಯಣ." ಕೀಟದಲ್ಲಿ ಸ್ವಲ್ಪ ಸ್ವಲ್ಪ ಆವಿರ್ಭವಿಸಿದೆ. ಸೃಷ್ಟಿಕರ್ತನಲ್ಲಿ ಹೆಚ್ಚು ಆವಿರ್ಭವಿಸಿದೆ. ಪ್ರತಿಯೊಂದು ಜೀವಕ್ಕೆ ಅದರ ಅಂತರಾಳದಲ್ಲಿರುವ ದೈವತ್ವವನ್ನು ಹೊರಸೂಸುವಂತೆ ಮಾಡುವ ಕಾರ್ಯವೆಲ್ಲ ಒಳ್ಳೆಯದು. ಆ ದೈವತ್ವವನ್ನು ಯಾವುದು ಮುಚ್ಚುವುದೋ ಅದೆಲ್ಲ ಕೆಟ್ಟದ್ದು.

ನಮ್ಮಲ್ಲಿ ದೇವತ್ವದ ಪ್ರಕಾಶಕ್ಕೆ ಮಾರ್ಗವೊಂದೆ. ಅದು ಮತ್ತೊಬ್ಬರ ದೇವತ್ವ ಪ್ರಕಾಶಕ್ಕೆ ಮಾರ್ಗವನ್ನು ಕಲ್ಪಿಸುವುದರಿಂದ.

ಪ್ರಕೃತಿಯಲ್ಲಿ ಅಸಮತೆ ಇದ್ದರೂ ಪ್ರತಿಯೊಂದು ವ್ಯಕ್ತಿಯ ವಿಕಾಸಕ್ಕೂ ಸಮವಾದ ಅವಕಾಶಗಳು ಇರಬೇಕು. ಕೆಲವರಿಗೆ ಹೆಚ್ಚು ಅವಕಾಶ ಕೆಲವರಿಗೆ ಕಡಿಮೆ ಅವಕಾಶ ಇದ್ದರೆ, ಬಲಾಢ್ಯರಿಗಿಂತ ಬಲಹೀನರಿಗೆ ಹೆಚ್ಚು ಅವಕಾಶವನ್ನು ಕೊಡಬೇಕು.

ಬೇರೆಯ ಮಾತಿನಲ್ಲಿ ಇದನ್ನು ಹೇಳುವುದೇನಂದರೆ, ಚಂಡಾಲನಿಗೆ ವಿದ್ಯಾಭ್ಯಾಸ ಅವಶ್ಯಕವಾಗಿರುವಷ್ಟು ಬ್ರಾಹ್ಮಣನಿಗೆ ಇಲ್ಲ. ಬ್ರಾಹ್ಮಣನ ಮಗನಿಗೆ ಒಬ್ಬ ಉಪಾಧ್ಯಾಯನು ಬೇಕಾದರೆ ಚಂಡಾಲನ ಮಗನಿಗೆ ಹತ್ತು ಉಪಾಧ್ಯಾಯರುಗಳು ಬೇಕು. ಜನನಾರಭ್ಯ ಪ್ರಕೃತಿಯು ಯಾರಿಗೆ ಸೂಕ್ಷ್ಮ ಬುದ್ಧಿಯನ್ನು ಕೊಟ್ಟಿಲ್ಲವೋ, ಅಂತಹವರಿಗೆ ಹೆಚ್ಚು ಸಹಾಯವನ್ನು ಒದಗಿಸಿ ಕೊಡಬೇಕು. ಸ್ಯೂಕ್ಯಾಸಲ್ಲಿಗೆ (ಕಲ್ಲಿದ್ದಲು ಸಿಕ್ಕುವಸ್ಥಳಕ್ಕೆ) ಕಲ್ಲಿದ್ದಲನ್ನು ಹೊತ್ತುಕೊಂಡು ಹೋಗುವವನು ಹುಚ್ಚು ಮನುಷ್ಯ. ಬಡವರು ಧನಿಕರು, ಮೂರ್ಖರು ಇವರು ನಿಮ್ಮ ದೇವರಾಗಲಿ.

ಭಯಂಕರವಾದ ಕೆಸರಗುಂಡಿ ಮುಂದೆ ಇದೆ. ಜೋಪಾನ! ಅನೇಕರು ಅದರಲ್ಲಿ ಬಿದ್ದು ಸಾಯುವರು. ಆ ಕೆಸರೇ ಇದು. ಅದೇನೆಂದರೆ ವರ್ತಮಾನಕಾಲದ ಹಿಂದೂಗಳ ಧರ್ಮ ವೇದದಲ್ಲಿಲ್ಲ, ಪುರಾಣದಲ್ಲಿಲ್ಲ, ಭಕ್ತಿಯಲ್ಲಿಲ್ಲ ಅಥವಾ ಮುಕ್ತಿಯಲ್ಲಿಲ್ಲ. ಆ ಧರ್ಮವೆಲ್ಲ ಅಡಿಗೆ ಮಾಡುವ ಪಾತ್ರೆಯೊಳಗೆ ಪ್ರವೇಶಿಸಿದೆ. ಇಂದಿನ ಹಿಂದೂಗಳ ಧರ್ಮ, ಜ್ಞಾನ ಮಾರ್ಗವೂ ಅಲ್ಲ, ವಿಚಾರ ಮಾರ್ಗವೂ ಅಲ್ಲ. ಅವರ ಧರ್ಮವೇ ಅಸ್ಪರ್ಶತೆ. "ನನ್ನನ್ನು ಮುಟ್ಟಬೇಡ" "ನನ್ನನ್ನು ಮುಟ್ಟಬೇಡ" ಎಂಬುದೇ ಅದರ ವರ್ಣನೆಯನ್ನು ಮುಗಿಸುತ್ತದೆ. ಅಸ್ಪರ್ಶತೆ ಎಂಬ ಅಂಧ ಅಧರ್ಮದಲ್ಲಿ ನಿಮ್ಮ ಜೀವನ ನಾಶವಾಗದಿರಲಿ. ಜೋಪಾನವಾಗಿ ನೋಡಿಕೊಳ್ಳಿ. "ಆತ್ಮವತ್ ಸರ್ವಭೂತೇಶು" ಎಲ್ಲ ಭೂತಗಳಲ್ಲೂ ಒಂದೇ ಆತ್ಮವನ್ನು ನೋಡಬೇಕೆಂಬ ಉಪದೇಶ ಗ್ರಂಥದಲ್ಲೇ ಕೊನೆಗಾಣಬೇಕೆ? ಹಸಿದವನಿಗೆ ಒಂದು ತುತ್ತು ಅನ್ನವನ್ನು ಕೊಡದವರು ಮೋಕ್ಷವನ್ನು ಹೇಗೆ ಕೊಟ್ಟಾರು? ಮತ್ತೊಬ್ಬರ ಉಸಿರಿನ ಸೋಂಕಿನಿಂದಲೇ ಇವರು ಪಾಪಿಗಳಾಗಿದ್ದರೆ ಇನ್ನೊಬ್ಬರನ್ನು ಹೇಗೆ ಶುದ್ಧಿಮಾಡುವರು. ಅಸ್ಪರ್ಶತೆ ಎಂಬುದು ಒಂದು ತರಹ ಮನೋರೋಗ ಎಚ್ಚರಿಕೆ! ವಿಕಾಸವೇ ಜೀವನ. ಸಂಕೋಚವೇ ಮರಣ. ಪ್ರೀತಿಯಿಂದ ವಿಕಾಸವಾಗುವುದು. ಸ್ವಾರ್ಥತೆಯಿಂದ ಸಂಕೋಚವಾಗುವುದು. ಪ್ರೀತಿಯೊಂದೆ ಜೀವನದ ನಿಯಮ. ಯಾರು ಪ್ರೀತಿಸುತ್ತಾರೊ ಅವರು ಬಾಳುತ್ತಾರೆ. ಯಾರು ಸ್ವಾರ್ಥರೋ ಅವರು ಮಡಿಯುತ್ತಾರೆ. ಆದಕಾರಣ ನೀವು ಬದುಕು

ವುದಕ್ಕಾಗಿ ಹೇಗೆ ಉಸಿರಾಡುತ್ತಿರೋ ಹಾಗೇಯೇ ಪ್ರೀತಿಸುವುದಕ್ಕಾಗಿಯೇ ಪ್ರೀತಿಸಬೇಕು. ಇದೊಂದೆ ಜೀವನದ ನಿಯಮ. ನಿಶ್ಕಾಮ ಪ್ರೀತಿ, ನಿಶ್ಕಾಮ ಕರ್ಮ, ಶಾಂತಿ ಇವುಗಳ ರಹಸ್ಯವೇ ಇದು. ಸ—ಗೆ ಯಾವ ವಿಧದಲ್ಲಾದರೂ ನಿನ್ನ ಕೈಯಿಂದಲೆ ಸಹಾಯ ಮಾಡು. ಆತನು ಬಹಳ ಒಳ್ಳೆಯವನು, ಧಾರ್ಮಿಕ ಜೀವಿ. ಆದರೆ ಅಷ್ಟು ಉದಾರ ಹೃದಯದವನಲ್ಲ. ಮತ್ತೊಬ್ಬರ ದುಃಖಕ್ಕೆ ಮರುಗುವ ಅದೃಷ್ಟ ಎಲ್ಲರ ಪಾಲಿಗೂ ಬರುವುದಿಲ್ಲ. ಹೇ ಜಗದೀಶ! ಅವತಾರ ಪುರುಷರುಗಳಲ್ಲೆಲ್ಲಾ ಚೈತನ್ಯದೇವನು ಬಹಳ ಉತ್ತಮನು. ಆದರೆ ಆತನಲ್ಲಿ ಜ್ಞಾನ ಅಷ್ಟು ಇರಲಿಲ್ಲ. ಆದರೆ ಶ್ರೀರಾಮಕೃಷ್ಣಾವತಾರದಲ್ಲಿ, ಜ್ಞಾನವಿದೆ, ಭಕ್ತಿ ಇದೆ, ಮತ್ತು ಪ್ರೇಮವಿದೆ—ಅನಂತ ಜ್ಞಾನ, ಅನಂತ ಪ್ರೇಮ, ಅನಂತ ಕರ್ಮ, ಅನಂತ ವಿಶ್ವಾನುಕಂಪನೆ, ಇವುಗಳೆಲ್ಲವೂ ಇವೆ. ಅವರನ್ನು ಇನ್ನೂ ನೀನು ಚೆನ್ನಾಗಿ ತಿಳಿದುಕೊಂಡಿಲ್ಲ. ಅವರ ವಿಚಾರವಾಗಿ ಕೇಳಿದರೂ ಅನೇಕರಿಗೆ ಅರ್ಥವಾಗುವುದಿಲ್ಲ. ಆದಿಯಿಂದಲೂ ಇಡೀ ಹಿಂದೂ ಜನಾಂಗ ಏನನ್ನು ವಿಚಾರ ಮಾಡಿತು ಅದೆಲ್ಲವನ್ನೂ ಅವರು ತಮ್ಮ ಒಂದು ಜೀವನದಲ್ಲಿ ಬಾಳಿದರು. ಅವರ ಜೀವನವು ಎಲ್ಲಾ ಜನಾಂಗದ ಪವಿತ್ರ ಗ್ರಂಥಗಳಿಗೂ ಬರೆದಿರುವ ಸಚೇತನ ಭಾಷ್ಯ. ಕ್ರಮೇಣ ಜನರಿಗೆ ಇದು ಗೊತ್ತಾಗುವುದು.

೭೦

೭೦ ಹೈ ವ್ಯೂ ಕ್ಯಾವರ್ ಶ್ಯಾಮ್ ರೀಡಿಂಗ್.
೪ ನೇ ಅಕ್ಟೋಬರ್ ೧೮೯೫.

ಪ್ರಿಯ.

ಈಗ ನಾನು ಇಂಗ್ಲೆಂಡಿನಲ್ಲಿರುವುದು ನಿನಗೆ ಗೊತ್ತಿದೆ. ನಾನು ಇಲ್ಲಿ ಇನ್ನು ಒಂದು ತಿಂಗಳು ಇದ್ದು ನಂತರ ಅಮೇರಿಕಾದೇಶಕ್ಕೆ ಹಿಂತಿರುಗುವೆನು. ಬರುವ ಬೇಸಗೆಯಲ್ಲಿ ನಾನು ಪುನಃ ಇಲ್ಲಿಗೆ ಬರುವೆನು. ಸಧ್ಯಕ್ಕೆ ಇಂಗ್ಲೆಂಡಿನಲ್ಲಿ ಅಷ್ಟು ಭರವಸೆ ಇಲ್ಲ. ಆದರೆ ದೇವರು ಸರ್ವಶಕ್ತನು. ಕಾದು ನೋಡೋಣ.

ಅವನಿಗೆ ಈಗ ಬರುವುದಕ್ಕೆ ಸಾಧ್ಯವಿಲ್ಲ. ಹಣ ಶ್ರೀಮಾನ್ ಸ್ಟರ್ಡಿಗೆ ಸೇರಿದೆ. ಆತನಿಗ ಯಾರ ಮೇಲೆ ಇಚ್ಛೆಯೋ ಅಂತಹವನು ಬೇಕಾಗಿದೆ. ಸ್ಟರ್ಡಿ ನನ್ನಿಂದ ಉಪದೇಶವನ್ನು ತಗೆದು ಕೊಂಡಿರ..ನು. ಆತನು ಬಹಳ ಸಾಹಸ ಪ್ರಿಯು, ಒಳ್ಳೆಯವನು.

ಮೊದಲನೆಯದಾಗಿ ನಮಗೆ ಬೇಕಾದವನಿಗೆ ಆಂಗ್ಲಭಾಷೆ ಮತ್ತು ಸಂಸ್ಕೃತದಲ್ಲಿ ಅದ್ವಿತೀಯ ಪಾಂಡಿತ್ಯವಿರಬೇಕು.—ಅವನು ಇಲ್ಲಿಗೆ ಬಂದರೆ ಬೇಗ ಇಂಗ್ಲೀಷ್ ಕಲಿತುಕೊಳ್ಳಬಹುದು. ಆದರೆ ಇಲ್ಲಿಗೆ ಬಂದು ಕಲಿತುಕೊಳ್ಳುವವರಿಗೆ ಸಧ್ಯಕ್ಕೆ ಸಾಧ್ಯವಿಲ್ಲ. ಯಾರಿಗೆ ಆಗಲೇ ಅದರಲ್ಲಿ ಮಾತಾಡಲು ಚಾತುರ್ಯವಿದೆಯೋ ಅವರು ಬೇಕಾಗಿದೆ. ಎರಡನೆಯದಾಗಿ ಯಾರು ನನ್ನನ್ನು ಜಯಾಪಜಯಗಳಲ್ಲಿ ಕೈ ಬಿಡುವುದಿಲ್ಲವೋ ಅವರನ್ನು ನಂಬುತ್ತೇನೆ. ತುಂಬಾ ನಂಬಿಕಸ್ತರು ಬೇಕಾಗಿದೆ. ಒಂದು ಸಲಿ ತಳಹದಯನ್ನು ಹಾಕಿದ ಮೇಲೆ ಯಾರಾದರು ಬಂದು ಗಲಾಟೆ ಮಾಡಲಿ. ಅದರಿಂದ ಅಂಜಿಕೆ ಇಲ್ಲ.—ಅವನು ಯಾವ ವಿಧವಾದ ಬುದ್ಧಿವಂತಿಕೆಯನ್ನು ತೋರಲಿಲ್ಲ. ಆ ಗಲಾಟೆಯಲ್ಲಿ ಒಂದಾಗಿ ಕಪಟಿಗಳ ಸಂಗಡವನ್ನು ಸೇರಿದನು. ಅಯ್ಯೊ ! ಶ್ರೀರಾಮಕೃಷ್ಣಪರಮಹಂಸರನ್ನು ಕಪಟಿಗಳೆಂದು, ಒಪ್ಪಿಕೊಂಡರೂ, ಅವರಲ್ಲಿ ನಾವು ಶರಣಾಗತರಾದದ್ದು ಒಂದು ದೊಡ್ಡ ತಪ್ಪೆಂದು ಸಿರ್ಧರವಾದರೂ, ಈಗ ಮಾಡಲು ನಮಗೆ ಬೇರೇ ಹಾದಿ ಏನಿದೆ ? ಒಂದು ಜನ್ಮ ನಷ್ಟವಾದರೇನಂತೆ. ಮನುಷ್ಯ ಕೊಟ್ಟ ಮಾತನ್ನು ತಪ್ಪುವುದಕ್ಕೆ ಆಗುತ್ತದೆಯೆ ? ಒಬ್ಬ ಹೆಂಗಸಿಗೆ ಹತ್ತಾರುಜನ ಗಂಡಂದಿರು ಇರುವುದು ಆಗುತ್ತದೆಯೆ ? ನಿಮ್ಮಲ್ಲಿ ಯಾರು ಯಾವ ಸಂಗಡಕ್ಕೆ ಬೇಕಾದರೂ ಸೇರಬಹುದು. ನಾನು ಅವರನ್ನು ಸ್ವಲ್ಪವೂ ಆಕ್ಷೇಪಿಸುವುದಿಲ್ಲ. ಇಲ್ಲ, ಎಂದಿಗೂ ಇಲ್ಲ. ಆದರೆ ಪ್ರಪಂಚವನ್ನೆಲ್ಲ ನೋಡಿದ ಮೇಲೆ, ಅವರನ್ನು ಅನುಸರಿಸುವ ಸಂಗಡ ಒಂದರಲ್ಲಲ್ಲದೆ ಉಳಿದ ಎಲ್ಲೆಡೆಯಲ್ಲೂ ಅವರು ಆಡುವ ಮಾತು, ಮಾಡುವ ಕೆಲಸ ಎಂದೂ ಹೋಲುವುದಿಲ್ಲ. ಶ್ರೀ ರಾಮಕೃಷ್ಣಪರಮಹಂಸರಿಗೆ ಯಾರು ಸೇರಿರುವರೋ, ಅವರ ಮೇಲೆ ನನಗೆ ಅತ್ಯಂತ ಪ್ರೀತಿ, ಅವರ ಮೇಲೆ ಅತ್ಯಂತ ನಂಬಿಕೆ. ಈ ವಿಷಯದಲ್ಲಿ ನನಗೆ ಬೇರೆ ಅಭಿಪ್ರಾಯವೇ ಇಲ್ಲ. ನಿನಗೆ ಮನಸ್ಸು ಬಂದರೆ ನನ್ನನ್ನು

ಪಕ್ಷಪಾತಿಯೆಂದಾದರೂ ಕರೆ. ಆದರೆ ಅಲ್ಲಿ ಮಾತ್ರ ನನ್ನ ನೆಚ್ಚಿನವರಿರುವರು. ನಾನು ಎಲ್ಲರನ್ನೂ ಪ್ರೀತಿಸುತ್ತೇನೆ—ಆದರೆ ಯಾರು ಶ್ರೀ ರಾಮಕೃಷ್ಣರಲ್ಲಿ ಶರಣು ಹೊಂದಿರುರೊ ಅವರ ಕಾಲಿಗೆ ಒಂದು ಮುಳ್ಳು ಚುಚ್ಚಿದರೂ ನನ್ನ ಮೂಳೆಯಲ್ಲಿ ನೋವಾಗುವುದು. ನನ್ನಷ್ಟು ಉದಾರ ಹೃದಯುದನರು ಅಪರೂಪ. ಆದರೆ ನನ್ನಲ್ಲಿ ಸ್ವಲ್ಪ ಮತಭ್ರಾಂತಿ ಉಳಿದಿದೆ. ಅದಕ್ಕೆ ನನ್ನನ್ನು ದಯುವಿಟ್ಟು ಕ್ಷಮಿಸಬೇಕು. ಅವರ ನಾಂಗಳ ನಾಮಕ್ಕೆ ಮೊರೆಯಿಡದೇ ಇದ್ದರೆ ಮತ್ತಾರಿಗೆ ಮೊರೆ ಇಡಲಿ. ಮುಂದಿನ ಜನ್ಮದಲ್ಲಿ ಒಬ್ಬ ದೊಡ್ಡ ಗುರುವನ್ನು ಹುಡುಕುವುದಕ್ಕೆ ಬೇಕಾದಷ್ಟು ಸಮಯ ವಿರುತ್ತದೆ. ಆದರೆ ಈ ಜನ್ಮದಲ್ಲಿ ಆ ನಿರಕ್ಷರ ಬ್ರಾಹ್ಮಣ (ಶ್ರೀ ರಾಮಕೃಷ್ಣರು) ನನ್ನ ದೇಹವನ್ನು ಎಂದೆಂದಿಗೂ ಕೊಂಡಿರುವನು.

ನನ್ನ ಮನಸ್ಸಿನಲ್ಲಿರುವುದನ್ನು ನಿನಗೆ ಸ್ವಲ್ಪ ಹೇಳುತ್ತೇನೆ. ದಯುವಿಟ್ಟು ಕೋಪಿಸಿಕೊಳ್ಳಬೇಡ. ಎಲ್ಲಿಯುವರೆವಿಗೂ ನೀನು ಅಪರವನಾಗಿರುವೆಯೋ ಅಲ್ಲಿಯುವರೆಗೂ ನಾನು ನಿನ್ನ ದಾಸ. ಅವರಿಂದ ಒಂದು ಕೂದಲಿನ ಎಳೆಯಷ್ಟು ದೂರ ಸರಿದರೂ ಸರಿಯೇ, ಆಗ ನಾನು ನಿನಗೆ ಸಮಾನ. ನನ್ನ ಸಹೋದರನೆ! ಈ ದೇಶದ ಒಳಗೆ ಹೊರಗೆ ಕಾಣುವ ಎಲ್ಲಾ ಪಂಗಡಗಳು, ಮತ್ತು ಸಂಘಗಳು, ಇವುಗಳೆಲ್ಲವನ್ನು ಅವರು ಆಗಲೇ ತಮ್ಮದನ್ನಾಗಿ ಮಾಡಿಕೊಂಡಿರುವರು. "ಮಯೈವೈತೇ ನಿಹತಾಃ ಪೂರ್ವಮೇವ ನಿಮಿತ್ತ ಮಾತ್ರಂ ಭವ ಸವ್ಯಸಾಚಿನ್" ನನ್ನಿಂದ ಆಗಲೇ ಇವರೆಲ್ಲರೂ ಹತರಾಗಿರುವರು. ಹೇ ಅರ್ಜುನ! ನೀನು ನಿಮಿತ್ತ ಮಾತ್ರವಾಗು. ಹೇ ಶ್ರದ್ಧಾಹೀನನಾದ ಮಾನವ! ಇಂದೋ ನಾಳೆಯೋ ಅವುಗಳೆಲ್ಲವೂ ನಿನ್ನ ದೇಹದಲ್ಲೇ ಐಕ್ಯರಾಗುವರು. ಅವರ ದಯುದಿಂದ "ಬ್ರಂಹಾಂಡಂ ಗೋಶ್ಪದಾಯತೇ" ವಿಶ್ವವೇ ಹಸುವಿನ ಪಾದದ ಗುರುತಿಗೆ ಸಮಾನವಾಗುವುದು. ವಿಶ್ವಾಸಘಾತಕರಾಗಬೇಡಿ. ಆ ಪಾಪಕ್ಕೆ ಪ್ರಾಯಶ್ಚಿತ್ತವಿಲ್ಲ. ಕೀರ್ತಿ ಗೌರವ ಪುಣ್ಯ ಕರ್ಮಗಳು, "ಯಜ್ಜುಹೋಷಿ; ಯತ್ತಪಸ್ಯಸಿ, ಯದಶ್ನಾಸಿ" ಯಾವ ಯಜ್ಞವನ್ನು ನೀನು ಮಾಡಿದರೂ, ಯಾವ ತಪಸ್ಸನ್ನು ನೀನು ಮಾಡಿದರೂ, ಏನನ್ನು ನೀನು ಊಟಮಾಡಿದರೂ ಎಲ್ಲವನ್ನು ಆತನಡಿದಾವರೆಯಲ್ಲಿಡು. ನಮಗೆ ಪ್ರಪಂ

ಚದಲ್ಲಿ ಏನು ಬೇಕು ? ಅವರು ನಮಗೆ ಅಭಯವನ್ನು ಕೊಟ್ಟಿರುವರು. ನಮಗೆ ಇನ್ನು ಹೆಚ್ಚಿಗೆ ಏನು ಬೇಕು. ಭಕ್ತಿಯ ಪ್ರತಿಫಲ ಭಕ್ತಿ. ಬೇರೇನುಬೇಕು. ? ನನ್ನ ಸಹೋದರನೆ ! ಯಾರು ನಮಗೆ ಊಟ ಕೊಟ್ಟು ಬಟ್ಟೆ ಕೊಡಿಸಿ, ಧರ್ಮವನ್ನು ಜ್ಞಾನವನ್ನು ಬೋಧನೆ ಮಾಡಿ, ಯಾರು ನಮಗೆ ಆತ್ಮಜ್ಞಾನವನ್ನು ತಿಳಿಸಿ ನಮ್ಮನ್ನು ಮಾನವರನ್ನಾಗಿ ಮಾಡಿದರೋ ; ಯಾರಲ್ಲಿ ಹಗಲಿರುಳು ಪ್ರತ್ಯಕ್ಷ ದೇವರನ್ನು ಕಂಡೆವೋ ಅಂತಹವರಿಗೆ ವಿಶ್ವಾಸ ಘಾತುಕರಾಗುವುದೇ !!! ಅಂತಹ ದೇವರ ದಯೆಯನ್ನು ನೀನು ಮರತೆ! ಬುದ್ಧ, ಕೃಷ್ಣ, ಕ್ರೈಸ್ತ, ಇವರ ಜೀವನ ಗತಕಾಲದ ಚರಿತ್ರೆಗೆ ಸೇರಿದೆ. ಅವರು ಚಾರಿತ್ರಿಕ ವ್ಯಕ್ತಿಗಳೇ ಎಂಬ ಸಂದೇಹ ಬೇರೆ ಇದೆ. ನೀನು ಶ್ರೀರಾಮಕೃಷ್ಣರ ಜೀವನದ ಮಹಾತ್ಮೆಯನ್ನು ಪ್ರತ್ಯಕ್ಷವಾಗಿ ಕಣ್ಣೆದುರಿಗೆ ನೋಡಿದರೂ, ಕೆಲವು ವೇಳೆ ಅವರ ಮೇಲೆ ಶ್ರದ್ಧೆ ಜಾರುವುದು ! ತಿಳಿಗೇಡಿ ನೀನು. ನಾನು ಇನ್ನು ಹೇಳುವುದು ಏನೂ ಇಲ್ಲ. ನಿನ್ನ ದೇಶದಲ್ಲಿ ಮತ್ತು ಹೊರಗೆ ಅಂತಹ ಮಹಾನುಭಾವರ ಆಕಾರವನ್ನು ನಾಸ್ತಿಕರೂ ಹೃದಯ ಹೀನರೂ ಕೂಡ ಆರಾಧಿಸುತ್ತಿರುವರು. ಆದರೆ ನಿನಗೆ ಮಾತ್ರ ಕೆಲವು ವೇಳೆ ಅಪನಂಬಿಕೆ ಬರುವುದು ! ಅವರು ಒಂದುಸಲ ಉಸಿರು ಬಿಟ್ಟರೆ, ನಿನ್ನಂತಹ ನೂರಾರು ಸಾವಿರಾರು ಮಂದಿಗಳನ್ನು ಸೃಷ್ಟಿಸಬಲ್ಲರು ! ಅವರ ಪಾದ ಧೂಳಿಯನ್ನು ಶಿರದಲ್ಲಿ ತಾಳುವ ಪುಣ್ಯ ಪ್ರಾಪ್ತವಾಗಿದ್ದುದರಿಂದ ನಿನ್ನ ಜನ್ಮ ಸಾರ್ಥಕವಾಯಿತು, ನಿನ್ನ ವಂಶ ಸಾರ್ಥಕವಾಯಿತು, ನಿನ್ನ ದೇಶ ಸಾರ್ಥಕವಾಯಿತು. ಆಗಲಿ ನಾನೇನೂ ಮಾಡುವುದಕ್ಕೂ ಆಗುವುದಿಲ್ಲ. ಅವರೇ ನಮ್ಮೆಲ್ಲರನ್ನು ರಕ್ಷಿಸುತ್ತಿರುವರು. ನಿಜವಾಗಿಯೂ ನನ್ನ ಕಣ್ಣೆದುರಿಗೆ ಅದನ್ನು ನೋಡುತ್ತೇನೆ. ನೀನು ಹುಚ್ಚ ! ಅಪ್ಸರೆಯಂತಹ ಸೌಂದರ್ಯವತಿಯರು, ಲಕ್ಷಾಂತರರೂಪಾಯಿಗಳು, ಇವುಗಳ ಸೆಳತಕ್ಕೆ ನಾನು ಒಳಗಾಗಲಿಲ್ಲ. ಇವುಗಳೆಲ್ಲ ಶೂನ್ಯದಂತೆ ತೋರುತ್ತವೆ. ಇದೆಲ್ಲ ನನ್ನ ಸ್ವಂತ ಶಕ್ತಿಯಿಂದ ಎಂದು ತಿಳಿದೆಯೇನು ? ಅಥವಾ ಅವರು ನನ್ನನು ರಕ್ಷಿಸುತ್ತಿರುವರೋ ? ನಾನು ಸಂಕೋಚವಿಲ್ಲದೆ ಹೇಳುತ್ತೇನೆ. ಯಾರಿಗೆ ಅವರ ಮೇಲೆ ಭಕ್ತಿಯಿಲ್ಲವೋ, ಯಾರಿಗೆ ಅವರಲ್ಲಿ ಗೌರವವಿಲ್ಲವೋ ಅವರು ನಿರ್ಭಾಗ್ಯರು. ಅವರ ನಷ್ಟವನ್ನು ಇಷ್ಟೆಂದು ಹೇಳಲಾಗುವುದಿಲ್ಲ.

ಹ—ತನ್ನ ಕಷ್ಟದ ವಿಚಾರವಾಗಿ ಬರೆದಿರುವನು—ಬೇಗ ತನ್ನನ್ನು ಮನೆಯಿಂದ ಬಿಡುಸುತ್ತಾರೆ ಎಂತಲೂ ಹೇಳುವನು. ಕೆಲವು ಉಪನ್ಯಾಸಗಳನ್ನು ಕಳುಹಿಸಿಕೊಡಿ ಎಂದು ನನಗೆ ಬರೆದಿರುವನು. ಆದರೆ ಸಧ್ಯದಲ್ಲಿ ನನ್ನ ಬಳಿ ಯಾವುದೂ ಇಲ್ಲ. ಸ್ವಲ್ಪ ದುಡ್ಡು ಮಾತ್ರ ಜೇಬಿನಲ್ಲಿ ಇನ್ನುಳಿದಿರುವುದು. ಅದನ್ನು ಕಳುಹಿಸುತ್ತೇನೆ. ಆದಕಾರಣ ಅವನು ಅಂಜಬೇಕಾಗಿಲ್ಲ. ಈಗಲೇ ಹಣವನ್ನು ಕಳುಹಿಸಬಹುದಾಗಿತ್ತು. ಆದರೆ ಹೋದಸಲ ಕಳುಹಿಸಿದ ಹಣ ತಪ್ಪು ವಿಳಾಸಕ್ಕೆ ಹೋಗಿರಬಹುದೆಂದು ನನಗೆ ಅನುಮಾನ ವಾಗುತ್ತದೆ. ಅದಕ್ಕೋಸ್ಕರ ನಾನು ಕಳುಹಿಸುವುದನ್ನು ಸ್ವಲ್ಪ ತಡಮಾಡುತ್ತೇನೆ. ಎರಡನೆಯದಾಗಿ ನಾನು ಅವನಿಗೆ ಕಳುಹಿಸುವುದಕ್ಕೆ ನನಗೆ ಅವನ ಬೇರೆ ವಿಳಾಸ ತಿಳಿಯದು. ಮದ್ರಾಸಿನವರು ಮಾಸ ಪತ್ರಿಕೆಯನ್ನು ಹೊರಡಿಸುವುದರಲ್ಲಿ ಜಯಶೀಲರಾಗಿಲ್ಲ. ನಮ್ಮ ಹಿಂದುಗಳಲ್ಲಿ ಕಾರ್ಯಾನುಷ್ಠಾನ ಬುದ್ಧಿ ಸಂಪೂರ್ಣವಾಗಿ ಇಲ್ಲ. ಈಗ ಗೊತ್ತಾಗುತ್ತಿದೆ. ಯಾವುದಾದರೂ ಕೆಲಸವನ್ನು ಮಾಡುತ್ತೇನೆ ಎಂದು ಮಾತು ಕೊಟ್ಟರೆ, ಸಕಾಲಕ್ಕೆ ಸರಿಯಾಗಿ ಅದನ್ನು ಮಾಡಬೇಕು. ಇಲ್ಲದೇ ಇದ್ದರೆ ಜನರಿಗೆ ಅವರಲ್ಲಿಡುವ ನಂಬಿಕೆ ಹೋಗುವುದು. ಹಣ ಕಾಸಿನ ವಿಚಾರದಲ್ಲಿ ಪ್ರತ್ಯುತ್ತರ ಬೇಗ ಬರಬೇಕು.--ಅವನು ಒಪ್ಪಿದರೆ ಅವನನ್ನು ನನ್ನ ಕಲ್ಕತ್ತಾ ಸಂಚಾಲಕನನ್ನಾಗಿರಲು ಹೇಳು. ಅವನಲ್ಲಿ ನನಗೆ ಸಂಪೂರ್ಣ ನಂಬಿಕೆ ಇದೆ. ಅವನಿಗೆ ಇಂತಹ ವಿಚಾರ ಚೆನ್ನಾಗಿ ತಿಳಿಯುತ್ತದೆ. ಹುಡುಗಾಟಿಕೆ ಮತ್ತು ಗಲಾಟೆ ಮಾಡುವವರು ಮಾಡುವ ಕೆಲಸವಲ್ಲ ಇದು. ಅವನಿಗೆ ಒಂದು ಸ್ಥಳವನ್ನು ನಿಶ್ಚರ್ಯಿಸುವಂತೆ ಹೇಳು. ವಿಳಾಸ ಕ್ಷಣಕ್ಷಣಕ್ಕೂ ಬದಲಾಯಿಸಕೂಡದು. ಅಲ್ಲಿಗೆ ನನ್ನ ಕಲ್ಕತ್ತ ಪತ್ರ ವ್ಯವಹಾರವನ್ನೆಲ್ಲಾ ಕಳುಹಿಸುತ್ತೇನೆ, ಉದ್ಯೋಗದಲ್ಲಿ ಉದ್ಯೋಗತತ್ಪರತೆ ಇರಬೇಕು.

ನಿನ್ನ ವಿವೇಕಾನಂದ.

೬೧ ಲಂಡನ್,
೧೩ ನೇ ಸೆಪ್ಟೆಂಬರ್ ೧೮೯೫.

ಪ್ರಿಯ ಅಖಂಡಾನಂದ,

ನಿನ್ನ ಪತ್ರ ನನಗೆ ಸೇರಿ ತುಂಬ ಸಂತೋಷವಾಯಿತು. ನೀನು ಮಾಡುತ್ತಿರುವುದು ಬಹಳ ಒಳ್ಳೆಯ ಕೆಲಸ. ರ—ಬಹಳ ಧಾರಾಳಿ ಮತ್ತು ಕೊಡುಗೈ. ಆದಕಾರಣವೆ ಅವನಿಂದ ಹೆಚ್ಚು ಸಹಾಯವನ್ನು ಸ್ವೀಕರಿಸ ಬೇಡ.—ಅವನು ಹಣವನ್ನು ಚಂದಾ ಎತ್ತುವ ವಿಚಾರ; ಅದೇನೊ ಒಳ್ಳೆಯ ಉದ್ಯಮವೇ ಸರಿ. ಆದರೆ ನನ್ನ ಮಗು! ಇದು ವಿಚಿತ್ರ ಪ್ರಪಂಚದ ದೇವರುಗಳಾದ ಬ್ರಹ್ಮ ವಿಷ್ಣು ಮಹೇಶ್ವರರುಗಳಿಗೇ ಕಾಮಿನಿ ಕಾಂಚನದ ಪಾಶದಿಂದ ತಪ್ಪಿಸಿಕೊಳ್ಳುವುದು ಬಹಳ ಕಷ್ಟ. ಎಲ್ಲಿ ಹಣದ ವಿಚಾರ ಸ್ವಲ್ಪ ಇದೆಯೋ ಅಲ್ಲಿ ಅನುಮಾನಕ್ಕೆ ಬೇಕಾದಷ್ಟು ಅವಕಾಶ ವಿದೆ. ಅದಕ್ಕೋಸ್ಕರವಾಗಿ ಯಾರೂ ಮಠದ ಪರವಾಗಿ ಹಣವನ್ನು ಎತ್ತುವ ಜವಾಬ್ದಾರಿಯನ್ನು ವಹಿಸದೇ ಇರಲಿ. ನೀನು ಯಾವಗ ಲಾದರೂ, ಯಾರಾದರು ಗೃಹಸ್ಥರು, ನನ್ನ ಮತ್ತು ನಮ್ಮಗಳ ಹೆಸರಿನಲ್ಲಿ ಮಠವನ್ನು ಕಟ್ಟಿಸುವುದು ಮುಂತಾದುಗಳಿಗೆ ಹಣವನ್ನು ಎತ್ತುತ್ತಿರುವರು ಎಂದು ಕೇಳುವೆಯೋ, ಆಗ ನೀನು ಮೊದಲು ಮಾಡಬೇಕಾದ ಕೆಲಸವೆ, ಹಾಗೆ ಮಾಡುವವರನ್ನು ಅನುಮಾನಿಸುವುದು. ಅದಕ್ಕೆ ಎಂದಿಗೂ ಕೈ ಹಾಕಬೇಡ. ಬಹಳ ಬಡವರಾದ ಗೃಹಸ್ಥರಲ್ಲಿ ಇದು ಇನ್ನೂ ಹೆಚ್ಚು. ಏಕೆಂದರೆ ತಮ್ಮ ವರಮಾನಗಳನ್ನು ಹೆಚ್ಚಿಸಲು ನಾನಾ ಉಪಾಯಗಳನ್ನು ಹೂಡುವರು. ಅದಕ್ಕೋಸ್ಕರವಾಗಿಯೇ, ಏನಾದರೂ ಬಹಳ ನಂಬಿಕಸ್ತ ನಾದ ಭಕ್ತನಾಗಲೀ, ಅಥವಾ ಉದಾರ ಹೃದಯನಾದ ಗೃಹಸ್ಥರಾಗಲಿ, ಇವರುಗಳು ಮಠಸ್ಥಾಪನೆ ಮುಂತಾದ ಕೆಲಸಗಳನ್ನು ಕೈಕೊಂಡರೆ, ಕೈಕೊಳ್ಳಲಿ. ಅಥವಾ ಹಾಗೆ ಕಟ್ಟಬೇಕೆಂದು ಶೇಖರಿಸಿದ ಹಣವನ್ನು ಶ್ರೀಮಂತರಾದ ಗೃಹಸ್ಥರ ಕೈಯಲ್ಲಿ ಜೋಪಾನವಾಗಿಟ್ಟುಕೊಂಡಿರಲು ಕೊಟ್ಟರೆ ಒಳ್ಳೆಯದು. ಇಲ್ಲದೇ ಇದ್ದರೆ ಆ ಕೆಲಸದ ತಂಟೆಗೇ ಹೋಗ ಬೇಡ. ಅದಲ್ಲದೆ ಹಾಗೆ ಏನಾದರೂ ಮಾಡುತ್ತಿದ್ದರೆ ಮಾಡದಂತೆ

ಬುದ್ಧಿ ಹೇಳಬೇಕು. ನೀನು ಇನ್ನೂ ಹುಡುಗ. ಹೊನ್ನು ಮನುಷ್ಯ ನನ್ನು ಹೇಗೆ ಮೋಸಗೊಳಿಸುತ್ತದೆ ಎಂಬುದನ್ನು ನೀನರಿಯೆ. ಕೆಟ್ಟ ಕಾಲ ಎಂತಹ ಸಾಧು ಮನುಷ್ಯನನ್ನಾದರೂ ಮೋಸಗಾರನನ್ನಾಗಿ ಮಾಡು ವುದು. ಪ್ರಪಂಚದ ರೀತಿಯೇ ಹೀಗೆ. ಒಂದು ಕೆಲಸವನ್ನು ಎಲ್ಲರೂ ಒಟ್ಟಿಗೆ ಕಲೆತು ಮಾಡುವುದು ನಮ್ಮ ಸ್ವಾಭಾವದಲ್ಲೇ ಇಲ್ಲ. ನಮ್ಮ ಇಂದಿನ ಹೀನಸ್ಥಿತಿಗೆ ಇದೇ ಕಾರಣ. ಯಾರು ಆಣತಿಯನ್ನು ಪಾಲಿಸ ಬಲ್ಲರೋ ಅವರು ಮಾತ್ರ ಆಣತಿಯನ್ನು ಕೊಡಬಲ್ಲರು. ಮೊದಲು ವಿಧೇಯತೆಯನ್ನು ಕಲಿಯಿರಿ. ಪಾಶ್ಚಾತ್ಯರಲ್ಲಿ ಅಷ್ಟೊಂದು ಸ್ವಾತಂತ್ರ್ಯ ಮನೋಭಾವವಿದ್ದರೂ, ಅವರಲ್ಲಿ ವಿಧೇಯತೆ ಅಷ್ಟೇ ಪ್ರಾಮುಖ್ಯ ವಾಗಿದೆ. ನಾವೆಲ್ಲ ಸ್ವಾರ್ಥಪರರು. ಇದರಿಂದ ಯಾವ ಕೆಲಸವೂ ಆಗುವುದಿಲ್ಲ. ವ್ಯಕ್ತಿ ಮತ್ತು ಜನಾಂಗದ ಪುರೋಭಿವೃದ್ಧಿಗೆ ಕಾರಣ ಅತಿಸಾಹಸ, ಶಾಂತಿ, ಅನಂತ ಧೈರ್ಯ, ಅನಂತ ಶಕ್ತಿ, ಮತ್ತು ಎಲ್ಲಕ್ಕಿಂತ ಹೆಚ್ಚಾಗಿ ಸಂಪೂರ್ಣ ವಿಧೇಯತೆ ಇವುಗಳು ಆವಶ್ಯಕ.

ಈಗ ಮಾಡುತ್ತಿರುವಂತೆಯೆ ಕೆಲಸಮಾಡು. ಆದರೆ ವ್ಯಾಸಂಗಕ್ಕೆ ಪ್ರತ್ಯೇಕವಾಗಿ ಗಮನ ಕೊಡಬೇಕು. ಜಿ—ಬಾಬು ನನಗೆ ಒಂದು ಹಿಂದೂ ಮಾಸಪತ್ರಿಕೆಯನ್ನು ಕಳುಹಿಸಿರುವನು. ಅದರಲ್ಲಿ ಆಳ್ವಾರಿನ ಪಂಡಿತರು ನನ್ನ ಚಿಕಾಗೊ ಭಾಷಣದ ಭಾಷಾಂತರವನ್ನು ಪ್ರಚುರಪಡಿಸಿರುವರು. ಅವರಿಬ್ಬರಿಗೂ ನನ್ನ ವಿಶೇಷ ಕೃತಜ್ಞತೆಯನ್ನು ಮತ್ತು ವಂದನೆಗಳನ್ನು ತಿಳಿಸು.

ಈಗ ನಾನು ನಿನಗೆ ಕೆಲವು ವಿಷಯಗಳನ್ನು ಹೇಳುವೆನು. ರಾಜ ಪುತ್ರ ಸ್ಥಾನದಲ್ಲಿ ಒಂದು ಕೇಂದ್ರವನ್ನು ಸ್ಥಾಪಿಸಲು ಜಾಗರೂಕ ನಾಗಿರು. ಜಯಪುರ ಅಥವಾ ಅಜಮೀರ್ ನಂತಹ, ಮುಖ್ಯ ಕೇಂದ್ರ ಸ್ಥಳದಲ್ಲಿರಬೇಕು. ನಂತರ ಆಳ್ವಾರ್ ಮತ್ತು ಖೇತ್ರಿ ಮುಂತಾದ ಊರಿ ನಲ್ಲಿ ಅದರ ಶಾಖೆಗಳು ತೆರೆಯಬೇಕು. ನೀನು ಎಲ್ಲರೊಡನೆಯೂ ಸಹಕರಿಸ ಬೇಕು. ನಾವು ಯಾರೊಂದಿಗೂ ಜಗಳ ಕಾಯಕೂಡದು. ಪಂಡಿತ ನ—ಗೆ ನನ್ನ ಪ್ರೇಮಾಲಿಂಗನವನ್ನು ಕೊಡು. ಅವನು ಬಹಳ ಚುರು ಕಾದ ಮನುಷ್ಯ. ಮುಂದೆ ಅವನು ಚೆನ್ನಾದ ಕೆಲಸಗಾರನಾಗುತ್ತಾನೆ.

ನನ್ನ ಪ್ರೇಮವನ್ನು ಶ್ರೀಮಾನ್ ಮ—ಮತ್ತು ಜ—ಗೂ ತಿಳಿಸು. ಮ—ಬಾಬು ಮತ್ತು ಉಳಿದವರು ನನಗೆ ಕಾಗದ ಬರೆದಿದ್ದೇವೆ ಎನ್ನುತ್ತಾರೆ. ಆದರೆ ನನಗೆ ಯಾವ ಕಾಗದವೂ ಇದುವರೆವಿಗೂ ಬಂದಿಲ್ಲ. ಮಠ, ಕೇಂದ್ರ ಅಥವಾ ಇನ್ನು ಏನನ್ನಾದರೂ ಕಲ್ಕತ್ತೆಯಲ್ಲಿ ಸ್ಥಾಪಿಸಿದರೆ ಪ್ರಯೋಜನವಿಲ್ಲ. ಕಾಶಿ ಅದಕ್ಕೆ ಸರಿಯಾದಸ್ಥಳ. ಇಂತಹ ಅನೇಕ ಯೋಜನೆಗಳು ನನ್ನ ಮನಸ್ಸಿನಲ್ಲಿವೆ. ಆದರೆ ಎಲ್ಲ ಹಣ ಸಂಗ್ರಹದ ಮೇಲೆ ಇರುವುದು. ಕ್ರಮೇಣ ನಿನಗೆ ಅವುಗಳೆಲ್ಲ ಗೊತ್ತಾಗುವುದು. ಇಂಗ್ಲೆಂಡಿನಲ್ಲಿ ನಮ್ಮ ಪ್ರಭಾವ ಕ್ರಮೇಣ ಬೇರೂರುತ್ತಿದೆ ಎಂಬುದನ್ನು ವೃತ್ತ ಪತ್ರಿಕೆಗಳಿಂದ ತಿಳಿಯಬಹುದು. ಈ ದೇಶದಲ್ಲಿ ಯಾವ ಒಂದು ಉದ್ಯಮವಾದರೂ ಮುಂದೆ ಸಾಗಬೇಕಾದರೆ ಕೆಲವು ಕಾಲ ತೆಗೆದುಕೊಳ್ಳುವುದು. ಆದರೆ ಒಮ್ಮೆ ಆಂಗ್ಲೇಯನು ಒಂದು ಕೆಲಸಕ್ಕೆ ಕೈಹಾಕಿದನೆಂದರೆ ಅವನು ಅದನ್ನು ಎಂದಿಗೂ ಬಿಡುವುದಿಲ್ಲ. ಅಮೇರಿಕಾ ದೇಶದವರು ಬಹಳ ಜಾಗ್ರತೆ ಮೆಚ್ಚುವರು. ಆದರೆ, ಅದು ಹುಲ್ಲು ಬಣವೆಯ ಬೆಂಕಿಯಂತೆ, ಬೇಗ ಆರಿಹೋಗುವುದು. ಜನರಿಗೆ ಶ್ರೀರಾಮಕೃಷ್ಣ ಪರಮಹಂಸರು ಅವತಾರ ಪುರುಷರು ಮುಂತಾದುವುಗಳನ್ನು ಬೋಧಿಸಬೇಡ. — ಅಲ್ಲಿ ನನ್ನ ಕೆಲವು ಅನುಯಾಯಿಗಳು ಇರುವರು. ಅವರನ್ನು ಎಚ್ಚರಿಕೆಯಿಂದ ನೋಡಿಕೊ.

ಅನಂತ ಶಕ್ತಿ ನಿನಗೆ ಬರುವುದು—ಎಂದಿಗೂ ಅಂಜಬೇಡ. ಪವಿತ್ರನಾಗು ಶ್ರದ್ಧೆ ಇರಲಿ—ವಿಧೇಯನಾಗು.

ಚಿಕ್ಕ ವಯಸ್ಸಿನ ಹುಡುಗರ ಮದುವೆಯನ್ನು ವಿರೋಧಿಸಿ ಬೋಧನೆ ಮಾಡು. ಯಾವ ಗ್ರಂಥವೂ ಇದನ್ನು ಒಪ್ಪುವುದಿಲ್ಲ. ಸಧ್ಯಕ್ಕೆ ಚಿಕ್ಕ ಬಾಲಕಿಯ ವಿವಾಹಕ್ಕೆ ವಿರೋಧವಾಗಿ ಏನನ್ನೂ ಹೇಳಬೇಕಾಗಿಲ್ಲ. ಹುಡುಗರ ಮದುವೆಯನ್ನು ನಿಲ್ಲಿಸಿದರೆ ಹುಡುಗಿಯರ ಮದುವೆ ತನ್ನಷ್ಟಕ್ಕೆ ತಾನೆ ನಿಲ್ಲುವುದು. ಹುಡುಗಿಯರು ನಿಜವಾಗಿಯೂ ತಮ್ಮಲ್ಲಿಯೇ ಮದುವೆಮಾಡಿಕೊಳ್ಳಲಾರರು! ಅ—ಎಂಬ ಹೆಸರಿನ ಸಂನ್ಯಾಸಿಯ ವಿಚಾರವನ್ನು ತಿಳಿದುಕೊಳ್ಳಲು ಆರ್ಯಸಮಾಜದ ಕಾರ್ಯದರ್ಶಿಗಳಿಗೆ ಕಾಗದ ಬರಿ. ಆತನು ಅವರೊಂದಿಗೆ ವಾಸಿಸುತ್ತಿದ್ದನು. ಅವರನ್ನು ವಿಶೇಷ

ವಾಗಿ ವಿಚಾರಿಸಿ ನೋಡು—ಎಂದಿಗೂ ಅಂಜಬೇಡ.

ನಿನ್ನ ವಿಶ್ವಾಸಪೂರ್ವಕ,
ವಿವೇಕಾನಂದ,

೬೨

ನ್ಯೂಯಾರ್ಕ್,
೨೯ನೇ ಡಿಸೆಂಬರ್ ೧೮೯೫.

ಪ್ರಿಯ ಸಹೋದರಿ,

ಈ ಪ್ರಪಂಚದಲ್ಲಿ ಯಾವುದೂ ಕಳೆದುಹೋಗುವುದಿಲ್ಲ. ಜನನ ಮರಣಗಳ ಮಧ್ಯದಲ್ಲಿ ನಮ್ಮ ಕೆಲವು ದಿನದ ಬಾಳುವೆ. ಇಂತಹ ಜಗತ್ತಿನಲ್ಲಿ ವಾಸಿಸುವ ನಾವು ಯಾವುದಾದರೊಂದು ಆಲೋಚನೆಯನ್ನು ಬಹಿರಂಗವಾಗಿ ಆಗಲೀ, ಅಂತರಂಗವಾಗಿ ಆಗಲೀ, ಜನಭರಿತವಾದ ನಗರದಲ್ಲಿ ಆಗಲೀ, ನಿರ್ಜನವಾದ ಅರಣ್ಯದಲ್ಲಿ ಆಗಲೀ, ಮಾಡಿದರೆ ಅದು ಸಜೀವಿಯಾಗಿರುವುದು. ನಾಶವಾಗುವುದಿಲ್ಲ. ಅವು ಪ್ರತಿಕ್ಷಣವೂ ಆವಿರ್ಭೂತವಾಗುವುದಕ್ಕೆ ಪ್ರಯತ್ನಿಸುತ್ತ ಇರುತ್ತವೆ. ಅವು ಹಾಗೆ ಪ್ರಕಾಶಕ್ಕೆ ಬರುವತನಕ ಅದಕ್ಕೋಸ್ಕರವಾಗಿ ಪ್ರಯತ್ನಿಸುತ್ತಿರುವುವು. ಅವುಗಳಿಗೆ ಎಷ್ಟು ಅಡಚಣೆ ತಂದೊಡ್ಡಿದರೂ ನಾಶವಾಗುವುದಿಲ್ಲ. ಪೂರ್ವದಲ್ಲಿ ಯಾವುದು ಪಾಪಕರ್ಮಕ್ಕೆ ಕಾರಣವಾಗಿತ್ತೋ ಅಂತಹ ಆಲೋಚನೆಗಳು ಕೂಡ ಹೊರಗೆ ಬರುವುದಕ್ಕೆ ಪ್ರಯತ್ನಿಸುತ್ತಿರುತ್ತವೆ. ಅನೇಕ ರೂಪಗಳಲ್ಲಿ ಮಾರ್ಪಾಡಾಗಿ ನಂತರ ಅತ್ಯಂತ ಪವಿತ್ರವಾದ ಆಲೋಚನೆಗಳಾಗಿ ಬದಲಾಯಿಸುತ್ತವೆ.

ಆದುದರಿಂದ ಸಧ್ಯದಲ್ಲಿ ಅಂತಹ ಅನಂತ ಆಲೋಚನೆಗಳು ಕಾರ್ಯದಲ್ಲಿ ಹೊರಬರಲು ಪ್ರಯತ್ನಿಸುತ್ತಿರುವುವು. ಈ ಹೊಸ ಆಲೋಚನೆಗಳು, ನಮ್ಮನ್ನು ಒಳ್ಳೆಯದು ಕೆಟ್ಟದ್ದು ಎಂಬ ಭ್ರಾಂತಿಯಿಂದ ಪಾರಾಗಬೇಕೆಂದೂ, ಮತ್ತು ಅವುಗಳನ್ನು ಅಡಗಿಸಬೇಕು ಎನ್ನುವ ಅದಕ್ಕಿಂತ ಘೋರತರವಾದ ಭ್ರಾಂತಿಯಿಂದಲೂ, ಪಾರಾಗಬೇಕೆಂದು ಬೋಧಿಸುತ್ತದೆ. ನಾವು ಆಲೋಚನೆಯನ್ನು ಧ್ವಂಸಮಾಡುವುದಕ್ಕೆ

ಆಗುವುದಿಲ್ಲ. ಅದಷ್ಟು ಉತ್ತಮಪಡಿಸಿ ಉಚ್ಚವರ್ಗದ ಆಲೋಚನೆಯನ್ನಾಗಿ ಮಾಡಬೇಕು. ಇದೇ ನಿಯಮ. ಈ ಪ್ರಪಂಚ ಕೇವಲ ಉತ್ತಮ, ಅಧಮ ಇವುಗಳಿಂದ ಆಗಿಲ್ಲ. ಉತ್ತಮ, ಉತ್ತಮತರ, ಉತ್ತಮತಮ ಎಂದು ಬೋಧಿಸುತ್ತದೆ. ಯಾವುದನ್ನೂ ಕೆಟ್ಟದ್ದೆಂದು ತಿರಸ್ಕರಿಸುವುದಕ್ಕೆ ಆಗುವುದಿಲ್ಲ. ಎಲ್ಲವನ್ನೂ ಸ್ವೀಕರಿಸಬೇಕು. ಎಂತಹ ಸ್ಥಿತಿಯೂ ನಿರಾಶಾದಾಯಕವಾಗಿಲ್ಲವೆಂದು ಹೇಳುತ್ತದೆ. ಆದುದರಿಂದ ಅದು ಎಲ್ಲಾ ಮಾನಸಿಕ, ನೈತಿಕ, ಅಧ್ಯಾತ್ಮಿಕ, ಆಲೋಚನೆಗಳನ್ನು ಆಯಾ ಸ್ಥಾನದಿಂದ ಅವುಗಳನ್ನು ಒಪ್ಪಿಕೊಳ್ಳುತ್ತವೆ. ಯಾವುದನ್ನು ದೂರದೆ, ಇದುವರೆವಿಗೂ ನೀವು ಚೆನ್ನಾಗಿ ಮಾಡಿರುವಿರಿ ; ಆದರೆ, ಇನ್ನು ಮೇಲೆ ಮತ್ತೂ ಚೆನ್ನಾಗಿ ಮಾಡಬೇಕೆಂದು ಹೇಳುತ್ತದೆ. ಯಾವುದನ್ನು ಪೂರ್ವದಲ್ಲಿ ಕೆಟ್ಟ ಆಲೋಚನೆಗಳ ತಿರಸ್ಕಾರ ಎಂದು ತಿಳಿದಿದ್ದೆವೋ, ಅದನ್ನೇ, ಇದು ರೂಪಾಂತರ ಮಾಡಿದ ಉತ್ತಮ ಆಲೋಚನೆಗಳೆಂದೂ, ಕರ್ಮವನ್ನು ಮತ್ತಷ್ಟು ಚೆನ್ನಾಗಿ ಮಾಡುವುದೆಂದೂ ಬೋಧಿಸುತ್ತದೆ. ಎಲ್ಲಕ್ಕಿಂತ ಹೆಚ್ಚಾಗಿ, ವೈಕುಂಠ ಅವನಿಗೆ ಬೇಕಾದರೆ ಆಗಲೇ ಅವನಲ್ಲಿದೆ ಎಂತಲೂ, ಮನುಷ್ಯ ಪ್ರಯತ್ನಪಟ್ಟು ತನ್ನಲ್ಲಿ ನೋಡಿದರೆ ಆಗಲೇ ಪೂರ್ಣತೆ ಅಲ್ಲಿ ನೆಲಸಿರುವುದೆಂದೂ ತಿಳಿಸುತ್ತದೆ.

ಕಳೆದ ಬೇಸಗೆಯಲ್ಲಿ ಗ್ರೀನ್ ಏಕರಿನ ಸಭೆ ಬಹಳ ಯಶಸ್ವಿಯಾಯಿತು. ಅದಕ್ಕೆ ಕಾರಣವೇನೆಂದರೆ, ನಿನ್ನಂತಹ ಉತ್ತಮ ವ್ಯಕ್ತಿಯ ಮೂಲಕ ಅಂತಹ ಒಳ್ಳೆಯ ಆಲೋಚನೆ ವ್ಯಕ್ತವಾಗುವುದಕ್ಕೆ ನೀನು ಅವಕಾಶಕೊಟ್ಟೆ. ವೈಕುಂಠ ಆಗಲೇ ಮಾನವನಲ್ಲಿದೆ ಎಂಬ ಬೋಧನೆಯ ತಳಹದಿಯ ಮೇಲೆ ನೀನು ನಿಂತೆ.

ಇಂತಹ ಮಹದಾಲೋಚನೆಗಳನ್ನು ಜೀವನದ ಅನುಷ್ಠಾನಕ್ಕೆ ರೂಪಾಂತರ ಮಾಡುವ ಮಹಾ ಕಾರ್ಯಕ್ಕೆ ದೇವರು ನಿನ್ನನ್ನು ಆರಿಸಿ ಅದಕ್ಕೋಸ್ಕರ ಇಟ್ಟಿರುವನು. ನಿನ್ನ ಇಂತಹ ಪವಿತ್ರ ಕೆಲಸದಲ್ಲಿ ಯಾರು ಯಾರು ನಿನಗೆ ಸಹಾಯ ಮಾಡುವರೋ ಅವರೆಲ್ಲ ದೇವರನ್ನು ಸೇವಿಸುತ್ತಿರುವರು.

ಯಾರು ದೇವರ ಭಕ್ತನನ್ನು ಸೇವಿಸುವನೋ, ಅವನು ದೇವರ ಪರಮ ಭಕ್ತನೆಂದು ನಮ್ಮ ಗೀತೆಯು ಬೋಧಿಸುತ್ತದೆ. ನೀನು ದೇವರ ಭಕ್ತಳು. ನಾನು ಕೃಷ್ಣನ ಭಕ್ತನಾಗಿರುವುದರಿಂದ, ನಿನ್ನ ಮಹತ್‌ಕಾರ್ಯಸಾಧನೆಗೆ ಯಾವ ವಿಧವಾದ ಸಹಾಯವಾದರೂ ನನ್ನಿಂದ ಬೇಕಾದರೆ, ಅದು ನನ್ನ ಪಾಲಿಗೆ ಬಂದ ಗೌರವವೆಂದೂ, ಪೂಜೆಯೆಂದೂ ಭಾವಿಸಿ, ಮಾಡಲು ನಾನು ಎಲ್ಲಿದ್ದರೂ ಸಿದ್ಧನಾಗಿರುವೆನು.

ಅನವರತವೂ ನಿನ್ನ ವಿಶ್ವಾಸಪೂರ್ವಕ ಸಹೋದರ,

ವಿವೇಕಾನಂದ.

೬೩

೧೮೯೫.

ಪ್ರಿಯ,

ಪ— ಕಳುಹಿಸಿದ ಪುಸ್ತಕ ತಲಪಿತು. ಇದನ್ನು ಹೇಳುವು ದನ್ನು ಮರೆತುಬಿಟ್ಟೆ. ಇದನ್ನು ದಯವಿಟ್ಟು ಅವನಿಗೆ ಹೇಳು. ನಿಮ ಗೆಲ್ಲರಿಗೂ ಗಮನಾರ್ಹವಾದ ಕೆಲವು ವಿಷಯಗಳನ್ನು ಬರೆಯುತ್ತೇನೆ :—

(೧) ಭೇದಬುದ್ಧಿಯೇ ಎಲ್ಲಾ ಪಾಪಗಳಿಗೂ ಮೂಲ ಎಂಬುದನ್ನು ಗಮನದಲ್ಲಿಡು. ಅಂದರೆ ನೀನು ಎಂದು ಯಾರಾದರೂ ಕೆಲವರ ಮೇಲೆ, ಉಳಿದವರಿಗಿಂತ ಹೆಚ್ಚು ಪ್ರೇಮವನ್ನು ತೋರುತ್ತೀಯೋ ಅಂದಿನಿಂದಲೇ ಮುಂದಿನ ಕಷ್ಟಗಳಿಗೆ ಬೀಜವನ್ನು ಬಿತ್ತುತ್ತಿರುವೆ ಎಂದು ಸಂದೇಹ ವಿಲ್ಲದೆ ತಿಳಿ.

(೨) ಯಾರಾದರು ಮತ್ತೊಬ್ಬ ಸಹೋದರನ ಮೇಲೆ ಚಾಡಿ ಹೇಳಲು ಬಂದರೆ ಅವನ ಯಾವ ಮಾತನ್ನೂ ಕೇಳಬೇಡ. ಅದನ್ನು ಕೇಳು ವುದು ಕೂಡ ದೊಡ್ಡ ಪಾಪ. ಮುಂದಿನ ಕಲಹಗಳಿಗೆ ಅಲ್ಲಿದೆ ಆಗಲೇ ಬೀಜ.

(೩) ಪ್ರತಿಯೊಬ್ಬನ ನ್ಯೂನಾತಿರೇಕಗಳನ್ನು ಸಮಾಧಾನದಿಂದ ಸೈರಿಸು. ಅವರು ಕೋಟಿ ತಪ್ಪುಮಾಡಿದರೂ ಕ್ಷಮಿಸು. ನಿಸ್ವಾರ್ಥ ನಾಗಿ ನೀನು ಎಲ್ಲರನ್ನೂ ಪ್ರೀತಿಸಿದರೆ, ಎಲ್ಲರೂ ಕ್ರಮೇಣ ಒಬ್ಬರನ್ನೊ

ಬ್ಬರು ಪ್ರೀತಿಸುವರು. ಒಬ್ಬನ ಅನುಕೂಲ ಮತ್ತೊಬ್ಬನ ಅನುಕೂಲದ ಮೇಲಿದೆ ಎಂದು ಅವರಿಗೆ ಯಾವಾಗ ಗೊತ್ತಾಗುವುದೋ ಅಂದಿನಿಂದಲೇ ಅಸೂಯೆಯನ್ನು ತೋರೆಯುವರು. ಎಲ್ಲರೂ ಕಲೆತು ಒಂದು ಕೆಲಸವನ್ನು ಮಾಡುವುದು ನಮ್ಮ ಜನಾಂಗದ ಹುಟ್ಟುಗುಣದಲ್ಲೇ ಇಲ್ಲ. ಅದ ಕ್ಕೋಸ್ಕರವಾಗಿಯೇ ಅಂತಹ ಭಾವವನ್ನು ಬಹಳ ಜೋಪಾನದಿಂದ ಪ್ರಾರಂಭಿಸುವುದಕ್ಕೆ ಪ್ರಯತ್ನಿಸಿ. ಪ್ರತಿಫಲಕ್ಕೆ ಸಾವಧಾನದಿಂದ ಕಾಯ ಬೇಕು. ನಾನು ನಿಜವಾಗಿ ನಿನಗೆ ಹೇಳಬೇಕಾದರೆ, ನಿಮ್ಮಲ್ಲಿ ಯಾರೂ ನನಗೆ ಹೆಚ್ಚು ಕಡಿಮೆ ಎಂದು ಕಾಣಬರುವುದಿಲ್ಲ. ಪ್ರತಿಯೊಬ್ಬರೂ ಅವಕಾಶಬಿದ್ದಾಗ ಬೇಕಾದಷ್ಟು ಶಕ್ತಿಯನ್ನು ವ್ಯಕ್ತಪಡಿಸಲು ಸಾಧ್ಯವಿದೆ. ನನಗೆ ಅದೆಲ್ಲ ಕಾಣುತ್ತದೆ. ಉದಾಹರಣೆಗಾಗಿ ಸ— ಕಡೆ ನೋಡು. ಅವನು ತನ್ನ ಸ್ಥಳದಿಂದ ಯಾವಾಗಲೂ ಕದಲದೆ ಹೇಗೆ ನಿಂತಿರುವನು. ಅವನ ಸ್ಥಿತಿಯೇ ಒಂದು ದೊಡ್ಡ ತಳಹದಿಯ ಬಂಡೆ. ಎಷ್ಟು ಜಯ ಪ್ರದವಾಗಿ ಕ— ಮತ್ತು ಜ— ಇವರು ಪುರಭವನದಲ್ಲಿ ಸಭೆಯನ್ನು ನಡೆಸಿದರು. ಇದು ಒಂದು ವಿಶೇಷವಾದ ಕೆಲಸ! ನ— ಸಿಲೋನ್ ಮತ್ತು ಬೇರೆ ಕಡೆಗಳಲ್ಲಿ ಹೆಚ್ಚು ಕೆಲಸವನ್ನು ಮಾಡಿರುವನು. ತ— ಇಷ್ಟೊಂದು ಸುತ್ತಾಡಿ ಭವಿಷ್ಯದ ಕೆಲಸದ ಬೀಜವನ್ನು ಬಿತ್ತಿರುವನು ನಾನು ಯಾವಾಗಲಾದರೂ ಹ— ನ ಅತ್ಯಂತ ಅದ್ಭುತವಾದ ತ್ಯಾಗ ಅವನ ಬುದ್ಧಿಯ ಸ್ಥಿರತೆ, ಮತ್ತು ಸಹನಶಕ್ತಿಗಳನ್ನು ಯೋಚಿಸಿದರೆ ನನಗೆ ಅದರಿಂದ ಹೆಚ್ಚು ಶಕ್ತಿ ಬರುವುದು! ಕೆಲವರ ಹೆಸರನ್ನು ಹೇಳಬೇಕಾದರೆ ತ— ಜ— ಬ— ಸ— ಮತ್ತು ನ— ಕೆಲವರು ಅಲ್ಲದೆ, ನಿಮ್ಮಗಳಕ್ಕೆ ಪ್ರತಿಯೊಬ್ಬರಲ್ಲಿಯೂ ಅತ್ಯದ್ಭುತ ಶಕ್ತಿ ಇದೆ. ಶ್ರೀ ರಾಮಕೃಷ್ಣರ ಮಾನವನ ಶೀಲದ ಒರೆಗಲ್ಲು ಎಂಬ ವಿಚಾರವಾಗಿ ನಿಮಗೆ ಇನ್ನೂ ಸಂದೇಹವಿದ್ದರೆ, ನಿಮ್ಮಗಳಿಗೂ ಹುಚ್ಚರಿಗೂ ಏನು ವ್ಯತ್ಯಾಸ! ಕಣ್ತೆ ರೆದು ನೋಡು! ಈ ದೇಶದ ನೂರಾರು ಜನ ಸ್ತ್ರೀಯರು ಪುರುಷರು ಶ್ರೀರಾಮಕೃಷ್ಣರನ್ನು ಅವತಾರ ಶ್ರೇಷ್ಠರೆಂದು ಪೂಜಿಸಲು ಮೊದಲು ಮಾಡಿರುವರು! ಸ್ವಲ್ಪ ಸಾವಧಾನವಾಗಿರು. ಎಲ್ಲಾ ಮಹಾಕಾರ್ಯವೂ ಸಾವಧಾನವಾಗಿ ಸಾಗುವುದು.

ಶ್ರೀರಾಮಕೃಷ್ಣರು ಮುಂದಾಳುಗಳಾಗಿರುವರು. ಇನ್ನೇನು ಅಂಜಿಕೆ! ಅನಂತಶಕ್ತಿ ನಿಮ್ಮೆಲ್ಲರಲ್ಲಿಯೂ ಇದೆ. ನೀಚರ ಅಹಂಕಾರ, ಅಸೂಯೆ ಎಂಬ ಕ್ಷುದ್ರಭಾವಗಳನ್ನು ಹೊರದೂಡಲು ಎಷ್ಟುಕಾಲ ತೆಗೆದುಕೊಳ್ಳುವುದು? ಅಂತಹ ಹೀನ ಆಲೋಚನೆಗಳು ಮನಸ್ಸಿನಲ್ಲಿ ಬಂದೊಡನೆಯೇ ದೇವರಲ್ಲಿ ಶರಣಾಗತರಾಗಿ! ಆತನ ಕಾರ್ಯಕ್ಕಾಗಿ ನಿಮ್ಮ ತನುಮನವನ್ನೆಲ್ಲ ಧಾರೆ ಎರೆಯಿರಿ. ನಂತರ ಎಲ್ಲಾ ತೊಂದರೆಗಳಿಂದಲೂ ಎಂದೆಂದಿಗೂ ನೀವು ಪಾರಾಗುವಿರಿ.

ನೀವು ಈಗ ವಾಸಿಸುತ್ತಿರುವ ಮನೆಯಲ್ಲಿ ಎಲ್ಲರಿಗೂ ಸ್ಥಳವಿಲ್ಲ ವೆಂದು ಕಾಣುತ್ತದೆ. ಒಂದು ವಿಶಾಲವಾದ ಮನೆ ಬೇಕಾಗಿದೆ. ನೀವು ಗಳೆಲ್ಲರೂ ಒಂದೇ ಕೋಣೆಯಲ್ಲಿ ತುಂಬಬೇಕಾಗಿಲ್ಲ. ಸಾಧ್ಯವಾದರೆ ಒಂದು ಕೋಣೆಯಲ್ಲಿ ಇಬ್ಬರಿಗಿಂತ ಹೆಚ್ಚು ಇರಲೇಕೂಡದು. ಪುಸ್ತಕ ಗಳನ್ನು ಇಡುವುದಕ್ಕೆ ಒಂದು ದೊಡ್ಡ ನಡುಮನೆ ಇರಲಿ.

ಪ್ರತಿದಿನವೂ ಬೆಳಿಗ್ಗೆ ಸ್ವಲ್ಪ ಶಾಸ್ತ್ರಾಧ್ಯಯನ ಇರಬೇಕು. ಅದನ್ನು ಕ— ಮತ್ತು ಕೆಲವರು ಒಬ್ಬರ ನಂತರ ಒಬ್ಬರು ಸರದಿಯಾದ ಮೇಲೆ ಒಬ್ಬರು ಮೇಲ್ವಿಚಾರಣೆಯನ್ನು ನೋಡಿಕೊಳ್ಳಲಿ. ಸಂಜೆಯೂ ಕೆಲವು ಕಾಲ ಧ್ಯಾನ ಸಂಕೀರ್ತನೆಗಳ ಅಭ್ಯಾಸವಾದಮೇಲೆ ಮತ್ತೊಂದು ಪಾಠ ನಡೆಯಬೇಕು. ನೀವು ಕೆಲಸವನ್ನು ವಿಭಾಗಮಾಡಿ ಒಂದುದಿನ ಜ್ಞಾನ ಒಂದುದಿನ ಭಕ್ತಿ ಹೀಗೆ ಇಟ್ಟುಕೊಳ್ಳಬಹುದು. ಇಂತಹ ಒಂದು ಕಾರ್ಯ ಕ್ರಮವನ್ನು ಮಾಡಿದರೆ ಬಹಳ ಚೆನ್ನಾಗಿರುವುದು. ಇದರಿಂದ ಹೊರಗಿ ನವರೂ ಸಂಜೆಯ ಪಾಠಕ್ಕೆ ಬರಬಹುದು. ಪ್ರತಿ ಭಾನುವಾರವೂ ಬೆಳಿಗ್ಗೆ ಹತ್ತು ಗಂಟೆಯಿಂದ ರಾತ್ರಿವರೆವಿಗೂ ಪಾಠಸಂಕೀರ್ತನೆಗಳು ಎಡಬಿಡದೆ ಭಕ್ತಾದಿಗಳ ಅನುಕೂಲಕ್ಕಾಗಿ ಇರಬೇಕು. ಇಂತಹ ಒಂದು ಕಾರ್ಯ ಕ್ರಮವನ್ನು ನೀವು ಕೆಲವು ಕಾಲ ನಡೆಸಿಕೊಂಡು ಹೋಗುವುದಕ್ಕೆ ತೊಂದರೆ ತೆಗೆದುಕೊಂಡರೆ ನಂತರ ಎಲ್ಲಾ ಸುಲಭವಾಗುವುದು. ಅಲ್ಲಿ ಯಾರೂ ತೊಂಬಾಕನ್ನು ಸೇದಬಾರದು. ಅದಕ್ಕೆ ಬೇರೆ ಒಂದು ಕೋಣೆ ಪ್ರತ್ಯೇಕವಿರಬೇಕು. ಇಂತಹ ಒಂದು ಸ್ಥಿತಿ ಕ್ರಮೇಣ

ಜಾರಿಗೆ ತರುವುದಕ್ಕೆ ತೊಂದರೆ ತೆಗೆದುಕೊಂಡರೆ ಇದರಿಂದ ನಾವು ಬಹಳ ಮುಂದುವರಿಯುತ್ತೇವೆ ಎಂದು ಹೇಳಬಲ್ಲೆ.

ಹ— ಹೊರಡಿಸಬೇಕೆಂದಿದ್ದ ಯಾವುದೋ ಮಾಸಪತ್ರಿಕೆಯ ಸುದ್ದಿ ಏನಾಯಿತು? ನೀವುಗಳು ಒಂದು ಮಾಸಪತ್ರಿಕೆಯನ್ನು ಹೊರಡಿಸುವುದಕ್ಕೆ ಪ್ರಯತ್ನ ಪಟ್ಟರೆ ಅದು ನಿಜವಾಗಿಯೂ ಚೆನ್ನಾಗಿರುವುದು.

ನಿನ್ನ ವಿಶ್ವಾಸಪೂರ್ವಕ,
ವಿವೇಕಾನಂದ.

೭೪

೧೮೯೫.

ಪ್ರಿಯ,

ಈಗತಾನೆ ನಿನ್ನ ಪತ್ರ ತಲಪಿತು. ಅದನ್ನು ಓದಿ ತುಂಬಾ ಸಂತೋಷವಾಯಿತು. ಏನಾದರೂ ಕೆಲಸ ಇಂಡಿಯಾ ದೇಶದಲ್ಲಿ ಆಗಲಿ ಬಿಡಲಿ ನಿಜವಾದ ಕೆಲಸ ಇಲ್ಲಿರುವುದು. ಈಗ ಇಲ್ಲಿಗೆ ನನಗಾಗಿ ಯಾರೂ ಬರಬೇಕಾಗಿಲ್ಲ. ನಾನು ಇಂಡಿಯಾ ದೇಶಕ್ಕೆ ಹಿಂತಿರುಗಿದ ಮೇಲೆ ಕೆಲವರನು ತರಬೇತು ಮಾಡುತ್ತೇನೆ. ಅದಾದ ಮೇಲೆ ಅವರಿಗೆ ಪಾಶ್ಚಾತ್ಯ ದೇಶಗಳಲ್ಲಿ ಏನೂ ಅಂಜಿಕೆ ಇರುವುದಿಲ್ಲ. ನಾನು ಜ— ವಿಚಾರ ಬರೆದಿದ್ದು, ನನ್ನ ವಿಶೇಷ ಪ್ರೀತಿ ಮತ್ತು ಆಶೀರ್ವಾದಗಳನ್ನು ಹ— ಗೆ ತಿಳಿಸು. ಎಂದಿಗೂ ಜಗಳ ಕದನಗಳಲ್ಲಿ ಭಾಗವಹಿಸಬೇಡ. —ರಾಜನನ್ನು ಕೆಳಗೆ ತರುವುದಕ್ಕೆ ಯಾರಿಗೆ ಪ್ರಪಂಚದಲ್ಲಿ ಅಧಿಕಾರವಿರುವುದು. ಜಗನ್ಮಾಯಿಯು ಅವನ ಹಿಂದೆ ಇರುವಳು! ಪತ್ರ ನನಗೆ ಸೇರಿದೆ. ಕಾಶ್ಮೀರದಲ್ಲೂ ನೀನೊಂದು ಕೇಂದ್ರವನ್ನು ಸ್ಥಾಪಿಸಿದರೆ ಚೆನ್ನಾಗಿರುವುದು. ಎಲ್ಲಿ ನಿನಗೆ ಸಾಧ್ಯವಾದರೆ ಅಲ್ಲಿ ಒಂದು ಆಶ್ರಮವನ್ನು ಸ್ಥಾಪಿಸು. ಇಲ್ಲಿ ಮತ್ತು ಇಂಗ್ಲೆಂಡಿನಲ್ಲಿ ಈಗ ನಾನು ಭದ್ರವಾದ ತಳಹದಿಯನ್ನು ಹಾಕಿರುವೆನು. ಅದನ್ನು ಅಲ್ಲಾಡಿಸುವುದಕ್ಕೆ ಯಾರಿಂದಲೂ ಸಾಧ್ಯವಿಲ್ಲ. ನ್ಯೂಯಾರ್ಕಿನಲ್ಲಿ ಈ ವರುಷ ಒಂದು

ದೊಡ್ಡ ಕೋಲಾಹಲವೆದ್ದಿದೆ. ಬರುವ ವರುಷ ಇಂಗ್ಲೆಂಡಿನ ಸರದಿ. ಪ್ರಚಂಡ ಪ್ರತಿಭಾಶಾಲಿಗಳೇ ತಲೆತಗ್ಗಬೇಕಾಗಿದೆ. ಕೆಲಸಕ್ಕೆ ಬಾರ ದವರನ್ನು ಕೇಳುವವರಾರು? ಸೊಂಟ ಕಟ್ಟಿ ಕೆಲಸಕ್ಕೆ ಕೈಹಾಕಿ. ನಮ್ಮ ದಿಗ್ವಿಜಯದ ಜಯನಿನಾದದಿಂದ ಜಗತ್ತನ್ನೇ ಮುಳುಗಿಸಬೇಕು. ನನ್ನ ಮಗು! ಇದು ಇನ್ನೂ ಪ್ರಾರಂಭ. ನಮ್ಮ ದೇಶದಲ್ಲಿ ಏನಾದರು ಪುರುಷರು ಇರುವರು ಎಂದು ತಿಳಿದುಕೊಂಡೆಯೇನು? ಅದೆಲ್ಲ ನಪುಂಸಕರ ಬೀಡು. ಜನಸಮುದಾಯಕ್ಕೆ ವಿದ್ಯಾಭ್ಯಾಸವನ್ನು ಹರಡಿದರೆ ಸ್ವಲ್ಪ ಉತ್ತಮ ಸ್ಥಿತಿಗೆ ಬರಬಹುದು. ವಿದ್ಯೆಗಿಂತ ಅಧಿಕ ಶಕ್ತಿಕರವಾಗಿರುವುದು ಯಾವುದಾದರೂ ಉಂಟೆ. ಅವರಿಗೆ ನೀವು ವಿದ್ಯಾಭ್ಯಾಸವನ್ನು ಕೊಡ ಬಲ್ಲಿರಾ? ಹಣವಂತರು ಇತರರಿಗೆ ಸಹಾಯ ಮಾಡಿದ ಯಾವುದಾದ ರೊಂದು ದೇಶವನ್ನು ಹೇಳು ನೋಡೋಣ! ಎಲ್ಲಾ ದೇಶಗಳಲ್ಲಿಯೂ ಸಾಧಾರಣ ಜನರು ಎಲ್ಲಾ ಮಹತ್ ಕಾರ್ಯಗಳನ್ನು ಮಾಡಿರುವುದು. ಹಣವನ್ನು ಕೂಡಿಹಾಕುವುದಕ್ಕೆ ಎಷ್ಟು ಕಾಲ ಹಿಡಿಯುವುದು? ಕೆಲಸ ಮಾಡುವವರೆಲ್ಲಿ? ನಮ್ಮ ದೇಶದಲ್ಲಿ ಯಾರಾದರು ಇರುವರೇನು? ನಮ್ಮ ದೇಶದವರು ಎಳೆ ಹಸುಳೆಗಳು. ಅವರನ್ನು ಹಾಗೆಯೇ ಕಾಣಬೇಕು. ಉರಿದುಹೋದ ಅರಮನೆಯಲ್ಲಿ ಕೆಲವು ಧಾರ್ಮಿಕ ಮತ್ತು ತತ್ತ್ವ ಗ್ರಂಥ ಗಳು ಉಳಿದಿವೆ. ಅದನ್ನು ತೆಗೆದುಕೊಂಡು ಬೇಗ ಈ ದೇಶಕ್ಕೆ ಬಂದುಬಿಡು.

ಎಂದಿಗೂ ಅಂಜಬೇಡ! ಜಗನ್ಮಾಯಿಯು ನನಗೆ ಸಹಾಯ ಮಾಡುತ್ತಿರುವಳು. ಈ ವರುಷ ಅಷ್ಟೊಂದು ಕೆಲಸವಾಗುತ್ತದೆ. ಅದನ್ನು ಕೇಳಿದರೆ ನೀನೇ ಆಶ್ಚರ್ಯದಿಂದ ಮೂಕನಾಗುವೆ.

ಎಂತಹ ಅಂಜಿಕೆ! ಯಾರಿಗೆ ಅಂಜುವುದು! ಹೃದಯವನ್ನು ಗಟ್ಟಿಮಾಡಿ ಕೆಲಸಕ್ಕೆ ಕೈಹಾಕು.

ನಿನ್ನ ವಿಶ್ವಾಸಪೂರ್ವಕ,
ವಿವೇಕಾನಂದ.

ಪಿ. ಸೂ.— ಸ—ಒಂದು ವಂಗಭಾಷೆಯ ಮಾಸ ಪತ್ರಿಕೆಯನ್ನು ಹೊರಡಿಸಬೇಕೆಂದು ಆಲೋಚಿಸುತ್ತಿರುವನು. ನಿನ್ನ ಕೈಲಾದಷ್ಟು

ಅದಕ್ಕೆ ಸಹಾಯ ಮಾಡು. ಅದೇನು ಕೆಟ್ಟ ಅಭಿಪ್ರಾಯವಲ್ಲ. ಯಾರಾದರು ಒಂದು ಹೊಸ ಸಂಚಿಕೆಯನ್ನು ತಂದರೆ ಅವರ ಉತ್ಸಾಹ ವನ್ನು ಭಂಗಪಡಿಸಬಾರದು. ದೋಷಾರೋಪಣೆ ಮಾಡುವುದನ್ನು ಬಿಟ್ಟುಬಿಡು. ಎಲ್ಲಿಯವರೆವಿಗೂ ಸರಿಯಾಗಿ ಕೆಲಸ ಮಾಡುತ್ತಿರುವರು ಎಂದು ತಿಳಿಯುವೆಯೋ ಅಲ್ಲಿಯವರೆವಿಗೂ ಎಲ್ಲರಿಗೂ ಸಹಾಯ ಮಾಡು. ಎಲ್ಲಿ ಅವರು ಸರಿಯಾದ ಹಾದಿಯಲ್ಲಿ ಹೋಗುತ್ತಿಲ್ಲವೆಂದು ನಿನಗೆ ತೋರುವುದೋ ಆಗ ಅವರ ಮನಸ್ಸು ನೋಯದಂತೆ ಅವರ ತಪ್ಪನ್ನು ತೋರಿಸು. ದೋಷಾರೋಪಣೆ ಮಾಡುವುದೇ ಎಲ್ಲಾ ಕಲಹಗಳಿಗೂ ಮೂಲ. ಇದೇ ಒಂದು ಸಂಘವನ್ನು ಮುಖ್ಯವಾಗಿ ಹಾಳುಮಾಡು ವುದು.

೭೫

ಅಮೆರಿಕ,
೧೮೯೫.

ಪ್ರಿಯ,

ನೆನ್ನೆ ನಿನ್ನ ಪತ್ರ ತಲುಪಿತು. ಅದರಲ್ಲಿ ಸ್ವಲ್ಪ ವಿಷಯವೇನೊ ಇತ್ತು. ಆದರೆ ಯಾವುದೂ ವಿವರವಾಗಿಲ್ಲ. ನಾನು ಈಗ ಬಹಳ ಮೇಲಾಗಿರುವೆನು. ಹಲವರ ದಯೆಯಿಂದ ಈ ವರುಷದ ವಿಪರೀತ ಚಳಿಯನ್ನು ಸಹಿಸಿರುತ್ತೇನೆ. ಅಬ್ಬ ! ಎಷ್ಟು ಚಳಿ ! ಆದರೆ ಈ ಜನರು ಚಳಿಯೆಲ್ಲವನ್ನೂ ತಮ್ಮ ವೈಜ್ಞಾನಿಕ ಜ್ಞಾನದಿಂದ ತಗ್ಗಿಸಿರುವರು. ಪ್ರತಿಯೊಂದು ಮನೆಯಲ್ಲಿಯೂ ಒಂದು ನೆಲಮಾಳಿಗೆ ಇದೆ. ಅಲ್ಲಿ ಒಂದು ದೊಡ್ಡ ನೀರನ್ನು ಕಾಯಿಸುವ ಹಂಡೆ. ಅಲ್ಲಿ ಆವಿಯನ್ನು ಮಾಡಿ ಹಗಲು ರಾತ್ರಿ ನಲ್ಲಿಗಳ ಮೂಲಕ ಪ್ರತಿಯೊಂದು ಕೋಣೆಗೂ ಹೋಗುವಂತೆ ಮಾಡುತ್ತಾರೆ. ಇದು ಎಲ್ಲಾ ಕೋಣೆಯನ್ನು ಶಾಖ ವಾಗಿಟ್ಟಿರುವುದು. ಆದರೆ ಇದರಲ್ಲಿ ಒಂದು ನ್ಯೂನತೆ ಇದೆ. ಅದೇನೆಂ ದರೆ ಕೋಣೆಯ ಒಳಗೆ ಬಿಸಿಲು ಕಾಲದಂತೆ ಇದ್ದರೆ ಹೊರಗೆ ವಾಯು ಗುಣವು ೩೦ ಅಥವ ೪೦ ಡಿಗ್ರಿ ಸೊನ್ನೆಯ ಕೆಳಗೆ ಇರುತ್ತದೆ. ಈ

ದೇಶದ ಅನೇಕ ಶ್ರೀಮಂತರು ಚಳಿಗಾಲದಲ್ಲಿ ಇಲ್ಲಿಗಿಂತ ಶಾಖವಾಗಿರುವ ಯೂರೋಪು ದೇಶಗಳಿಗೆ ಹೋಗುತ್ತಾರೆ.

ಇನ್ನು ನಿನಗೆ ಸ್ವಲ್ಪ ಬುದ್ಧಿವಾದವನ್ನು ಹೇಳುತ್ತೇನೆ. ಈ ಪತ್ರ ನಿನಗಾಗಿ ಬರೆದಿಡುವುದು. ದಯವಿಟ್ಟು ದಿನಕ್ಕೆ ಒಂದು ವೇಳೆ ಈ ಬುದ್ಧಿವಾದವನ್ನು ನೋಡಿ ಇದರಂತೆ ಆಚರಿಸು. ಪ—ಕಾಗದ ಬಂದಿದೆ. ಅವನು ಒಳ್ಳೆಯ ಕೆಲಸವನ್ನು ಮಾಡುತ್ತಿರುವನು. ಆದರೆ ನಮಗೆ ಈಗ ಸಂಘ ಬೇಕಾಗಿದೆ. ಸ—ಮತ್ತು ತ—ಗೆ ನನ್ನ ವಿಶೇಷ ಪ್ರೀತಿ ಮತ್ತು ಆಶೀರ್ವಾದಗಳನ್ನು ತಿಳಿಸು. ಕೆಲವು ಸಲಹೆಗಳನ್ನು ನಾನು ನಿನಗೆ ಏಕೆ ಕೊಡುತ್ತೇನೆಂದರೆ, ನಿನ್ನಲ್ಲಿ ಸಂಘಚಾಲನಾ ಶಕ್ತಿ ಇದೆ. ದೇವರು ನನಗೆ ಇದನ್ನು ತಿಳಿಯಪಡಿಸಿರುವನು. ಆದರೆ ಅದು ಇನ್ನೂ ಚೆನ್ನಾಗಿ ಅಭಿವೃದ್ಧಿಯಾಗಿಲ್ಲ. ದೇವರ ದಯೆಯಿಂದ ಇದು ಬೇಗನೆ ಆಗುವುದು. ನೀನು ಗಂಭೀರ ವ್ಯಕ್ತಿ ಎಂಬುದೇ ಇದಕ್ಕೆ ಗುರುತು. ಆದರೆ ಅದು ಆಳವಾಗಿಯೂ ಮತ್ತು ಅಗಲವಾಗಿಯೂ ಆಗಬೇಕು.

(೧) ಎಲ್ಲಾ ಶಾಸ್ತ್ರಗಳೂ ಪ್ರಪಂಚದಲ್ಲಿರುವ ತಾಪತ್ರಯಗಳು ಸಹಜವಾದುದಲ್ಲವೆಂದು ಒಪ್ಪಿಕೊಳ್ಳುತ್ತವೆ. ಆದುದರಿಂದ ಅದನ್ನು ನಿವಾರಿಸಬಹುದು.

(೨) ಬೌದ್ಧಾವತಾರದಲ್ಲಿ ಭಗವಂತ ಆದಿಭೌತಿಕ ಕಷ್ಟದ ಮೂಲವೆ, ಅಥವಾ ಬೇರೆ ದೇವತೆಗಳಿಂದ ಪ್ರಾಪ್ತವಾಗುವ ಕಷ್ಟವೇ ಜಾತಿ ವಿಭಾಗಕ್ಕೆ ಮೂಲವೆಂದು ಹೇಳುತ್ತಾನೆ. ಅದು ಯಾವ ವಿಧವಾದ ವಿಭಾಗವೇ ಆಗಲಿ, ಜನ್ಮತಃ ಪ್ರಾಪ್ತವಾದುದಾಗಲೀ, ಅಥವಾ ಅನಂತರ ಪಡೆದುದಾಗಲೀ, ಅಥವಾ ಐಶ್ವರ್ಯದ ಮೇಲಿರಲಿ, ಇವುಗಳೇ ದುಃಖದ ಮೂಲ. ಆತ್ಮನಲ್ಲಿ ಲಿಂಗಭೇದವಿಲ್ಲ. ವರ್ಣಭೇದವಿಲ್ಲ. ಆಶ್ರಮಭೇದವಿಲ್ಲ. ಮತ್ತಾವ ಭೇದವೂ ಇಲ್ಲ. ಹೇಗೆ ಕೆಸರಿನಿಂದ ಕೆಸರನ್ನು ತೊಳೆಯುವುದಕ್ಕೆ ಆಗುವುದಿಲ್ಲವೋ ಹಾಗೆಯೇ ವಿಭಾಗವಾದ ಭಾವಗಳಿಂದ ಏಕತ್ವವನ್ನು ಪಡೆಯುವುದಕ್ಕೇ ಆಗುವುದಿಲ್ಲ.

(೩) ಕೃಷ್ಣಾವತಾರದಲ್ಲಿ ಭಗವಂತನು, ಎಲ್ಲಾ ದುಃಖಕ್ಕೆ ಕಾರಣ ಅಜ್ಞಾನವೆಂದೂ, ನಿಷ್ಕಾಮ ಕರ್ಮವು ಚಿತ್ತಶುದ್ಧಿಯನ್ನು ಮಾಡುವುದೆಂದೂ ಹೇಳುತ್ತಾನೆ. ಆದರೆ "ಕಿಂ ಕರ್ಮ ಕಿಮ ಕರ್ಮೇತಿ...." ಯಾವುದು ಕರ್ಮ ಯಾವುದು ಅಕರ್ಮವೆಂದು ನಿಶ್ಚಯಿಸು ವುದಕ್ಕೆ, ದೊಡ್ಡ ದೊಡ್ಡ ಋಷಿಗಳಿಗೇ ಕಷ್ಟವಾಗಿದೆ.

(೪) ಯಾವ ಕೆಲಸ ನಮ್ಮ ಆತ್ಮ ಜ್ಞಾನದ ಅರಿವಿಗೆ ಸಹಾಯ ಮಾಡುವುದೋ ಅದೇ ಕರ್ಮ. ಯಾವುದು ಇಂದ್ರಿಯ ಭೋಗವೇ ಪರಮಾವಧಿ ಎಂದು ಸಾರುವುದೋ ಅದೆಲ್ಲ ಅಕರ್ಮ.

(೫) ಆದುದರಿಂದ ಕರ್ಮ ಮತ್ತು ಅಕರ್ಮಗಳನ್ನು ದೇಶ, ಕಾಲ, ವ್ಯಕ್ತಿಯ ಭಿನ್ನ ಭಿನ್ನ ಅಭಿರುಚಿಗಳಿಗೆ ಸರಿಯಾಗುವಂತೆ ಹೊಂದಿಸಬೇಕು.

(೬) ಯಾಗ ಯಜ್ಞಾದಿಗಳಂತಹ ಕರ್ಮಗಳು ಹಿಂದಿನ ಕಾಲಕ್ಕೆ ಸರಿಹೋಗುತ್ತಿತ್ತು. ಆದರೆ ಆಧುನಿಕ ಕಾಲಕ್ಕೆ ಸರಿಬೀಳುವುದಿಲ್ಲ.

(೭) ಶ್ರೀರಾಮಕೃಷ್ಣರ ಅವತಾರ ಪ್ರಾರಂಭವಾದ ದಿನ ದಿಂದಲೇ ಸತ್ಯಯುಗ ಮೊದಲಾಗಿದೆ.

(೮) ಈ ಅವತಾರದಲ್ಲಿ ನಾಸ್ತಿಕಭಾವಗಳು ಜ್ಞಾನಖಡ್ಗದಿಂದ ಕತ್ತರಿಸಲ್ಪಡುವುವು. ಭಕ್ತಿ ಮತ್ತು ಪ್ರೇಮದಿಂದ ಪ್ರಪಂಚವೇ ಒಂದಾಗುವುದು. ಅದೂ ಅಲ್ಲದೆ ಈ ಅವತಾರದಲ್ಲಿ, ರಜಸ್ಸು ಅಂದರೆ, ಕೀರ್ತಿ ಗೌರವಗಳ ಆಸೆ ಸಂಪೂರ್ಣ ಮಾಯವಾಗಿದೆ. ಬೇರೆ ಮಾತಿ ನಲ್ಲಿ ಹೇಳುವುದಾದರೆ ಯಾರು ಅವರ ಉಪದೇಶದಂತೆ ನಡೆಯುವರೋ ಅವರು ಧನ್ಯರು. ಜನರು ಅವರನ್ನು ಒಪ್ಪಲಿ ಒಪ್ಪದಿರಲಿ ಏನೂ ಬಾಧಕವಿಲ್ಲ.

(೯) ಹಿಂದಿನ ಕಾಲದ ಅಥವಾ ಇಂದಿನ ಕಾಲದ ಬೇರೆ ಬೇರೆ ಧರ್ಮಗಳ ವ್ಯವಸ್ಥಾಪಕರು ಯಾರೂ ತಪ್ಪುಮಾಡಿಲ್ಲ. ಅದೆಲ್ಲ ಒಳ್ಳೆಯದೇ. ಆದರೆ ಉತ್ತಮತರವಾಗಬೇಕು. ಉತ್ತಮ, ಉತ್ತಮತರ, ಉತ್ತಮತಮ ನಮ್ಮ ಗುರಿ.

(೧೦) ಆದುದರಿಂದ ಎಲ್ಲರನ್ನು ಅವರು ಇಂದು ಎಲ್ಲಿರುವರೋ ಆಸ್ಥಳದಿಂದ ಮುಂದಕ್ಕೆ ಕರೆದೊಯ್ಯಬೇಕು. ಅಂದರೆ ಉತ್ತಮೋತ್ತಮ ಆದರ್ಶಗಳೆಡೆಗೆ ಅವರನ್ನು ಕರೆದುಕೊಂಡು ಹೋಗಬೇಕು. ಆದರೆ ಎಂದಿಗೂ ಅವರಿಗೆ ಇಷ್ಟವಾದ ಮನೋಭಾವದಿಂದ ಕದಲಿಸಬಾರದು. ಸಾಮಾಜಿಕ ಸ್ಥಿತಿಯ ವಿಚಾರವಾಗಿ ಈಗ ಏನಿರುವುದೋ ಅದು ಒಳ್ಳೆಯದೇ ಆಗಿದೆ. ಆದರೆ ಅವು ಇನ್ನೂ ಉತ್ತಮವಾಗಬೇಕು. ಉತ್ಕೃಷ್ಟವಾಗಬೇಕು.

(೧೧) ಮಹಿಳೆಯರ ಸ್ಥಿತಿ ಉತ್ತಮಗೊಂಡಲ್ಲದೆ ಜಗತ್ತು ಮೇಲಾಗುವುದಕ್ಕೆ ಅವಕಾಶವಿಲ್ಲ. ಹಕ್ಕಿ ಒಂದೇ ರೆಕ್ಕೆಯ ಬಲದಿಂದ ಹಾರಲಾರದು.

(೧೨) ಅದಕ್ಕೋಸ್ಕರವೇ ಶ್ರೀರಾಮಕೃಷ್ಣ ಅವತಾರದಲ್ಲಿ ಅವರು ಹೆಂಗಸನ್ನು ಗುರುವಾಗಿ ಸ್ವೀಕರಿಸಿದರು. ಅದಕ್ಕೋಸ್ಕರವೇ ಅವರು ಸ್ತ್ರೀಯರ ವೇಶದಲ್ಲಿ ಮತ್ತು ಸ್ತ್ರೀಯರ ಮನೋಭಾವದಲ್ಲಿ ದೇವರನ್ನು ಪೂಜಿಸಿದರು. ಸ್ತ್ರೀಯರ ಮಾತೃತ್ವದ ಆದರ್ಶವನ್ನು ಜಗನ್ಮಾಯಿಯ ಪ್ರತಿನಿಧಿ ಎಂದು ಅವರು ಉಪದೇಶಮಾಡಿದರು.

(೧೩) ಆದಕಾರಣ ನನ್ನ ಮೊದಲನೇ ಪ್ರಯತ್ನವೇ ಸ್ತ್ರೀಯರಿಗಾಗಿ ಒಂದು ಮಠವನ್ನು ಸ್ಥಾಪಿಸಬೇಕೆಂಬುದು. ಈ ಮಠದಿಂದ ಗಾರ್ಗಿ, ಮೈತ್ರೇಯಿಗಳಂತಹ ನಾರಿ ರತ್ನಗಳು ಹೊರಬೀಳುವುವು. ಇವರನ್ನು ಮೀರಿದವರೂ ಬರುವರು.

(೧೪) ಕಪಟದಿಂದ ಯಾವ ಮಹಾಕಾರ್ಯವನ್ನೂ ಸಾಧಿಸಲು ಆಗುವುದಿಲ್ಲ. ಪ್ರೇಮದಿಂದ, ಸತ್ಯನಿಷ್ಠೆಯಿಂದ, ಶಕ್ತಿವಿಶೇಷದಿಂದ ಎಲ್ಲಾ ಕಾರ್ಯಗಳೂ ಸಿದ್ಧಿಸುವುವು. "ತತ್ ಕುರು ಪೌರುಷಂ" ಅದಕ್ಕೋಸ್ಕರವಾಗಿಯೆ ಪುರುಷಸಿಂಹನಾಗು.

(೧೫) ಯಾರೊಂದಿಗೂ ಜಗಳಕ್ಕೆ ಅಥವಾ ವಾದಕ್ಕೆ ಅವಕಾಶವಿಲ್ಲ. ನಿಮ್ಮ ಸಂದೇಶವನ್ನು ನೀವು ಸಾರಿ. ಮಿಕ್ಕವರು ತಮ್ಮ ಮನಸ್ಸಿಗೆ ತೋರಿದಂತೆ ಮಾಡಲಿ. "ಸತ್ಯಮೇವ ಜಯತೆ ನ ಅನೃತಂ" ಸತ್ಯವೇ ಗೆಲ್ಲುವುದು. ಎಂದಿಗೂ ಅನೃತವಲ್ಲ, "ತದಾ ಕಿಂ ವಿವಾದೇನ"

ಅದಕ್ಕೋಸ್ಕರ ಏತಕ್ಕೆ ವಾದಮಾಡುವುದು . . . . . . ಗಂಭೀರ ತನದೊಂದಿಗೆ ಮಗುವಿನ ಸಹಜತನವಿರಲಿ. ಎಲ್ಲರೊಂದಿಗೂ ಸೌಹಾರ್ದ ದಿಂದ ಬಾಳು. ಅಹಂಕಾರವನ್ನು ತೊರೆ. ಯಾವ ವಿಧವಾದ ಮತಾಂಧತೆಗೂ ಎಡೆಗೊಡಬೇಡ. ಕೆಲಸಕ್ಕೆ ಬಾರದ ವಾದದಲ್ಲಿ ಕಾಲ ಕಳೆಯುವುದು ಬಹಳ ಪಾಪಕರ.

ಸ— ನಿಂದ ಬಂದ ಕಾಗದದಿಂದ ಸ— ನನ್ನನ್ನು ಜೀಸಸ್ ಮುಂತಾದವರಿಗೆ ಹೋಲಿಸಿರುವನೆಂದು ತಿಳಿದೆ. ಇಂತಹ ಸುದ್ದಿಗಳು ಇಂಡಿಯಾ ದೇಶದಲ್ಲಿ ಸಾಗಬಹುದು. ಆದರೆ ಅಂತಹ ಸುದ್ದಿಯ ಮುದ್ರಣವನ್ನು ಇಲ್ಲಿಗೆ ಕಳುಹಿಸಿದರೆ ಇಲ್ಲಿಯ ಜನರು ನನ್ನನ್ನು ಅವಮಾನಮಾಡುವ ಪ್ರಸಂಗವೂ ಬರಬಹುದು. ನಾನು ಯಾರ ನಿರಂಕುಶ ಮತಿಗೂ ಅಡ್ಡ ಬರಲು ಇಚ್ಛಿಸುವುದಿಲ್ಲ. ನಾನೇನು ಪಾದ್ರಿ ಯೇನು? ಅವನ ಲೇಖನವನ್ನು ಈ ದೇಶಕ್ಕೆ ಕಳುಹಿಸದೇ ಇದ್ದರೆ ದಯವಿಟ್ಟು ಕಳುಹಿಸಬೇಡವೆಂದು ಹೇಳು. ಅವರ ಮಾನ ಪತ್ರಬಂದು ಸಾಕು. ಏವರ ಬೇಕಾಗಿಲ್ಲ. ಈಗ ಅನೇಕ ಮಾಸ್ಟರೂ ಮತ್ತು ಮಹಿಳೆಯರೂ ಗೌರವದಿಂದ ಕಾಣುತ್ತಿರುವರು. ಪಾದ್ರಿಗಳು ಮತ್ತು ಅವರ ಗುಂಪಿಗೆ ಸೇರಿದ ಇತರರು ನನ್ನನ್ನು ಅಡಗಿಸಬೇಕೆಂದು ಸಾಧ್ಯ ವಾದಷ್ಟು ಪ್ರಯತ್ನಪಟ್ಟರು. ಆದರೆ ಅದರಿಂದ ಏನೂ ಪ್ರಯೋಜನ ವಿಲ್ಲವೆಂದು ತಿಳಿದು ಈಗ ತೆಪ್ಪಗಾಗಿರುವರು. ಎಲ್ಲಾ ಉದ್ಯಮವು ಅನೇಕ ಆತಂಕಗಳ ಮೂಲಕವೇ ಸಾಗಬೇಕು. ಶಾಂತವಾದ ಮಾರ್ಗ ವನ್ನು ಅನುಸರಿಸಿದರೆ ಸತ್ಯಕ್ಕೆ ಜಯ ಸಿಕ್ಕೇಸಿಕ್ಕುವುದು. ನನಗೆ ವಿರೋಧವಾಗಿ ಯಾರೋ ಒಬ್ಬರು ನಿಂತರೆ ಅವರಿಗೆ ಉತ್ತರ ಕೊಡುವ ಅವಶ್ಯಕತೆ ಇಲ್ಲ. ಮೊದಲನೆಯದಾಗಿ ಅದು ಅನಾವಶ್ಯಕ. ಎರಡನೆ ಯದಾಗಿ ನಾನೂ ಕೂಡ ಉತ್ತರ ಕೊಟ್ಟರೆ ಅವನ ಮಟ್ಟಕ್ಕೆ ಇಳಿ ಯುತ್ತೇನೆ. ನಿನಗೇನು ಹುಚ್ಚೋ? ನಾನು ಇಲ್ಲಿಂದ ಅವನೊಂದಿಗೆ ಜಗಳ ಕಾಯುವೆನೇನು? ದೇವರ ದಯೆಯಿಂದ ಅವನಿಗಿಂತ ಮೇಲು ತರಗತಿಯ ಜನರು ನನ್ನ ಮಾತನ್ನು ಗೌರವದಿಂದ ಕೇಳುತ್ತಿರುವರು. ದಯವಿಟ್ಟು ಯಾವ ವೃತ್ತಪತ್ರಿಕೆಯನ್ನು ಕಳುಹಿಸಬೇಡ. ಅದೆಲ್ಲ

ಇಂಡಿಯಾ ದೇಶದಲ್ಲೇ ನಡೆಯಲಿ. ಅದರಿಂದ ಏನೂ ತೊಂದರೆ ಇಲ್ಲ. ಒಂದು ಸಮಯದಲ್ಲಿ ಭಗವಂತನ ಕೆಲಸಕ್ಕೆ ಅಂತಹ ಕೋಲಾಹಲ ಬೇಕಾಗಿತ್ತು. ಅದನ್ನು ಮಾಡಿದ ಮೇಲೆ ಹೆಚ್ಚಿಗೆ ಅನಾವಶ್ಯಕ. ಒಬ್ಬನಿಗೆ ತನ್ನ ಆಪ್ತ ವಿಷಯಗಳಾವುದೂ ಇರುವುದಕ್ಕೇ ಆಗುವುದಿಲ್ಲ. ಕೀರ್ತಿ ಗೌರವಗಳೊಡನೆ ಬರುವ ಒಂದು ದೊಡ್ಡ ಕುಂದು ಇದು. ನೀನು ಯಾವುದಾದರು ಕೆಲಸವನ್ನು ಮಾಡುವ ಮೊದಲು ಶ್ರೀರಾಮ ಕೃಷ್ಣರಿಗೆ ಪ್ರಾರ್ಥಿಸು. ಅವರು ಸರಿಯಾದ ಮಾರ್ಗವನ್ನು ತೋರು ವರು. ಮೊದಲು ನಮಗೆ ಬೇಕಾಗಿರುವುದು ಒಂದು ದೊಡ್ಡ ಸ್ಥಳ. ನಂತರ ಕಟ್ಟಡ ಮುಂತಾದುವುಗಳೆಲ್ಲ ಕ್ರಮೇಣ ಬರುವುದು. ನಮ್ಮ ಮಠ ತಾನಾಗಿಯೇ ಏಳುವುದು. ಅದರ ವಿಷಯವಾಗಿ ನಿನಗೆ ಎಳ್ಳಷ್ಟೂ ಸಂದೇಹ ಬೇಡ.

ಕ—ಮತ್ತು ಉಳಿದೆಲ್ಲರೂ ಚೆನ್ನಾಗಿ ಕೆಲಸ ಮಾಡಿರುವರು. ಎಲ್ಲರಿಗೂ ನನ್ನ ಪ್ರೀತಿಯನ್ನು, ಒಳ್ಳೆಯ ಆಲೋಚನೆಗಳನ್ನು ತಿಳಿಸು. ಮದ್ರಾಸಿನ ಜನರೊಂದಿಗೆ ಎಲ್ಲರೂ ಕಲೆತು ಕೆಲಸ ಮಾಡಿ. ನಿಮ್ಮಲ್ಲಿ ಯಾರಾದರೊಬ್ಬರು ಅಲ್ಲಿಗೆ ಆಗಿಂದಾಗ್ಗೆ ಹೋಗಿಬನ್ನಿ. ಕೀರ್ತಿ ಗೌರವ ಅಧಿಕಾರಗಳ ಆಸೆಗೆ ಒಂದೇ ಸಲ ತಿಲಾ ತರ್ಪಣವನ್ನು ಕೊಡಿ. ನಾನು ಬದುಕಿರುವವರೆವಿಗೂ ಶ್ರೀರಾಮಕೃಷ್ಣರು ನನ್ನ ಮೂಲಕ ಕೆಲಸಮಾಡುತ್ತಿರುವರು. ಎಲ್ಲಿಯವರೆವಿಗೂ ನೀನು ಇದರಲ್ಲಿ ನಂಬು ವೆಯೋ ಅಲ್ಲಿಯವರೆಗೆ ನಿನಗೆ ಯಾವ ಅಪಾಯವೂ ಬರುವುದಿಲ್ಲ. ಅ—ಕಳುಹಿಸಿದ ಶ್ರೀರಾಮಕೃಷ್ಣ ಪುಂಥಿ(ಶ್ರೀರಾಮಕೃಷ್ಣರ ಪದ್ಯ ರೂಪದ ಜೀವನ ಚರಿತ್ರೆ) ಬಹಳ ಚೆನ್ನಾಗಿದೆ. ಆದರೆ ಗ್ರಂಥದ ಮೊದಲಲ್ಲಿ ಶಕ್ತಿಯ ಸ್ತುತಿ ಇಲ್ಲ. ಇದು ಒಂದು ದೊಡ್ಡ ಕಳಂಕ. ಎರಡನೇ ಆವೃತ್ತಿಯಲ್ಲಿ ಇದನ್ನು ಸರಿಪಡಿಸುವಂತೆ ಅವನಿಗೆ ಹೇಳು. ಪ್ರಪಂಚದ ಎದುರಿಗೆ ನಾವೆಲ್ಲರೂ ನಿಂತಿರುವೆವು. ನಾವು ಮಾಡುವ ಪ್ರತಿಯೊಂದು ಕೆಲಸವನ್ನು, ಆಡುವ ಪ್ರತಿಯೊಂದು ಮಾತನ್ನು ಜನರು ಗಮನಿಸುತ್ತಿರುವರು—ಎಂಬುದನ್ನು ಯಾವಾಗಲೂ ನೆನಪಿನಲ್ಲಿಡು. ಇದನ್ನು ತಿಳಿದು ಕೆಲಸ ಮಾಡಿ.

ನಮ್ಮ ಮಠಕ್ಕೆ ಬೇಕಾಗುವ ಒಂದು ಸ್ಥಳವನ್ನು ನೋಡುತ್ತಿರು. ಕಲ್ಕತ್ತೆಯಿಂದ ಸ್ವಲ್ಪ ದೂರವಾದರೂ ಚಿಂತೆಯಿಲ್ಲ. ನಾವು ಎಲ್ಲಿ ಒಂದು ಮಠವನ್ನು ಕಟ್ಟುತ್ತೇವೆಯೋ ಅಲ್ಲಿ ಒಂದು ಕೋಲಾಹಲವನ್ನು ಎಬ್ಬಿಸುತ್ತೇವೆ. ಮ—ಚಕ್ರವರ್ತಿಯ ವಿಚಾರವಾಗಿ ತಿಳಿಯಲು ಸಂತೋಷ. ಕೊನೆಗೆ ಅವರ ಮನಸ್ಸು ದೇವರ ಕಡೆಗೆ ತಿರುಗಿದೆ. ಈಗ ಗೊತ್ತಾಯಿತು.! ಅವನು ಈಗ ಎಲ್ಲಿರುವನು. ಅವನಿಗೆ ಮತ್ತು ಶ್ರೀಯುತ ವಿಜಯಕೃಷ್ಣಗೋಸ್ವಾಮಿ ಇವರುಗಳಿಗೆ ನನ್ನ ಸ್ನೇಹ ಪೂರ್ವಕ ವಂದನೆಗಳನ್ನು ತಿಳಿಸು.

ವೈರಿಯನ್ನು ಗೆಲ್ಲಬೇಕಾದರೆ ಕತ್ತಿ ಗುರಾಣಿಗಳು ಬೇಕು. ಅದಕ್ಕೋಸ್ಕರವಾಗಿಯೆ ಜೋಪಾನವಾಗಿ ಇಂಗ್ಲೀಷ್ ಮತ್ತು ಸಂಸ್ಕೃತವನ್ನು ಕಲಿತುಕೋ. ಇಂಗ್ಲೀಷ್ ಬರಬರುತ್ತ ಚೆನ್ನಾಗುತ್ತಿದೆ. ಆದರೆ ಸ—ಇಂಗ್ಲೀಷ್ ಅಧೋಗತಿಗೆ ಬರುತ್ತಿದೆ. ಸ—ಗೆ ಅವನ ಅಲಂಕಾರಿಕ ಶೈಲಿಯನ್ನು ಬಿಡುವಂತೆ ಹೇಳು. ಅನ್ಯಭಾಷೆಯಲ್ಲಿ ಅಲಂಕಾರಿಕ ಶೈಲಿಯನ್ನು ಬರೆಯುವುದು ಬಹಳ ಕಷ್ಟ. ದಯವಿಟ್ಟು ನನ್ನ ಒಂದು ಲಕ್ಷ ಶಹಬಾಸುಗಳನ್ನು ಅವನಿಗೆ ತಿಳಿಸು. ಅವನು ನಿಜವಾಗಿಯೂ ಧೀರ! ನೀವೆಲ್ಲರೂ ಚೆನ್ನಾಗಿ ಕೆಲಸ ಮಾಡಿರುವಿರಿ. ಕೆಚ್ಚೆದೆಯ ಹುಡುಗರೆ! ಆರಂಭ ಚೆನ್ನಾಗಿದೆ. ಹೀಗೆಯೆ ಮುಂದು ವರಿಯಿರಿ. ಅಸೂಯೆ ಎಂಬ ವಿಷ ಉದಯಿಸದೇ ಇದ್ದರೆ ಎಂದಿಗೂ ಭಯವಿಲ್ಲ. "ಮಾಭೈಃ" ಧೈರ್ಯ ತಾಳಿ! "ಯಾರು ನನ್ನ ಭಕ್ತರನ್ನು ಸೇವಿಸುವರೋ ಅವರೇ ನನ್ನ ಪರಮ ಭಕ್ತರು." ನಿಮ್ಮೆಲ್ಲರಲ್ಲಿಯೂ ಸ್ವಲ್ಪ ಗಾಂಭೀರ್ಯ ಭಾವವಿರಲಿ. ಸದ್ಯಕ್ಕೆ ನಾನು ಹಿಂದೂ ಧರ್ಮದ ಮೇಲೆ ಯಾವ ಪುಸ್ತಕವನ್ನು ಬರೆದಿಲ್ಲ. ಆದರೆ ನನ್ನ ಆಲೋಚನೆ ಗಳನ್ನು ಬರೆದಿಡುತ್ತಿರುವೆನು. ಪ್ರತಿಯೊಂದು ಧರ್ಮವೂ ಒಂದೇ ಸತ್ಯವನ್ನು ವ್ಯಕ್ತಪಡಿಸುವ ನಾನಾ ಭಾವಗಳು. ಪ್ರತಿ ಯೊಬ್ಬರಿಗೂ ಅವರ ಧರ್ಮದ ಮೂಲಕವೆ ಮಾತನಾಡಬೇಕು. ಸ—ಗೆ ಇದು ಗೊತ್ತಾಗಿರುವುದು ಒಳ್ಳೆಯದು. ನಂತರ ಹಿಂದೂ ಧರ್ಮದ ಕಡೆಗೆ ಗಮನ ಕೊಡುವುದಕ್ಕೆ ಸಮಯ ಬೇಕಾದಷ್ಟು ಇರುತ್ತದೆ.

ನೀನು ಹಿಂದೂ ಧರ್ಮದ ವಿಚಾರವಾಗಿ ಮಾತನಾಡಿದರೆ ಇಲ್ಲಿಯ ಜನರನ್ನು ಹೆಚ್ಚು ಆಕರ್ಷಿಸುವೆವೆಂದು ತಿಳಿದೆಯೇನು ? ಸಂಕುಚಿತ ಬುದ್ಧಿಯ ಹೆಸರನ್ನು ಕೇಳಿದರೆ ಸಾಕು. ಇಲ್ಲಿಯ ಜನರು ಓಡಿಹೋಗುವರು. ಶ್ರೀರಾಮಕೃಷ್ಣರು ಬೋಧಿಸಿದ ಧರ್ಮ ಸತ್ಯ ವಿಷಯ. ಹಿಂದೂಗಳು ಅದನ್ನು ಹಿಂದೂ ಧರ್ಮವೆಂದು ಕರೆಯಲಿ. ಉಳಿದವರು ಅದನ್ನು ಮನಸ್ಸಿಗೆ ಬಂದಂತೆ ಕರೆಯಲಿ. ಆದರೆ ನೀನು ನಿಧಾನವಾಗಿ ಮುಂದುವರಿಯಬೇಕು. "ಶನೈಃಪನ್ಥಾಃ" ಸಾವಧಾನವಾಗಿ ದಾರಿಯನ್ನು ನಡೆಯಬೇಕು. ಹೊಸದಾಗಿ ಸೇರಿದ ದ—ಗೆ ನನ್ನ ಆಶೀರ್ವಾದಗಳನ್ನು ಕೊಡು. ಬರೆಯುವುದಕ್ಕೆ ನನಗೆ ಕಾಲವೇ ಇಲ್ಲ. ಯಾವಾಗಲೂ ಉಪನ್ಯಾಸ, ಉಪನ್ಯಾಸ, ಉಪನ್ಯಾಸ. ಅಂತಃಶುದ್ಧಿ, ತಾಳ್ಮೆ, ಮರಳಿ ಯತ್ನವ ಮಾಡುವ ಛಲ ಇವು ಬೇಕು. ಈಗ ಶ್ರೀರಾಮಕೃಷ್ಣರ ಉಪದೇಶಕ್ಕೆ ಗಮನ ಕೊಡುತ್ತಿರುವ ಹಲವು ಮಂದಿಯನ್ನು ನಮಗೆ ಏನಾದರೂ ದ್ರವ್ಯ ಸಹಾಯ ಮಾಡಬೇಕೆಂದು ಕೇಳು. ಅವರು ಸಹಾಯ ಮಾಡದೆ ಇದ್ದರೆ ಮಠವನ್ನು ಹೇಗೆ ನಡೆಸುವುದು. ಇದನ್ನು ಎಲ್ಲರಿಗೂ ತಿಳಿಸುವುದಕ್ಕೆ ನೀನು ನಾಚಿಕೆಪಡಬೇಡ.

ಈ ದೇಶದಿಂದ ಅವಸರದಲ್ಲಿ ಇಂಡಿಯಾ ದೇಶಕ್ಕೆ ಹಿಂತಿರುಗುವುದರಿಂದ ಏನೂ ಪ್ರಯೋಜನವಿಲ್ಲ. ಮೊದಲನೆಯದಾಗಿ ನಾನು ಇಲ್ಲಿ ಮಾಡುವ ಪ್ರತಿಯೊಂದು ಧ್ವನಿಯೂ ಇಂಡಿಯಾ ದೇಶದಲ್ಲಿ ಹೆಚ್ಚು ಅನುರಣಿತವಾಗುತ್ತದೆ. ಅದಲ್ಲದೆ, ಇಲ್ಲಿಯ ಜನರು ಬಹಳ ಹಣವಂತರು. ಧೈರ್ಯದಿಂದ ನನಗೆ ಸಹಾಯಮಾಡುವರು. ಆದರೆ ನಮ್ಮ ದೇಶದ ಜನರಲ್ಲಾದರೋ, ಹಣವೂ ಇಲ್ಲ, ಎಳ್ಳಷ್ಟು ಧೈರ್ಯವೂ ಇಲ್ಲ.

ಕ್ರಮೇಣ ಎಲ್ಲವೂ ನಿನಗೆ ಗೊತ್ತಾಗುವುದು. ಶ್ರೀರಾಮಕೃಷ್ಣರು ಭರತಖಂಡದ ಉದ್ಧಾರಕರು ಮಾತ್ರವೇ ಅಲ್ಲ. ಈ ಕೀಳು ಭಾವನೆಯೆ ಭರತ ಖಂಡದ ಹೀನಸ್ಥಿತಿಗೆ ಕಾರಣ. ಎಲ್ಲಿಯವರೆವಿಗೂ ಇದು ನಾಶವಾಗುವುದಿಲ್ಲವೋ ಅಲ್ಲಿಯವರೆವಿಗೂ ಭರತಖಂಡದ ಕಲ್ಯಾಣಕ್ಕೆ ಅವಕಾಶವಿಲ್ಲ. ನನ್ನಲ್ಲಿ ದುಡ್ಡಿದ್ದರೆ ನಿಮ್ಮಲ್ಲಿ ಪ್ರತಿಯೊಬ್ಬರನ್ನೂ ಪ್ರಪಂಚವನ್ನು ನೋಡಿಕೊಂಡು ಬನ್ನಿ ಎಂದು ಕಳುಹಿಸುತ್ತಿದ್ದೆ. ಕೂಪ

ಮಂಡೂಕದಂತೆ ಇರುವ ಸ್ಥಿತಿಯಿಂದ ಪಾರಾದಲ್ಲದೆ ಯಾವ ಮಹಾ ಭಾವನೆಯೂ ಹೃದಯದಲ್ಲಿ ನೆಲೆಸದು. ಕಾಲಕಳೆದಂತೆ ಇದು ವ್ಯಕ್ತವಾಗುವುದು. ಎಲ್ಲಾ ಮಹತ್ ಕಾರ್ಯವೂ ನಿಧಾನವಾಗಿ ಸಾಗುವುದು. ಇದು ದೇವರ ಇಚ್ಛೆ.

ದ— ಮತ್ತು ಹ— ಇವರ ವಿಚಾರವನ್ನು ನಿಮ್ಮಲ್ಲಿ ಯಾರಾದರೂ ಒಬ್ಬರು ನನಗೆ ಏತಕ್ಕೆ ಬರೆಯಲಿಲ್ಲ. ಅವರ ವಿಚಾರವನ್ನು ನೀನು ಸ್ವಲ್ಪ ಗಮನಿಸುತ್ತಿ ಎಂದು ನನಗೆ ತಿಳಿದರೆ ಸಂತೋಷವಾಗುವುದು. ಸ— ಇನ್ನೂ ವ್ಯಸನಪಡುತ್ತಿರುವನು. ಅದಕ್ಕೆ ಅವನ ಮನಸ್ಸೇ ಕಾರಣ. ಅದಿನ್ನೂ ಗಂಗೆಯಂತೆ ಶುದ್ಧವಾಗಿಲ್ಲ. ಅದಿನ್ನೂ ನಿಸ್ವಾರ್ಥವಾಗಿಲ್ಲ. ಕಾಲಕ್ರಮೇಣ ಆಗುವುದು. ತನ್ನ ಮನಸ್ಸಿನ ವಕ್ರತನವನ್ನು ಬಿಟ್ಟು ಯಥಾರ್ಥವಾದಿಯಾದರೆ ಅವನಿಗಾವ ವ್ಯಸನವೂ ಇರುವುದಿಲ್ಲ. ನನ್ನ ಪ್ರೇಮದ ವಂದನೆಗಳನ್ನು ರ— ಮತ್ತು ಸ— ಗೆ ತಿಳಿಸು. ಅವರನ್ನು ಜೋಪಾನವಾಗಿ ನೋಡಿಕೊ, ರ— ಶ್ರೀರಾಮಕೃಷ್ಣರ ಪ್ರಿಯ ಶಿಷ್ಯನೆಂಬುದನ್ನು ಮರೆಯಬೇಡ. ಯಾವುದೂ ನಿನ್ನ ಉತ್ಸಾಹವನ್ನು ಕುಗ್ಗಿಸದೆ ಇರಲಿ. ಎಲ್ಲಿಯವರೆವಿಗೂ ದೇವರ ದಯೆ ನಮ್ಮ ಮೇಲೆ ಇರುತ್ತದೆಯೋ ಅಲ್ಲಿಯವರೆವಿಗೂ ಪ್ರಪಂಚದಲ್ಲಿ ಯಾರು ನಮ್ಮನ್ನು ಎದುರಿಸಬಲ್ಲರು! ನಿನ್ನ ಜೀವನದ ಉತ್ಕಟಸ್ಥಿತಿಯಲ್ಲಿದ್ದರೂ ಅಂಜಬೇಡ. ಕೇಸರಿಯಂತೆ ಧೀರನಾಗಿಯೂ ಪುಷ್ಪದಂತೆ ಕೋಮಲವಾಗಿಯೂ ಇದ್ದು ಕೆಲಸವನ್ನು ಮುಂದುವರಿಸು. ಈ ವರುಷ ಶ್ರೀರಾಮಕೃಷ್ಣರ ಜಯಂತ್ಯುತ್ಸವವು ಅತಿ ವಿಜೃಂಭಣೆಯಿಂದ ನೆರವೇರಲಿ. ಊಟ ಉಪಚಾರಗಳು ಸಾಧಾರಣವಾಗಿರಲಿ. ನೆರೆದ ಜನರಿಗೆ ಪ್ರಸಾದವನ್ನು ಮಣ್ಣಿನ ಬಟ್ಟಲಲ್ಲಿ ಕೈಗೆ ಕೊಟ್ಟರೆ ಸಾಕು. ಶ್ರೀರಾಮಕೃಷ್ಣರ ಜೀವನದ ಪಠಣವಾಗಬೇಕು. ವೇದ, ವೇದಾಂತ, ಮುಂತಾದ ಪುಸ್ತಕಗಳನ್ನೆಲ್ಲ ಒಟ್ಟಿಗೆ ಇಟ್ಟು ಅವುಗಳಿಗೆ ಮಂಗಳಾರತಿಮಾಡು. ಪೂರ್ವಾಚಾರದ ನಿಮಂತ್ರಣ ಪತ್ರವನ್ನು ಕಳುಹಿಸುವುದನ್ನು ನಿಲ್ಲಿಸು. "ಆಮಂತ್ರಯೇ ಭವನ್ತಂ ಸಾಶೀರ್ವಾದಂ ಭಗವತೋ ಶ್ರೀರಾಮಕೃಷ್ಣಸ್ಯ ಬಹುಮಾನಪುರಸ್ಸರಂಚ" ಭಗವಾನ್ ಶ್ರೀರಾಮಕೃಷ್ಣರ ಆಶೀರ್ವಾದ

ದಿಂದ ಗೌರವಾರ್ಥವಾಗಿ ಉತ್ಸವದಲ್ಲಿ ಭಾಗಿಯಾಗಿ ಎಂದು ನಿಮ್ಮನ್ನು ಕೋರಲು ಸಂತೋಷಿಸುತ್ತೇವೆ. ಇಂತಹ ಕೆಲವು ವಾಕ್ಯಗಳನ್ನು ಬರೆದು, ನಂತರ ಜನ್ಮೋತ್ಸವದ ಖರ್ಚಿಗೋಸುಗವಾಗಿಯೂ ಮತ್ತು ಮಠದ ಆಡಳಿತಕ್ಕೂ ಅವರ ಸಹಾಯ ಬೇಕೆಂದು ಕೇಳು. ಅವರಿಗೆ ಮನಸ್ಸು ಬಂದರೆ ಹಣವನ್ನು ದಯವಿಟ್ಟು ಇಂತಹವರಿಗೆ ಇಂತಹ ವಿಳಾಸಕ್ಕೆ ಕಳುಹಿಸಬೇಕೆಂದು ಹೇಳು. ಇಂಗ್ಲೀಷು ಭಾಷೆಯಲ್ಲೂ ಒಂದು ಪುಟವನ್ನು ಸೇರಿಸು. ಇಂಗ್ಲಭಾಷೆಯಲ್ಲಿ Lord Ramakrishna ಎಂಬುದಕ್ಕೆ ಅರ್ಥವಿಲ್ಲ. ಅದನ್ನು ಉಪಯೋಗಿಸಬೇಡ. ಭಗವಾನ್ ಎಂದು ಇಂಗ್ಲೀಷು ಪದದಲ್ಲಿ ಬರೆದು ಒಂದೆರಡು ವಾಕ್ಯಗಳನ್ನು ಮುಂದೆ ಸೇರಿಸಿ :

**The Anniversary of Bhagavan Sri Ramakrishna.**

Sir,

We have great pleasure in inviting you to join us in celebrating the—anniversary of Bhagavan Sri Ramakrishna Paramahamsa. For the celebration of this great occasion and for the maintenance of the Alambazar Math funds are absolutely necessary. If you think that the cause is worthy of your sympathy we shall be very greatful to receive your contribution to the great work.

Date                                        Yours obediently
Place                                        **Name**

ನಿಮಗೆ ಬೇಕಾದುದಕ್ಕಿಂತ ಹೆಚ್ಚು ಹಣ ಸಿಕ್ಕಿದರೆ ಸ್ವಲ್ಪವನ್ನು ಖರ್ಚುಮಾಡಿ ಉಳಿದುದನ್ನು ಮಠದ ಖರ್ಚಿಗೆ ಇಟ್ಟುಕೊಳ್ಳಿ. ದೇವರಿಗೆ ನೈವೇದ್ಯಮಾಡುವ ನೆವದಲ್ಲಿ ಎಲ್ಲರನ್ನು ಅವರಿಗೆ ಸಾಕಾಗುವತನಕ ಕಾಯಿಸಿ ನಂತರ ಆರಿದ ಅರುಚಿಯಾದ ಆಹಾರವನ್ನು ಬಡಿಸಬೇಡಿ.

ಎರಡು ಜಲಶುದ್ಧಿಯ ಪಾತ್ರೆಯನ್ನು ಮಾಡಿ, ಶೋಧಿಸಿದ ನೀರನ್ನು ಕುಡಿಯುವುದಕ್ಕೂ ಅಡಿಗೆಗೂ ಉಪಯೋಗಿಸಿ. ಶೋಧಿಸುವುದಕ್ಕೆ ಮುಂಚೆ ನೀರನ್ನು ಕುದಿಸಿ. ಇದನ್ನು ನೀವು ಮಾಡಿದರೆ ಮಲೇರಿಯ ಜ್ವರದ ಹೆಸರೇ ಇರುವುದಿಲ್ಲ.* ಎಲ್ಲರ ಆರೋಗ್ಯ ವಿಚಾರದಲ್ಲೂ ಚೆನ್ನಾಗಿ ಗಮನಕೊಡು. ನೆಲದ ಮೇಲೆ ಮಲಗುವುದನ್ನು ನೀವು ಬಿಟ್ಟರೆ, ಅಂದರೆ ಹಾಗೆ ಮಲಗದೆ ಇರುವುದಕ್ಕೆ ಬೇಕಾದಷ್ಟು ದುಡ್ಡು ಸಿಕ್ಕಿದರೆ, ಬಹಳ ಒಳ್ಳೆಯದು. ಕೊಳೆಯ ಬಟ್ಟೆಗಳು ಖಾಯಿಲೆಗೆ ಮುಖ್ಯ ಕಾರಣ. ನೈವೇದ್ಯಕ್ಕೆ ಸ್ವಲ್ಪ ಪಾಯಸವೇ ಸಾಕು. ಅವರು ಅದೊಂದನ್ನೇ ಪ್ರೀತಿಸುತ್ತಿದ್ದರು. ದೇವರ ಮನೆ ಅನೇಕರಿಗೆ ಸಹಾಯ ಮಾಡುವುದೆಂಬುದೇನೋ ನಿಜ. ಆದರೆ ರಾಜಸಿಕ ಮತ್ತು ತಾಮಸಿಕ ಆಹಾರವನ್ನು ತೆಗೆದುಕೊಳ್ಳಬೇಡಿ. ಬಾಹ್ಯ ಪೂಜಾವಿಧಿಗಳು ಸ್ವಲ್ಪ ಕಡಿಮೆಯಾಗಿ ಗೀತಾ, ಉಪನಿಷತ್, ಅಧ್ಯಯನಗಳು ಅವುಗಳ ಸ್ಥಾನವನ್ನು ಆಕ್ರಮಿಸಲಿ. ಸಾಧ್ಯವಾದಷ್ಟು ಕಡಿಮೆ ಬಾಹ್ಯಾಡಂಬರವಿದ್ದು ಸಾಧ್ಯವಾದಷ್ಟು ಅಧಿಕವಾಗಿ ಆಧ್ಯಾತ್ಮಿಕತೆ ಇರಲಿ. ಶ್ರೀರಾಮಕೃಷ್ಣರು ಯಾರಾದರೊಬ್ಬರ ಉದ್ಧಾರಕ್ಕೆ ಬಂದರೇನು? ಅಥವಾ ಇಡೀ ವಿಶ್ವದ ಉದ್ಧಾರಕ್ಕೆ ಬಂದರೋ? ಅವರು ಜಗದ ಹಿತಕ್ಕೋಸುಗ ಬಂದಿದ್ದರೆ, ಅವರನ್ನು ವಿಶ್ವವೇ ಮೆಚ್ಚುವಂತೆ ಜನರಿಗೆ ತಿಳಿಯಪಡಿಸಬೇಕು. ಯಾರಾರಿಂದಲೋ ಬರೆದ ಅವರ ಜೀವನ ಚರಿತ್ರೆಯನ್ನು ನೀನು ಒಪ್ಪಬೇಡ. ಅಥವಾ ಬೇರೊಂದಕ್ಕೆ ನಿನ್ನ ಮೆಚ್ಚುಗೆಯನ್ನೂ ಕೊಡಬೇಡ. ನಮ್ಮ ಹೆಸರಿನ ಸಂಬಂಧವಿಲ್ಲದೆ ಜೀವನ ಚರಿತ್ರೆ ಒಂದರೆ ಅದರಿಂದ ಏನೂ ದೋಷವಿಲ್ಲ. ಯಾರು ಏನು ಹೇಳಿದರೂ ಹೌದು, ಹೌದು, ಎಂದು ಹೇಳಿ, ನೀನು ನಿರ್ಧಾರಕ್ಕೆ ಒಂದುದಕ್ಕೆ ಮಾತ್ರ ಮನಸ್ಸನ್ನು ಕೊಡು. ನಮಗೆ ಬಹಳ ದಯೆಯಿಂದ ಸಹಾಯ ಮಾಡಿದ ಮ—ಗೆ ಅನೇಕ ವಂದನೆಗಳು. ಬಹಳ ಉದಾರಿ ಅವನು. ಇನ್ನು—ಅವನ ವಿಚಾರ

* ಆದರೆ ಇಂದು ಮಲೇರಿಯ ಜ್ವರದ ತತ್ತ್ವವು ಬದಲಾಯಿಸಿದೆ. ಅದು ಬರುವುದು ಅನಾಫಲಿ ಎಂಬ ಒಂದು ಜಾತಿಯ ಸೊಳ್ಳೆಯಿಂದಲೇ ಹೊರತು ನೀರಿನಿಂದಲ್ಲ. (ಭಾಷಾಂತರಕಾರರು)

ವಾಗಿ—ಅವನು ಶ್ರೀರಾಮಕೃಷ್ಣರ ಶಿಷ್ಯರನ್ನು ಸೇವಿಸುವುದರಿಂದ ಪರಮ ಪದವನ್ನು ಪಡೆಯುತ್ತಾನೆ. ತ— ಒಳ್ಳೆಯ ಕೆಲಸವನ್ನು ಮಾಡುತ್ತಿರುವನು. ಶಹಭಾಸ್ ! ಚೆನ್ನಾಗಿ ಮಾಡಿದನು. ನಮಗೆ ಅದೇ ಬೇಕಾಗಿರುವುದು. ನೀವುಗಳೆಲ್ಲರೂ ಇನ್ನೊಂದು ಉಲ್ಕಾಪಾತದಂತೆ ಮೇಲೇಳುವುದನ್ನು ನೋಡಬಯಸುತ್ತೇನೆ. ಜ— ಏನುಮಾಡುತ್ತಿರುವನು? ರಾಜಪುತ್ರಸ್ಥಾನದಲ್ಲಿ ಕೆಲವು ಜಮೀನ್‌ದಾರರು ಅವನನ್ನು ಗೌರವಿಸುವರು. ಅವರಿಂದ ಸ್ವಲ್ಪ ಹಣವನ್ನು ವಸೂಲಿ ಮಾಡುವಂತೆ ಹೇಳು. ಆಗ ಅವನು ಧೀರ.

ಈಗತಾನೆ ನಾನು ಅ—ನ ಪುಸ್ತಕವನ್ನು ಓದಿದೆನು. ನನ್ನ ಒಂದು ಲಕ್ಷ ಪ್ರೇಮಾಲಿಂಗನಗಳನ್ನು ಅವನಿಗೆ ಕೊಡು. ಅವನ ಲೇಖನಿಯ ಮೂಲಕ ಶ್ರೀರಾಮಕೃಷ್ಣರು ತಾವೇ ಆವಿರ್ಭವಿಸುತ್ತಿರುವರು. ಧನ್ಯ ! ಶ್ರೀರಾಮಕೃಷ್ಣ ಪುಂಥಿಯನ್ನು ಎಲ್ಲರ ಮುಂದೆಯೂ ಓದಿ ಹೇಳಲಿ. ಉತ್ಸವದಲ್ಲಿ ಎಲ್ಲರೆದುರಿಗೂ ಅವನು ಅದನ್ನು ಓದಬೇಕು. ಒಟ್ಟು ಗ್ರಂಥ ಬಹಳ ವಿಶಾಲವಾದರೆ ಕೆಲವು ಭಾಗಗಳನ್ನು ಓದಲಿ. ಅದರಲ್ಲಿ ಒಂದಾದರೂ ಕೆಲಸಕ್ಕೆ ಬಾರದ ಪದವಿಲ್ಲ. ಅವನ ಪುಸ್ತಕವನ್ನು ಓದಿ ಅನುಭವಿಸಿದ ಆನಂದವನ್ನು ನಾನು ಮಾತಿನಲ್ಲಿ ವರ್ಣಿಸಲಾರೆ. ಪುಸ್ತಕವನ್ನು ಹೆಚ್ಚಾಗಿ ಮಾರಾಟ ಮಾಡುವುದಕ್ಕೆ ನೀವುಗಳೆಲ್ಲ ಸಹಾಯಮಾಡಿ. ಅ—ಗೆ ಗ್ರಾಮದಿಂದ ಗ್ರಾಮಕ್ಕೆ ಅದನ್ನು ಬೋಧಿಸುವುದಕ್ಕೆ ಹೋಗುವಂತೆ ಹೇಳು. ಅ— ನೀನು ಒಳ್ಳೆಯ ಕೆಲಸಮಾಡಿದೆ!—ಅವನು ಅವನ ಕೆಲಸವನ್ನು ಮಾಡುತ್ತಿರುವನು. ಗ್ರಾಮದಿಂದ ಗ್ರಾಮಕ್ಕೆ ಹೋಗಿ ಶ್ರೀರಾಮಕೃಷ್ಣರ ಉಪದೇಶವನ್ನು ಎಲ್ಲರಿಗೂ ತಿಳಿಸು. ಇದಕ್ಕಿಂತ ಪರಮಭಾಗ್ಯವಿರುವುದೆ? ಅ—ನ ಪುಸ್ತಕ ಮತ್ತು ಅ— ಇವರುಗಳು ಜನಸಮುದಾಯದಲ್ಲಿ ಒಂದು ಕ್ರಾಂತಿಯನ್ನು ಎಬ್ಬಿಸಬೇಕೆಂದು ನಾನು ನಿನಗೆ ಹೇಳುತ್ತೇನೆ. ನನ್ನ ಪ್ರಿಯ ಸಹೋದರನೆ ! ಪ್ರಿಯ ಅ— ! ನಿನ್ನನ್ನು ಮನಃಪೂರ್ವಕವಾಗಿ ಆಶೀರ್ವದಿಸುವೆನು. ಜಗದೀಶನು ನಿನ್ನ ನಾಲಗೆಯ ಮೇಲೆ ನೆಲೆಸಲಿ ! ಹೋಗು ಮನೆಯಿಂದ ಮನೆಗೆ. ಅವರ ಉಪದೇಶ

ವನ್ನು ಹರಡು. ನೀನು ಸನ್ಯಾಸಿಯಾಗುವ ಆವಶ್ಯಕತೆಯೇ ಇಲ್ಲ. ಅ— ಬಂಗಾಳಿ ಜನರ ಮುಂದಿನ ಧರ್ಮಪ್ರಚಾರ ಮುಖಂಡ. ಅ—ನನ್ನು ಬಹಳ ವಿಶ್ವಾಸದಿಂದ ನೋಡಿಕೊ. ಅವನ ಶ್ರದ್ಧಾ ಭಕ್ತಿಗಳು ಫಲಿಸಿರುವುವು.

ಅ—ಗೆ ಅವನ ಪುಸ್ತಕದ ಮೂರನೆ ಭಾಗದ "ಧರ್ಮಪ್ರಚಾರದಲ್ಲಿ" ಕೆಲವು ಕೆಳಗೆ ಕಂಡ ವಿಚಾರಗಳನ್ನು ಸೇರಿಸಬೇಕೆಂದು ಹೇಳು:—

(೧) ವೇದ ವೇದಾಂತಗಳು ಉಳಿದ ಅವತಾರಗಳು ಯಾವುದನ್ನು ಹಿಂದೆ ಬೋಧಿಸಿದ್ದವೋ, ಅವುಗಳೆಲ್ಲವನ್ನು ತಮ್ಮ ಒಂದೇ ಜೀವನದಲ್ಲಿ ಶ್ರೀರಾಮಕೃಷ್ಣರು ಅನುಷ್ಠಾನಕ್ಕೆ ತಂದರು.

(೨) ಇವರ ಜೀವನವನ್ನು ತಿಳಿದುಕೊಳ್ಳದೆ ವೇದ, ವೇದಾಂತ ಮತ್ತು ಅವತಾರಗಳನ್ನು ತಿಳಿದುಕೊಳ್ಳಲಾಗುವುದಿಲ್ಲ. ಯಾತಕ್ಕೆಂದರೆ ಇವರ ಜೀವನವೇ ಅದಕ್ಕೆ ಉದಾಹರಣೆಯಾಗಿದೆ.

(೩) ಅವರು ಜನ್ಮಧಾರಣೆಮಾಡಿದ ದಿನದಿಂದಲೇ ಸತ್ಯಯುಗ ಪ್ರಾರಂಭವಾಯಿತು. ಇನ್ನುಮೇಲೆ ಎಲ್ಲಾ ವಿಧವಾದ ಭೇದ ಭಾವಗಳೂ ಕೊನೆಗಾಣುವುವು. ಚಂಡಾಲನಿಂದ ಹಿಡಿದು ಎಲ್ಲರೂ ಅವರ ಪ್ರೀತಿಗೆ ಪಾತ್ರರಾಗುವರು. ಗಂಡಸು ಹೆಂಗಸು, ಶ್ರೀಮಂತ ಬಡವ, ವಿದ್ಯಾವಂತ ನಿರಕ್ಷರಕುಕ್ಷಿ, ಬ್ರಾಹ್ಮಣ ಮತ್ತು ಚಂಡಾಲ ಇವುಗಳ ಭೇದಭಾವವನ್ನು ಖಂಡಿಸುವುದಕ್ಕೆ ಅವರು ಜೀವಿಸಿದರು. ಶಾಂತಿಯನ್ನು ಹರಡುವ ದೇವದೂತರವರು. ಹಿಂದೂಗಳಿಗೂ ಮಹಮ್ಮದೀಯರಿಗೂ, ಹಿಂದೂಗಳಿಗೂ ಕ್ರೈಸ್ತರಿಗೂ ಇರುವ ಭೇದಗಳೆಲ್ಲಾ ಕಳೆದ ಕಾಲಕ್ಕೆ ಸಂಬಂಧಿಸಿದ್ದು, ಅನ್ಯೋನ್ಯ ಮತಕಲಹ ಗತಯುಗದ ಮಾತು. ಈ ಸತ್ಯಯುಗದಲ್ಲಿ ಶ್ರೀರಾಮಕೃಷ್ಣರೆಂಬ ಮಹಾಪ್ರವಾಹವು ಎಲ್ಲರನ್ನು ಒಂದೇ ಸಮನಾಗಿ ಮಾಡಿರುವುದು.

ಈ ಅಭಿಪ್ರಾಯಗಳನ್ನು ವಿಶದಪಡಿಸಿ ತನ್ನದೇ ಶೈಲಿಯಲ್ಲಿ ಬರೆಯುವಂತೆ ಹೇಳು.

ಪುರುಷರಾದರೂ ಆಗಲಿ, ಸ್ತ್ರೀಯರಾದರೂ ಆಗಲಿ, ಯಾರು ಶ್ರೀರಾಮಕೃಷ್ಣರನ್ನು ಪೂಜಿಸುತ್ತಾರೊ, ಅವನು ಅಥವಾ ಅವಳು

ಎಷ್ಟು ಹೀನಸ್ಥಿತಿಯಲ್ಲಿದ್ದರೂ, ಆಕ್ಷಣವೇ ಪರಮೋತ್ಕೃಷ್ಟರಾಗುವರು. ಈ ಅವತಾರದಲ್ಲಿ ಮತ್ತೊಂದು ವಿಶೇಷ: ಅದು ದೇವರ ಜಗನ್ಮಾಯಿಯ ಭಾವ. ಅವರು ಹೆಂಗಸಿನಂತೆ ವೇಷ ಹಾಕಿಕೊಳ್ಳುತ್ತಿದ್ದರು. ಅವರು ತಾಯಿಯಂತೆ ಇದ್ದರು. ನಾವುಗಳೆಲ್ಲರೂ ಸ್ತ್ರೀಯರೆಲ್ಲರನ್ನೂ ಜಗನ್ಮಾಯಿಯ ಪ್ರತಿಬಿಂಬದಂತೆ ಕಾಣಬೇಕು. ಭರತಖಂಡದಲ್ಲಿ ಎರಡು ದೊಡ್ಡ ಕೇಡುಗಳಿವೆ. ಹೆಂಗಸರನ್ನು ಪೀಡಿಸುವುದು, ಮತ್ತು ಬಡವರನ್ನು ಜಾತಿ ಬಂಧನಗಳಿಂದ ಹಿಂಸಿಸುವುದು. ಅವರು ಸ್ತ್ರೀಯರ ಉದ್ಧಾರಕರು. ಸಾಮಾನ್ಯ ಜನರ ಉದ್ಧಾರಕರು. ಉಚ್ಚ ನೀಚರೆಲ್ಲರ ಉದ್ಧಾರಕರು, ಅ— ಇವರ ಪೂಜೆಯನ್ನು ಪ್ರತಿಯೊಂದು ಮನೆಯಲ್ಲೂ ಪ್ರಚಾರಕ್ಕೆ ತರಲಿ. ಬ್ರಾಹ್ಮಣನಾಗಲೀ, ಚಂಡಾಲನಾಗಲೀ, ಗಂಡಸಾಗಲೀ ಹೆಂಗಸಾಗಲೀ ಪ್ರತಿಯೊಬ್ಬರಿಗೂ ಅವರನ್ನು ಪೂಜಿಸುವ ಅಧಿಕಾರವಿದೆ. ಕೇವಲ ಭಕ್ತಿಯಿಂದಲೇ ಯಾರು ಅವರನ್ನು ಪ್ರೀತಿಸುವರೋ ಅವರು ಎಂದೆಂದಿಗೂ ಧನ್ಯರಾಗುವರು.

ಈ ರೀತಿಯಲ್ಲಿ ಅವನಿಗೆ ಬರೆಯುವಂತೆ ಹೇಳು. ಮತ್ತಾವುದನ್ನೂ ಲೆಕ್ಕಿಸದಿರಲಿ. ದೇವರು ಅವನಕಡೆ ಇರುವನು.

ನಿನ್ನ ವಿಶ್ವಾಸ ಪೂರ್ವಕ,
ವಿವೇಕಾನಂದ.

ಪಿ. ಸೂ.—ನಾರದ ಭಕ್ತಿ ಸೂತ್ರ, ಶಾಂಡಿಲ್ಯ ಸೂತ್ರ, ಕಲ್ಕತ್ತೆಯಲ್ಲಿ ಭಾಷಾಂತರ ಮಾಡಿದ ಯೋಗವಾಶಿಷ್ಠರಾಮಾಯಣ, ಇವುಗಳನ್ನು ಕಳುಹಿಸುವಂತೆ ಸ—ಗೆ ಹೇಳು. ನನಗೆ ಕೊನೆಯದರ ಇಂಗ್ಲೀಷ್ ಭಾಷಾಂತರಬೇಕು; ಬಂಗಾಳಿ ಭಾಷೆಯದಲ್ಲ

೭೬

೧೮೯೫.

ನಾನು ಭರತಖಂಡಕ್ಕೆ ಹಿಂದಿರುಗಬೇಕೆಂಬ ನಿಮ್ಮ ಸಲಹೆಯೇನೋ ಸೂಕ್ತವೇ ಆಗಿದೆ. ಆದರೆ ಈ ದೇಶದಲ್ಲಿ ಬೀಜವನ್ನು

ಹಾಕಿದೆ. ತಕ್ಷಣವೇ ನಾನು ಹೊರಟು ಬಂದರೆ ಮೊಳಕೆಯಲ್ಲಿ ಕತ್ತರಿಸಿದಂತೆ ಆಗುತ್ತದೆ. ಅದಕ್ಕೋಸ್ಕರವಾಗಿಯೇ ನಾನು ಸ್ವಲ್ಪಕಾಲ ತಾಳಬೇಕು. ಅದೂ ಅಲ್ಲದೆ ಇಲ್ಲಿಂದಲೇ ಎಲ್ಲವನ್ನು ಚೆನ್ನಾಗಿ ನೋಡಿಕೊಳ್ಳುವುದು ಸಾಧ್ಯ. ಪ್ರತಿಯೊಬ್ಬರು ನನ್ನನ್ನು ಭರತಖಂಡಕ್ಕೆ ಹಿಂತಿರುಗಿ ಎಂದು ಕೋರುತ್ತಾರೆ. ಅದೇನೋ ಸರಿಯೆ. ಆದರೆ ಇನ್ನೊಬ್ಬರನ್ನು ನೆಚ್ಚುವುದು ಸರಿಯೆ, ನೀವೇ ನೋಡಿ. ಬುದ್ಧಿವಂತ ತನ್ನ ಕಾಲ ಮೇಲೆ ತಾನು ಭದ್ರವಾಗಿ ನಿಂತುಕೊಂಡು ಕೆಲಸಮಾಡಬೇಕು. ಎಲ್ಲವೂ ನಿಧಾನವಾಗಿ ಬರುವುದು. ಸದ್ಯಕ್ಕೆ ಮಠ ಕಟ್ಟುವುದಕ್ಕೆ ಸ್ಥಳವನ್ನು ನೋಡುತ್ತಿರು. ಹತ್ತರಿಂದ ಇಪ್ಪತ್ತುಸಾವಿರ ರೂಪಾಯಿಗಳ ಒಳಗೆ ಇರುವ ವಿಶಾಲವಾದ ಸ್ಥಳ ಬೇಕಾಗಿದೆ. ಅದು ಗಂಗಾನದಿಯ ತೀರದ ಮೇಲಿರಬೇಕು. ನನ್ನ ಬಂಡವಾಳ ಕಡಿಮೆಯಾದರೂ ಬಹಳ ಎದೆಗಾರ ನಾನು. ಜಾಗವನ್ನು ಕೊಳ್ಳುವುದನ್ನು ಗಮನಿಸು. ಸದ್ಯದಲ್ಲಿ ನಾವು ಮೂರು ಕೇಂದ್ರವನ್ನು ನಡೆಸಬೇಕಾಗಿದೆ. ಒಂದು ನ್ಯೂಯಾರ್ಕಿನಲ್ಲಿ, ಒಂದು ಕಲ್ಕತ್ತೆಯಲ್ಲಿ, ಒಂದು ಮದ್ರಾಸಿನಲ್ಲಿ. ನಂತರ ದೇವರ ಇಚ್ಛೆಯಂತೆ ಉಳಿದವುಗಳು. ಆರೋಗ್ಯದ ವಿಚಾರಕ್ಕೆ ಸಂಪೂರ್ಣ ಗಮನ ಕೊಡು. ಉಳಿದವುಗಳಾವುವೂ ಅಷ್ಟು ಮುಖ್ಯವಾಗಿರಬೇಕಾಗಿಲ್ಲ.

—ಅವನಿಗೆ ಪ್ರಯಾಣಮಾಡುವುದರಲ್ಲಿ ತುಂಬ ಆಸೆ. ಹೌದು ಅದೇನೋ ಒಳ್ಳೆಯದೆ. ಆದರೆ ಇದು ಬಹಳ ಖರ್ಚಿನ ದೇಶ. ಒಬ್ಬ ಧರ್ಮಬೋಧಕನಿಗೆ ಕನಿಷ್ಟ ಪಕ್ಷ ಎಂದರೆ ಒಂದು ಸಾವಿರ ರೂಪಾಯಿಗಳು ಬೇಕಾಗುವುದು. ಆದರೆ ಅವನಲ್ಲಿ ಧೈರ್ಯವಿದೆ. ಎಲ್ಲವನ್ನು ಒದಗಿಸುವವನು ದೇವರು. ಅದೇನೋ ನಿಜ. ಆದರೆ ಅವನು ತನ್ನ ಆಂಗ್ಲ ಭಾಷೆಯನ್ನು ಉತ್ತಮಪಡಿಸಿಕೊಳ್ಳಬೇಕು. ಯಾಕೆಂದರೆ ಪಂಡಿತ ಪಾದ್ರಿಗಳ ಬಾಯಿನಿಂದ ನಮ್ಮ ಆಹಾರವನ್ನು ಕಿತ್ತುಕೊಳ್ಳಬೇಕಾಗಿದೆ ನಾವು ಪಾಂಡಿತ್ಯದಿಂದ ಇವರ ಮೇಲೆ ಪ್ರಭಾವವನ್ನು ಬೀರಬೇಕು. ಇಲ್ಲದೇ ಇದ್ದರೆ ಅವರು ಒಂದುಸಲ ಉಸಿರುಬಿಟ್ಟರೆ, ಹಾರಿಹೋಗುವನು. ಅವರು ಸಾಧುಗಳನ್ನು, ನಿಮ್ಮ ಸನ್ಯಾಸಿಗಳನ್ನು ಅಥವಾ ತ್ಯಾಗಬುದ್ಧಿಯುಳ್ಳವರನ್ನು ಅಷ್ಟು ಮೆಚ್ಚುವವರಲ್ಲ, ಅವರಿಗೆ ಗೊತ್ತಾಗುವುದ

ನೆಂದರೆ, ಪಾಂಡಿತ್ಯಾದಿ ಪ್ರಾವೀಣ್ಯತೆ, ವಾಚಾಳಿತನ ಮತ್ತು ಕರ್ತವ್ಯ ನಿಷ್ಟೆ. ಇವೆಲ್ಲ ಇದ್ದರೂ ಇಡೀ ದೇಶವೇ ನಿನ್ನಲ್ಲಿ ತಪ್ಪು ಕಂಡುಹಿಡಿಯಲು ಪ್ರಯತ್ನ ಪಡುವುದು. ಹಗಲು ರಾತ್ರಿ ಪಾದ್ರಿ ಬಲವಂತದಿಂದಲೋ ಅಥವಾ ಮೋಸದಿಂದಲೋ ನಿನಗೆ ಕಿರುಕುಳ ಕೊಡಲು ಪ್ರಯತ್ನಿಸುವನು. ಇವೆಲ್ಲ ನಿಮ್ಮ ಸಿದ್ಧಾಂತಗಳನ್ನು ಉಪದೇಶ ಮಾಡುವುದಕ್ಕೆ ಇರುವ ತೊಡಕುಗಳು. ಇದರಿಂದ ಪಾರಾಗಬೇಕು. ಜಗನ್ಮಾಯಿಯ ದಯೆಯಿಂದ ಇವುಗಳೆಲ್ಲವೂ ಸಾಧ್ಯವಾಗುವುವು. ಆದರೆ ನನ್ನ ದೃಷ್ಟಿಯಲ್ಲಿ—ಅವನು ಬೊಂಬಾಯಿ ಮದ್ರಾಸಿನಲ್ಲಿ ಸಂಘಗಳನ್ನು ಸ್ಥಾಪಿಸುತ್ತಾ ಹೋಗಲಿ. ನೀವು ಅದನ್ನೆಲ್ಲ ವ್ಯವಸ್ಥೆಯಲ್ಲಿಟ್ಟಿರಿ. ಅದು ಅತ್ಯಂತ ಉತ್ತಮವಾದ ಕೆಲಸ. ಒಂದು ಹೊಸ ಮಾರ್ಗವನ್ನು ಕಂಡು ಹಿಡಿಯುವುದೇನೋ ಒಳ್ಳೆಯದೆ ಹೌದು. ಆದರೆ ಇರುವ ಮಾರ್ಗವನ್ನು ಶುದ್ಧಿಮಾಡಿ ಚೆನ್ನಾಗಿ ವಿಶಾಲವಾಗಿ ಮಾಡುವುದೂ ಕೂಡ ಅಷ್ಟೇ ಕಠಿಣವಾದ ಕೆಲಸ. ನಮ್ಮ ಗುರುದೇವನ ಉಪದೇಶವನ್ನು ಬಿತ್ತಿದ ಕಡೆ ನೀನು ಸ್ವಲ್ಪ ದಿನಗಳು ಇದ್ದು ಆ ಬೀಜವನ್ನು ಸಸಿಯನ್ನಾಗಿ ಮಾಡಿದರೆ ನನಗಿಂತ ಹೆಚ್ಚು ಕೆಲಸವನ್ನು ನೀನು ಮಾಡುವಿ. ಆಗಲೇ ಸಿದ್ಧವಾದ ಕೆಲವು ಕೇಂದ್ರಗಳನ್ನು ನೋಡಿಕೊಳ್ಳುವುದಕ್ಕೇ ಆಗದವರು, ಇನ್ನು ಮುಂದೆ ಹೊಸದಾಗಿ ಬರುವುದನ್ನು ಹೇಗೆ ನೋಡಿಕೊಂಡಾರು ?

ಆಗಲೇ ಮಾಡಿದ ಅಡಿಗೆಗೆ ನೀನು ಸ್ವಲ್ಪ ಉಪ್ಪನ್ನು ಬೆರಸಲು ಸಾಧ್ಯವಿಲ್ಲದೆ ಇದ್ದರೆ, ಪದಾರ್ಥವೆಲ್ಲವನ್ನೂ ತಂದು ನೀನೇ ಸ್ವಂತ ಅಡಿಗೆ ಮಾಡುವಿ ಎಂದು ಹೇಗೆ ನಂಬುವುದು.—ಅವನು ಇದರ ಬದಲು ಆಲ್ಮೋರಾದಲ್ಲಿ ಒಂದು ಹಿಮಾಲಯದ ಮಠವನ್ನು ಸ್ಥಾಪಿಸಲಿ. ಅಲ್ಲಿ ಒಂದು ಪುಸ್ತಕ ಭಂಡಾರವನ್ನು ಶೇಖರಿಸಲಿ. ನಮಗೆ ವಿರಾಮವಾದಾಗ ಕೆಲವು ಕಾಲ ತಂಪಾಗಿರುವ ಕಡೆಯಲ್ಲಿ ಆಧ್ಯಾತ್ಮಿಕ ಸಾಧನೆಗಳಲ್ಲಿ ಕಳೆಯೋಣ. ಹೇಗಾದರೂ ಆಗಲಿ ನಿಮ್ಮಲ್ಲಿ ಯಾರಾದರೂ ಯಾವದೇ ಮಾರ್ಗವನ್ನು ಅನುಸರಿಸಿದರೂ, ನಾನು ವಿರೋಧಿಸುವುದಿಲ್ಲ. "ಶಿವಾಃ ಸನ್ತು ಪನ್ಥಾನಃ" ನಿಮ್ಮ ಪ್ರಯಾಣ ಯಶಸ್ವಿಯಾಗಲಿ, ಎನ್ನುವುದೇ

ನನ್ನ ಹಾರೈಕೆ. ಅವನಿಗೆ ಸ್ವಲ್ಪ ತಾಳುವಂತೆ ಹೇಳು. ಅವಸರದಿಂದ ಪ್ರಯೋಜನವೇನು? ನೀವೆಲ್ಲರೂ ಪ್ರಪಂಚವನ್ನು ಸುತ್ತುವಿರಿ. ಧೈರ್ಯವಿರಲಿ! ಅವನಿಗೆ ಕೆಲಸದಲ್ಲಿ ಬಹಳ ಶಕ್ತಿ ಇದೆ. ಆದುದರಿಂದಲೇ ಅವನಿಂದ ಹೆಚ್ಚು ಕೆಲಸವನ್ನು ಎದುರು ನೋಡುತ್ತೇನೆ. ಶ್ರೀರಾಮಕೃಷ್ಣರ ಕಾಲಾನಂತರ ಎಲ್ಲರೂ ನಮ್ಮನ್ನು ಕೆಲಸಕ್ಕೆ ಬಾರದ ದರಿದ್ರ ಹುಡುಗರೆಂದು ಕೈಬಿಟ್ಟರು. ನಿನಗೆ ಅದು ಬಹುಶಃ ಜ್ಞಾಪಕದಲ್ಲಿರುವುದೆಂದು ಊಹಿಸುತ್ತೇನೆ. ಆಪತ್ತಿನ ಸಮಯದಲ್ಲಿ—ಅಂತಹವರು ಮಾತ್ರ ನಮಗೆ ಸ್ನೇಹಿತರಾಗಿದ್ದರು. ಅವರ ಋಣವನ್ನು ನಾವು ಎಂದಿಗೂ ತೀರಿಸುವುದಕ್ಕೆ ಆಗುವುದಿಲ್ಲ. —ಅವನಿಗೆ ಗೋಪ್ಯವಾಗಿ ಯಾರಿಗೂ ಅಂಜಬೇಡವೆಂದು ಹೇಳು. ಯಾರು ದೇವರ ಸಂರಕ್ಷಣೆಗೆ ಒಳಪಟ್ಟಿರುವರೋ ಅವರು ಅಂಜಿಕೆಯಿಂದ ದೂರವಿರಬೇಕು. ನಾನು ಅಲ್ಪಜೀವಿಯಾಗಿರಬಹುದು. ಆದರೆ ಭಗವಂತನ ಮಹಿಮೆಗೆ ಪಾರವಿಲ್ಲ. "ಮಾಭೈಃ ಮಾಭೈಃ" ಧೀರನಾಗು. ಅಂಜಿಕೆಯನ್ನು ಹೊರದೂಡು. ನಿನ್ನ ಭಕ್ತಿ ಅಚಲವಾಗಿರಲಿ. ಭಗವಂತನು ಯಾರನ್ನು ತನ್ನ ರಕ್ಷಣೆಗೆ ತೆಗೆದುಕೊಂಡಿರುವನೋ ಅಂತಹವನನ್ನು ಅಪಾಯವೇನು ಮಾಡೀತು.

ಅನವರತವೂ ನಿನ್ನ
ವಿವೇಕಾನಂದ.

೬೭

೧೮೯೫.

ಪ್ರಿಯ ಅ—,

ನಮಗೆ ಯಾವ ಸಂಸ್ಥೆಯೂ ಇಲ್ಲ. ಯಾವುದನ್ನು ಸ್ಥಾಪಿಸಬೇಕೆಂತಲೂ ಇಲ್ಲ. ಬೋಧಿಸುವುದಕ್ಕೆ ಸರ್ವರೂ ಸ್ವಾತಂತ್ರರು. ಅವನಿಗೆ ಅಥವಾ ಅವಳಿಗೆ ಏನು ತೋಚುತ್ತದೆಯೋ ಅದನ್ನು ಇತರರಿಗೆ ಬೋಧಿಸಬಹುದು.

ನಿಜವಾಗಿಯೂ ನಿನ್ನ ಅಂತರಂಗದಲ್ಲಿ ಶಕ್ತಿ ಇದ್ದರೆ ಮತ್ತೊಬ್ಬರನ್ನು ನಿನ್ನೆಡೆಗೆ ಆಕರ್ಷಿಸುವುದರಲ್ಲಿ ಎಂದೂ ಸೋಲುವುದಿಲ್ಲ. ಅವರ

ರೀತಿ ನಮಗೆ ಎಂದಿಗೂ ಆಗುವುದಿಲ್ಲ. ಯಾಕೆಂದರೆ ಅವರು ಒಂದು ಸಂಸ್ಥೆ ಗೂಂಡ ಪಂಗಡ. ನಾವು ಹಾಗೆ ಆಗಿಲ್ಲ.

ವ್ಯಕ್ತಿತ್ವವೇ ನನ್ನ ಗುರಿ. ವ್ಯಕ್ತಿಗಳನ್ನು ತರಬೇತುಮಾಡುವುದಕ್ಕಿಂತ ಹೆಚ್ಚು ನನಗೆ ಅಭಿಲಾಷೆಯಿಲ್ಲ. ನನಗೆ ಗೊತ್ತಿರುವುದು ಬಹಳ ಸ್ವಲ್ಪ. ಆ ಸ್ವಲ್ಪವನ್ನು ಸ್ವಲ್ಪವೂ ಮುಚ್ಚುಮರೆ ಇಲ್ಲದೆ ಹೇಳುತ್ತೇನೆ. ನನಗೆ ಯಾವುದು ಗೊತ್ತಿಲ್ಲವೋ ಅಲ್ಲಿ ನಾನೆ ಒಪ್ಪಿಕೊಳ್ಳುತ್ತೇನೆ. ಥಿಯಾಸಫಿ, ಕ್ರೈಸ್ತರು, ಮಹಮ್ಮದೀಯರು ಅಥವಾ ಇನ್ನೂ ಯಾವುದಾದರೂ ಪಂಗಡದವರಿಂದ ಜನರು ಉಪಯೋಗಪಡುತ್ತಿರುವರು ಎಂದು ಕೇಳಿದಾಗ ನನಗೆ ಆಗುವಷ್ಟು ಸಂತೋಷ ಇನ್ನು ಯಾವಾಗಲೂ ಉಂಟಾಗುವುದಿಲ್ಲ. ನಾನು ಸನ್ಯಾಸಿ. ಆದಕಾರಣ ಪ್ರಪಂಚದಲ್ಲಿ ನಾನು ಆಳೆ ಹೊರತು, ಯಜಮಾನನೆಂದು ತಿಳಿಯುವುದಿಲ್ಲ. ಜನರು ನನ್ನನ್ನು ಪ್ರೀತಿಸಿದರೂ ಸರಿಯೆ, ದ್ವೇಷಿಸಿದರೂ ಸರಿಯೆ.

ಪ್ರತಿಯೊಬ್ಬರೂ ತಮ್ಮನ್ನು ತಾವೆ ಕಾಪಾಡಿಕೊಳ್ಳಬೇಕು. ಪ್ರತಿಯೊಬ್ಬರೂ ತಮ್ಮ ಕೆಲಸವನ್ನು ತಾವೇ ಮಾಡಬೇಕು. ನಾನು ಯಾವ ಸಹಾಯವನ್ನೂ ಹುಡುಕಿಕೊಂಡು ಹೋಗುವುದಿಲ್ಲ. ಆದಾಗಿ ಸಹಾಯ ಬಂದರೆ ನಿರಾಕರಿಸುವುದಿಲ್ಲ. ಅಥವಾ ಪ್ರಪಂಚ ನನಗೆ ಸಹಾಯ ಮಾಡಬೇಕಾದ ಯಾವ ನಿಯಮವೂ ಇಲ್ಲ. ಯಾರು ನನಗೆ ಸಹಾಯ ಮಾಡಿರುವರೋ ಅಥವಾ ಮಾಡುವರೋ, ಅವರು ನನ್ನ ಮೇಲಿನ ದಯೆಯಿಂದ ಮಾಡುವರೆ ಹೊರತು, ಅವರು ನನಗೆ ಸಹಾಯ ಮಾಡಲೇ ಬೇಕು ಎಂಬ ನಿಯಮದಿಂದಲ್ಲ. ಆದುದರಿಂದ ನಾನು ಅವರಿಗೆ ಚಿರ ಕೃತಜ್ಞನಾಗಿರುವೆನು.

ನಾನು ಸನ್ಯಾಸಾಶ್ರಮವನ್ನು ಸ್ವೀಕರಿಸಿದಾಗ, ಈ ದೇಹ ಉಪವಾಸದಿಂದ ಸಾಯುವುದೆಂದು ತಿಳಿದೇ ಈ ಆಶ್ರಮವನ್ನು ಸ್ವೀಕರಿಸಿದೆನು. ಆದರೇನಂತೆ. ನಾನು ಭಿಕಾರಿ. ನನ್ನ ಸ್ನೇಹಿತರು ಬಡವರು. ನಾನು ಬಡವರನ್ನು ಪ್ರೀತಿಸುತ್ತೇನೆ. ನಾನು ಕೆಲವು ಸಲ ಉಪವಾಸವಿರಬೇಕಾಗುವುದೆಂದು ತಿಳಿದು ನನಗೆ ಸಂತೋಷ. ನಾನು ಯಾರ ಸಹಾಯವನ್ನೂ ಕೇಳುವುದಿಲ್ಲ. ಇದರಿಂದ ಏನು ಪ್ರಯೋಜನ. ಸತ್ಯ ತಾನೆ

ಬೆಳಕಿಗೆ ಬರುವುದು. ತನಗೆ ಸಹಾಯಮಾಡುವ ಜನರು ಇಲ್ಲವೆಂದು ಅದು ಸಾಯುವುದಿಲ್ಲ. "ಸುಖ ದುಃಖಗಳನ್ನು ಸಮವಾಗಿ ಎಣಿಸುತ್ತ, ಜಯಾಪಜಯಗಳನ್ನು ಒಂದೇ ದೃಷ್ಟಿಯಿಂದ ನೋಡುತ್ತ, ಯುದ್ಧ ಮಾಡು. (ಗೀತಾ). ಅನಂತ ಪ್ರೇಮ ಎಂತಹ ಸನ್ನಿವೇಶದಲ್ಲಿಯೂ ಉದ್ವೇಗಗೊಳ್ಳದ ಸಮತ್ವ, ಅಸೂಯೆ, ದ್ವೇಷಗಳ ಅಭಾವದಿಂದ ಸಂಪೂರ್ಣ ಸ್ವಾತಂತ್ರನಾಗಿರುವುದು, ಇವೇ ಜನರ ಮೇಲೆ ಪರಿಣಾಮ ವನ್ನು ಉಂಟುಮಾಡುವುದು. ಮತ್ತಾವುದೂ ಅಲ್ಲ. ಇದೊಂದೇ ಜನರ ಮನಸ್ಸನ್ನು ಮುಟ್ಟುವುದು.

ನಿನ್ನ ವಿವೇಕಾನಂದ.

೬೮

ಜನವರಿ ೧೮೯೬.

ಮಾಸಪತ್ರಿಕೆಯನ್ನು ಹೊರಡಿಸಬೇಕೆಂಬ ನಿನ್ನ ಅಭಿಪ್ರಾಯ ವೇನೋ ಬಹಳ ಒಳ್ಳೆಯದು. ನಿನ್ನ ಮನಸ್ಸು ಮತ್ತು ಹೃದಯವನ್ನೆಲ್ಲ ಅದರಲ್ಲಿಡು. ಹಣದ ಕೊರತೆ ಬೇಡ. ಕ್ರೈಸ್ತಧರ್ಮ, ಮಹಮ್ಮ ದೀಯಧರ್ಮ ಇವುಗಳನ್ನು ಬೋಧಿಸುವವರು ಹಲವರು ಇರುವರು. ನೀನು ನಿನ್ನ ದೇಶದ ಧರ್ಮವನ್ನು ಮಾತ್ರ ಉಪದೇಶಮಾಡುತ್ತಾ ಹೋಗು. ಆದರೆ ನಿನಗೆ ಅರಬ್ಬೀ ಭಾಷೆಯಲ್ಲಿ ನುರಿತ ಒಬ್ಬ ಮಹಮ್ಮ ದೀಯನು ಸಿಕ್ಕಿದ್ದರೆ ಅವನಿಂದ ಹಳೆಯ ಅರಬ್ಬೀ ಗ್ರಂಥಗಳನ್ನು ಭಾಷಾಂತರ ಮಾಡಿಸಿದರೆ ಅದು ಒಂದು ಒಳ್ಳೆಯ ಕೆಲಸವಾಗುವುದು. ಪಾರ್ಸಿ ಭಾಷೆಯಲ್ಲಿ ಭಾರತದ ಚರಿತ್ರೆ ಎಷ್ಟೋ ಇದೆ. ಸ್ವಲ್ಪ ಸ್ವಲ್ಪ ವಾಗಿ ಆ ಗ್ರಂಥಗಳನ್ನು ನೀನು ಭಾಷಾಂತರಮಾಡಿಸಿದರೆ ಅದು ಒಂದು ಒಳ್ಳೆಯ ಕಾರ್ಯಕ್ರಮವಾಗುವುದು. ನಮಗೆ ಅನೇಕ ಜನ ಬರಹಗಾರರು ಬೇಕಾಗಿವೆ. ನಂತರ, ಚಂದಾದಾರರನ್ನು ಕೂಡಿಸುವುದೊಂದು ಕಷ್ಟದ ಕೆಲಸ. ಇದಕ್ಕೆ ಒಂದೇ ಉಪಾಯ. ನೀನು ಸಂಚಾರಮಾಡುತ್ತೀರು. ಎಲ್ಲಿ ಬಂಗಾಳಿ ಭಾಷೆಯನ್ನು ಮಾತನಾಡುತ್ತಿರುವರೋ ಅಲ್ಲಿ ನಿನ್ನ ಕೈಗೆ ಸಿಕ್ಕಿದವರ ಮೇಲೆ ಪತ್ರಿಕೆಯನ್ನು ನೂಕು. ಬಲವಂತದಿಂದ ಅವರನ್ನು

ಚಂದಾದಾರರನ್ನಾಗಿ ಮಾಡು. ಅವರು ಯಾವಾಗ ಸ್ವಲ್ಪಹಣ ಖರ್ಚು ಮಾಡಬೇಕಾಗಿ ಬರುವುದೋ ಆಗ ನುಸುಳಿಕೊಳ್ಳಲು ಯತ್ನಿಸುವರು. ಯಾವುದನ್ನೂ ನೀನು ಲೆಕ್ಕಿಸಬೇಕಾಗಿಲ್ಲ. ಹೇಗಾದರೂ ಚಂದಾದಾರರನ್ನು ಮಾಡಿಸು. ನಿಮ್ಮಗಳಲ್ಲಿ ಯಾರು ಯಾರಿಗೆ ಸಾಧ್ಯವೋ ಅವರೆಲ್ಲ ಲೇಖನವನ್ನು ಅದಕ್ಕೆ ಬರೆಯಿರಿ. ಸುಮ್ಮನೆ ಕುಳಿತುಕೊಂಡರೆ ಪ್ರಯೋಜನವಿಲ್ಲ. ಶಹಭಾಸ್! ನೀನು ಶೌರ್ಯದ ಕೆಲಸವನ್ನು ಮಾಡಿರುವೆ. ಯಾರು ಅನುಮಾನಿಸುತ್ತಾ ಎಡಹುವರೋ ಅವರು ಹಿಂದೆ ಬೀಳುವರು. ನೀನು ಅವರೆಲ್ಲರನ್ನು ಮೀರಿಸಿ ಮುಂದೆ ಬರುವೆ. ಯಾರು ತಮ್ಮ ಮುಕ್ತಿಯೊಂದಕ್ಕೇ ಪ್ರಯತ್ನಪಡುತ್ತಿರುವರೋ ಅವರಿಗೆ ತಮ್ಮ ಮುಕ್ತಿಯೂ ಸಿಕ್ಕುವುದಿಲ್ಲ, ಅನ್ಯರದೂ ಸಿಕ್ಕುವುದಿಲ್ಲ. ನೀನು ಮಾಡುವ ಕೋಲಾಹಲ ಪ್ರಪಂಚದ ಮೂಲೆ ಮೂಲೆಯಲ್ಲೂ ಅನುರಣಿತವಾಗುವಂತೆ ಇರಲಿ. ಮಾಡಿದ ಪ್ರತಿಯೊಂದು ಕೆಲಸದಲ್ಲೂ ತಪ್ಪು ಕಂಡುಹಿಡಿಯುವ ಸ್ವಭಾವದವರು ಕೆಲವರು ಇರುವರು. ಆದರೆ ಕಾರ್ಯಕ್ಕೆ ಬಂದಾಗ ಎಳ್ಳಷ್ಟೂ ಅವರಿಂದ ಸಾಗುವುದಿಲ್ಲ! ಸಾಧ್ಯವಾದಷ್ಟು ಕೆಲಸಮಾಡಿ! ನಂತರ ನಾನು ಇಂಡಿಯಾದೇಶಕ್ಕೆ ಹೋಗಿ ದೇಶವನ್ನೆಲ್ಲಾ ಅಲ್ಲಾಡಿಸುತ್ತೇನೆ. ಎಂತಹ ಅಂಜಿಕೆ! ಹಾವು ಕೂಡ ಅದಕ್ಕೆ ವಿಷವಿಲ್ಲವೆಂದು ಸಾಧಿಸಿದರೆ ಇಲ್ಲದೇ ಹೋಗುವುದು ನೇತಿ ನೇತಿ ಮಾರ್ಗದಲ್ಲಿ ಹೋಗಿ ಕೊನೆಗೆ ಇವರೂ ಕೆಲಸಕ್ಕೆ ಬಾರದ ನೇತಿಯೇ ಆಗುವರು!

ಜ— ಸರಿಯಾದ ಶೂರನ ಕೆಲಸವನ್ನೇ ಮಾಡಿರುವನು! ಭಲೆ! ಅ— ಅವನೊಂದಿಗೆ ಕೆಲಸದಲ್ಲಿ ಸೇರಿರುವನು. ಇನ್ನೂ ಉತ್ತಮವಾಯಿತು. ಒಬ್ಬನು ಮದ್ರಾಸಿಗೆ ಹೋಗಲಿ, ಮತ್ತೊಬ್ಬನು ಬೊಂಬಾಯಿಗೆ ಹೋಗಲಿ. ಪ್ರಪಂಚವೆಲ್ಲ ತಲ್ಲಣಿಸಬೇಕು. ಅಯ್ಯೋ ಸಂಕಟವೆ! ನನಗೆ ನನ್ನಂತಹ ಇಬ್ಬರು ಮೂವರು ಸಿಕ್ಕಿದ್ದರೆ ಜಗತ್ತನ್ನೆಲ್ಲ ಅಲುಗಾಡಿಸುತ್ತಿದ್ದೆ. ಆದರೆ ಅದಿಲ್ಲದೇ ಇರುವುದರಿಂದ ನಾನು ನಿಧಾನವಾಗಿ ಮುಂದುವರಿಯಬೇಕಾಗಿದೆ. ವಿಶ್ವದ ಆದ್ಯಾಂತವನ್ನೆಲ್ಲ ಚಲಿಸುವಂತೆ ಮಾಡಬೇಕು! ಒಬ್ಬನನ್ನು ಚೈನಾದೇಶಕ್ಕೆ ಕಳುಹಿಸಬೇಕು! ಮತ್ತೊಬ್ಬನನ್ನು ಜಪಾನಿಗೆ ಕಳುಹಿಸಬೇಕು! ಪಾಪ ಬಡ ಗೃಹಸ್ಥರು ತಮ್ಮ

ತಾಪತ್ರಯದಲ್ಲಿ ಏನು ಮಾಡಿಯಾರು ? ಶಿವನ ಭೂತಗಣಗಳಿಂದ ಸನ್ಯಾಸಿಗಳು ಮಾತ್ರ, ಹರಹರ ಮಹದೇವ ಎಂಬ ಜಯ ನಿನಾದದಿಂದ ದಿಕ್ ತಟಗಳು ಬಿರಿಯುವಂತೆ ಮಾಡಬಹುದು.

ನಿನ್ನ ವಿಶ್ವಾಸಪೂರ್ವಕ,
ವಿವೇಕಾನಂದ.

೬೯

೧೭ನೇ ಫೆಬ್ರವರಿ ೧೮೯೬.

ಪ್ರಿಯ ಅ—,

ಕೆಲಸ ಬಹಳ ಕಠಿಣವಾಗಿದೆ. ಅದು ಹೆಚ್ಚಿದಂತೆಲ್ಲ ಕಷ್ಟತರವಾಗುತ್ತಾ ಬರುತ್ತದೆ. ನನಗೆ ಅತ್ಯವಶ್ಯಕವಾಗಿ ದೀರ್ಘ ವಿರಾಮ ಬೇಕಾಗಿದೆ. ಅದರೂ ನನ್ನ ಮುಂದೆ ಒಂದು ದೊಡ್ಡ ಕೆಲಸ ಇಂಗ್ಲೆಂಡಿನಲ್ಲಿ ಕಾಳಿತಿದೆ. ನನ್ನ ಮಗು ! ಸಮಾಧಾನ ತಾಳು. ಕೆಲಸ ನಮ್ಮ ನಿರೀಕ್ಷಣೆಯನ್ನೆಲ್ಲ ಮೀರುವುದು. ಪ್ರತಿಯೊಂದು ಕೆಲಸವೂ ಪೂರ್ಣವಾಗುವುದಕ್ಕೆ ಮುಂಚೆ ನೂರಾರು ಕಷ್ಟಗಳ ಮೂಲಕ ಹಾದು ಹೋಗಬೇಕು. ಯಾರು ಛಲದಿಂದ ಕೆಲಸಮಾಡುವರೋ ಅವರು ಇಂದೋ ನಾಳೆಯೋ ಅದರ ಜಯವನ್ನು ಕಂಡೇಕಾಣುವರು.

ನಾನು ಈಗ ಅಮೇರಿಕಾ ನಾಗರಿಕತೆಯ ಕೇಂದ್ರವಾದ ನ್ಯೂಯಾರ್ಕನ್ನು ಜಾಗ್ರತಮಾಡುವುದರಲ್ಲಿ ಯಶಸ್ವಿಯಾಗುವೆನು, ಆದರೆ ಇದು ಬಹಳ ಕಷ್ಟವಾದ ಕೆಲಸ. ನನ್ನ ಹತ್ತಿರ ಇದ್ದುದೆಲ್ಲವನ್ನೂ ನ್ಯೂಯಾರ್ಕ್ ಮತ್ತು ಇಂಗ್ಲೆಂಡಿನ ಕೆಲಸಕ್ಕೆ ವಿನಿಯೋಗಿಸಿರುವೆನು. ಈಗ ಎಲ್ಲಾ ಸುಸೂತ್ರವಾಗಿ ಮುಂದುವರಿಯುವ ಸ್ಥಿತಿಗೆ ಬಂದಿದೆ.

ಹಿಂದೂಗಳ ಭಾವವನ್ನು ಆಂಗ್ಲಭಾಷೆಯಲ್ಲಿಡುವುದು, ನಂತರ ಬಣತತ್ವ, ತೊಡಕಾದ ಪುರಾಣ, ವಿಚಿತ್ರವಾಗಿ ಆಶ್ಚರ್ಯವೆನಿಸುವ ಮಾನಸಿಕ ಶಾಸ್ತ್ರ ಇವುಗಳಿಂದ, ಸುಲಭವೂ ಸರಳವೂ ಮತ್ತು ಮೇಧಾವಿಗಳೂ ಕೂಡ ತಲೆದೂಗುವಂತಹ ಒಂದು ಧರ್ಮಶಾಸ್ತ್ರವನ್ನು ಮಾಡುವುದೆಂದರೆ ಬಹಳ ಕಷ್ಟ ! ಯಾರು ಇದನ್ನು ಪ್ರಯತ್ನ ಪಟ್ಟಿರುವರೋ ಅವರಿಗೆ

ಮಾತ್ರ ಅನುಭವವೇದ್ಯ ಇದು. ಪ್ರತ್ಯೇಕವಾದ ಅದ್ವೈತ, ಅನುಷ್ಠಾನ ದಲ್ಲಿ ಜೀವತಃ ಬಣ್ಣಗೊಳ್ಳಬೇಕು. ಬಿಡಿಸುವುದಕ್ಕೆ ಆಗದಷ್ಟು ಸಿಕ್ಕಾಗಿಹೋಗಿರುವ ಪುರಾಣಗಳಿಂದ, ಕಣ್ಣಿಗೆ ಕಾಣುವ ನೀತಿಯ ನಿಯಮಗಳು ಬರಬೇಕು. ಅತಿ ವಿಸ್ಮಯಕರವಾದ ಯೋಗದಿಂದ, ವೈಜ್ಞಾನಿಕವೂ, ಅನುಷ್ಠಾನಯೋಗ್ಯವೂ ಆದ ಮಾನಸಿಕ ಶಾಸ್ತ್ರ ಬರಬೇಕು. ಇವುಗಳೆಲ್ಲವನ್ನೂ ಒಂದು ಸರಳ ಶೈಲಿಯಲ್ಲಿಡಬೇಕು. ಮಕ್ಕಳಿಗೂ ಕೂಡ ಅರ್ಥವಾಗುವಂತೆ ಇರಬೇಕು. ಅದೇ ನನ್ನ ಜೀವನದ ಗುರಿ. ನಾನು ಇದರಲ್ಲಿ ಎಷ್ಟರಮಟ್ಟಿಗೆ ಜಯಶೀಲನಾಗಿರುವೆನೋ ಅದು ದೇವರಿಗೆ ಗೊತ್ತು. ಕೆಲಸಮಾಡುವುದಕ್ಕೆ ನಮಗೆ ಅಧಿಕಾರವಿದೆ. ಆದರ ಫಲದಮೇಲಿಲ್ಲ. ನನ್ನ ಮಗು ಇದೆಲ್ಲ ಬಹಳ ಕಷ್ಟದ ಕೆಲಸ! ಈ ಕಾಮ ಕಾಂಚನದ ಗಲಾಟೆಯಲ್ಲಿ, ಶಾಂತವಾಗಿರಬೇಕು. ಆತ್ಮ ಸಾಕ್ಷಾತ್ಕಾರ ಸಂಪೂರ್ಣತ್ಯಾಗ, ಇವುಗಳನ್ನು ತಿಳಿದುಕೊಳ್ಳುವ ಶಿಷ್ಯರನ್ನು ತರಬೇತು ಮಾಡುವತನಕ ತನ್ನ ಜೀವನದ ಆದರ್ಶವನ್ನು ಬಿಡದೆ ಇರುವುದು ನಿಜವಾಗಿಯೂ ಬಹಳ ಕಷ್ಟದ ಕೆಲಸ. ನನ್ನನ್ನು ಸರಿಯಾಗಿ ತಿಳಿಯದೇ ಇದ್ದುದಕ್ಕಾಗಿ ನಾನು ವಾದಿಗಳನ್ನು ಮತ್ತು ಇತರರನ್ನು ದೂರುವುದಿಲ್ಲ. ಕಾಮಿನಿ ಕಾಂಚನಗಳನ್ನು ತ್ಯಜಿಸಿದ ಒಬ್ಬರನ್ನು ಕೂಡ ಅವರು ನೋಡಿರಲಿಲ್ಲ. ಮೊದಲಲ್ಲಿ ಅವರಿಗೆ ಇದರಲ್ಲಿ ನಂಬಿಕೆಯೇ ಇರಲಿಲ್ಲ. ಹೇಗೆ ನಂಬಿಕೆ ಹುಟ್ಟೀತು? ಹಿಂದೂಗಳಿಗಿರುವಂತಹ ಪಾತಿವ್ರತ್ಯ ಮತ್ತು ಪವಿತ್ರತೆಗಳ ಆದರ್ಶವೇ ಪಾಶ್ಚಾತ್ಯದೇಶಗಳಲ್ಲಿಯೂ ಇದೆ ಎಂದು ನೀನು ತಿಳಿಯಕೂಡದು. ಅವುಗಳಿಗೆ ಸರಿಸಮನಾದ ಶೀಲವೇ ಅವರಲ್ಲಿ ಒಳ್ಳೆಯತನ ಮತ್ತು ಧೈರ್ಯ. ಜನಗಳು ಈಗ ನನ್ನನ್ನು ಮುತ್ತುತ್ತಿರುವರು. ತಮ್ಮ ದೇಹದ ಆಸೆಗಳನ್ನು ಸಂಪೂರ್ಣ ನಿಗ್ರಹಿಸಬಲ್ಲ ಮನುಷ್ಯರು ಇರುವರು ಎಂದು ನೂರಾರು ಜನರಿಗೆ ಈಗ ಸ್ಥಿರವಾಗಿ ಗೊತ್ತಾಗಿದೆ. ಈ ಮಹಾ ಆದರ್ಶಗಳಿಗೆ ಪೂಜ್ಯತೆ ಮತ್ತು ಗೌರವ ಹೆಚ್ಚುತ್ತಿದೆ. ಯಾರು ತಾಳುವನೋ ಅವನಿಗೆ ಎಲ್ಲವೂ ಸಿದ್ಧಿಸುವುದು. ಎಂದೆಂದಿಗೂ ನೀನು ಧನ್ಯನಾಗು.

ನಿನ್ನ ವಿವೇಕಾನಂದ.

ನ್ಯೂಯಾರ್ಕ್,
೧೪ನೇ ಏಪ್ರಿಲ್ ೧೮೯೬.

ಪ್ರಿಯ,

ನಿನ್ನ ಪತ್ರದಲ್ಲಿ ಎಲ್ಲವನ್ನೂ ತಿಳಿದು ಸಂತೋಷವಾಯಿತು ಸ— ಸುರಕ್ಷಿತವಾಗಿ ತಲುಪಿದನೆಂದು ನನಗೆ ಸುದ್ದಿ ಬಂದಿದೆ. ನಿನ್ನ ಪತ್ರ ಮತ್ತು ಇಂಡಿಯನ್ ಮಿರರ್ ಪತ್ರಿಕೆಯೂ ಕೈಸೇರಿತು. ಅದರಲ್ಲಿ ನಿನ್ನ ಲೇಖನ ಚೆನ್ನಾಗಿದೆ, ತಪ್ಪದೆ ಬರೆಯುತ್ತಾ ಇರು, ತಪ್ಪು ಕಂಡು ಹಿಡಿಯುವುದು ಸುಲಭ. ಆದರೆ ಮಹಾತ್ಮನ ಲಕ್ಷಣ ಮತ್ತೊಬ್ಬನಲ್ಲಿ ಒಳ್ಳೆಯದನ್ನು ಹುಡುಕುವುದು. ಎಂಬುದನ್ನು ಮರೆಯದಿರು. ನಿನಗೆ ಇನ್ನು ಸ್ವಲ್ಪ ಕೆಲಸದ ಅನುಭವ ಬೇಕಾಗಿದೆ. ನಮಗೆ ಈಗ ಮುಖ್ಯ ವಾಗಿ ಬೇಕಾಗಿರುವುದು ಸಂಸ್ಥೆ. ಅದಕ್ಕೆ ಮುಖ್ಯ ವಿಧೇಯತೆ ಮತ್ತು ಕಾರ್ಯವಿಭಾಗ ಇವು ಆವಶ್ಯಕ. ಇದೆಲ್ಲವನ್ನೂ ನಾನು ವಿಶದವಾಗಿ ಇಂಗ್ಲೆಂಡಿಗೆ ಹೋದಮೇಲೆ ಬರೆಯುತ್ತೇನೆ. ನಾಳೆ ಅಲ್ಲಿಗೆ ಹೊರಡುವೆನು. ನಿಮ್ಮನ್ನೆಲ್ಲರನ್ನು ಸಂಸ್ಥಾಬದ್ಧರಾದ ಕುಶಲರಾದ ಕೆಲಸಗಾರರನ್ನಾಗಿ ಮಾಡಬೇಕೆಂದು ಹಟತೊಟ್ಟಿರುವೆನು.

Friend (ಸ್ನೇಹಿತ) ಎಂಬ ಪದವನ್ನು ಇಂಗ್ಲೀಷಿನಲ್ಲಿ ಯಾರೊಂದಿಗೆ ಬೇಕಾದರೂ ಉಪಯೋಗಿಸಬಹುದು. ಆಂಗ್ಲಭಾಷೆಯಲ್ಲಿ, ಬೆಂಗಾಳಿ ಭಾಷೆಯಲ್ಲಿರುವಂತಹ ಗೋಗರಿಯುವ ವಿನಯ ಇಲ್ಲ. ಅಂತಹ ಬೆಂಗಾಳೀ ಪದಗಳನ್ನು ಇಂಗ್ಲೀಷ್ ಭಾಷಾಂತರ ಮಾಡಿದರೆ ನಗೆಗೀಡಾಗುತ್ತದೆ. ಶ್ರೀರಾಮಕೃಷ್ಣ ಪರಮಹಂಸದೇವರು ಮುಂತಾದುವುಗಳು ಈ ದೇಶದಲ್ಲಿ ನಡೆಯುವಹಾಗಿಲ್ಲ.—ಅವನಿಗೆ ಇಂತಹ ವಿಷಯಗಳನ್ನು ಎಲ್ಲರಿಗೂ ಹೇಳುವ ಅಭ್ಯಾಸವಿದೆ. ಅದರಿಂದ ನಮ್ಮ ಚಳುವಳಿಯು ಕೇವಲ ಒಂದು ಜಾತಿಯಾಗುತ್ತದೆ. ಅಂತಹ ಪ್ರಯತ್ನಗಳಿಂದ ನೀನು ಬೇರೆ ಇರು; ಮತ್ತು ಅದೇ ಸಮಯದಲ್ಲಿ ಯಾರಾದರು ಅವರನ್ನು ದೇವರೆಂದು ಪೂಜಿಸಿದರೆ ತೊಂದರೆಯಿಲ್ಲ. ಅದಕ್ಕೆ ಪ್ರೋತ್ಸಾಹವನ್ನು ಮಾಡಬೇಕಾಗಿಲ್ಲ. ಅಡ್ಡಿಯನ್ನೂ ತರಬೇಕಾಗಿಲ್ಲ. ಜನಸಾಮಾನ್ಯರು ಯಾವಾಗಲೂ ವ್ಯಕ್ತಿಯನ್ನು ಬಯಸುವರು. ಮುಂದುವರಿ

ದವರು ತತ್ತ್ವವನ್ನು ಆಶಿಸುವರು. ಆದರೆ ನಮಗೆ ವ್ಯಕ್ತಿ ಮತ್ತು ತತ್ತ್ವ ಎರಡೂ ಬೇಕಾಗಿದೆ. ಆದರೆ ಸರ್ವವ್ಯಾಪಕವಾಗಿರುವದು ತತ್ತ್ವ ಮಾತ್ರ, ವ್ಯಕ್ತಿಯಲ್ಲ. ಅದಕ್ಕೋಸ್ಕರವಾಗಿಯೇ ಶ್ರೀರಾಮಕೃಷ್ಣರು ಬೋಧಿಸಿದ ತತ್ತ್ವಕ್ಕೆ ಹೆಚ್ಚು ಗಮನಕೊಡು. ಜನರು ಅವರ ವ್ಯಕ್ತಿಯ ವಿಷಯವಾಗಿ ಏನುಬೇಕಾದರೂ ತಿಳಿದುಕೊಳ್ಳಲಿ. ಎಲ್ಲಾ ಜಗಳ, ಅಸೂಯೆ, ಮತಭ್ರಾಂತಿಗಳಿಂದಲೂ ಹೊರಗಾಗಿ ! ಇವುಗಳೇ ಎಲ್ಲವನ್ನು ನಾಶ ಮಾಡುವುದು. "ಮೊದಲನೆಯವನು ಯಾವಾಗಲೂ ಕೊನೆಯವನಾಗಬೇಕು." "ಯಾರು ನನ್ನ ಭಕ್ತರ ಭಕ್ತರೋ ಅವರೇ ನನ್ನ ಶ್ರೇಷ್ಠ ಭಕ್ತರು.

ನಿನ್ನ ವಿಶ್ವಾಸ ಪೂರ್ವಕ,
ವಿವೇಕಾನಂದ.

೭೧

ಹೈ ವ್ಯೂ. ಕ್ಯಾವರ್ ಶ್ಯಾಮ್
ರೀಡಿಂಗ್,
೨೭ನೇ ಏಪ್ರಿಲ್ ೧೮೯೬.

ಪ್ರಿಯ,

ನಿಮಗೆಲ್ಲರಿಗೂ ನಾನು ಈಗ ಸ್ವಲ್ಪ ಬರೆಯುತ್ತೇನೆ. ನನ್ನ ಸ್ವಂತ ಅಧಿಕಾರವನ್ನು ನಿಮ್ಮಮೇಲೆ ಚಲಾಯಿಸಬೇಕೆಂದಲ್ಲ. ಆದರೆ ನಿಮ್ಮ ಹಿತಕ್ಕೋಸುಗವಾಗಿ, ಮತ್ತು ನಮ್ಮ ಗುರುದೇವನು ಬಂದ ಉದ್ದೇಶ ಸಫಲವಾಗಲಿ ಎಂಬ ದೃಷ್ಟಿಯಿಂದ ಇದನ್ನು ಬರೆಯುತ್ತೇನೆ. ನಿಮ್ಮೆಲ್ಲರ ಜವಾಬ್ದಾರಿಯನ್ನೂ ಅವರು ನನಗೆ ಕೊಟ್ಟರು. ಜಗದ ಮಹಾ ಹಿತಕ್ಕೋಸುಗವಾಗಿ ನೀವುಗಳೆಲ್ಲರೂ ಸಹಾಯಮಾಡಬೇಕಾಗಿದೆ. ನಿಮ್ಮಲ್ಲಿ ಅನೇಕರಿಗೆ ಇದು ಗೊತ್ತಿರದೇ ಇರಬಹುದು. ಅದಕ್ಕೋಸ್ಕರವೇ ನಾನು ಇದನ್ನು ನಿಮಗೆ ಬರೆಯುತ್ತಿರುವುದು. ಅಸೂಯೆ ಅಹಂಕಾರವೆಂಬ ದುರಭಿಮಾನ ಯಾವುದಾದರು ನಿಮ್ಮಲ್ಲಿ ಹುಟ್ಟಿದರೆ ಬಹಳ ಶೋಚನೀಯವಾಗುತ್ತದೆ. ಒಬ್ಬರೊಡನೊಬ್ಬರು ದೀರ್ಘಕಾಲ ಸೌಹಾರ್ದದಿಂದ ಬಾಳಲಾರದವರು ಪ್ರಪಂಚದಲ್ಲಿ ಸೌಹಾರ್ದತೆಯನ್ನು

ಸ್ಥಾಪಿಸಲು ಸಾಧ್ಯವೆ? ನಿಯಮಗಳಿಂದ ಬದ್ಧರಾಗುವುದೇನೋ ನಿಸ್ಸಂಶಯವಾಗಿಯೂ ಕೆಟ್ಟದ್ದು. ಆದರೆ ಪಕ್ವಸ್ಥಿತಿಗೆ ಬರುವವರೆವಿಗೂ ನಿಯಮಗಳಿಂದ ಬದ್ಧರಾಗುವುದು ಒಳ್ಳೆಯದು. ಬೇರೆ ಮಾತಿನಲ್ಲಿ ಹೇಳುವುದಾದರೆ ಶ್ರೀಗುರುದೇವನು ಹೇಳಿದಂತೆ ಎಳೆಯ ಸಸಿಗೆ ಬೇಲಿಯ ಆವಶ್ಯಕತೆ ಇದೆ. ಎರಡನೆಯದಾಗಿ, ಸೋಮಾರಿಗಳು ಕಾಡು ಹರಟೆ ಹೊಡೆಯುವುದರಲ್ಲಿ ಪಂಗಡಗಳನ್ನು ಮಾಡುವುದರಲ್ಲಿ ಕಾಲ ಕಳೆಯುವುದು ಸಹಜವಾಗಿಯೇ ಇರುತ್ತದೆ. ಅದಕ್ಕೋಸ್ಕರವಾಗಿಯೇ ನಾನು ಕೆಲವು ಸೂಚನೆಗಳನ್ನು ಕೊಡುತ್ತೇನೆ. ನೀವು ಅದನ್ನು ಅನುಸರಿಸಿದರೆ ಸಂಶಯವಿಲ್ಲದೆ ಏಳಿಗೆ ಹೊಂದುವಿರಿ.—ಅದರಂತೆ ನೀವು ನಡೆದುಕೊಳ್ಳದೇ ಇದ್ದರೆ ನಾವು ಪಟ್ಟ ಶ್ರಮವೆಲ್ಲ ನಿಷ್ಪ್ರಯೋಜನವಾಗುವ ಅಂಜಿಕೆ ಇದೆ.

ಮಠದ ಆಡಳಿತದ ವಿಚಾರವಾಗಿ ಮೊದಲು ಬರೆಯುವೆನು.—

(೧) ಮಠಕ್ಕೋಸುಗವಾಗಿ ಒಂದು ವಿಶಾಲವಾದ ಮನೆಯನ್ನೋ ಅಥವಾ ತೋಟವನ್ನೋ ಬಾಡಿಗೆಗೆ ತೆಗೆದುಕೊಳ್ಳಿ. ಪ್ರತಿಯೊಬ್ಬರಿಗೂ ಒಂದೊಂದು ಸಣ್ಣ ಕೋಣೆ ಅಲ್ಲಿರಲಿ. ಪುಸ್ತಕಗಳನ್ನು ಇಡುವುದಕ್ಕೆ ಒಂದು ದೊಡ್ಡ ನಡುಮನೆ ಇರಲಿ. ಮಠವನ್ನು ನೋಡುವುದಕ್ಕೆ ಬಂದವರೊಡನೆ ಮಾತಾಡುವುದಕ್ಕೆ ಒಂದು ಸಣ್ಣ ಕೋಣೆ ಇರಲಿ. ಸಾಧ್ಯವಾದರೆ ಮನೆಯಲ್ಲಿ ಮತ್ತೊಂದು ದೊಡ್ಡ ಪಡಸಾಲೆ ಇರಲಿ. ಅಲ್ಲಿ ಸಾರ್ವಜನಿಕರ ಉಪಯೋಗಕ್ಕೋಸುಗವಾಗಿ ಪ್ರತಿದಿನವೂ ಪುಣ್ಯಗ್ರಂಥಗಳ ಪಠಣೆ ಮತ್ತು ಧಾರ್ಮಿಕ ಪ್ರವಚನಗಳು ನಡೆಯಬೇಕು.

(೨) ಯಾರಾದರೂ ಮಠದಲ್ಲಿ ಯಾರನ್ನಾದರೂ ನೋಡಲು ಬಂದರೆ ಅವರನ್ನು ಮಾತ್ರ ನೋಡಿ ಉಳಿದವರಿಗೆ ತೊಂದರೆ ಕೊಡದಂತೆ ಹೊರಟುಹೋಗಬೇಕು.

(೩) ಸಾರ್ವಜನಿಕರಿಗೋಸುಗವಾಗಿ ಪ್ರತಿದಿನವೂ ಸರದಿಯಂತೆ ಕೆಲವುಗಂಟೆಗಳು ಯಾರಾದರೊಬ್ಬರು ನಡುಮನೆಯಲ್ಲಿರಬೇಕು. ಇದರಿಂದ ಯಾವ ಪ್ರಶ್ನೆಯನ್ನು ಅವರು ಕೇಳುವುದಕ್ಕೆ ಬರುತ್ತಾರೋ, ಅದಕ್ಕೆ ಸಮಾಧಾನಕರವಾದ ಉತ್ತರ ಸಿಕ್ಕುವಂತೆ ಆಗಲಿ.

(೪) ಪ್ರತಿಯೊಬ್ಬನೂ ತನ್ನ ಕೋಣೆಯಲ್ಲೇ ಇರಬೇಕು. ಏನಾದರೂ ವಿಶೇಷ ಕೆಲಸವಿಲ್ಲದೆ ಬೇರೊಬ್ಬನ ಕೊಠಡಿಯೊಳಕ್ಕೆ ಹೋಗ ಕೂಡದು. ಯಾರಿಗಾದರೂ ಇಚ್ಛೆಯಿದ್ದರೆ ಪುಸ್ತುಕಾಲಯಕ್ಕೆ ಹೋಗಿ ಓದಲಿ. ಆದರೆ ಅಲ್ಲಿ ಮತ್ತೊಬ್ಬನೊಂದಿಗೆ ಮಾತಾಡುವುದಕ್ಕೆ ಆಗಲೀ ಬೀಡಿ ಮುಂತಾದುವುಗಳನ್ನು ಸೇದುವುದಕ್ಕೆ ಆಗಲೀ ಅಲ್ಲಿ ಖಂಡಿತ ಅಪ್ಪಣೆ ಕೊಡಕೂಡದು. ಮನಸಿನಲ್ಲೇ ಓದಬೇಕು.

(೫) ಒಂದು ಕೋಣೆಯಲ್ಲಿ ಎಲ್ಲರೂ ಒಟ್ಟಿಗೆ ಕಲೆತು ದಿನವೆಲ್ಲ ಹರಟೆ ಹೊಡೆಯುತ್ತಾ ಕಾಲವನ್ನು ಕಳೆಯುವುದು, ಬೇಕಾದಷ್ಟು ಮಂದಿ ಹೊರಗಿನವರು ಬಂದು ಗಲಾಟೆಯಲ್ಲಿ ಭಾಗವಹಿಸುವುದು, ಇವು ಗಳಾಗುವುದಕ್ಕೆ ಅವಕಾಶವಿರಕೂಡದು.

(೬) ಧಾರ್ಮಿಕ ಪ್ರವೃತ್ತಿಯುಳ್ಳವರು ಮಾತ್ರ ಬಂದು, ಪ್ರೇಕ್ಷಕರಿಗಾಗಿ ಇರುವ ಕೋಣೆಯಲ್ಲಿ ಶಾಂತಿಯಿಂದ ಇದ್ದು, ಯಾರನ್ನು ನೋಡಬೇಕೆಂದು ಬಂದರೋ ಅವರೊಡನೆ ಮಾತನಾಡಿದ ಮೇಲೆ ಹೊರಟು ಹೋಗಬೇಕು. ಅಥವಾ ಅವರು ಏನಾದರೂ ಪ್ರಶ್ನೆ ಕೇಳುವುದಿದ್ದರೆ, ಅಂದಿನ ದಿನ ಅದರ ಮೇಲ್ವಿಚಾರಣೆಯಲ್ಲಿರುವವರನ್ನು ವಿಚಾರಿಸಿ ನಂತರ ಹೊರಡಬಹುದು.

(೭) ಒಬ್ಬನಿಗೆ ಮತ್ತೊಬ್ಬನ ವಿಚಾರ ಹೇಳುವುದು, ಇನ್ನೊಬ್ಬರ ಮೇಲೆ ಚಾಡಿ ಹೇಳುವುದು ಇವುಗಳೆಲ್ಲವನ್ನು ಖಂಡಿತ ವಜಾ ಮಾಡಬೇಕು.

(೮) ಒಂದು ಸಣ್ಣ ಕೋಣೆಯು ಖಚೇರಿ ಕೆಲಸಕ್ಕೆ ಇರಲಿ. ಕಾರ್ಯದರ್ಶಿಯು ಆ ಕೋಣೆಯಲ್ಲಿರಲಿ. ಅಲ್ಲಿ ಪತ್ರ ಬರೆಯುವುದಕ್ಕಾಗಿ ಬೇಕಾಗುವ ಕಾಗದ ಲೇಖನಿ ಮಸಿ ಇವುಗಳೆಲ್ಲ ಇರಲಿ. ಆಯ ವ್ಯಯದ ಲೆಕ್ಕಾಚಾರವನ್ನು ಅವನು ಇಡಬೇಕು. ಎಲ್ಲಾ ಪತ್ರವ್ಯವಹಾರವೂ ಆತನಿಗೆ ಬರಬೇಕು. ನಂತರ ಆಯಾ ವಿಳಾಸದವರಿಗೆ ಪತ್ರವನ್ನು ಕೂಡಲೆ ತಲಪಿಸಬೇಕು. ಪುಸ್ತಕಗಳು, ಮುಂತಾದುವನ್ನು ಪುಸ್ತಕ ಭಂಡಾರಕ್ಕೆ ಕಳುಹಿಸಬೇಕು.

(೯) ಹೊಗೆಸೊಪ್ಪನ್ನು ಸೇದುವುದಕ್ಕೆ ಒಂದು ಸಣ್ಣ ಕೋಣೆ ಇರಬೇಕು. ಇಲ್ಲಿ ಅಲ್ಲದೆ ಬೇರೆ ಎಲ್ಲಿಯೂ ಸೇದಬಾರದು.

(೧೦) ನಿಂದಾತ್ಮಕವಾದ ವಾಕ್ಯಗಳನ್ನು ಉಪಯೋಗಿಸುವವರು ಮತ್ತು ಕೋಪಗೊಳ್ಳತಕ್ಕವರು ಮಠದ ಎಲ್ಲೆಯನ್ನು ದಾಟಿ ಅಲ್ಲಿ ತಮ್ಮ ಉದ್ದೇಶವನ್ನು ಬಹಿರಂಗಪಡಿಸಬಹುದು. ಈ ನಿಯಮದಿಂದ ಸ್ವಲ್ಪವೂ ತಪ್ಪಕೂಡದು.

## ಮೇಲಧಿಕಾರಿಗಳ ಸಭೆ

(೧) ಓಟಿನ ಅಧಿಕಾಂಶದ ಮೇಲೆ ಪ್ರತಿ ವರುಷವೂ ಒಬ್ಬ ಅಧ್ಯಕ್ಷರನ್ನು ಚುನಾಯಿಸಬೇಕು. ಬರುವ ವರುಷ ಬೇರೆಯವರು ಅಧ್ಯಕ್ಷ ಇತ್ಯಾದಿ.

(೨) ಈ ವರುಷ ಬ— ನನ್ನು ಅಧ್ಯಕ್ಷನನ್ನಾಗಿ ಮಾಡಿ. ಅದರಂತೆ ಒಬ್ಬ ಕಾರ್ಯದರ್ಶಿ. ಪೂಜೆ ಮೇಲ್ವಿಚಾರಣೆ ನೋಡಿಕೊಳ್ಳುವುದಕ್ಕೆ ಒಬ್ಬರು ಮತ್ತು ಆಹಾರದ ಮೇಲ್ವಿಚಾರಣೆಗೆ ಒಬ್ಬರು ಹೀಗೆ ಚುನಾಯಿಸಿ.

(೩) ಕಾರ್ಯದರ್ಶಿಗೆ ಇನ್ನೊಂದು ಕೆಲಸವಿದೆ. ಅದೇ ಎಲ್ಲರ ಆರೋಗ್ಯದ ಮೇಲೂ ಗಮನವಿಡಬೇಕು. ಈ ವಿಚಾರದಲ್ಲಿ ನಾನು ಕೊಡಬೇಕಾದ ಮೂರು ಸಲಹೆ ಇದೆ:—

(i) ಪ್ರತಿಯೊಂದು ಕೋಣೆಯಲ್ಲೂ ಪ್ರತಿಯೊಬ್ಬನಿಗೂ ಮಲಗಲು ಒಂದು ಅಗಲವಾಗಿರುವ ಬೆಂಚು ಮತ್ತು ಚಾಪೆ ಇರಬೇಕು. ಪ್ರತಿಯೊಬ್ಬನೂ ತನ್ನ ಕೋಣೆಯನ್ನು ಶುಚಿಯಾಗಿಟ್ಟಿರಬೇಕು.

(ii) ಕುಡಿಯುವುದಕ್ಕೆ ಮತ್ತು ಅಡಿಗೆಮಾಡುವುದಕ್ಕೆ ಶುದ್ಧವಾದ ಮತ್ತು ತಿಳಿಯ ನೀರನ್ನು ಒದಗಿಸಲು ಎಲ್ಲಾ ಪ್ರಯತ್ನವನ್ನೂ ಮಾಡಬೇಕು. ಏಕೆಂದರೆ ನೈವೇದ್ಯಕ್ಕೆ ಕೊಡುವ ಆಹಾರವನ್ನು ಅಶುದ್ಧವಾದ ಕೆಟ್ಟ ನೀರಿನಿಂದ ಮಾಡುವುದು ಬಹಳ ಅಪಾಯ.

(iii) ಪ್ರತಿಯೊಬ್ಬನಿಗೂ ನ—ಗೆ ಮಾಡಿದಂತಹ ಎರಡು

ಕಾವಿಯ ನಿಲುವಂಗಿಯನ್ನು ಕೊಡು ಮತ್ತು ಅವರ ಬಟ್ಟೆಗಳನ್ನು ನಿರ್ಮಲವಾಗಿಟ್ಟುಕೊಂಡಿರುವಂತೆ ನೋಡಿಕೊಳ್ಳಬೇಕು.

(೪) ಯಾರು ಸನ್ಯಾಸಿಗಳಾಗಲು ಇಚ್ಛಿಸುತ್ತಾರೆಯೋ ಅವರನ್ನು ಮೊದಲು ಬ್ರಹ್ಮಚಾರಿಯಾಗಿ ತೆಗೆದುಕೊಳ್ಳಬೇಕು, ಅವನು ಮಠದಲ್ಲಿ ಐದು ವರುಷ ನಂತರ ಹೊರಗೆ ಒಂದು ವರುಷ ಇರಬೇಕು. ಇದಾದ ಮೇಲೆ ಅವನಿಗೆ ಸನ್ಯಾಸ ದೀಕ್ಷೆಯನ್ನು ಕೊಡಬೇಕು.

(೫) ಪೂಜೆ ಮಾಡುವುದಕ್ಕೆ ಇಂತಹ ಬ್ರಹ್ಮಚಾರಿಗಳನ್ನು ಬಿಡಿ. ಮಧ್ಯೆ ಮಧ್ಯೆ ಇವರನ್ನು ಬದಲಾಯಿಸಬೇಕು.

## ಶಾಖೆಗಳು.

ಮಠದಲ್ಲಿ ಕೆಳಗೆ ನಮೂದಿಸಿರುವ ಶಾಖೆಗಳು ಇರಬೇಕು :—

೧. ವ್ಯಾಸಂಗ.

೨. ಧರ್ಮಪ್ರಚಾರ.

೩. ಆಧ್ಯಾತ್ಮಿಕಸಾಧನೆ.

(೧) ವ್ಯಾಸಂಗ.—ಈ ಶಾಖೆಯ ಮುಖ್ಯ ಉದ್ದೇಶ ಯಾರು ವ್ಯಾಸಂಗ ಮಾಡಬೇಕೆಂದಿರುವರೋ ಅವರಿಗೆ ಪುಸ್ತಕ ಮತ್ತು ಉಪಾಧ್ಯಾಯರನ್ನು ಒದಗಿಸುವುದು. ಪ್ರತಿದಿನ ಬೆಳಿಗ್ಗೆ ಮತ್ತು ಸಂಜೆ ಉಪಾಧ್ಯಾಯರು ಇವರಿಗಾಗಿ ಸಿದ್ಧರಾಗಿರಬೇಕು.

(೨) ಪ್ರಚಾರ.—ಮಠದಲ್ಲಿ ಮತ್ತು ಹೊರಗೆ—ಮಠದಲ್ಲಿ ಪ್ರಚಾರಮಾಡುವವರು ವಿಷಯವನ್ನು ತಿಳಿದುಕೊಳ್ಳಬೇಕೆಂದು ಬಯಸುವವರಿಗೆ ಶಾಸ್ತ್ರಗಳ ಅಧ್ಯಯನ ಮತ್ತು ಪ್ರಶ್ನೆಗಳನ್ನು ಕೇಳುವುದು ಇವುಗಳ ಮೂಲಕ ಅವರಿಗೆ ತಿಳಿಯಪಡಿಸಬೇಕು. ಹೊರಗೆ ಪ್ರಚಾರ ಮಾಡುವವರು ಹಳ್ಳಿಯಿಂದ ಹಳ್ಳಿಗೆ ಪ್ರಚಾರ ಮಾಡುತ್ತಾ ಹೋಗಿ ಮೇಲಿನಂತಹ ಮಠಗಳನ್ನು ಬೇರೆ ಬೇರೆ ಕಡೆಗಳಲ್ಲಿ ಸ್ಥಾಪಿಸಬೇಕು.

(೩) ಆಧ್ಯಾತ್ಮಿಕಸಾಧನೆ.—ಈ ಶಾಖೆಯು ಇದನ್ನು ಅಭ್ಯಾಸ ಮಾಡುವವರಿಗೆ ಬೇಕಾದ ಸೌಕರ್ಯಗಳನ್ನೆಲ್ಲ ಒದಗಿಸಿಕೊಡಬೇಕು, ಒಬ್ಬನು ಆಧ್ಯಾತ್ಮಿಕ ಸಾಧನೆಯಲ್ಲಿ ನಿರತನಾಗುವನು ಎಂದು ತಿಳಿದು

ಉಳಿದವರನ್ನು ವ್ಯಾಸಂಗಕ್ಕೂ ಮತ್ತು ಪ್ರಚಾರಕಾರ್ಯಕ್ಕೂ ಆತಂಕ ವನ್ನು ತಂದೊಡ್ಡುವುದಕ್ಕೆ ಅವಕಾಶವನ್ನು ಕಲ್ಪಿಸಕೂಡದು. ಈ ನಿಯಮವನ್ನು ಯಾರು ಉಲ್ಲಂಘಿಸುವರೋ ಅವರನ್ನು ತಕ್ಷಣವೇ ಹೊರಗೆ ಕಳುಹಿಸಬೇಕು. ಇದು ಅತ್ಯಾವಶ್ಯಕವಾಗಬೇಕು.

ಮಠದಲ್ಲಿರುವ ಪ್ರಚಾರಕರು ಭಕ್ತಿ ಜ್ಞಾನ ಕರ್ಮ ಇವುಗಳ ಮೇಲೆ ಪ್ರವಚನವನ್ನು ಸರದಿಯ ಮೇಲೆ ನಡೆಸಬೇಕು. ಇದಕ್ಕೆ ಆಯಾ ದಿನಗಳನ್ನು ಮತ್ತು ಕಾಲವನ್ನು ನಿರ್ಧರಿಸಿ ಕಾರ್ಯಕ್ರಮದ ಪಟ್ಟಿಯನ್ನು ವ್ಯಾಸಂಗದ ಕೋಣೆಯ ಬಾಗಿಲಿಗೆ ಅಂಟಿಸಬೇಕು. ಏಕೆಂದರೆ ಭಕ್ತಿಯ ಆವಶ್ಯಕತೆ ಇದ್ದವನು ಜ್ಞಾನದ ಮೇಲೆ ಪ್ರವಚನ ಮಾಡುವ ದಿನ ಇದ್ದು ಅದರಿಂದ ಅವನು ತನ್ನ ಭಾವಕ್ಕೆ ಕುಂದು ತಂದುಕೊಳ್ಳಬೇಕಾಗಿಲ್ಲ.

ನಿಮ್ಮಗಳಲ್ಲಿ ಯಾರೂ ವಾಮಾಚಾರವನ್ನು ಮಾಡುವುದಕ್ಕೆ ಅರ್ಹರಲ್ಲ. ಆದಕಾರಣ ಮಠದಲ್ಲಿ ಯಾವ ಕಾರಣದಿಂದಲೂ ಅಭ್ಯಾಸ ಮಾಡಕೂಡದು. ಈ ನಿಯಮವನ್ನು ಯಾರು ಉಲ್ಲಂಘಿಸುವರೋ ಅವರು ಸಂಘದಿಂದ ಹೊರಗೆ ಹೋಗಬೇಕು. ಇಂತಹ ಅಭ್ಯಾಸದ ವಿಷಯವಾಗಿ ಮಠದಲ್ಲಿ ಮಾತನ್ನು ಕೂಡ ಆಡಬಾರದು. ಶ್ರೀ ಗುರು ದೇವನ ಸಂಘದಲ್ಲಿ ಯಾರು ವಾಮಾಚಾರದ ಅಭ್ಯಾಸವನ್ನು ಆರಂಭಿಸು ವರೋ ಅಂತಹ ಪಾಪಿ ಈ ಜನ್ಮದಲ್ಲಿ ಮತ್ತು ಮುಂದಿನ ಜನ್ಮದಲ್ಲಿ ಘೋರ ನರಕಕ್ಕೆ ಈಡಾಗುತ್ತಾನೆ.

## ಕೆಲವು ಸಾಮಾನ್ಯ ಹೇಳಿಕೆಗಳು

(೧) ಯಾರಾದರೂ ಸ್ತ್ರೀಯರು ಸಂನ್ಯಾಸಿಯೊಂದಿಗೆ ಮಾತನಾಡುವುದಕ್ಕೆ ಬಂದರೆ ಪ್ರೇಕ್ಷಕರ ಕೋಣೆಯಲ್ಲಿ ಹಾಗೆ ಮಾತನಾಡಬಹುದು. ಯಾವ ಸ್ತ್ರೀಯರಿಗೂ ಕೂಡ ದೇವರ ಕೋಣೆ ಯಲ್ಲದೆ ಮತ್ತಾವ ಕೋಣೆಯನ್ನೂ ಪ್ರವೇಶಿಸುವುದಕ್ಕೆ ಅಪ್ಪಣೆ ಕೊಡ ಕೂಡದು.

(೨) ಯಾವ ಸಂನ್ಯಾಸಿಯೂ ಹೆಂಗಸರ ಮಠದಲ್ಲಿ ವಾಸಿಸ ಕೂಡದು. ಈ ನಿಯಮವನ್ನು ಯಾರು ಪಾಲಿಸುವುದಿಲ್ಲವೋ ಅವರನ್ನು

ಮತದಿಂದ ಹೊರಗೆ ಹಾಕಬೇಕು. ಕೆಟ್ಟವರು ಇರುವುದಕ್ಕಿಂತ ಯಾರೂ ಇಲ್ಲದೇ ಇರುವುದು ಮೇಲು.

(೩) ದುರ್ನಡತೆಯವರನ್ನು ಬಲವಂತದಿಂದ ಹೊರಗೆ ಇಟ್ಟಿರಬೇಕು. ಯಾವ ಕಾರಣದಿಂದಲೂ ಕೂಡ ಅವರ ನೆರಳು ಕೂಡ ನಮ್ಮ ಕೋಣೆಯನ್ನು ಸೇರಕೂಡದು. ನಿಮ್ಮಲ್ಲಿಯೇ ಯಾರಾದರೂ ದುರ್ನಡತೆಯುವರಾದರೆ ಅವನು ಯಾರೇ ಆಗಲಿ ತಕ್ಷಣ ಹೊರಗೆ ಕಳುಹಿಸಿ. ನಮಗೆ ಯಾವ ಕಪಟಿಗಳೂ ಬೇಕಾಗಿಲ್ಲ. ಭಗವಂತ ಅನೇಕ ಉತ್ತಮರನ್ನು ಕಳುಹಿಸುವನು.

(೪) ಯಾವ ಸ್ತ್ರೀಯರಾದರೂ ಆಗಲಿ ಪಾಠಪ್ರವಚನಗಳು ನಡೆಯುತ್ತಿರುವಾಗ ಬರಬಹುದು. ಆದರೆ ಅದು ಮುಗಿದ ತಕ್ಷಣವೇ ಅಲ್ಲಿಂದ ನೇರವಾಗಿ ಹೊರಟು ಹೋಗಬೇಕು.

(೫) ಎಂದೂ ಕೋಪ ತೋರಬೇಡಿ. ಇನ್ನೊಬ್ಬರಲ್ಲಿ ಅಸೂಯೆ ಪಡಬೇಡ. ಗೋಪ್ಯವಾಗಿ ಮತ್ತೊಬ್ಬನ ಮೇಲೆ ಚಾಡಿ ಹೇಳಬೇಡ. ಇನ್ನೊಬ್ಬರ ತಪ್ಪನ್ನು ಮಾತ್ರ ಗಮನಕ್ಕೆ ತೆಗೆದುಕೊಂಡು ತಮ್ಮ ತಪ್ಪನ್ನು ತಿದ್ದಿಕೊಳ್ಳದೆ ಇರುವುದೇ ಕ್ರೌರ್ಯ ಮತ್ತು ನಿರ್ದಯ ತೆಯ ಪರಮಾವಧಿ.

(೬) ಭೋಜನ ಸಕಾಲದಲ್ಲಿ ಆಗಬೇಕು. ಪ್ರತಿಯೊಬ್ಬನಿಗೂ ಒಂದು ಆಸನ ಮತ್ತು ಊಟಕ್ಕೆ ಒಂದು ಸಣ್ಣ ಪೀಠ ಇರಬೇಕು. ರಾಜಪುತ್ರಸ್ಥಾನದಲ್ಲಿ ವಾಡಿಕೆಯಾಗಿರುವಂತೆ ಆಸನದ ಮೇಲೆ ಕುಳಿತು ತಟ್ಟೆಯನ್ನು ಪೀಠದ ಮೇಲೆ ಇಡಬೇಕು.

## ಮೇಲ್ವಿಚಾರಕರು

ಎಲ್ಲಾ ಮೇಲ್ವಿಚಾರಕರನ್ನು ಭಗವಾನ್ ಬುದ್ಧ ದೇವರ ಆಜ್ಞೆಯ ಮೇರೆಗೆ ಓಟಿನ ಮೂಲಕವಾಗಿ ಚುನಾಯಿಸಬೇಕು. ಅಂದರೆ ಒಬ್ಬರು ಈ ವರುಷ ಇಂತಹವರು ಅಧ್ಯಕ್ಷರಾಗಬೇಕೆಂದು ಸಭೆಯ ಮುಂದೆ ಸೂಚಿಸಬಹುದು. ಎಲ್ಲರೂ ಅವರ ಅಭಿಮತವನ್ನು ಬೇಕು ಅಥವಾ ಬೇಡ ಎಂದು ಚೀಟಿಯಲ್ಲಿ ಬರೆದು ಒಂದು ಪಾತ್ರೆಯಲ್ಲಿ ಹಾಕಬೇಕು. ಬೇಕು ಎನ್ನುವವರಿಗೆ ಬಹುಮತ ಸಿಕ್ಕಿದರೆ ಅವರು ಅಧ್ಯಕ್ಷರಾಗುವರು.

ಇತ್ಯಾದಿ. ನೀವು ಮೇಲ್ವಿಚಾರಕರನ್ನು ಈ ಮೇರೆಗೆ ಚುನಾಯಿಸ ಬೇಕಾದರೂ ಈ ವರುಷ ನಾನು ಬ—ಅಧ್ಯಕ್ಷನಾಗಿಯೂ ನ—ಕಾರ್ಯದರ್ಶಿ ಮತ್ತು ಕೋಶಾಧ್ಯಕ್ಷನಾಗಿಯೂ, ಸ—ಪುಸ್ತಕಾಲಯದ ಅಧಿಕಾರಿ ಯಾಗಿಯಾಗಿಯೂ, ರ—ಹ—ಅ—ಮತ್ತು ತ, ಇವರು ಧರ್ಮ ಪ್ರಚಾರ ಮತ್ತು ಬೋಧನೆಯನ್ನು ಸರದಿಯ ಮೇಲೆ ವಹಿಸಬೇಕೆಂದು ಸೂಚಿಸು ತ್ತೇನೆ.

ತ—ಒಂದು ಮಾಸಪತ್ರಿಕೆಯನ್ನು ಹೊರಡಿಸಬೇಕೆಂದಿರುವುದು ಒಳ್ಳೆಯ ಅಭಿಪ್ರಾಯವೇ ಸರಿ. ನೀನು ಕೂಡ ಅವನೊಂದಿಗೆ ಕೆಲಸ ಮಾಡುವುದಕ್ಕೆ ಒಪ್ಪಿಕೊಂಡರೆ ಮಾತ್ರ ನಾನು ಅದಕ್ಕೆ ಒಪ್ಪಿಗೆ ಕೊಡು ತ್ತೇನೆ.

ಸಿದ್ಧಾಂತಗಳು ಮತ್ತು ಇವುಗಳ ವಿಚಾರವಾಗಿ ನಾನು ಹೇಳಬೇಕಾಗಿರುವುದು ಇಷ್ಟೆ. ಯಾರಾದರೂ ಶ್ರೀರಾಮ ಕೃಷ್ಣ ದೇವರನ್ನು ಅವತಾರವೆಂದು ಒಪ್ಪಿಕೊಂಡರೆ ಸರಿ. ಅವರು ಒಪ್ಪಿ ಕೊಳ್ಳದೇ ಇದ್ದರೂ ಚಿಂತೆ ಇಲ್ಲ. ಎಲ್ಲಾ ಒಂದೇ. ಅದರ ಸತ್ಯಾಂಶ ವೇನೆಂದರೆ, ಪರಮಹಂಸ ದೇವರು ಚಾರಿತ್ರ್ಯ ಮಹತ್ವದ ದೃಷ್ಟಿಯಿಂದ ಹಳೆಯ ಅವತಾರಗಳೆಲ್ಲವನ್ನೂ ಮೀರಿರುವರು. ಉಪದೇಶದ ದೃಷ್ಟಿ ಯಿಂದ ಹಿಂದಿನವರೆಲ್ಲರಿಗಿಂತಲೂ ಹೆಚ್ಚು ಉದಾರಿಗಳಾಗಿಯೂ, ಹೆಚ್ಚು ಅಪೂರ್ವವಾಗಿಯೂ, ಹೆಚ್ಚು ಪ್ರಗತಿಗಾಮಿಗಳಾಗಿಯೂ ಇರುವರು. ಪೂರ್ವದ ಆಚಾರ್ಯಗಳೆಲ್ಲರು ಏಕಪಕ್ಷದವರಾಗಿದ್ದರು. ಈ ಹೊಸ ಅವತಾರ ಪುರುಷನ ಉಪದೇಶವಾದರೋ, ಜ್ಞಾನ, ಭಕ್ತಿ, ಕರ್ಮಯೋಗಗಳ ಒಳ್ಳೆಯ ಭಾಗಗಳೆಲ್ಲವನ್ನು ಸೇರಿಸಿ ಒಂದು ಹೊಸ ಸಂಘವನ್ನು ಮಾಡಬೇಕೆಂಬುದು, ಹಳೆಯ ಅವತಾರಗಳೂ ನಿಸ್ಸಂ ದೇಹವಾಗಿ ಒಳ್ಳೆಯವೆ. ಆದರೆ ಈ ಯುಗದ ಹೊಸ ಧರ್ಮವಿದು. ಜ್ಞಾನ, ಭಕ್ತಿ, ಕರ್ಮಯೋಗಗಳ ಸಮ್ಮೇಳನವಾಗಬೇಕು. ಜ್ಞಾನ ಭಕ್ತಿಯನ್ನು ಚಂಡಾಲನವರೆವಿಗೂ ಲಿಂಗ ಜಾತಿಗಳ ಭೇದ ಭಾವವನ್ನು ಇಟ್ಟುಕೊಳ್ಳದೆ ಎಲ್ಲರಿಗೂ ಧರ್ಮವನ್ನು ಬೋಧಿಸಬೇಕು. ಹಳೆಯ ಅವತಾರಗಳು ಸರಿಯಾಗಿದ್ದವು. ಆದರೆ ಅವರೆಲ್ಲರೂ ಈಗ ಈ ರಾಮ

ಕೃಷ್ಣರಲ್ಲಿ ಐಕ್ಯರಾಗಿರುವರು. ಸಾಧಾರಣ ಮನುಷ್ಯನಿಗೆ ಮತ್ತು ಪ್ರಾರಂಭದಲ್ಲಿರುವವನಿಗೆ ಒಂದು ಆದರ್ಶಕ್ಕೆ ನಿಷ್ಠೆ ಅತ್ಯಾವಶ್ಯಕ. ಅಂದರೆ ಎಲ್ಲಾ ಮಹಾಪುರುಷರನ್ನು ಯಥೋಚಿತವಾಗಿ ಗೌರವಿಸಬೇಕು. ಆದರೆ ಈಗ ಶ್ರೀರಾಮಕೃಷ್ಣರಲ್ಲಿ ಮಾತ್ರ ಶರಣಾಗತರಾಗಬೇಕೆಂದು ಬೋಧಿಸಬೇಕು. ದೃಢಭಕ್ತಿ ಇಲ್ಲದೇ ಇದ್ದರೆ ಓಜಸ್ಸು ಇರುವುದಿಲ್ಲ. ಅಲ್ಲದೆ ಮಹಾ ವೀರನಂತೆ ಉಗ್ರ ಭಕ್ತನ ರೀತಿಯಲ್ಲಿ ಉಪದೇಶ ಮಾಡುವುದಕ್ಕೆ ಆಗುವುದಿಲ್ಲ. ಅದೂ ಅಲ್ಲದೆ ಹಿಂದಿನ ಅವತಾರಗಳೆಲ್ಲ ಹಳೆಯದಾಗಿ ಹೋಗಿವೆ. ಈಗ ನಮಗೆ ಆಧುನಿಕ ಭಾರತ ಬಂದಿದೆ. ಅದರೊಳಗೆ ಆಧುನಿಕ ದೇವರೂ, ಆಧುನಿಕ ಧರ್ಮವೂ, ಆಧುನಿಕ ವೇದಗಳು ಬಂದಿರುವುವು. ಹೇ ಜಗದೀಶ! ಎಂದು ನಮ್ಮ ಜನರಲ್ಲಿ ಯಾವಾಗಲೂ, ಗತಿಸಿದ ವೈಭವವನ್ನು ಮೆಲಕುಹಾಕುವ ಪದ್ಧತಿ ಹೋಗುವುದು? ಹೌದು: ಸ್ವಲ್ಪ ಮತಾಂಧತೆಯೂ ಆವಶ್ಯಕ. ಆದರೆ ಮತ್ತೊಬ್ಬರೊಡನೆ ಯಾವ ವಿಧವಾದ ದ್ವೇಷ ಅಸೂಯೆಗಳನ್ನು ನಾವು ಮನಸ್ಸಿನಲ್ಲಿಡಬಾರದು.

ಈ ನನ್ನ ಸೂಚನೆಗಳಿಗೆ ಅನುಗುಣವಾಗಿ ನಡೆಯುವುದು ಮೇಲೆಂದು ತಿಳಿದರೆ ಈ ನಿಯಮಗಳಿಗೆ ಅನುಸಾರವಾಗಿ ನೀವು ನಡೆದುಕೊಂಡರೆ, ಇದಕ್ಕೆ ಬೇಕಾದ ದ್ರವ್ಯ ಸಹಾಯವೆಲ್ಲವನ್ನು ನಾನು ಮಾಡುವೆನು. ಅದೂ ಅಲ್ಲದೆ ಈ ಪತ್ರವನ್ನು ಶ್ರೀ ಮಾತೆಯವರು ಮತ್ತು ಇತರರಿಗೆ ತೋರಿಸಿ ಅವರ ಮೂಲಕ ಒಂದು ಹೆಂಗಸರ ಮಠವನ್ನು ಸ್ಥಾಪಿಸಿ. ಶ್ರೀ ಮಾತೆಯವರು ಅಲ್ಲಿ ಒಂದು ವರುಷ ಅಧ್ಯಕ್ಷರಾಗಿರಲಿ. ಆದರೆ ನಿಮ್ಮಗಳಲ್ಲಿ ಯಾರನ್ನೂ ಅಲ್ಲಿಗೆ ಹೋಗುವುದಕ್ಕೆ ಬಿಡುವುದಿಲ್ಲ. ಅವರು ತಮ್ಮ ಕೆಲಸವನ್ನು ತಾವೇ ನೋಡಿಕೊಳ್ಳುವರು. ನೀವು ಹೇಳಿದಂತೆ ಅವರೇನು ಮಾಡಬೇಕಾಗಿಲ್ಲ. ಅವರ ಕೆಲಸಕ್ಕೆ ಬೇಕಾಗುವ ದ್ರವ್ಯವನ್ನು ಕೂಡ ನಾನು ಒದಗಿಸುವೆನು.

ಭಗವಂತ ನಿಮ್ಮನ್ನು ಸರಿಯಾದ ಮಾರ್ಗದಲ್ಲಿ ಕರೆದೊಯ್ಯಲಿ! ಇಬ್ಬರು ಭಕ್ತರು ಜಗನ್ನಾಥನನ್ನು ನೋಡಲು ಹೋದರು. ಒಬ್ಬನು

ದೇವರನ್ನು ದರ್ಶನ ಮಾಡಿದನು. ಮತ್ತೊಬ್ಬನಿಗೆ ತನ್ನ ಮನಸ್ಸಿನಲ್ಲಿ ಅಡಗಿಕೊಂಡಿದ್ದ ಯಾವುದೋ ಕೆಟ್ಟ ಚಿತ್ರ ಹೊರಗೆ ಕಂಡಿತು.

ನನ್ನ ಸ್ನೇಹಿತನೆ! ಅನೇಕರು ಶ್ರೀ ಗುರುದೇವನನ್ನೇನೊ ನಿಸ್ಸಂದೇಹವಾಗಿ ಸೇವಿಸಿರುವರು. ಆದರೆ ಎಂದಾದರೂ ಯಾರಾದರು ತಾನು ಒಂದು ಅದ್ಭುತ ವ್ಯಕ್ತಿ ಎಂದು ತಿಳಿಯಲೆತ್ನಿಸಿದರೆ, ಆತನು ಶ್ರೀ ರಾಮಕೃಷ್ಣರೊಂದಿಗೆ ಸಂಬಂಧವನ್ನು ಇಟ್ಟುಕೊಂಡಿದ್ದರೂ, ತನ್ನ ಮನಸ್ಸಿನಲ್ಲಿದ್ದ ಯಾವುದೊ ಒಂದು ಅನಿಷ್ಟವನ್ನು ಹೊರಗೆ ನೋಡಿದ ನೆಂದು ತಿಳಿಯಬೇಕು! ಹಾಗಿಲ್ಲದೇ ಇದ್ದರೆ ಅದರ ಪ್ರತಿಫಲ ಅವನಲ್ಲೇ ಕಾಣುತ್ತಿತ್ತು. "ದೇವರ ಹೆಸರಿನಲ್ಲಿ ಕುಣಿದಾಡುವರು ಆದರೆ ಕೊನೆಗೆ ಸಂಕಟಕ್ಕೆ ತುತ್ತಾಗುವರು" ಯೆಂದು ಶ್ರೀ ಗುರುದೇವರೇ ಹೇಳುತ್ತಿದ್ದರು. ಈ ಅಧೋಗತಿಗೆ ಕಾರಣ ಅಹಂಕಾರದಲ್ಲಿದೆ. ಅವರಂತೆ ತಾನೂ ಒಬ್ಬ ದೊಡ್ಡ ಮನುಷ್ಯನೆಂದು ತಿಳಿದುಕೊಳ್ಳುವರು. ಬಹಳ ನಿಜ! "ಅವರು ನನ್ನನ್ನು ಪ್ರೀತಿಸುತ್ತಿದ್ದರು" ಎಂದು ಹೇಳಿ ಕೊಳ್ಳುವರು. ಅದು ನಿಜವಾಗಿಯೂ ಸತ್ಯವಾಗಿದ್ದರೆ ನೀನು ಹೀಗೆ ಇರುತ್ತಿದ್ದೆಯೋ! ಅಂತಹವನು ಮತ್ತೊಬ್ಬನೊಂದಿಗೆ ಜಗಳವಾಡುವನೆ? ಅಸೂಯಪಡುವನೆ? ಅಂತಹ ಹೀನಸ್ಥಿತಿಗೆ ಬರುವನೆ? ಇದನ್ನು ಮನಸ್ಸಿನಲ್ಲಿಡು. ಶ್ರೀ ಗುರುದೇವನ ದಯೆಯಿಂದ ಅನೇಕ ಜನರು ದೇವರಂತಹ ಉದಾರ ಸ್ವಭಾವವುಳ್ಳವರಾಗುವರು. ಅವರ ದಯೆಯು ಹನಿ ಎಲ್ಲೆಲ್ಲಿ ಬೀಳುವುದೋ ಅಲ್ಲೆಲ್ಲ ಇದು ನಿಜವಾಗುವುದು. . . . . ವಿಧೇಯತೆ ಮೊದಲನೇ ಕರ್ತವ್ಯ. ಸರಿ, ನಾನು ಏನು ಹೇಳುತ್ತೇನೆಯೊ ಅದನ್ನು ಚಟುವಟಿಕೆಯಿಂದ ಮಾಡು. ಈ ಕೆಲವು 'ಸಣ್ಣ ವಿಷಯ ಗಳನ್ನು ನೀನು ಹೇಗೆ ಅನುಷ್ಠಾನಕ್ಕೆ ತರುವೆಯೋ ನೋಡೋಣ. ನಂತರ ಕ್ರಮೇಣ ಮಹಾ ಕಾರ್ಯಗಳು ಬರುವುವು.

ನಿನ್ನ ವಿವೇಕಾನಂದ.

ವಿ. ಸು.—ದಯವಿಟ್ಟು ಈ ಪತ್ರದ ವಿಷಯವನ್ನು ಎಲ್ಲರಿಗೂ ಓದಿ ಹೇಳು. ಈ ಸೂಚನೆ ಅನುಷ್ಠಾನಯೋಗ್ಯವೆಂದು ತಿಳಿಯುತ್ತಿರೋ

ಏನು ನನಗೆ ಗೊತ್ತಾಗಬೇಕು. ದಯವಿಟ್ಟು ಬ—ಗೆ, ಯಾರು ಎಲ್ಲರ ಸೇವಕನೋ, ಅವನು ಮಾತ್ರ ನಿಜವಾಗಿ ಅವರ ಯಜಮಾನ ಎಂದು ಹೇಳು. ಯಾರ ಪ್ರೇಮದಲ್ಲಿ ಒಬ್ಬನು ಕಡಿಮೆ ಒಬ್ಬನು ಹೆಚ್ಚು ಎಂಬ ತಾರತಮ್ಯ ವಿರುವುದೋ ಅವನು ಎಂದಿಗೂ ಮುಂದಾಳಾಗುವುದಿಲ್ಲ. ಯಾರ ಪ್ರೇಮಕ್ಕೆ ಒಂದು ಎಲ್ಲೆಕಟ್ಟಿಲ್ಲವೋ, ಯಾರನ್ನೂ, ಇವರು ಉತ್ತಮರು ಅಧಮರೆಂದು ನೋಡುವುದಿಲ್ಲವೋ, ಅವನ ಪಾದ ತಳದಲ್ಲಿ ಇಡೀ ವಿಶ್ವವೇ ಬೀಳುವುದು.

ವಿವೇಕಾನಂದ.

೭೨

೬೩, ಸೆಂಟ್ ಜಾರ್ಜ್ ರೋಡ್, ಲಂಡನ್
ನೊ ೧೮೯೬.

ಪ್ರಿಯ ಸಹೋದರಿ,

ಪುನಃ ಲಂಡನ್ನಿಗೆ ಬಂದಿರುವೆನು. ಈಗ ಇಂಗ್ಲೆಂಡಿನ ವಾಯು ಗುಣವು ತಂಪಾಗಿ ಚೆನ್ನಾಗಿದೆ. ಬೆಂಕಿ ಕಾಯಿಸಿಕೊಳ್ಳುವ ಮನೆಯಲ್ಲಿ ಬೆಂಕಿ ಇದೆ. ಈಸಲಿ ಒಂದು ಪೂರ್ತಿ ಮನೆಯು ನಮ್ಮ ವಶದಲ್ಲಿರುವುದು. ಇದು ಸಣ್ಣದಾದರೂ ಅನುಕೂಲವಾಗಿರುವುದು. ಲಂಡನ್ನಿನಲ್ಲಿ ಅಮೇರಿಕದಷ್ಟು ಹೆಚ್ಚು ಬೆಲೆ ಇಲ್ಲ. ನಿಮ್ಮ ತಾಯಿಯ ವಿಚಾರವಾಗಿ ನಾನು ಏನು ಆಲೋಚನೆ ಮಾಡುತ್ತಿರುವೆನೆಂಬುದು ನಿನಗೆ ಗೊತ್ತಿಲ್ಲವೆ? ಅವರಿಗೆ ನಾನು ಈಗತಾನೆ ಒಂದು ಪತ್ರವನ್ನು ಬರೆದು ಪ್ಯಾರಿಸ್ ವಿಳಾಸಕ್ಕೆ ಹಾಕಿರುವೆನು. ಕೆಲವು ಹಳೆಯ ಸ್ನೇಹಿತರು ಇಲ್ಲಿರುವರು. ಶ್ರೀಮತಿ ಮ—ಅಮೇರಿಕಾದಿಂದ ಇಲ್ಲಿಗೆ ಬಂದಿರುವಳು. ಅಪರಂಜಿಯಂತೆ ಪರಿಶುದ್ಧಳಾಗಿಯೂ ಎಂದಿನಂತೆ ದಯಾರ್ದ್ರಹೃದಯಳಾಗಿಯೂ ಇರುವಳು. ಇಂಡಿಯಾ ದೇಶದಿಂದ ಮತ್ತೊಬ್ಬ ಸಂನ್ಯಾಸಿ ಬಂದಿರುವನು. ಅವನನ್ನೂ ಸೇರಿಸಿಕೊಂಡು ಈಗ ನಾವು ಮನೆಯಲ್ಲಿ ಚಿಕ್ಕ ಸಂಸಾರವಾಗಿರುವೆವು. ಅಯ್ಯೋ ಪಾಪ! ಅವನು ಪಕ್ಕಾ ಹಿಂದೂ. ಸ್ವಲ್ಪವಾದರೂ ನನ್ನಂತೆ ಮುಂದೆ ನುಗ್ಗುವ ಸ್ವಭಾವ

ದವನಲ್ಲ. ಯಾವಾಗಲೂ ಭಾವಜೀವಿ; ಶಾಂತ ಸ್ವಭಾವದವನು ಮತ್ತು ಮಧುರ ಪ್ರಕೃತಿಯುಳ್ಳವನು! ಅದರಿಂದ ಪ್ರಯೋಜನವಿಲ್ಲ. ಸ್ವಲ್ಪ ಚಟುವಟಿಕೆಯನ್ನು ಅವನಲ್ಲಿ ತುಂಬಲು ಯತ್ನಿಸುತ್ತೇನೆ. ಆಗಲೇ ನನ್ನ ಎರಡು ಪ್ರವಚನಗಳು ಆದವು. ಇವುಗಳು ಹೀಗೆ ನಾಲ್ಕೈದು ತಿಂಗಳವರೆವಿಗೂ ನಡೆಯುವುವು. ನಂತರ ನಾನು ಇಂಡಿಯಾ ದೇಶಕ್ಕೆ ಹೋಗುತ್ತೇನೆ. ಆದರೆ ನನ್ನ ಹೃದಯ ಇರುವುದು ಅಮೇರಿಕಾದಲ್ಲಿ. ನಾನು ಯಾಂಕಿಗಳ ನಾಡನ್ನು ಪ್ರೀತಿಸುತ್ತೇನೆ. ನನಗೆ ಹೊಸ ವಿಷಯಗಳನ್ನು ನೋಡಲಾಸೆ. ಪಾಳೂರುಗಳನ್ನು ನೋಡುವುದಕ್ಕೂ ನನಗೆ ಇಚ್ಛೆಯಿಲ್ಲ. ಹಿಂದಿನ ಚರಿತ್ರೆಯನ್ನು ಮೆಲುಕುಹಾಕುತ್ತ, ಗತಿಸಿದ ವೈಭವಕ್ಕೆ ನಿಟ್ಟುಸಿರು ಬಿಟ್ಟು ಜೀವನವನ್ನು ವ್ಯರ್ಥ ಮಾಡಲಾರೆ. ನನ್ನ ನಾಡಿಯಲ್ಲಿ ಹರಿಯುತ್ತಿರುವ ರಕ್ತ ಇನ್ನೂ ತುಂಬ ಬಿಸಿಯಾಗಿದೆ. ಉದ್ವೇಗಪೂರಿತವಾಗಿದೆ. ಪ್ರತಿಯೊಂದಕ್ಕೂ ಅವಕಾಶ ಅಮೇರಿಕಾ ದೇಶದಲ್ಲಿ ಅಲ್ಲಿಯ ಜನಾಂಗದಲ್ಲಿದೆ. ನಾನು ಉಗ್ರಪಥಗಾಮಿ. ಬುಡಮಟ್ಟ ತಿದ್ದುಪಡಿಯಾಗಬೇಕು ಎನ್ನುವವರ ಪಂಗಡಕ್ಕೆ ಸೇರಿದವನು. ಪೂರ್ವಾಚಾರ ಪರಾಯಣರಾಗಿ, ಸ್ವಲ್ಪವೂ ಮುಂದುವರಿಯಬೇಕೆಂಬ ಆಸೆಯಿಲ್ಲದೆ, ಭೀಷಣ ರಾಶಿಯಾದ ಭರತಖಂಡಕ್ಕೆ ನಾನು ಹೊರಡುವುದರಲ್ಲಿರುವೆನು. ಅಲ್ಲಿ ಒಂದು ಆಧುನಿಕ ರೀತಿಯನ್ನು ಪ್ರಾರಂಭಿಸಬೇಕೆಂದಿರುವೆನು. ಅದು ಸಂಪೂರ್ಣ ಹೊಸದಾಗಿರಬೇಕು, ಸರಳವಾಗಿರಬೇಕು, ಭದ್ರವಾಗಿರಬೇಕು. ನವೀನವಾಗಿ ಈಗತಾನೆ ಹುಟ್ಟಿದ ಮಗುವಿನಷ್ಟು ಹೊಸದಾಗಿರಬೇಕು. ಸನಾತನವು, ಅನಂತವು, ಸರ್ವವ್ಯಾಪಿಯೂ, ಸರ್ವಜ್ಞತೆಯೂ ಒಂದು ಮೂಲ ತತ್ತ್ವವಲ್ಲದೆ ಒಂದು ವ್ಯಕ್ತಿಯಲ್ಲ. ನೀನು ನಾನು ಮತ್ತು ಎಲ್ಲರೂ ಈ ಮೂಲ ತತ್ತ್ವದ ಸಮಾವೇಷ (embodiment) ಈ ಅನಂತ ಮೂಲ ತತ್ತ್ವ ವ್ಯಕ್ತಿಯಲ್ಲಿ ಎಷ್ಟು ಎಷ್ಟು ಹೆಚ್ಚು ಆವಿರ್ಭವಿಸುವುದೋ ಅಷ್ಟು ಮಹಾ ಪುರುಷನಾಗುವನು. ಎಲ್ಲರಲ್ಲಿಯೂ ಕೊನೆಗೆ ಆ ಮೂಲ ತತ್ತ್ವ ಸಂಪೂರ್ಣವಾಗಿ ಆವಿರ್ಭವಿಸುವುದು. ಈಗ ಪಾರಮಾರ್ಥಿಕ ದೃಷ್ಟಿಯಿಂದ ಎಲ್ಲರೂ

ಹೇಗೆ ಒಂದಾಗಿರುವರೋ ಹಾಗೆಯೆ ನಂತರ ಎಲ್ಲರೂ ಮೂಲ ತತ್ತ್ವದಲ್ಲಿ ಐಕ್ಯರಾಗುವರು. ಧರ್ಮಗಳಲ್ಲಿರುವುದೆಲ್ಲ ಇದೇ. ಐಕ್ಯತೆಯ ಭಾವನೆಯ ಮೂಲಕವಾಗಿ, ಅಂದರೆ, ಪ್ರೇಮದ ಮೂಲಕ ಸಾಧನೆ ಮಾಡಬೇಕು. ಎಲ್ಲಾ ಪುರಾತನ ನಸಕುನಸಕಾಗಿ ಕಾಣುವ ಆಚರಣೆಗಳೆಲ್ಲ ಹಳೆಯ ಮೂಢ ನಂಬಿಕೆ. ಅವುಗಳನ್ನು ಇನ್ನೂ ಬದುಕಿರುವಂತೆ ಮಾಡುವುದಕ್ಕೆ ಏತಕ್ಕೆ ಪ್ರಯತ್ನಿಸುವುದು. ಹತ್ತಿರದಲ್ಲೇ ಪ್ರಾಣದಾನ ಮಾಡುವ, ಸತ್ತ್ವವನ್ನು ನೀಡುವ, ಜೀವನದಿ ಹರಿಯುತ್ತಿರುವಾಗ, ಬಾಯಾರಿದವರಿಗೆ ಚರಂಡಿಯ ನೀರನ್ನು ಏತಕ್ಕೆ ಕೊಡಬೇಕು? ಇದು ಮಾನವನ ಸ್ವಾರ್ಥತೆಯಲ್ಲದೆ ಮತ್ತೇನೂ ಅಲ್ಲ. ಜೀವನವಿರುವುದು ಅಲ್ಪಕಾಲ. ಕಾಲವಾದರೋ ಓಡುತ್ತಿದೆ. ಅವರ ಆಲೋಚನೆ ಯಾವೆಡೆಯಲ್ಲಿ, ಯಾವ ಜನಾಂಗದಲ್ಲಿ ಬೇಗ ಅನುಷ್ಠಾನ ಸ್ಥಿತಿಗೆ ಬರುವುದೋ ಅದೇ ಪ್ರತಿಯೊಬ್ಬರಿಗೂ ದೇಶವಾಗಬೇಕು. ಜನಾಂಗವಾಗಬೇಕು. ವಿಶಾಲವಾದ, ದೊಡ್ಡಗುಣದ, ನಿಷ್ಕಪಟಿಗಳಾದ ಒಂದು ಹನ್ನೆರಡು ಮಂದಿ ಕೆಚ್ಚೆದೆಯವರು ಸಿಕ್ಕಿದರೆ!

ನಿಜವಾಗಿಯೂ ನಾನು ಈಗ ಬಹಳ ಆರೋಗ್ಯದಲ್ಲಿರುವೆನು. ಸಂಪೂರ್ಣ ಜೀವನವನ್ನು ಆನಂದಿಸುತ್ತಿರುವೆನು. ಅನವರತವೂ ನಿನ್ನ ವಿಶ್ವಾಸಪೂರ್ವಕ!

ವಿವೇಕಾನಂದ.

೭೩

೬೩, ಸೆಂಟ್ ಜಾರ್ಜ್ ರೋಡ್, ಲಂಡನ್,
೭ನೇ ಜೂನ್ ೧೮೯೬.

ಪ್ರಿಯ ಶ್ರೀಮತಿ ನೋಬಲ್,

ನನ್ನ ಆದರ್ಶವನ್ನು ನಿಜವಾಗಿ ಬಹಳ ಸ್ವಲ್ಪ ಪದಗಳಲ್ಲಿ ವ್ಯಕ್ತಪಡಿಸಬಹುದು. ಅದೇ ಮಾನವನಿಗೆ ತನ್ನ ದೇವತ್ವವನ್ನು ಬೋಧಿಸುವುದು ಮತ್ತು ಅದನ್ನು ಜೀವನದ ಪ್ರತಿಯೊಂದು ಕ್ಷಣದಲ್ಲೂ ಹೇಗೆ ವ್ಯಕ್ತಗೊಳಿಸಬೇಕೆಂಬುದನ್ನು ತಿಳಿಸುವುದು.

ಈ ಪ್ರಪಂಚವೇ ಒಂದು ಮೂಢ ನಂಬಿಕೆಯ ಸರಪಣಿಯಲ್ಲಿ ಬದ್ಧವಾಗಿರುವುದು. ಗಂಡಸಾಗಲೀ, ಹೆಂಗಸಾಗಲೀ ನಾನು ಪದದಳಿತ ರನ್ನು ನೋಡಿ ಕನಿಕರ ಪಡುವೆನು. ಯಾರು ಇವನನ್ನು ಈ ಸ್ಥಿತಿಗೆ ತರುತ್ತಾರೋ ಅವರನ್ನು ನೋಡಿ ಇನ್ನೂ ಹೆಚ್ಚು ಮನ ಕರಗುವೆನು.

ಹಗಲಿನಷ್ಟು ಸ್ಫುಟವಾಗಿ ನನಗೆ ತಿಳಿಯುವ ಒಂದು ವಿಷಯ ವೇನೆಂದರೆ, ದುಃಖವೆಲ್ಲ ಅಜ್ಞಾನದಿಂದ ಜನಿಸುವುದು. ಅಲ್ಲದೆ ಬೇರೆ ಏನೂ ಇಲ್ಲ. ಜಗತ್ತಿಗೆ ಜ್ಞಾನವನ್ನು ಯಾರು ಕೊಡುವರು. ಹಿಂದೆ ಆತ್ಮಾರ್ಪಣೆಯು ನಿಯಮವಾಗಿತ್ತು. ಅಯ್ಯೋ! ಮುಂದೆ ಬರುವ ಅನೇಕ ಯುಗಗಳಲ್ಲಿಯೂ ಇದೇ ನಿಯಮವಾಗುವುದು. ಜಗತ್ತಿನ ಅತಿ ಧೀರರು ಮತ್ತು ಪುಣ್ಯಾತ್ಮರು ಹಲವರ ಹಿತಕ್ಕೋಸುಗವಾಗಿ, ಎಲ್ಲರ ಮೇಲ್ಮೆಗೋಸುಗವಾಗಿ ತಮ್ಮ ಆತ್ಮವನ್ನು ಅರ್ಪಣೆ ಮಾಡಬೇಕು. ಅನಂತ ಪ್ರೇಮ, ಮತ್ತು ಭೂತ ದಯೆದಿಂದ ಕೂಡಿದ ನೂರಾರು ಬುದ್ಧರು ಬೇಕಾಗಿವೆ.

ಜಗದ ಧರ್ಮಗಳೆಲ್ಲ ನಿಸ್ತೇಜವಾಗಿ ನನೆಗೀಡಾಗಿವೆ. ಜಗತ್ತಿಗೆ ಬೇಕಾಗಿರುವುದು ಶುದ್ಧ ಚಾರಿತ್ರ್ಯ. ಯಾರ ಜೀವನದಲ್ಲಿ ನಿರಂತರವೂ ಪ್ರೇಮ ಸ್ವಾರ್ಥ ತ್ಯಾಗಗಳು ನಂದಾ ದೀವಿಗೆಯಂತೆ ಉರಿಯುತ್ತಿವೆಯೋ, ಅಂತಹ ಪುಣ್ಯಾತ್ಮರು ಜಗತ್ತಿಗೆ ಬೇಕಾಗಿವೆ. ಆ ಪ್ರೇಮವೇ ಪ್ರತಿ ಯೊಂದು ಮಾತಿನಿಂದಲೂ ಸಿಡಿಲಿನಂತಹ ಪರಿಣಾಮವನ್ನುಂಟು ಮಾಡ ಬಲ್ಲದು.

ನಿನ್ನಲ್ಲಿ ಯಾವ ಮೂಢ ನಂಬಿಕೆಯೂ ಇಲ್ಲವೆಂದು ತಿಳಿಯು ತ್ತೇನೆ. ಜಗತ್ತನ್ನು ಜಾಗ್ರತ ಗೊಳಿಸುವ ಚೇತನ ನಿನ್ನಲ್ಲಿದೆ. ಉಳಿ ದವರೂ ಕೂಡ ನಿನ್ನನ್ನು ಸೇರುವರು. ನಮಗೆ ಇಂದು ಬೇಕಾಗಿರುವುದು ಧೀರವಾದ ನುಡಿ, ಧೀರತರ ಕಾರ್ಯ. ಮಹಾ ವ್ಯಕ್ತಿಗಳೇ ಏಳಿ! ಜಾಗ್ರತ ರಾಗಿ! ಪ್ರಪಂಚ ದುಃಖದಲ್ಲಿ ಬೇಯುತ್ತಿದೆ. ನಿದ್ದೆ ಮಾಡುವಿರೇನು? ಮಲಗಿರುವ ದೇವನು ಜಾಗ್ರತನಾಗುವರಿಗೆ, ಅಂತರ್ಯಾಮಿಯು ನಮ್ಮ ಬೇಡಿಕೆಯನ್ನು ಕೇಳುವವರಿಗೆ, ನಾವು ಅವರನ್ನು ಎಡಬಿಡದೆ ಕರೆಯೋಣ! ಜಗತ್ತಿನಲ್ಲಿ ಇದಕ್ಕಿಂತ ಹೆಚ್ಚು ಏನು ಇರುವುದು? ಇದನ್ನು ಮೀರಿರುವ

ಕೆಲಸ ಯಾವುದಿರುವುದು? ನಾನು ಮುಂದುವರಿದಂತೆಲ್ಲ ವಿವರಗಳು ತಾನಾಗಿಯೇ ಬರುವುವು. ನಾನು ಎಂದಿಗೂ ಹಂಚಿಕೆ ಮಾಡುವುದಿಲ್ಲ. ತಾನಾಗಿ ಹಂಚಿಕೆಯು ಬೆಳೆದು ಕಾರ್ಯರಂಗದಲ್ಲಿ ಹೊರಬರುವುದು. ಜಾಗ್ರತರಾಗಿ! ಜಾಗ್ರತರಾಗಿ! ಎಂದು ಮಾತ್ರ ನಾನು ಹೇಳುವೆನು.

ಅನವರತವೂ ಎಲ್ಲಾ ಆಶೀರ್ವಾದಗಳು ನಿನಗೆ ಒಳ್ಳೆಯದನ್ನು ಮಾಡಲಿ.

ನಿನ್ನ ವಿಶ್ವಾಸ ಪೂರ್ವಕ
ವಿವೇಕಾನಂದ.

೭೪

೬೩, ಸೆಂಟ್ ಜಾರ್ಜ್ ರೋಡ್, ಲಂಡನ್, ಸೌತ್ ವೆಸ್ಟ್.
೬ ನೇ ಜುಲೈ ೧೮೯೬.

ಪ್ರಿಯ,

ಈ ಕಡೆಯ ಅಟ್ಲಾಂಟಿಕ್ ಸಾಗರದಲ್ಲಿ ನಾನು ಆರೋಗ್ಯವಾಗಿರುವೆನು. ಭಾನುವಾರದ ಉಪನ್ಯಾಸಗಳು ಬಹಳ ಯಶಸ್ವಿಯಾದವು. ಹಾಗೆಯೇ ಪ್ರವಚನಗಳೂ ಕೂಡ. ಅದಕ್ಕೆ ಅನುಕೂಲವಾದ ಕಾಲ ಮುಗಿಯಿತು. ನನಗೂ ಹಾಗೆಯೇ ಸಾಕಾಗಿರುವುದು. ಶ್ರೀಮತಿ ಮುಲ್ಲರ್‌ರೊಂದಿಗೆ ನಾನು ಸ್ವಿಟ್ಜರ್ಲೆಂಡ್ ಪ್ರಯಾಣಕ್ಕೆ ಹೊರಡುವೆನು. ಶ್ರೀಮತಿ ಜಿ—ಅವರು ನನಗೆ ಬಹಳ ದಯೆ ತೋರಿರುವರು. ಜಿ—ಅವರೆಲ್ಲರನ್ನು ಸರಿಯಾದ ಮಾರ್ಗಕ್ಕೆ ತಂದಳು. ಜಿ—ಯ ಶಾಂತಿ ಮತ್ತು ಬುದ್ಧಿವಂತಿಕೆಯನ್ನು ನೋಡಿ ನನಗೆ ಆನಂದವಾಯಿತು. ಆಕೆ ರಾಜಕಾರಣ ಪಟು. ಒಂದು ರಾಜ್ಯವನ್ನು ಕೂಡ ಸುಧಾರಿಸಬಲ್ಲಳು. ಆಕೆಯಂತಹ ತೇಜಸ್ವಿಯಾದ, ಆದರೂ ಬಹಳ ಒಳ್ಳೆಯ ವ್ಯವಹಾರ ಚತುರಳನ್ನು ಸಾಧಾರಣವಾಗಿ ನೋಡಿಲ್ಲ. ನಾನು ಬರು[illegible]ಋತುವಿನಲ್ಲಿ ಹಿಂತಿರಿಗಿ ಅಮೇರಿಕಾದಲ್ಲಿ ನನ್ನ ಕೆಲಸವನ್ನು ಪ್ರಾರಂಭಿಸುತ್ತೇನೆ.

ಮೊನ್ನೆಯ ರಾತ್ರಿ ಶ್ರೀಮತಿ ಮ—ಕೊಟ್ಟ ಒಂದು ಸಂತೋಷ ಕೂಟಕ್ಕೆ ಹೋಗಿದ್ದೆ. ಈ ವಿಚಾರವಾಗಿ ನಿನಗೆ ಆಗಲೇ ಜಿ—ಯಿಂದ ಎಲ್ಲಾ ತಿಳಿದಿರಬಹುದು.

ಒಳ್ಳೆಯದು. ಕೆಲಸ ಇಂಗ್ಲೆಂಡಿನಲ್ಲಿ ಮೌನವಾದರೂ ನಿಜವಾಗಿಯೂ ಹಬ್ಬುತ್ತಿದೆ. ಎಷ್ಟೊಂದು ನ್ಯೂನತೆಗಳಿದ್ದರೂ, ಈ ಬ್ರಿಟಿಷ್ ಚಕ್ರಾಧಿಪತ್ಯ ಆಲೋಚನೆಗಳನ್ನು ಹರಡುವುದಕ್ಕೆ ಹಿಂದೆ ಎಂದೂ ಇಲ್ಲದ ಒಂದು ಮಹಾದ್ಭುತವಾದ ಯಂತ್ರ. ಈ ಯಂತ್ರದ ಕೇದ್ರದಲ್ಲಿ ನಾನು ಆಲೋಚನೆಯನ್ನು ಹಾಕಬೇಕೆಂದು ಮಾಡಿಕೊಂಡಿರುವೆನು. ಅವು ಕ್ರಮೇಣ ಪ್ರಪಂಚದಲ್ಲೆಲ್ಲಾ ಹರಡುವುವು. ಎಲ್ಲಾ ಮಹಾಕಾರ್ಯಗಳೂ ಸಾಗುವುದು ಬಹಳ ನಿಧಾನ. ಅದಕ್ಕೆ ಇರುವ ಆತಂಕಗಳು ಬಹಳವೆನ್ನುವುದೇನೋ ನಿಜ. ಅದರಲ್ಲೂ ನಾವು ಹಿಂದೂಗಳು. ಇನ್ನೊಬ್ಬರು ನಮ್ಮನ್ನು ಜಯಿಸಿರುವರು. ಆದರೂ ಅದು ಫಲಕಾರಿಯಾಗುವುದಕ್ಕೆ ಇದೇ ಕಾರಣ. ಆಧ್ಯಾತ್ಮಿಕ ಭಾವಗಳು ಯಾವಾಗಲೂ ಪದದಳಿತರಿಂದ ಬಂದವು. ಯಹೂದ್ಯರು ರೋಮನ್ ಚಕ್ರಾಧಿಪತ್ಯದ ಮೇಲೆ ತಮ್ಮ ಪ್ರಭಾವವನ್ನು ಬೀರಿದರು. ನಾನೂ ಕೂಡ, ಪ್ರತಿದಿನವೂ ತಾಳ್ಮೆಯಲ್ಲಿ, ಎಲ್ಲಕ್ಕಿಂತ ಹೆಚ್ಚಾಗಿ ಸಹಾನುಭೂತಿಯಲ್ಲಿ, ಪಾಠಗಳನ್ನು ಕಲಿಯುತ್ತಿರುವೆನೆಂದು ತಿಳಿದು ನಿನಗೆ ಸಂತೋಷವಾಗಬಹುದು. ಪ್ರೌಂಡ ಪ್ರಚಂಡ ಆಂಗ್ಲೇಯರಲ್ಲಿಯೂ ಕೂಡ ನನಗೆ ದೇವತ್ವ ಕಾಣುವುದಕ್ಕೆ ಮೊದಲಾಗಿದೆ ಎಂದು ತಿಳಿಯುತ್ತೇನೆ. ನಾನು, ಕ್ರಮೇಣ ಏನಾದರೂ ಶೈತಾನನು ಇದ್ದರೆ ಅವನನ್ನು ಕೂಡ ಪ್ರೀತಿಸುವ ಸ್ಥಿತಿಗೆ ಬರುತ್ತಿರುವೆನು.

ನನಗೆ ಇಪ್ಪತ್ತು ವಯಸ್ಸಾದಾಗ ಅತ್ಯಂತ ಸಹಾನುಭೂತಿಹೀನನಾಗಿದ್ದೆ. ಎಂದಿಗೂ ರಾಜಿಯಾಗದ ಧರ್ಮಾಂಧನು ಆಗಿದ್ದೆ. ಕಲ್ಕತ್ತಾನಗರದಲ್ಲಿ ನಾಟಕಗಳಿರುವ ದಾರಿಯ ಪಕ್ಕದಲ್ಲಿ ಕೂಡ ನಡೆಯುತ್ತಿರಲಿಲ್ಲ. ನನ್ನ ಮೂವತ್ತುಮೂರನೆ ವಯಸ್ಸಿನಲ್ಲಿ ವೈಶ್ಯಾಂಗನೆಯರಿರುವ ಮನೆ[illegible]ವಾಸವಾಗಿರಬಲ್ಲೆ. ಅವರನ್ನು ಒಮ್ಮೆಯಾದರೂ ನಿಂದಾಸ್ಪದವಾದ ಮಾತುಗಳಿಂದ ನೋಯಿಸುವುದನ್ನು ಸಹಿಸಲಾರೆ. ಇದೇನು ಹೀನಸ್ಥಿತಿಯೊ? ಅಥವಾ ನಾನು ದೇವತಾ ಸ್ವರೂಪವಾದ ವಿಶ್ವಪ್ರೇಮಕ್ಕೆ ವಿಕಾಸವಾಗುತ್ತಿರುವೆನೊ? ತನ್ನ ಸುತ್ತಲೂ ಪಾಪವನ್ನು ನೋಡದೇ ಇದ್ದರೆ ಪುಣ್ಯಕೆಲಸಗಳನ್ನು ಮಾಡಲಾಗುವುದಿಲ್ಲವೆಂದೂ,

ಹಣೆಯಲ್ಲಿ ಬರೆದದ್ದು ಆಗುವುದು ಎಂಬ ಒಂದು ಸ್ವಾಭಾವಕ್ಕೆ ಬರುವನೆಂದೂ ನಾನು ಪುನಃ ಕೇಳಿರುವೆನು. ನಾನು ಅದನ್ನು (ಪಾಪವನ್ನು) ನೋಡುವುದಿಲ್ಲ. ಆದರೂ ನನ್ನ ಕೆಲಸ ಮಾಡುವ ಶಕ್ತಿ ಅಧಿಕವಾಗುತ್ತಿದೆ. ಅಧಿಕ ಫಲಕಾರಿಯಾಗುತ್ತಿದೆ. ಕೆಲವು ದಿನ ನಾನು ಪರವಶನಾಗುವೆನು. ನಾನು, ಎಲ್ಲರನ್ನು ಪ್ರತಿಯೊಂದು ವಸ್ತುವನ್ನು ಹರಸಬೇಕೆನ್ನಿಸುತ್ತದೆ. ಎಲ್ಲವನ್ನು ಪ್ರೀತಿಸಿ ಆಲಿಂಗನ ಮಾಡಿಕೊಳ್ಳಬೇಕೆನ್ನಿಸುತ್ತದೆ. ಪಾಪವೆಂಬುದು ಕೇವಲ ಭ್ರಮೆಯೆಂಬುದು ಈಗ ಕಾಣುತ್ತದೆ. ಪ್ರಿಯ ಪ— ಈಗ ನಾನು ಅಂತಹ ಭಾವಾವಸ್ಥೆಯಲ್ಲಿರುವೆನು. ನೀನು ಮತ್ತು ಶ್ರೀಮತಿ ಲ—ಇವರು ತೋರಿದ ಪ್ರೀತಿ ಮತ್ತು ದಯೆಗೋಸುಗವಾಗಿ ಆನಂದಾಶ್ರುಗಳನ್ನು ಸುರಿಸುತ್ತಿರುವೆನು. ಧನ್ಯವಾಯಿತು ನಾನು ಹುಟ್ಟಿದ ದಿನ. ಅಷ್ಟೊಂದು ಪ್ರೀತಿ ಮತ್ತು ದಯೆ ನನಗೆ ಇಲ್ಲಿ ಸಿಕ್ಕಿದೆ. ನನ್ನ ಸೃಷ್ಟಿಗೆ ಕಾರಣವಾದ ಅನಂತ ಪ್ರೇಮವೇ ನನ್ನ ಪ್ರತಿಯೊಂದು ಒಳ್ಳೆಯ ಮತ್ತು ಕೆಟ್ಟ ನಡತೆಯನ್ನು (ಅಂಜಿದರೂ) ಕಾದಿರುವುದು. ನಾನು ಈಗ ಇರುವುದು, ಹಿಂದೆ ಇದ್ದದ್ದು, ಆತನ ಕೈಯಲ್ಲಿ ಒಂದು ಯಂತ್ರದಂತೆ ಅಲ್ಲದೆ ಮತ್ತೇನು? ನನ್ನ ಆಪ್ತ! ಆತನ ಸೇವೆಗಾಗಿ ನನ್ನ ಜೀವನವನ್ನು ಸಂತೋಷವನ್ನು ಎಲ್ಲವನ್ನು ಅರ್ಪಿಸಿರುವೆನು. ಅವನು ನನ್ನೊಡನೆ ಆಟವಾಡುವ ಪ್ರಿಯತಮ. ನಾನು ಅವನ ಆಟಗಾರ. ಈ ಪ್ರಪಂಚದಲ್ಲಿ ಪ್ರಾಸವೂ ಇಲ್ಲ—ನಿಯಮವೂ ಇಲ್ಲ. ಯಾವ ನಿಯಮ ಅವನನ್ನು ಕಟ್ಟಬಲ್ಲದು. ಆಟಗಾರನವನು? ನಾಟಕದಲ್ಲಿ ಅಳು ನಗುಗಳಿಂದ ಆಡುತ್ತಿರುವನು! ಜ—ಹೇಳುವಂತೆ ಇದು ಒಂದು ದೊಡ್ಡ ವಿನೋದ. ದೊಡ್ಡ ವಿನೋದ!

ಇದು ಒಂದು ವಿನೋದ ಪ್ರಪಂಚ. ಆ ಪ್ರಿಯತಮನೆ, ಆದಿ ಅಂತ್ಯರಹಿತನೇ, ನೀನು ನೋಡಿರುವುದರಲೆಲ್ಲಾ ಅತ್ಯಂತ ವಿಚಿತ್ರವಾದ ವ್ಯಕ್ತಿ! ಇದು ಒಂದು ವಿನೋದ, ಅಲ್ಲವೆ? ಸಹೋದರರೋ ಅಥವಾ ಆಟಗಾರರ ತಂಡವೋ—ಕುಣಿದಾಡುವ ಪಾಠ ಶಾಲೆಯ ಹುಡುಗರನ್ನು ಜಗತ್ತೆಂಬ ಆಟದ ಮೈದಾನದಲ್ಲಿ ಬಿಟ್ಟಂತಿದೆ! ಯಾರನ್ನು ನಿಂದಿಸುವುದು ಯಾರನ್ನು ಕೊಂಡಾಡುವುದು. ಎಲ್ಲ ಅವನ ಲೀಲೆ. ಅವರಿಗೆ ವಿವರಣೆಗಳು

ಬೇಕಂತೆ? ಆದರೆ ಅವನ್ನು ನೀನು ಹೇಗೆ ವಿವರಿಸುವುದು. ಅವನಿಗೆ ಮೆದುಳಿಲ್ಲ. ವಿಚಾರವಾದರೂ ಇದೆಯೆ, ಅದೂ ಇಲ್ಲ. ಅವನು ನಮಗೆ ಸ್ವಲ್ಪ ಮೆದಳು ಆಲೋಚನಾಶಕ್ತಿ ಕೊಟ್ಟು ಹುಚ್ಚರನ್ನಾಗಿ ಮಾಡುತ್ತಿರುವನು. ಆದರೆ ಈ ಸಲಿ ನಾನು ಅವನ ಬಲೆಗೆ ಬೀಳುವುದಿಲ್ಲ.

ನಾನು ಒಂದೆರಡು ವಿಷಯಗಳನ್ನು ಕಲಿತಿರುವೆನು. ಆಲೋಚನೆ ಪಾಂಡಿತ್ಯ ಮಾತುಗಾರಿಕೆ ಇವುಗಳಿಗಿಂತ ದೂರ, ಬಹಳ ದೂರದಲ್ಲಿ "ಪ್ರೇಮ" "ಪ್ರಿಯತಮ" ಎಂಬ ಭಾವವಿರುವುದು. ಹೇ! ಸಖಿ! ಬಟ್ಟಲನ್ನು ತುಂಬು. ಉನ್ಮತ್ತರಾಗೋಣ. ಅನವರತವೂ ಉನ್ಮತ್ತಾವಸ್ಥೆಯಲ್ಲಿರುವ ನಿನ್ನ

ವಿವೇಕಾನಂದ.

೭೫

ಸ್ವಿಟ್ಜರ್ಲೆಂಡ್,
೮ನೇ ಆಗಸ್ಟ್ ೧೮೯೬.

ಶಾಂತವಾಗಿರು. ಎಂದಿಗೂ ತಪ್ಪದ ಪ್ರೇಮ, ಸಂಪೂರ್ಣ ನಿಸ್ವಾರ್ಥತೆ ಇವುಗಳೇ ಎಲ್ಲವನ್ನು ಜಯಿಸುವುದು. ವೇದಾಂತಿಗಳಾದ ನಾವು ಪ್ರತಿಯೊಂದು ಕಷ್ಟದಲ್ಲಿಯೂ, "ನಾನು ಏಕೆ ಇದನ್ನು ಮಾಡುತ್ತೇನೆ," "ಪ್ರೇಮದಿಂದ ಏತಕ್ಕೆ ನಾನು ಇದನ್ನು ಜಯಿಸಕೂಡದು" ಎಂದು ನಮಗೆ ನಾವೆ ಹೇಳಿಕೊಳ್ಳಬೇಕು.

ಮಹತ್ ಕಾರ್ಯಕ್ಕೆ ಧೀರ್ಘಕಾಲದ ವರೆಗೆ ಹೆಚ್ಚು ಎಡಬಿಡದ ಪ್ರಯತ್ನಬೇಕಾಗಿದೆ. ಕೆಲವರು ಸೋತರೆ ಅದರಿಂದ ನಾವು ನಿರಾಶರಾಗಬೇಕಾಗಿಲ್ಲ. ಅನೇಕರು ಸೋಲುವರು. ತೊಂದರೆಗಳು ಬರುವುವು. ಮಹಾದ್ಭುತವಾದ ಕಷ್ಟಗಳು ಬರುವುವು. ನಮ್ಮೆದೆಯಲ್ಲಿ ನೆಲೆಸಿರುವ ಸ್ವಾರ್ಥತೆ ಮತ್ತು ಇನ್ನೂ ಇತರ ಹೀನ ಆಸೆಗಳು ಆತ್ಮಜ್ಯೋತಿಯಿಂದ ಹೊರದೂಡುವುದಕ್ಕೆ ಮುಂಚೆ ಬಹಳ ಹೋರಾಡುವುವು. ಇದೆಲ್ಲ ಸಹಜವಾಗಿಯೇ ಇರುವುದು. ಪ್ರಪಂಚದಲ್ಲಿ ಶುಭಕ್ಕೆ ಮಾರ್ಗ ಬಹಳ

ಒರಟು ಮತ್ತು ಕಡಿದು. ಕೆಲವರು ಇಲ್ಲಿ ಜಯಶೀಲರಾಗುವುದೇ ಒಂದು ಆಶ್ಚರ್ಯ. ಅನೇಕರು ಸೋಲುವುದು ಒಂದು ಆಶ್ಚರ್ಯವಲ್ಲ. ಸಾವಿರಾರು ಸಲ ಎಡಹಿದ ಮೇಲೆ ನಾವು ಒಂದು ಶೀಲವನ್ನು ಕಟ್ಟಬಹುದು.

ನನಗೆ ಈಗ ಬಹಳ ದಣಿವಾಗಿದೆ. ಕಿಟಕಿಯಿಂದ ಹೊರಗೆ ನೋಡಿದರೆ ವಿಶಾಲವಾದ ಹಿಮರಾಶಿ ನನ್ನೆದುರಿಗೆ ಕಾಣುವುದು. ಹಿಮಾಲಯ ಪ್ರಾಂತ್ಯಗಳಲ್ಲಿ ನಾನು ಇರುವಂತೆ ಕಾಣುವುದು. ನಾನು ಈಗ ಶಾಂತನಾಗಿರುವೆನು. ನನ್ನ ನರಗಳು ಹಿಂದಿನಂತೆ ಬಲಯುತವಾಗಿರುವುವು. ನೀನು ಬರೆಯುವ ಸ್ವಲ್ಪ ತೊಂದರೆಗಳು ನನ್ನನ್ನು ಮುಟ್ಟುವುದೇ ಇಲ್ಲ. ಈ ಮಕ್ಕಳಾಟದಿಂದ ನಾನು ಯಾಕೆ ಅಶಾಂತನಾಗಬೇಕು. ಈ ಪ್ರಪಂಚವೆಲ್ಲ ಒಂದು ಮಕ್ಕಳಾಟ. ಪ್ರಚಾರ, ಪ್ರವಚನಗಳು ಕೂಡ ಇದರಲ್ಲಿ ಸೇರಿವೆ. "ಯಾರು ದ್ವೇಷಿಸುವುದಿಲ್ಲವೋ ಅಪೇಕ್ಷಿಸುವುದಿಲ್ಲವೋ ಅವನನ್ನು ಸನ್ಯಾಸಿ ಎಂದು ತಿಳಿ." ಅನವರತವೂ ದುಃಖ, ರೋಗ, ಮರಣ, ಪ್ರಾಪ್ತವಾಗುತ್ತಿರುವ ಪ್ರಪಂಚವೆಂಬ ಸಣ್ಣ ಕೆಸರಿನ ಗುಂಡಿಯಲ್ಲಿ ಅಪೇಕ್ಷಿಸುವುದಾದರೂ ಏನಿರುವುದು. "ಎಲ್ಲಾ ಆಸೆಗಳನ್ನು ಯಾವನು ತ್ಯಜಿಸುವನೋ ಅವನೇ ಸುಖಿ."

ಅನಂತವೂ ಚಿರಶಾಂತವೂ ಆದ ಇಂತಹ ವಿಶ್ರಾಂತಿಯ ತುಸು ನೋಟ ಈ ರಮ್ಯ ಪ್ರದೇಶದಲ್ಲಿ ನನಗೆ ಈಗ ಕಾಣುತ್ತಿದೆ. ಆತ್ಮನಲ್ಲದೆ ಮತ್ತೆ ಬೇರೆಯಾವುದೂ ಇಲ್ಲವೆಂದು ಒಮ್ಮೆ ತಿಳಿದಮೇಲೆ ಯಾವುದನ್ನು ಆಶಿಸುವುದು. ಅಥವಾ ಯಾರ ಆಸೆಗೋಸುಗವಾಗಿ ನೀನು ದೇಹದ ವಿಚಾರದಲ್ಲಿ ದುಃಖಪಡಬೇಕು.

ಯಾವುದನ್ನು ಕೆಲಸವೆಂದು ಹೇಳುತ್ತಾರೋ, ಅದರಲ್ಲಿ ನನ್ನ ಪಾಲಿನ ಅನುಭವವೂ ನನಗೆ ಬಂದಿತು ಎಂದು ತೋರುತ್ತದೆ. ಅದನ್ನು ನಾನು ಪೂರೈಸಿರುವೆನು. ಅದರಿಂದ ಈಗ ತಪ್ಪಿಸಿಕೊಳ್ಳುವುದಕ್ಕೆ ಪ್ರಯತ್ನಿಸುತ್ತಿರುವೆನು. "ಸಾವಿರದಲ್ಲಿ ಒಬ್ಬ ಗುರಿಯನ್ನು ಸೇರಲು ಪ್ರಯತ್ನಿಸುತ್ತಾನೆ. ಹಾಗೆ ಕಷ್ಟಪಟ್ಟು ಪ್ರಯತ್ನಿಸುವವರಲ್ಲಿ ಎಲ್ಲೋ ಕೆಲವರು ಗುರಿಯನ್ನು ಸೇರುತ್ತಾರೆ. ಏಕೆಂದರೆ ಇಂದ್ರಿಯಗಳು ಬಹಳ ಬಲವುಳ್ಳದ್ದು. ಮನುಷ್ಯನನ್ನು ಅವು ಕೆಳಗೆ ಎಳೆಯುವುವು.

"ಒಳ್ಳೆಯ ಜಗತ್ತು" "ಸಂತೋಷದಿಂದ ಕೂಡಿದ ಪ್ರಪಂಚ" ಮತ್ತು "ಸಾಮಾಜಿಕ ಉನ್ನತಿ" ಇವು ಬಿಸಿಯಾದ ಮಂಜು," ಅಥವಾ ಕಪ್ಪು ಬೆಳಕು ಎಂಬ ಪದಗಳಷ್ಟೆ ಅರ್ಥಕೊಡುವುವು. ಅದು ಒಳ್ಳೆಯ ದಾಗಿದ್ದರೆ ಪ್ರಪಂಚವೇ ಆಗುವುದಿಲ್ಲ. ಆತ್ಮ, ಬುದ್ಧಿಯಿಲ್ಲದೆ ಅನಂತ ವನ್ನು ಅಂತವಾಗಿರುವ ಜಡಜಗತ್ತಿನಲ್ಲಿಯೂ, ಚೇತನವನ್ನು ಅಚೇತನ ದಲ್ಲಿಯೂ, ಕಾಣಬೇಕೆಂದು ಬಯಸುವುದು. ಆದರೆ ಕೊನೆಗೆ ಅದರ ತಪ್ಪು ಅದಕ್ಕೇ ತಿಳಿದು ತಪ್ಪಿಸಿಕೊಳ್ಳುವುದಕ್ಕೆ ಪ್ರಯತ್ನಿಸುತ್ತದೆ. ಈ ಹಿಂತಿರುಗುವಿಕೆಯನ್ನು ಧರ್ಮದ ಆರಂಭವೆನ್ನುವುದು. ಅದರ ಮಾರ್ಗವೇ ಸ್ವಾರ್ಥತೆಯ ನಾಶದಿಂದ, ಅಂದರೆ ಪ್ರೇಮದಿಂದ. ಹೆಂಡತಿ ಮಕ್ಕಳು ಮತ್ತು ಉಳಿದವರನ್ನು ಪ್ರೀತಿಸುವುದಲ್ಲ. ತನ್ನ ಸ್ವಾರ್ಥತೆಯೊಂದನ್ನು ಬಿಟ್ಟು ಉಳಿದೆಲ್ಲವನ್ನು ಪ್ರೀತಿಸುವುದು. "ಮಾನವನ ಉನ್ನತಿ" ಮುಂತಾದ ದೊಡ್ಡ ದೊಡ್ಡ ಮಾತನ್ನು ಕೇಳಿ (ಅಮೆರಿಕಾದೇಶದಲ್ಲಿ ಇದು ಹೆಚ್ಚು) ಮೋಸಹೋಗಬೇಡ. ಉನ್ನತಿಗೆ ತಕ್ಕ ಅವನತಿ ಇದ್ದೇ ಇರು ವುದು. ಒಂದು ಸಮಾಜದಲ್ಲಿ ಒಂದು ವಿಧವಾದ ಕೆಟ್ಟ ನಡತೆಗಳಿದ್ದರೆ ಇನ್ನೊಂದು ಸಮಾಜದಲ್ಲಿ ಇನ್ನೊಂದು ವಿಧವಾದ ಕೆಟ್ಟನಡತೆಗಳು ಇರು ವುದು. ಹಾಗೆಯೆ ಕಾಲದ ಅಂತರದಲ್ಲಿ ಕೂಡ. ಪೂರ್ವದಲ್ಲಿ ದರೋಡೆ ಕಾರರು ಹೆಚ್ಚು ಇದ್ದರು. ಈಗ ಮೋಸಗಾರರು ಹೆಚ್ಚು. ಒಂದು ಕಾಲದಲ್ಲಿ ದಾಂಪತ್ಯ ಜೀವನವೆಂಬ ಭಾವ ಕಡಿಮೆಯಾಗಿರುವುದು. ಇನ್ನೊಂದು ಕಾಲದಲ್ಲಿ ಹೆಚ್ಚು ವೈಶ್ಯಾಂಗನೆಯರಿರುವರು. ಒಂದರಲ್ಲಿ ಹೆಚ್ಚು ದೈಹಿಕ ಕಷ್ಟ. ಮತ್ತೊಂದರಲ್ಲಿ ಅದಕ್ಕೆ ಸಾವಿರಪಾಲಿನಷ್ಟು ಮಾನಸಿಕ ವ್ಯಥೆ ಇರುವುದು. ಹಾಗೆಯೇ ವಿದ್ಯೆಯಲ್ಲಿಯೂ ಕೂಡ. ಆಕರ್ಷಣಶಕ್ತಿಯನ್ನು ಪರೀಕ್ಷಿಸಿ ಅದಕ್ಕೆ ಹೆಸರುಕೊಡುವುದಕ್ಕೆ ಮುಂಚೆ ಅದು ಇರಲಿಲ್ಲವೇನು? ಹಾಗಾದರೆ ಅದು ಇದು ಎಂದು ತಿಳಿಯುವುದ ರಿಂದ ಆದ ಬದಲಾವಣೆ ಏನು? ನೀವು ರೆಡ್ ಇಂಡಿಯನ್ನರಿಗಿಂತ ಹೆಚ್ಚು ಸುಖಿಗಳೇನು?

ಏನಾದರೂ ಸ್ವಲ್ಪ ಬೆಲೆ ಇರುವ ವಿದ್ಯೆ ಯಾವುದೆಂದರೆ, ಅದೇ, ಇದೆಲ್ಲ ಶುದ್ಧ ಮೋಸ ಎಂದು ತಿಳಿಯುವುದು. ಆದರೆ ಅಲ್ಪ ಮಂದಿ,

ಅತ್ಯಂತ ಅಲ್ಪ ಮಂದಿ ಮಾತ್ರ ಇದನ್ನು ತಿಳಿಯುವರು. "ಆತ್ಮ ವೊಂದನ್ನು ತಿಳಿ. ಕೆಲಸಕ್ಕೆ ಬಾರದ ಇತರ ಮಾತೆಲ್ಲವನ್ನು ಬಿಡು." ಪ್ರಪಂಚದಲ್ಲೆಲ್ಲಾ ಪಟ್ಟು ತಿಂದು ಕಲಿಯುವ ವಿದ್ಯೆ ಇದೊಂದೆ. "ಏಳಿ, ಜಾಗ್ರತರಾಗಿ, ಗುರಿ ಸೇರುವವರೆವಿಗೂ ನಿಲ್ಲಬೇಡಿ," ಎಂದು ಮಾನವನಿಗೆ ಹೇಳುವುದೊಂದೆ ನಿಜವಾದ ಕೆಲಸ. ಧರ್ಮವೆಂದರೆ ತ್ಯಾಗವೆಂದು ಅರ್ಥ. ಬೇರೇನೂ ಅಲ್ಲ.

ಈಶ್ವರನೆಂದರೆ ವ್ಯಕ್ತಿಗಳ ಸಮಷ್ಟಿ. ಆದರೂ ಕೂಡ ಅವನು ಒಬ್ಬ ವ್ಯಕ್ತಿಯೆ. ಹೇಗೆಂದರೆ ಮಾನವನ ದೇಹ ಒಂದು ಪೂರ್ಣ, ಅವನಲ್ಲಿರುವ ಜೀವಬೀಜಗಳೇ (cells) ಒಂದು ಅಣು. ಅದರಂತೆ ಯೇ, ಸಮಷ್ಟಿ ಅಥವಾ ವ್ಯಷ್ಟಿಗಳ ಸಮುದಾಯವೇ ದೇವರು. ವ್ಯಷ್ಟಿ ಅಥವಾ ಏಕಭಾಗವೇ ಜೀವ. ಹೇಗೆ ಜೀವಬೀಜದ ಮೇಲೆ (cells) ದೇಹ ನಿಂತಿದೆಯೋ ಹಾಗೆಯೇ ಎಲ್ಲಾ ವ್ಯಷ್ಟಿಗಳ ಮೇಲೆ ಸಮಷ್ಟಿ ನಿಂತಿರುವುದು. ಜೀವ ಮತ್ತು ಈಶ್ವರ ಪರಸ್ಪರ ಇರುವ ವಸ್ತುಗಳು. ಎಲ್ಲಿಯುವರೆವಿಗೂ ಒಂದು ಇರುವುದೋ ಅಲ್ಲಿಯವರೆವಿಗೂ ಮತ್ತೊಂದು ಇರುವುದು. ನಮ್ಮ ಭೂಮಿಯನ್ನು ಬಿಟ್ಟು ಉಳಿದ ಲೋಕಗಳಲ್ಲಿ ಕೆಟ್ಟದ್ದಕಿಂತ ಹೆಚ್ಚು ಒಳ್ಳೆಯದಿರುವುದರಿಂದ ಸಮಷ್ಟಿ ಅಥವಾ ಈಶ್ವರ ನನ್ನು, ಅನಂತ ಕಲ್ಯಾಣಮಯ, ಸರ್ವತಂತ್ರಸ್ವತಂತ್ರ, ಸರ್ವಜ್ಞ ಎಂದು ಹೇಳಬಹುದು. ಸಮಷ್ಟಿಯ ದೃಷ್ಟಿಯಿಂದ ಇವು ಸ್ಪಷ್ಟವಾದ ವಿಷಯ ಗಳು. ಇದನ್ನು ಸ್ಪಷ್ಟಪಡಿಸುವುದಕ್ಕೆ ಯಾವ ತರ್ಕವೂ ಆವಶ್ಯಕವಿಲ್ಲ.

ಬ್ರಹ್ಮ ಇವೆರಡರ ಆಚೆ ಇರುವನು. ಅದು ಒಂದು ಸ್ಥಿತಿಯಲ್ಲ. ಯಾವ ಭಾಗಗಳಿಂದಲೂ ಕೂಡಿಲ್ಲದ ಏಕವಾದ ವಸ್ತುವು ಅದೊಂದೆ. ಒಂದು ಜೀವಅಣುವಿನಿಂದ ಹಿಡಿದು ದೇವನವರಿವಿಗೂ ಪ್ರತಿಯೊಂದು ವಸ್ತುವಿನ ಅಂತರಾಳದಲ್ಲಿಯೂ ಹರಿಯುತ್ತಿರುವ ಮೂಲತತ್ತ್ವ. ಇದಲ್ಲದೆ ಯಾವುದೂ ಇರಲಾರದು. ಯಾವುದು ಸತ್ಯವೋ ಅದೇ ಈ ಮೂಲ ತತ್ತ್ವ ಅಥವಾ ಬ್ರಹ್ಮ. "ನಾನು ಬ್ರಹ್ಮ" ವೆಂದು ತಿಳಿದಾಗ ನಾನೊ ಬ್ಬನೇ ಇರುವುದು. ನೀನು ಹೀಗೆ ಆಲೋಚನೆ ಮಾಡಿದಾಗಲೂ ಹೀಗೆಯೆ. ಪ್ರತಿಯೊಬ್ಬನೂ ಆ ಮೂಲತತ್ತ್ವದ ಪೂರ್ಣ.

ಕೆಲವು ದಿನಗಳ ಹಿಂದೆ ಕ—ಗೆ ಪತ್ರ ಬರಿಯಬೇಕೆಂಬ ತಡಯುಲಾರದ ಆಸೆ ಇದ್ದಕ್ಕಿದ್ದಹಾಗೆ ನನ್ನ ಮನಸ್ಸಿನಲ್ಲಿದ್ದಿತು. ಬಹುಶಃ ಅವನು ದುಃಖದಲ್ಲಿ ನನ್ನನ್ನು ಆಲೋಚಿಸುತ್ತಿದ್ದನೋ ಏನೊ! ಅದಕ್ಕೋಸ್ಕರ ನಾನು ಅವನಿಗೊಂದು ವಿಶ್ವಾಸಪೂರ್ವಕವಾದ ಪತ್ರವನ್ನು ಬರೆದೆನು. ಇಂದು ಅಮೇರಿಕಾದಿಂದ ಬಂದ ಸುದ್ಧಿಯಿಂದ ಅದು ಏತಕ್ಕೆ ಎಂಬುದು ಗೊತ್ತಾಗುತ್ತದೆ. ಹಿಮರಾಶಿಯ ಹತ್ತಿರ ಆರಿಸಿಟ್ಟ ಕೆಲವು ಹೂವುಗಳನ್ನು ಅವನಿಗೆ ಕಳುಹಿಸಿದೆನು. ಪ್ರೇಮವೆಂದಿಗೂ ನಾಶವಾಗುವುದಿಲ್ಲ. ಮಕ್ಕಳು ಏನಾದರೂ ಮಾಡಲಿ, ಹೇಗಾದರೂ ಇರಲಿ ತಂದೆಗೆ ಅವರ ಮೇಲಿರುವ ಪ್ರೇಮ ಎಂದಿಗೂ ಕೊನೆಗಾಣುವುದಿಲ್ಲ. ಅವನು ನನ್ನ ಮಗು. ಅವನು ಈಗ ದುಃಖದಲ್ಲಿರುವುದರಿಂದ ನನ್ನಿಂದ ಪ್ರೇಮ ಮತ್ತು ಸಹಾಯವನ್ನು ಅಪೇಕ್ಷಿಸುವುದಕ್ಕೆ ಅಷ್ಟೇ ಅಧಿಕಾರವಿರುವುದು.

೭೬

ಲೇಕ್‌ಲುಸರ್ನ್, ಸ್ವಿಟ್ಜರ್ಲೆಂಡ್,
೨೩ನೇ ಆಗಸ್ಟ್ ೧೮೯೬.

ಪ್ರಿಯ,

ರ—ನಿಂದ ನನಗೆ ಇಂದು ಒಂದು ಪತ್ರ ಬಂದಿದೆ. ಅದರಲ್ಲಿ ದಕ್ಷಿಣೇಶ್ವರದಲ್ಲಿ ಆದ ಶ್ರೀರಾಮಕೃಷ್ಣರ ಜಯಂತುತ್ಸವಕ್ಕೆ ಅನೇಕ ವೇಶ್ಯಾಂಗನೆಯರು ಬರುತ್ತಾರೆಂದೂ, ಅದರಿಂದ ಉಳಿದವರಿಗೆ ಹೋಗಲು ಮನಸ್ಸು ಬರುವುದಿಲ್ಲವೆಂದೂ ಹೇಳುತ್ತಾನೆ. ಅವನ ದೃಷ್ಟಿಯಲ್ಲಿ ಒಂದು ದಿನವನ್ನು ಗಂಡಸರಿಗೂ ಮತ್ತೊಂದು ದಿನವನ್ನು ಹೆಂಗಸರಿಗೂ ಗೊತ್ತು ಮಾಡಬೇಕೆಂದು ಹೇಳುತ್ತಾನೆ. ಆ ವಿಷಯದ ಮೇಲೆ ನನ್ನ ನಿರ್ಣಯ ಹೀಗಿರುವುದು :

(೧) ದಕ್ಷಿಣೇಶ್ವರದಂತಹ ದೊಡ್ಡ ಯಾತ್ರಾಸ್ಥಳಕ್ಕೆ ವೇಶ್ಯಾಂಗನೆಯರನ್ನು ಬಿಡದೇ ಇದ್ದರೆ ಅವರು ಇನ್ನೆಲ್ಲಿ ಹೋಗುವರು. ಪಾಪಿಗಳ ಉದ್ಧಾರಕ್ಕಾಗಿ ದೇವರು ಹೆಚ್ಚಾಗಿ ಅವತಾರವೆತ್ತುವುದು. ಪುಣ್ಯಾತ್ಮರ ಉದ್ಧಾರಕ್ಕೆ ಅಷ್ಟು ಅಲ್ಲ.

(೨) ಲಿಂಗ, ಜಾತಿ, ಐಶ್ವರ್ಯ, ಪಾಂಡಿತ್ಯ ಮುಂತಾದ ಬಳಗಗಳ ಭಿನತೆಯೆಲ್ಲ ನರಕದ ಬಾಗಿಲು. ಇದೆಲ್ಲ ಪ್ರಪಂಚದಲ್ಲೇ ಇರಲಿ. ಪವಿತ್ರ ಯಾತ್ರಾಸ್ಥಳದಲ್ಲಿಯೂ ಇಂತಹ ಭೇದ ಭಾವಗಳಿದ್ದರೆ ಇವುಗಳಿಗೂ ನರಕಕ್ಕೂ ಇರುವ ವ್ಯತ್ಯಾಸವೇನು.

(೩) ನಮ್ಮದು ದೊಡ್ಡ ಜಗನ್ನಾತ ದೇವಾಲಯ. ಅಲ್ಲದೆ ಪಾಪಮಾಡಿದವರು ಪಾಪಮಾಡದವರು, ಸಜ್ಜನರು ಮತ್ತು ದುರ್ಜನರು, ಗಂಡಸರು ಹೆಂಗಸರು, ಮಕ್ಕಳು ವಯಸ್ಸಿನ ತಾರತಮ್ಯವಿಲ್ಲದೆ ಎಲ್ಲರಿಗೂ, ಒಂದೇ ಸಮನಾದ ಅಧಿಕಾರವಿದೆ. ಒಂದು ದಿನವಾದರೂ, ಸಾವಿರಾರು ಗಂಡಸರು ಹೆಂಗಸರು, ಪಾಪ ಪುಣ್ಯ, ಕುಲ ಗೋತ್ರ ಭೇದಭಾವವನ್ನು ಮರೆತು ದೇವರ ಹೆಸರನ್ನು ಹಾಡಲಿ, ಕೇಳಲಿ. ಇದೊಂದಾದರೂ ಅತ್ಯುತ್ತಮವಾದದ್ದು.

(೪) ಯಾತ್ರಾಸ್ಥಳದಲ್ಲಿ ಒಂದು ದಿನದಮಟ್ಟಿಗಾದರೂ, ಜನರ ದುರ್ಘಟತೆಯ ಸ್ವಭಾವವನ್ನು ತಿದ್ದದೇಇದ್ದರೆ ತಪ್ಪು ನಮ್ಮಲ್ಲಿರುವುದು. ಅವರಲ್ಲಿ ಅಲ್ಲ. ದೊಡ್ಡ ಆಧ್ಯಾತ್ಮಿಕರ ತಪಸ್ಸಿನ ಪ್ರವಾಹವನ್ನುಂಟು ಮಾಡಿ. ಎಂತಹ ಜನರು ಅದರ ಹತ್ತಿರ ಬಂದರೂ ಅವರನ್ನು ಪಾವನರನ್ನಾಗಿ ಮಾಡುವಂತಿರಲಿ.

(೫) ಗರ್ಭಗುಡಿಯಲ್ಲಿ ಕೂಡ ಯಾರು, ಈಕೆ ಜಾರೆ, ಅವನು ಹೀನ ಮತದವನು, ಮೂರನೆಯವನು ಬಡವ, ಮತ್ತೊಬ್ಬನು ಜನ ಸಾಧಾರಣಕ್ಕೆ ಸೇರಿದವನು, ಎಂದು ಆಲೋಚಿಸುವರೋ, ಅಂತಹ ನೀನು ಹೇಳುವ ಸಭ್ಯರು ಕಡಿಮೆಯಾದಷ್ಟು ಒಳ್ಳೆಯದೆ. ಭಕ್ತರ ಜಾತಿ, ಲಿಂಗ, ಕಸಬುಗಳನ್ನು ನೋಡುವವನು ನಮ್ಮ ದೇವರನ್ನು ಮೆಚ್ಚುವನೇನು ? ನೂರಾರು ಜನ ವೇಶ್ಯಾಂಗನೆಯರು ಬೇಕಾದರೆ ಬರಲಿ. ಆತನ ಪಾದ ತಳದಲ್ಲಿ ಮಣಿಯಲೆಂದು ನಾನು ದೇವರನ್ನು ಬೇಡುತ್ತೇನೆ. ಒಬ್ಬ ದೊಡ್ಡ ಮನುಷ್ಯನೂ ಬರದೇಇದ್ದರೂ ಚಿಂತೆಯಿಲ್ಲ. ಜಾರೆಯರೆ ಬನ್ನಿ, ಕುಡುಕರೆ ಬನ್ನಿ, ಕಳ್ಳರೆ ಬನ್ನಿ ಎಲ್ಲರೂ ಬನ್ನಿ. ಆತನ ದೇಗುಲ ಎಲ್ಲರಿಗೂ ತೆರೆದಿದೆ. ಶ್ರೀಮಂತನು ದೇವರ ಸನ್ನಿಧಿಗೆ ಹೋಗುವುದಕ್ಕಿಂತ, ಸೂಜಿಯ ಕಣ್ಣಿನಲ್ಲಿ ಒಂಟೆ ತೂರಿ ಹೋಗುವುದು

ಸುಲಭ. ಎಂದಿಗೂ ಅಂತಹ ಕ್ರೂರ ರಾಕ್ಷಸೀ ಭಾವಗಳಿಗೆ ನಿನ್ನ ಮನಸ್ಸಿನಲ್ಲಿ ಎಡೆಗೊಡಬೇಡ.

(೬) ಆದರೆ ಸ್ವಲ್ಪ ಸಾಮಾಜಿಕ ಉಸ್ತುವಾರಿ ಬೇಕಾಗಿದೆ. ಅದನ್ನು ನಾವು ಹೀಗೆ ಮಾಡಬೇಕು. ಅಂದಿನ ದಿನ ಕೆಲವರು (ವಯೋವೃದ್ಧರಾದರೆ ಉತ್ತಮ) ರಕ್ಷಕರ ಕೆಲಸವನ್ನು ವಹಿಸಬೇಕು. ಅವರು ಉತ್ಸವ ನಡೆಯುವ ಕಡೆಯಲ್ಲೆಲ್ಲ ತಿರುಗಾಡಿ, ಯಾರಾದರೂ ಗಂಡಸರೇ ಆಗಲೀ ಹೆಂಗಸರೇ ಆಗಲಿ ಹೀನ ಮಾತು ಕೃತ್ಯ ಇವುಗಳಲ್ಲಿ ನಿರತರಾಗಿರುವುದನ್ನು ಕಂಡರೆ ಅವರನ್ನು ತಕ್ಷಣವೆ ತೋಟದಿಂದ ಹೊರಗೆ ಕಳುಹಿಸಬೇಕು. ಅವರು ಪುರುಷರಾಗಲೀ ಸ್ತ್ರೀಯರಾಗಲೀ ಉತ್ತಮರಾಗಲೀ, ಪತಿತರಾಗಲೀ ಎಲ್ಲಿಯವರೆವಿಗೂ ಅವರು ಸಭ್ಯ ಮಹಿಳೆ ಮಹನೀಯರಂತೆ ವರ್ತಿಸುತ್ತಾರೋ ಅಲ್ಲಿಯ ವರೆವಿಗೂ ಅವರು ಭಕ್ತರು. ಅವರನ್ನು ಗೌರವದಿಂದ ಕಾಣಬೇಕು.

ನಾನು ಸಧ್ಯಕ್ಕೆ ಸ್ವಿಡ್ಜರ್ಲೆಂಡಿನಲ್ಲಿ ಸಂಚಾರ ಮಾಡುತ್ತಿರುವೆನು. ಶೀಘ್ರದಲ್ಲಿಯೇ ಪ್ರೊಫೆಸರ್ ಡಾಯಸ್‌ನ್‌ರನ್ನು ನೋಡಲು ಜರ್ಮನಿಗೆ ಹೋಗುತ್ತೇನೆ. ಅಲ್ಲಿಂದ ಸೆಪ್ಟಂಬರ್ ೨೩ ಅಥವಾ ೨೪ ನೇ ತಾರೀಕು ಇಂಗ್ಲೇಂಡಿಗೆ ಹಿಂತಿರುಗುತ್ತೇನೆ. ಬರುವ ಚಳಿಗಾಲದ ಹೊತ್ತಿಗೆ ನಾನು ಭರತಖಂಡದಲ್ಲಿರುವೆನು.

ವಿಶ್ವಾಸ ಪೂರ್ವಕ
ವಿವೇಕಾನಂದಾ

೭೭

೩೯ನೇ ಗ್ರೇಕೋಟ್ ಗಾರ್ಡನ್ಸ್,
ವೆಸ್ಟ್‌ಮಿನಿಸ್ಟರ್, ಲಂಡನ್,
೧೮೯೬.

ಪ್ರಿಯ ಅ—,

ನಾನು ಸ್ವಿಡ್ಜೆರ್ಲೆಂಡಿನಿಂದ ಬಂದು ಸುಮಾರು ಮೂರುವಾರವಾಯಿತು. ಲಂಡನ್ನಿನಲ್ಲಿ ಕಾರ್ಯ ಬೇಗ ಹೆಚ್ಚುತ್ತಿದೆ. ಪ್ರವಚನಗಳಿಗೆ ಪ್ರೇಕ್ಷಕರು ಬರಬರುತ್ತಾ ಹೆಚ್ಚುತ್ತಿರುವರು. ಅಮೇರಿಕಾದಲ್ಲಿ ವೇದಾಂತ ಮತ್ತು

ಯೋಗದ ಮೇಲೆ ಉಪನ್ಯಾಸ ಮಾಡಬಲ್ಲ ಇಪ್ಪತ್ತು ಧರ್ಮಪ್ರಚಾರಕರಿಗೆ ಸ್ಥಳವಿದೆ. ಪ್ರತಿಭಾವಂತರು ಶಕ್ತಿವಂತರು ಆದ ಜನರನ್ನು ಕೊಟ್ಟರೆ ಇನ್ನು ಹತ್ತುವರುಷದಲ್ಲಿ ಅರ್ಧ ಅಮೇರಿಕಾವನ್ನು ಜಯಿಸಬಹುದು. ಆದರೆ ಅವರೆಲ್ಲಿ? ಈಗಿರುವ ನೀವೆಲ್ಲರೂ ದಡ್ಡರು! ಕೆಲಸಕ್ಕೆ ಬಾರದ ಬಾಯಿಮಾತಿನ ದೇಶಭಕ್ತರು. ಧಾರ್ಮಿಕ ಉತ್ಸಾಹದಲ್ಲಿ ಜಂಭ ಕೊಚ್ಚಿಕೊಳ್ಳುವ ಸ್ವಾರ್ಥರಾದ ಹೇಡಿಗಳು ನೀವು. ಮದ್ರಾಸಿನ ಜನರಲ್ಲಿ ಹೆಚ್ಚು ಮುಂದರಿವ ಶಕ್ತಿ ಇದೆ ಮತ್ತು ಸ್ಥಿರಬುದ್ಧಿಯವರು. ಆದರೆ ಪ್ರತಿಯೊಬ್ಬ ಮೂರ್ಖನೂ ಮದುವೆಯಾಗಿರುವನು. ನಿಸ್ಸಂಗಿಯಾದ ಗೃಹಸ್ಥನಾಗುವುದಕ್ಕೆ ಪ್ರಯತ್ನಿಸುವುದೇನೋ ಬಹಳ ಒಳ್ಳೆಯದು. ಆದರೆ ನಮಗೆ ಮದ್ರಾಸಿನಲ್ಲಿ ಸಧ್ಯಕ್ಕೆ ಬೇಕಾಗಿರುವುದು ಅದಲ್ಲ. ಮದುವೆ ಯಾಗದಿರಬೇಕು.

ನನ್ನ ಮಗು; ನನಗೆ ಬೇಕಾಗಿರುವುದು ಕಬ್ಬಿಣದಂತಹ ಮಾಂಸಖಂಡಗಳು, ಉಕ್ಕಿನಂತಹ ನರಗಳು, ಅವುಗಳ ಅಂತರಾಳದಲ್ಲಿ ಸಿಡಿಲಿನಲ್ಲಿರುವಂತಹ ಸಾಮಗ್ರಿಯುಗಳಿಂದ ಮಾಡಿದ ಮಾನಸಿಕ ಶಕ್ತಿ ನೆಲೆಸಿರಬೇಕು. ಶಕ್ತಿ, ಪೌರುಷ, ಕ್ಷಾತ್ರವೀರ್ಯ ಮತ್ತು ಬ್ರಹ್ಮತೇಜಸ್ಸು. ನಮ್ಮ ಸುಂದರವಾದ ಆಶಾಜನಕರಾದ ಹುಡುಗರಲ್ಲಿ ಎಲ್ಲಾ ಇದೆ—ಆದರೆ ಮದುವೆ ಎನ್ನುವ ಕ್ರೂರ ಬಲಿಪೀಟದಲ್ಲಿ ಕೊಟ್ಯಾನು ಜನರನ್ನು ಬಲಿ ಕೊಡದೇ ಇದ್ದರೆ! ಹೇ ಜಗದೀಶ, ಆಲಿಸೆನ್ನ ದುಃಖವನ್ನು! ವಿದ್ಯಾವಂತರಾದ, ಯುವಕರಾದ ನೂರುಮಂದಿ ಮದ್ರಾಸಿನವರು, ಅತ್ಯುತ್ತಮರಾದವರಿಂದ ಬಂದು, ಸಂಸಾರದಿಂದ ಆಚೆ ನಿಂತು, ಸೊಂಟ ಕಟ್ಟಿ ಸತ್ಯ ಸಮರಕ್ಕೆ ಸಿದ್ಧರಾಗಿ ದೇಶದಿಂದ ದೇಶಕ್ಕೆ ಪ್ರಯಾಣ ಮಾಡಿದಾಗ, ಮದ್ರಾಸು ಜಾಗ್ರತವಾಗುವುದು. ಭರತಖಂಡದ ಆಚೆ ಕೊಟ್ಟ ಒಂದು ಪೆಟ್ಟು ಒಳಗೆ ಕೊಟ್ಟ ಒಂದು ಲಕ್ಷ ಪೆಟ್ಟಿಗೆ ಸಮ. ಆಗಲಿ ಜಗದೀಶ ಇಚ್ಛಿಸಿದರೆ ಎಲ್ಲಾ ಬರುವುದು.

ಮ್ಯಾಕ್ಸ ಮುಲ್ಲರು ಬಹಳ ಸ್ನೇಹ ಪರರಾಗುತ್ತಿರುವರು. ನಾನು ಆಕ್ಸ್‌ಫರ್ಡ್‌ನಲ್ಲಿ ಎರಡು ಉಪನ್ಯಾಸಗಳನ್ನು ಕೊಡುವುದಕ್ಕೆ ಬೇಗ ಹೋಗುತ್ತೇನೆ.

ನಾನು ವೇದಾಂತ ತತ್ತ್ವದ ಮೇಲೆ ಏನೋ ಒಂದು ದೊಡ್ಡದನ್ನು ಬರೆಯುವುದರಲ್ಲಿ ನಿರತನಾಗಿರುವೆನು. ಮೂರು ವೇದಾಂತ ತತ್ತ್ವಗಳಿಗೂ ಅನ್ವಯಿಸುವ ಶ್ಲೋಕಗಳನ್ನು ವೇದದಿಂದ ಆರಿಸುತ್ತಿರುವೆನು. ಮೊದಲು ಅದ್ವೈತ, ನಂತರ ವಿಶಿಷ್ಟಾದ್ವೈತ, ನಂತರ ದ್ವೈತ. ಇವುಗಳಿಗೆ ಸಂಬಂಧಪಟ್ಟ ಶ್ಲೋಕಗಳನ್ನು, ಸಂಹಿತ, ಬ್ರಾಹ್ಮಣ, ಉಪನಿಷತ್ ಮತ್ತು ಪುರಾಣಗಳಿಂದ ಆರಿಸಿ ತೆಗೆಯುವುದಕ್ಕೆ ಯಾರನ್ನಾದರೂ ಒದಗಿಸುವುದರಿಂದ ನನಗೆ ಸಹಾಯ ಮಾಡಬಹುದು. ಅವುಗಳನ್ನು ವಿಭಾಗ ಮಾಡಿ ಪ್ರತಿಯೊಂದರಲ್ಲಿಯೂ ಪುಸ್ತಕದ ಹೆಸರು ಮತ್ತು ಅಧ್ಯಾಯ ಇವನ್ನು ಸ್ಪಷ್ಟವಾಗಿ ಬರೆಯಬೇಕು. ಪುಸ್ತಕರೂಪದಲ್ಲಿ ಏನಾದರೂ ಸ್ವಲ್ಪ ತತ್ತ್ವಶಾಸ್ತ್ರವನ್ನು ಬಿಡದೆ ಪಾಶ್ಚಾತ್ಯ ದೇಶದಿಂದ ಹೊರಡುವುದು ಬಹಳ ಶೋಚನೀಯವಾಗುವುದು.

ಮೈಸೂರಿನಿಂದ ತಮಿಳಿನಲ್ಲಿ ನೂರೆಂಟು ಉಪನಿಷತ್ತುಗಳನ್ನು ಪ್ರಚುರಪಡಿಸಿದ ಒಂದು ಪುಸ್ತಕವಿತ್ತು. ಪ್ರೊ—ಡಾಯಸನ್ನರ ಪುಸ್ತಕಾಲಯದಲ್ಲಿ ಅದನ್ನು ನೋಡಿದೆ. ದೇವನಾಗರಿಯಲ್ಲಿ ಅದನ್ನೇ ಮುದ್ರಿಸಿದ ಪ್ರತಿ ಇದೆಯೆ? ಇದ್ದರೆ ನನಗೆ ಒಂದು ಪ್ರತಿಯನ್ನು ಕಳುಹಿಸು. ಇಲ್ಲದೇಇದ್ದರೆ ತಮಿಳಿನ ಪ್ರತಿಯನ್ನೇ ಕಳುಹಿಸು. ಒಂದು ಕಾಗದದ ಮೇಲೆ ತಮಿಳಿನಲ್ಲಿ ಅಕ್ಷರಗಳು ಮತ್ತು ಸಮಾಸಗಳನ್ನು ಬರೆದು ಅದಕ್ಕೆ ಸರಿಯಾಗಿ ಪಕ್ಕದಲ್ಲಿ ದೇವನಾಗರಿಯಲ್ಲಿ ಬರೆ. ಇದರಿಂದ ನಾನು ತಮಿಳು ಲಿಪಿಯನ್ನು ಬರೆಯಬಹುದು.

ನೆನ್ನೆ ಲಂಡನ್ ನಗರದಲ್ಲಿ ಕಂಡ ಸತ್ಯನಾಥನು ನನ್ನ ರಾಜಯೋಗ ಪುಸ್ತಕದ ಒಳ್ಳೆ ವಿಮರ್ಶೆಯು ಮದ್ರಾಸಿನಲ್ಲಿ ಆಂಗ್ಲೊ ಇಂಡಿಯನ್ ಮುಖ್ಯ ಪತ್ರಿಕೆಯಾದ ಮದ್ರಾಸ್ ಮೇಲ್‌ನಲ್ಲಿ ಇತ್ತೆಂದು ಹೇಳಿದನು. ಅಮೇರಿಕಾ ದೇಶದಲ್ಲಿ ಪ್ರಖ್ಯಾತನಾದ ಶಾರೀರಕ ಶಾಸ್ತ್ರಜ್ಞನು ನನ್ನ ವಿಚಾರಪೂರ್ವಕವಾದ ಆಲೋಚನೆಗಳನ್ನು ಬಹಳ ಮೆಚ್ಚಿರುವನೆಂದು ಕೇಳಿದೆನು. ಮತ್ತು ಅದೇ ಸಮಯದಲ್ಲಿ ನನ್ನ ವಿಷಯಗಳನ್ನು ಅಲ್ಲಗಳೆದವರೂ ಇರುವರು. ಒಳ್ಳೆಯದು. ನನ್ನ ವಿಚಾರಪೂರ್ವಕವಾದ ಆಲೋಚನೆ ಬಹಳ ಧೈರ್ಯವಾದುವು. ಅದರಲ್ಲಿ

ಬಹಳ ಭಾಗ ಅರ್ಥವಾಗದೆ ಅನೇಕ ಕಾಲ ಇರುವುದು. ಆದರೆ ಅಲ್ಲಿ ಕೆಲವು ಸೂಚನೆಗಳಿವೆ. ಅವನ್ನು ಶರೀರ ಶಾಸ್ತ್ರಜ್ಞರು ಮುಂಚಿತವಾಗಿ ತೆಗೆದುಕೊಂಡರೆ ಒಳ್ಳೆಯದಾಗುತ್ತಿತ್ತು. ಹೇಗಾದರೂ ಆಗಲಿ. ಅದರ ಪರಿಣಾಮ ತೃಪ್ತಿಕರವಾಗಿರುವುದು. "ಅವರಿಗೆ ಮನಸ್ಸು ಬಂದರೆ ನನ್ನ ವಿಷಯದಲ್ಲಿ ಹೀನಾಯವಾಗಿ ಆದರೂ ಮಾತನಾಡಲಿ" ಎಂಬುದೆ ನನ್ನ ಗುರಿ.

ನನ್ನ ಕೆಚ್ಚೆದೆಯ ಮಕ್ಕಳೇ! ಮುಂದುವರಿಯಿರಿ. ಈಗತಾನೆ ನಾವು ಮೊದಲು ಮಾಡಿರುವೆವು. ಎಂದಿಗೂ ನಿರಾಶರಾಗಬೇಡಿ! ಎಂದಿಗೂ ಸಾಕು ಎನ್ನಬೇಡಿ! ಪಾಶ್ಚಾತ್ಯ ದೇಶಗಳಿಗೆ ಮನುಷ್ಯ ಬಂದು ನಾನಾ ಜನಾಂಗಗಳನ್ನು ನೋಡಿದ ಮೇಲೆ ಅವನ ಕಣ್ಣು ತೆರೆಯುವುದು. ವಾಚಾಳತನದಿಂದಲ್ಲ, ಕಾರ್ಯತಃ ಇಲ್ಲಿ ಜನಗಳಿಗೆ ನಮ್ಮಲ್ಲಿ ಇರುವುದೇನು ಇಲ್ಲದೆ ಇರುವುದೇನು, ಎಂಬುದನ್ನು ತೋರುವುದರಿಂದ ನನಗೆ ಕಷ್ಟಪಟ್ಟು ಕೆಲಸ ಮಾಡುವವರು ಸಿಕ್ಕುವುದು. ಒಂದು ಹತ್ತು ಲಕ್ಷ ಹಿಂದೂಗಳಾದರೂ ಪ್ರಪಂಚದಲ್ಲೆಲ್ಲಾ ಸಂಚರಿಸಲೆಂದು ಆಶಿಸುತ್ತೇನೆ!

ಅನವರತವೂ ನಿನ್ನ ಪ್ರೇಮದ,
ವಿವೇಕಾನಂದ.

೭೮

C/o ಇ. ಟಿ. ಸ್ಟರ್ಡಿ,
ಹೈ ವ್ಯೂ. ಕ್ಯಾವರ್ ಶ್ಯಾವ್
ರೀಡಿಂಗ್,
ಇಂಗ್ಲೆಂಡ್, ೧೮೯೬.

ಪ್ರತಿಯೊಬ್ಬರೂ ತಮ್ಮ ಕೈಲಾದಷ್ಟು ಕಷ್ಟಪಟ್ಟಲ್ಲದೆ ಏನನ್ನಾದರೂ ಮಾಡಲು ಸಾಧ್ಯವೇ ? ಉದ್ಯೋಗಿನಂ ಪುರುಷಸಿಂಹ ಮುಪೈತಿ ಲಕ್ಷ್ಮೀಃ—ಕಾರ್ಯೋನ್ಮುಖನಾಗಿರುವವನನ್ನು ಪುರುಷಸಿಂಹನನ್ನು, ಲಕ್ಷ್ಮಿ ಆಶ್ರಯಿಸುವಳು. ಹಿಂತಿರುಗಿ ನೋಡುವ ಅವಶ್ಯಕತೆ ಇಲ್ಲ. ಮುಂದೆ ನೋಡಿ ! ನಮಗೆ ಅನಂತ ಶಕ್ತಿ ಅನಂತ ಉತ್ಸಾಹ ಅನಂತ ಧೈರ್ಯ ಅನಂತ ತಾಳ್ಮೆ ಬೇಕು. ಆಗ ಮಾತ್ರ ಮಹತ್ ಕಾರ್ಯಗಳನ್ನು ನಾವು ಸಾಧಿಸಹುದು.

ನಿನ್ನ ಪ್ರೇಮದ
ವಿವೇಕಾನಂದ.

೭೯

೧೪ನೇ ಗ್ರೇ ಕೋಟ್ ಗಾರ್ಡನ್ಸ್,
ವೆಸ್ಟ್‌ಮಿನಿಸ್ಟರ್ ಲಂಡನ್,
೧ನೇ ನವಂಬರ್ ೧೮೯೬.

ನನ್ನ ವಿಶ್ವಾಸಕ್ಕೆ ಪಾತ್ರಳಾದ ಮೇರಿ,

"ಚಿನ್ನ ಬೆಳ್ಳಿಗಳಾವುವೂ ನನ್ನಲ್ಲಿಲ್ಲ. ಆದರೆ ನನ್ನಲ್ಲಿ ಏನಿರುವುದೋ ಅದನ್ನು ನಿನಗೆ ಕೊಡುವೆನು." ಅದನ್ನು ಧಾರಾಳವಾಗಿ ಕೊಡುವೆನು. ಅದೇ ಜ್ಞಾನ. ಚಿನ್ನದಲ್ಲಿರುವ ಚಿನ್ನತ್ವ, ರಜತದಲ್ಲಿರುವ ರಜತತ್ವ, ಪುರುಷನಲ್ಲಿರುವ ಪುರುಷತ್ವ, ಸ್ತ್ರೀಯಲ್ಲಿರುವ ಸ್ತ್ರೀತ್ವ ಮತ್ತು ಪ್ರಪಂಚದಲಿರುವ ಎಲ್ಲಾ ವಸ್ತುಗಳ ಸತ್ಯಾಂಶವೇ ದೇವರು. ಅನಾದಿಯಿಂದಲೂ ಇಂತಹ ದೇವರನ್ನು ಬಾಹ್ಯದಲ್ಲಿ ಸಾಕ್ಷಾತ್ಕಾರ ಮಾಡಿಕೊಳ್ಳುವುದಕ್ಕೆ ಪ್ರಯತ್ನಿಸುತ್ತಿರುವೆವು. ಈ ಪ್ರಯತ್ನದಲ್ಲಿ ನಮ್ಮ ಕಲ್ಪನೆಯ ವಿಚಿತ್ರ ವಸ್ತುಗಳಿಂದ, ಗಂಡಸು, ಹೆಂಗಸು, ಮಗು, ದೇಹ, ಬುದ್ಧಿ, ಪೃಥ್ವಿ, ಸೂರ್ಯ ಚಂದ್ರ, ತಾರೆಗಳು, ವಿಶ್ವ, ಪ್ರೀತಿ,

ದ್ವೇಶ, ಆಸ್ತಿ, ಐಶ್ವರ್ಯ ಇತ್ಯಾದಿಗಳು ಮತ್ತು ಎಲ್ಲಾ ಭೂತಗಳೂ, ಪಿಶಾಚಿಗಳು, ದೇವದೂತರು, ದೇವ ದೇವಿಯರು, ದೇವರು ಇವುಗಳನ್ನು ಹೊರಗೆಡುತ್ತಿರುವೆವು.

ಇದರ ನಿಜಾಂಶವೇನೆಂದರೆ ದೇವರು ನಮ್ಮಲ್ಲಿರುವನು. ನಾವೆ ಅವನು. ಚಿರಸಾಕ್ಷಿ ನಿಜವಾದ ಅಹಂಕಾರ; ಅದನ್ನು ಎಂದಿಗೂ ನಾವು ಬಾಹ್ಯವನ್ನಾಗಿ ಮಾಡಲಾಗುವುದಿಲ್ಲ. ಬಾಹ್ಯ ನಿರ್ಮಾಣದ ಕಾರ್ಯವೆಲ್ಲ ನಮ್ಮ ಬುದ್ಧಿ ಮತ್ತು ಕಾಲದ ವ್ಯರ್ಥದಲ್ಲಿ ಕೊನೆಗಾಣು ವುದು. ಆತ್ಮಕ್ಕೆ ಇದು ಗೋಚರವಾದೊಡನೆಯೆ, ಬಾಹ್ಯ ವಸ್ತು ನಿರ್ಮಾಣವನ್ನು ತ್ಯಜಿಸಿ ಹೆಚ್ಚು ಹೆಚ್ಚಾಗಿ ಅಂತರಂಗದ ಕಡೆ ತಿರುಗು ವುದು. ಇದನ್ನು ವಿಕಾಸವೆನ್ನುವುದು. ದೇಹದ ಮೇಲೆ ಕಡಿಮೆ, ಕಡಿಮೆ, ಮನಸ್ಸಿನ ಕಡೆ ಹೆಚ್ಚು ಹೆಚ್ಚು. ಪ್ರಾಣಿಗಳಲ್ಲೆಲ್ಲಾ ಅತ್ಯುತ್ತಮನಾದವನೆ ಮನುಷ್ಯ. ಅವನಲ್ಲಿ ಸಂಸ್ಕೃತದಲ್ಲಿ ಮನಸ್ಸು ಅಥವಾ ಆಲೋಚನೆ ಎನ್ನುವುದು ಇದೆ. ಆಲೋಚಿಸುವ ಪ್ರಾಣಿ ಇವನು. ಕೇವಲ ಪಂಚೇದ್ರಿಯುಗಳಲ್ಲೇ ತೃಪ್ತಿ ಪಡುವ ಮೃಗವಲ್ಲ. ಇದನ್ನೇ ಶಾಸ್ತ್ರದಲ್ಲಿ ತ್ಯಾಗವೆನ್ನುವುದು—ಸಮಾಜ ನಿರ್ಮಾಣವೆ, ಮದುವೆಯೆಂಬ ಸಂಸ್ಥೆಯ ಗುರಿ. ಮಕ್ಕಳ ಮೇಲೆ ಪ್ರೀತಿ, ನಮ್ಮ ಒಳ್ಳೆಯ ಕೆಲಸ, ನೀತಿ ಮತ್ತು ಧರ್ಮ ಎಲ್ಲಾ ತ್ಯಾಗದ ಭಿನ್ನಭಿನ್ನ ರೂಪ. ಎಲ್ಲಾ ಸಮಾಜದಲ್ಲಿಯೂ ನಮ್ಮ ಜೀವನವೆಲ್ಲ, ನಮ್ಮ ಇಚ್ಛೆ, ಬಾಹ್ಯ ಸುಖಕ್ಕೆ ಪಡುವ ದಾಹ, ಮತ್ತು ಆಸೆ ಇವನ್ನು ನಿಗ್ರಹಿಸುವುದರಲ್ಲಿದೆ. ಈ ನಮ್ಮ ಇಚ್ಛೆಯನ್ನು ಅಥವಾ ಕ್ಷುದ್ರ ಅಹಂಕಾರವನ್ನು ನೀಗಿ ಕೊಳ್ಳುವುದು—ಅಥವಾ ನಮ್ಮ ದೇಹದಿಂದ ಹೊರಗೆ ನೆಗೆಯುವಂತೆ ತೋರುವ ಕ್ರಿಯೆಗಳೆಲ್ಲವೂ ನಿತ್ಯಸಾಕ್ಷಿಯಾದ ಆತ್ಮನನ್ನು ಬಾಹ್ಯ ವಸ್ತುವನ್ನಾಗಿ ಮಾಡುವ ಪ್ರಯತ್ನ. ಇದೇ ನಮಗೆ ಪ್ರಪಂಚದಲ್ಲಿ ಕಾಣುವ ಒಂದು ವಿಶೇಷ ಸಂಗತಿ. ಎಲ್ಲಾ ಸಮಾಜಗಳೂ ಮತ್ತು ಸಂಸ್ಥೆಗಳೂ ಇದರ ಭಿನ್ನಭಿನ್ನ ರೂಪ ಮತ್ತು ಅಂತಸ್ಥಿನ ಭೇದಗಳು. ಶರಣಾಗತಿಗೆ ಅಥವಾ ನಮ್ಮ ಇಚ್ಛೆಯನ್ನು ಅಧೀನಪಡಿಸಿಕೊಳ್ಳು ವುದಕ್ಕೆ ಪ್ರೀತಿಯೇ ಬಹಳ ಸುಲಭವಾದುದು ಮತ್ತು ಸರಳವಾದುದು. ದ್ವೇಶ ಇದಕ್ಕೆ ವಿರುದ್ಧವಾದುದು.

ಸ್ವಾರ್ಥತ್ಯಾಗದ ಗುರಿಗಾಗಿ, ಅನೇಕ ಕಥೆಗಳ ಮೂಲಕ, ಸ್ವರ್ಗ ನರಕ ಮತ್ತು ಮೇಲೆ ನಮ್ಮನ್ನು ಆಳುವವರಿರುವರು ಎಂಬ ಮೂಢ ನಂಬಿಕೆಗಳಲ್ಲಿ ಜನರನ್ನು ನಂಬುವಂತೆ ಮಾಡಿರುವರು. ಮೂಢನಂಬಿಕೆ ಗಳಿಲ್ಲದೆ ಆಸೆಯನ್ನು ತೊರೆಯುವುದರ ಮೂಲಕ ತತ್ತ್ವಜ್ಞರು ತಿಳಿದು ಆಚರಿಸುವುದು ಇದನ್ನೇ.

ಆದುದರಿಂದ ಬಾಹ್ಯ ಸ್ವರ್ಗ ಅಥವಾ ಸತ್ಯಯುಗವಿರುವುದು ಮನುಷ್ಯನ ಭ್ರಾಂತಿಯಲ್ಲಿ. ಆದರೆ ಅಂತರಿಕ ಸ್ವರ್ಗ ಆಗಲೇ ಇರು ವುದು. ಕಸ್ತೂರಿಯಮೃಗ ಕಸ್ತೂರಿಯ ಸುವಾಸನೆಗೆ ಕಾರಣವನ್ನು ಹೊರಗೆ ಹುಡುಕಿ ಆದಮೇಲೆ ಕೊನೆಗೆ ತನ್ನಲ್ಲಿಯೇ ಹುಡುಕಬೇಕು.

ಬಾಹ್ಯಸಮಾಜ ಯಾವಾಗಲೂ ಒಳ್ಳೆಯದು ಮತ್ತು ಕೆಟ್ಟದರ ಮಿಶ್ರವಾಗಿಯೇ ಇರುವುದು. ಬಾಹ್ಯಜೀವನ ಯಾವಾಗಲೂ ಅದರ ನೆರಳಾದ ಸಾವಿನೊಂದಿಗೆ ಕೂಡಿಯೇ ಇರುವುದು. ಜೀವನ ಧೀರ್ಘ ವಾದಷ್ಟು ಅದರ ನೆರಳು ದೊಡ್ಡದಾಗಿಯೇ ಆಗುವುದು. ನಮ್ಮ ತಲೆಯ ಮೇಲೆ ಸೂರ್ಯನಿರುವಾಗ ಮಾತ್ರ ನೆರಳಿರುವುದಿಲ್ಲ. ಎಂದು, ದೇವರು ಒಳ್ಳೆಯದು ಮುಂತಾದ ಭಾವಗಳೆಲ್ಲ ನಮ್ಮಲ್ಲಿರುವುದೋ ಅಂದು ಯಾವ ಪಾಪವೂ ಇರುವುದಿಲ್ಲ. ಆದರೆ ಬಾಹ್ಯಜಗತ್ತಿನಲ್ಲಿ ಪ್ರತಿಯೊಂದು ಗುಂಡಿಗೂ ಅದರ ನೆರಳು ಇದ್ದೇ ಇರುತ್ತದೆ. ಪ್ರತಿಯೊಂದು ಒಳ್ಳೆಯ ದರ ಹಿಂದೆಯೂ ಅದರ ನೆರಳಿನಂತೆ ಕೆಟ್ಟದ್ದು ಹೋಗುತ್ತದೆ. ಪ್ರತಿ ಯೊಂದು ಉನ್ನತಿಯೂ ಅದಕ್ಕೆ ತಕ್ಕ ಅವನತಿಯೊಂದಿಗೆ ಕೂಡಿಯೇ ಇರುತ್ತದೆ. ಇದಕ್ಕೆ ಕಾರಣವೇನೆಂದರೆ ಒಳ್ಳೆಯದು ಕೆಟ್ಟದ್ದು ಎಂಬುದು ಎರಡಲ್ಲ. ಇರುವುದು ಒಂದೇ. ಅದರ ಆವಿರ್ಭಾವನೆಯಲ್ಲಿ, ತರತಮ ದಲ್ಲಿ ವ್ಯತ್ಯಾಸವೇ ಹೊರತು, ವಸ್ತುರಚನೆಯಲ್ಲಿ ಅಲ್ಲ.

ನಮ್ಮ ಜೀವನವೇ, ಸಸ್ಯ, ಪ್ರಾಣಿ, ಅಣು, ಕೀಟಗಳೆಂಬ ಅನ್ಯದರ ಸಾವಿನ ಮೇಲೆ ನಿಂತಿರುವುದು! ನಾವು ಅನೇಕವೇಳೆ ಮಾಡುವ ಮತ್ತೊಂದು ತಪ್ಪು ಯಾವುದೆಂದರೆ, ಒಳ್ಳೆಯದು ಯಾವಾಗಲೂ ಹೆಚ್ಚು ತ್ತಿರುವುದೆಂತಲೂ, ಕೆಟ್ಟದ್ದು, ಇದ್ದಷ್ಟೇ ಇರುವುದೆಂತಲೂ ತಿಳಿದುಕೊಳ್ಳು ವುದು. ಇವುಗಳ ಆಧಾರದ ಮೇಲೆ ಕೆಟ್ಟದ್ದು ಬರಬರುತ್ತಾ ಕಡಿಮೆ

ಯಾಗುವುದರಿಂದ, ಒಳ್ಳೆಯದು ಮಾತ್ರ ಕೊನೆಗೆ ಉಳಿಯುವ ಸುದಿನ ಬರುವುದೆಂದು ವಾದಿಸುವರು. ಇದರ ಹಿಂದಿರುವುದು ಪೂರ್ವಪಕ್ಷದ ತಪ್ಪು ಕಲ್ಪನೆಯ ಮೇಲೆ. ಒಳ್ಳೆಯದು ಹೆಚ್ಚಾಗುತ್ತಿದ್ದರೆ, ಕೆಟ್ಟದ್ದೂ ಹಾಗೆಯೇ ಹೆಚ್ಚಾಗುತ್ತಿರುವುದು. ನನ್ನ ಆಸೆಗಳು ನನ್ನ ಜನಾಂಗದ ಸಾಧಾರಣ ಮಾನವನ ಆಸೆಗಳಿಗಿಂತಲೂ ಹೆಚ್ಚಾಗಿರುವುದು. ನನ್ನ ಸಂತೋಷವು ಅವರ ಸಂತೋಷಕ್ಕಿಂತ ಹೆಚ್ಚಾಗಿರುವುದು. ಆದರೆ ನನ್ನ ದುಃಖವೂ ಕೂಡ ಅವರ ದುಃಖಗಳಿಗಿಂತ ಲಕ್ಷಪಾಲು ಹೆಚ್ಚಾಗಿರುವುದು. ಅತ್ಯಂತ ಕಡಿಮೆ ಒಳ್ಳೆಯದನ್ನು ಕೂಡ ಅನುಭವಿಸುವಂತೆ ಮಾಡುವ ದೇಹರಚನೆಯೇ, ಅತ್ಯಂತ ಕಡಿಮೆ ಕೆಟ್ಟದ್ದನ್ನು ಕೂಡ ಅನುಭವಿಸುವಂತೆ ಮಾಡುವುದು. ಸಂತೋಷದ ಸುದ್ದಿಯನ್ನು ತರುವ ನರಗಳೇ ದುಃಖದ ಸುದ್ದಿಯನ್ನೂ ತರುವುವು. ಒಂದೇ ಮನಸ್ಸು ಎರಡನ್ನೂ ಅನುಭವಿಸುವುದು. ಜಗದ ಅಭಿವೃದ್ಧಿ ಎಂದರೆ ಹೆಚ್ಚು ಸಂತೋಷ, ಅದರಷ್ಟೇ ಹೆಚ್ಚು ದುಃಖವೂ ಕೂಡ. ಜನನ ಮರಣ, ಒಳ್ಳೆಯದು ಕೆಟ್ಟದ್ದು, ಜ್ಞಾನ ಅಜ್ಞಾನ, ಇವುಗಳನ್ನು ಮಾಯೆ ಅಥವಾ ವಿಶ್ವದಲ್ಲೆಲ್ಲ ಸರ್ವ ಸಾಧಾರಣವಾದ ನಿಯಮವೆಂದು ಕರೆಯುವುದು. ಈ ಬಲೆಯೊಳಗೆ ಸುಖವನ್ನು ಹುಡುಕುತ್ತ ಅನಂತ ಕಾಲವೂ ನೀವು ಪ್ರಯತ್ನಿಸಬಹುದು. ಜತೆಗೆ ಹೆಚ್ಚು ಹೆಚ್ಚು ದುಃಖವೂ ಕೂಡ ಸಿಕ್ಕುವುದು. ಕೆಟ್ಟದ್ದಿಲ್ಲದೆ ಕೇವಲ ಒಳ್ಳೆಯದನ್ನು ಮಾತ್ರ ಹೊಂದಬೇಕೆಂಬುದು ವ್ಯರ್ಥ ಆಲಾಪ.

ಎರಡು ದಾರಿಗಳು ತೆರೆದಿವೆ—ಒಂದನೆಯದು ಎಲ್ಲಾ ನಂಬಿಕೆಯನ್ನು ತೊರೆದು, ಪ್ರಪಂಚ ಇರುವಂತೆಯೇ ಸ್ವೀಕರಿಸಿ, ಬರುವ ಕಷ್ಟನಷ್ಟಗಳನ್ನೆಲ್ಲ ಕೆಲವು ವೇಳೆ ಸಿಕ್ಕಬಹುದಾದ ಅಲ್ಪಸುಖದಾಸೆಗೆ, ಮನಸ್ಸಿಟ್ಟು ಸಹಿಸುವುದು. ಎರಡನೆಯದೋ, ಸುಖವೇ ದುಃಖದ ಮತ್ತೊಂದು ರೂಪವೆಂದು ತಿಳಿದು ಸುಖ ಹುಡುಕುವುದನ್ನು ತೊರೆದು ಸತ್ಯವನ್ನು ಅರಸುವುದು. ಯಾರು ಸತ್ಯಕ್ಕೋಸುಗವಾಗಿ ಧೈರ್ಯದಿಂದ ಪ್ರಯತ್ನಿಸುವರೋ ಅವರು, ಆ ಸತ್ಯವು ತ್ರಿಕಾಲದಲ್ಲಿಯೂ ತಮ್ಮಲ್ಲಿಯೇ ಇರುವುದೆಂದು ತಿಳಿಯುವುದರಲ್ಲಿ ಜಯಶೀಲರಾಗುವರು. ಆಗ ನಾವು ಅದೇ ಸತ್ಯವೇ ಜ್ಞಾನ ಮತ್ತು ಅಜ್ಞಾನಗಳಂತೆ ತೋರುವುದೆಂದು ತಿಳಿಯು

ವೆವು. ಅದೇ ಸತ್ಯವೇ ಆನಂದವೆಂಬುದೂ ಗೊತ್ತಾಗುವುದು. ಇದೇ ಆನಂದವೇ ಒಳ್ಳೆಯದು ಕೆಟ್ಟದ್ದೆಂದು ತೋರುವುದು. ಅವುಗಳೊಂದಿಗೆ ನಿತ್ಯವಾದ ಸತ್ಯವೊಂದೇ ಜನನ ಮರಣಗಳಲ್ಲಿರುವುದೆಂದು ತೋರುವುದು.

ಈ ನೋಟವೆಲ್ಲವೂ ಒಂದೇ ಸತ್ ಚಿತ್ ಆನಂದ ಸ್ವರೂಪದ ಏಕ ಅಥವಾ ಅನಂತ ಕವಲುಗಳಾದ ಪ್ರತಿಬಿಂಬದಂತೆ ಆಗ ನಮಗೆ ಕಾಣುವುದು. ಅದೇ ನನ್ನ ಮತ್ತು ಎಲ್ಲದರ ಸತ್ಯ. ಆಗ ಮಾತ್ರ ಪಾಪವಿಲ್ಲದೆ ಪುಣ್ಯಮಾಡುವುದು ಸಾಧ್ಯ. ಆ ವ್ಯಕ್ತಿ ಒಳ್ಳೆಯದು ಕೆಟ್ಟದ್ದು ಎರಡನ್ನು ಸೃಷ್ಟಿಸುವ ವಸ್ತುವನ್ನು ತಿಳಿಯುವನು; ಮತ್ತು ಅದರ ಮೇಲೆ ತನ್ನ ಅಧೀನವಿಟ್ಟುಕೊಂಡಿರುವನು. ಅವನು ಮಾತ್ರ ಅವನಿಗೆ ಬೇಕಾದಂತೆ ಒಳ್ಳೆಯದನ್ನು ಕೆಟ್ಟದ್ದನ್ನು ಪ್ರತ್ಯೇಕವಾಗಿ ವ್ಯಕ್ತಪಡಿಸಬಹುದು. ಅವನು ಯಾವಾಗಲೂ ಒಳ್ಳೆಯದನ್ನೇ ವ್ಯಕ್ತಪಡಿಸುವನೆಂಬುದು ನಮಗೆ ಗೊತ್ತಿದೆ. ಇದನ್ನೇ ಜೀವನ್ಮುಕ್ತಿ ಎಂಬುದು. ಎಲ್ಲಾ ತತ್ತ್ವಗಳಂತೆಯೇ ಇದೇ ವೇದಾಂತದ ಗುರಿ.

ಜಗದೀಶನಲ್ಲಿ ನಿನ್ನ,
ವಿವೇಕಾನಂದ

೮೦

ಪ್ರಿಯ,

ಮಾನವ ಸಮಾಜ, ಸರದಿಯ ಮೇಲೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ಚಾತುರ್ವರ್ಣದವರಿಂದ ಆಳಲ್ಪಡುತ್ತಿದೆ. ಪ್ರತಿವರ್ಣದ ಆಳ್ವಿಕೆಯಲ್ಲೂ ಒಳ್ಳೆಯದೂ ಇದೆ ಕೆಟ್ಟದ್ದೂ ಇದೆ. ಬ್ರಾಹ್ಮಣರ ಆಳ್ವಿಕೆಯಲ್ಲಿ ವಂಶಪಾರಂಪರ್ಯದ ದೃಷ್ಟಿಯಿಂದ ವಿಪರೀತವಾಗಿ ಇನ್ನೊಬ್ಬರನ್ನು ತಮ್ಮೊಂದಿಗೆ ಬೆರೆಯದಂತೆ ಮಾಡುವರು. ಬ್ರಾಹ್ಮಣಿಕ ಮಾಡುವರು ಮತ್ತು ಅವರ ವಂಶಸ್ಥರಿಗೆ ಬೇಕಾದಷ್ಟು ರಕ್ಷಣೆಗಳಿರುತ್ತವೆ—ಅವರಿಗಲ್ಲದೆ ಬೇರೆ ಯಾರಿಗೂ ಹೇಳಿಕೊಡುವ ಹಕ್ಕಿಲ್ಲ. ಅದರಲ್ಲಿ ಮುಖ್ಯವಾದುವು ಯಾವುದೆಂದರೆ, ಎಲ್ಲಾ ಶಾಸ್ತ್ರಗಳಿಗೂ ತಳಹದಿಯನ್ನು ಹಾಕುವುದೇ ಆ ಕಾಲದಲ್ಲಿ. ಬ್ರಾಹ್ಮಣರು ಬುದ್ಧಿಯನ್ನು ಪೋಷಿಸುವರು. ಏಕೆಂದರೆ ಬುದ್ಧಿಶಕ್ತಿಯ ಮೂಲಕ ಅವರು ಆಳಬೇಕಾಗಿರುವುದು.

ಕ್ಷತ್ರಿಯನ ಆಳ್ವಿಕೆಯಲ್ಲಾದರೋ ಕ್ರೌರ್ಯವೂ ಬಲತ್ಕಾರವೂ ಸೇರಿರುವುದು. ಆದರೆ ಅವರು ತನ್ನೊಂದಿಗೆ ಬೆರೆಯುವುದಕ್ಕೆ ಅಡ್ಡಿ ತರುವುದಿಲ್ಲ. ಅವರ ಕಾಲದಲ್ಲಿ ಅನೇಕ ಕಲೆಗಳು, ಸಮಾಜಸಂಸ್ಕೃತಿಗಳು ಹೆಚ್ಚು ಅಭಿವೃದ್ಧಿಗೆ ಬರುವುವು.

ವೈಶ್ಯರ ಆಳ್ವಿಕೆ ನಂತರ ಬರುವುದು. ಮೌನವಾದ ದಬ್ಬಾಳಿಕೆ ಮತ್ತು ಜನರನ್ನು ಸುಲಿದು ತಿನ್ನುವುದರಲ್ಲಿ ಇದು ಬಹಳ ಭೀಕರವಾಗಿರುವುದು. ಇದರ ಅನುಕೂಲವೇನೆಂದರೆ, ವ್ಯಾಪಾರಸ್ಥನೇ ಎಲ್ಲಾ ಕಡೆಗೂ ಹೋಗುವುದರಿಂದ ಹಿಂದಿನ ಇಬ್ಬರ ಆಳ್ವಿಕೆಯ ಕಾಲದಲ್ಲಿ ಶೇಖರವಾಗಿದ್ದ ಭಾವನೆಗಳನ್ನು ಹಂಚುವುದಕ್ಕೆ ಸಹಕಾರಿಯಾಗುವನು. ಕ್ಷತ್ರಿಯರಿಗಿಂತ ಇವರು ಇನ್ನೊಬ್ಬರೊಂದಿಗೆ ಸಹಕರಿಸುವುದು ಹೆಚ್ಚು. ಆದರೆ ಸಂಸ್ಕೃತಿ ಕ್ಷೀಣದೆಸೆಗೆ ಬರುವುದು.

ಕೊನೆಗೆ ಶೂದ್ರನ ಆಳಿಕೆ ಬರುವುದು. ಅದರ ಅನುಕೂಲಯಾವುದೆಂದರೆ ದೈಹಿಕ ಸೌಕರ್ಯಗಳನ್ನು ಎಲ್ಲರಿಗೂ ಸಮನಾಗಿ ಹಂಚುವುದು. ಅದರ ಅನುಕೂಲವೆ (ಬಹುಶಃ) ಸಂಸ್ಕೃತಿಯ ಹೀನತೆ. ಎಲ್ಲರಲ್ಲಿಯೂ ಸಾಧಾರಣ ವಿದ್ಯೆ ಹರಡುವುದು. ಆದರೆ ಪ್ರತಿಭಾವಂತರು ಕಡಿಮೆಯಾಗುವರು.

ಬ್ರಾಹ್ಮಣನ ವಿದ್ಯೆ, ಕ್ಷತ್ರಿಯನ ಸಂಸ್ಕೃತಿ, ವೈಶ್ಯನ ಹಂಚುವಿಕೆಯ ಶಕ್ತಿ, ಶೂದ್ರನ ಸಮತ್ವದ ಆದಾರ್ಶ, ಇವುಗಳೆಲ್ಲವನ್ನು ಇಟ್ಟುಕೊಂಡು, ಅವುಗಳ ಕುಂದನ್ನು ತೊರೆದ ಒಂದು ಸ್ಥಿತಿಯನ್ನು ರಚಿಸುವುದಕ್ಕೆ ಸಾಧ್ಯವಾದರೆ ಅದು ಆದರ್ಶ ಸ್ಥಿತಿಯಾಗುವುದು. ಆದರೆ ಅದು ಸಾಧ್ಯವೇ ?

ಆದರೆ ಮೊದಲನೆಯ ಮೂರುವರ್ಗದವರಿಗೆ ಅವರವರ ಸರದಿ ಸಿಕ್ಕಿದೆ. ಈಗ ಕೊನೆಯವರ ಕಾಲ. ತಮ್ಮ ಸರದಿಯನ್ನು ಅವರು ಹೊಂದೇ ಹೊಂದುವರು. ಅವರನ್ನು ಯಾರೂ ವಿರೋಧಿಸಲಾರರು. ಚಿನ್ನ ಅಥವಾ ಬೆಳ್ಳಿಯ ಪ್ರಮಾಣದ (standard) ಕಷ್ಟಗಳೆಲ್ಲ ನನಗೆ ತಿಳಿಯದು., (ಇದರ ವಿಚಾರವಾಗಿ ಯಾರಿಗೂ ಹೆಚ್ಚು ತಿಳಿದಂತೆ ಕಾಣುವುದಿಲ್ಲ) ಆದರೆ ಇಷ್ಟನ್ನು ಮಾತ್ರ ನಾನು ನೋಡಬಲ್ಲೆ. ಚಿನ್ನದ

ಪ್ರಮಾಣ ಬಡವನನ್ನು ಅತಿ ಬಡವನನ್ನಾಗಿಯೂ, ಹಣಗಾರನನ್ನು ಹೆಚ್ಚು ಹಣಗಾರನನ್ನಾಗಿಯೂ ಮಾಡಿದೆ. "ಚಿನ್ನದ ಶಿಲುಬೆಯ ಮೇಲೆ ಸಾಯು ವುದಕ್ಕೆ ನಾವು ಒಪ್ಪುವುದಿಲ್ಲ" ಎಂದು ಸಾರಿದ ಬ್ರಿಯಾನನು ಸರಿ. ಈ ಅಸಮಾನವಾದ ಕಲಹದಲ್ಲಿ ಬೆಳ್ಳಿಯ ಪ್ರಮಾಣವು ಬಡವರಿಗೆ ಹೆಚ್ಚು ಪ್ರಯೋಜನ ಕಾರಿಯಾಗುವುದು. ನಾನು ಸಮತಾವಾದಿ (socialist) ಏಕೆಂದರೆ ಅದು ಒಂದು ಸಂಪೂರ್ಣವಾದ ಸಂಸ್ಥೆ ಎಂದು ತಿಳಿದಿರುವೆನು ಎಂದಲ್ಲ. ಆದರೆ ಒಂದು ಚೂರು ರೊಟ್ಟಿ ಏನೂ ಇಲ್ಲದೇ ಇರುವುದ ಕ್ಕಿಂತ ಉತ್ತಮ.

ಉಳಿದ ಮೂರು ಸಂಸ್ಥೆಗಳನ್ನು ಪರೀಕ್ಷಿಸಿ ಅದು ಸಾಲದೆಂದು ತಿಳಿದು ಬಂದಿದೆ. ಇದೊಂದನ್ನು ಈಗ ಪರಿಕ್ಷಿಸೋಣ. ಇನ್ನು ಯಾವ ಕಾರಣಗಳಿಲ್ಲದೇ ಇದ್ದರೂ ಹೊಸದನ್ನು ಪರೀಕ್ಷಿಸೋಣ ಎಂಬ ದೃಷ್ಟಿ ಯಿಂದಲಾದರೂ ಅದನ್ನು ನೋಡುವ. ಬೇರೆ ಬೇರೆ ಜನಗಳಿಗೆ ಸುಖ ದುಃಖಗಳನ್ನು ಹಂಚುವುದು, ಯಾವಾಗಲೂ ಒಬ್ಬರೇ ಸುಖ, ಅಥವಾ ಒಬ್ಬರೇ ದುಃಖವನ್ನು ಅನುಭವಿಸುವುದಕ್ಕಿಂತ ಮೇಲು. ಈ ಪ್ರಪಂಚ ದಲ್ಲಿ ಕೆಟ್ಟದ್ದು ಒಳ್ಳೆಯುದರ ಮೊತ್ತ ಯಾವಾಗಲೂ ಇದ್ದಷ್ಟೇ ಇರುತ್ತದೆ. ಹೊಸರಚನೆಯಿಂದ ಒಬ್ಬನ ಮೇಲಿನ ಕಷ್ಟ ಇನ್ನೊಬ್ಬನಮೇಲೆ ಹೋಗು ವುದು ಅಷ್ಟೆ.

ಈ ದುಃಖದ ಪ್ರಪಂಚದಲ್ಲಿ ಪ್ರತಿಯೊಬ್ಬರಿಗೂ ಒಳ್ಳೆಯ ಕಾಲ ಸಿಕ್ಕಲಿ. ಏಕೆಂದರೆ ಸುಖವೆಂಬುದನ್ನು ಅನುಭವಿಸಿ ಆದ ಮೇಲೆ ಅದರೂ ಎಲ್ಲರೂ ದೇವರೆಡೆಗೆ ಬರಲಿ. ಪ್ರಪಂಚ, ರಾಜ್ಯಾಂಗ ರಚನೆ, ಮುಂತಾ ದುವುಗಳನ್ನು ತೊರೆಯಲಿ. ನಿಮ್ಮೆಲ್ಲರಿಗೂ ನನ್ನ ವಿಶ್ವಾಸಗಳು.

ಅನವರತವೂ ನಿನಗೆ ಕೃತಜ್ಞನಾದ ಸಹೋದರ,

ವಿವೇಕಾನಂದ.

೮೧

ರೋಸ್ ಬ್ಯಾಂಕ್,
ಬರ್ದ್ವಾನ್ ಮಹಾರಾಜರ ಮನೆ,
ಡಾರ್ಜಿಲಿಂಗ್,
೬ನೇ ಏಪ್ರಿಲ್ ೧೮೯೭.

'ಓಂ ತತ್ ಸತ್'

ಭಾರತೀಯ ಸಂಪಾದಕರಿಗೆ.—

ಗೌರವ ಮಹಿಳೆ,

ನಿಮ್ಮಿಂದ ನನಗೆ 'ಕಳುಹಿಸಿದ ಭಾರತಿಗೆ' ಬಹಳ ಋಣಿಯಾಗಿರುವೆನು. ಯಾವ ಮಹಾಕಾರ್ಯಕ್ಕೆ ನನ್ನ ಅಲ್ಪ ಜೀವನವನ್ನು ನಿವೇದಿಸಿರುವೆನೋ ಅದನ್ನು ನಿಮ್ಮಂತಹ ವಿದ್ಯಾವಂತರಾದ ಮಹಿಳೆ ಮೆಚ್ಚುವುದನ್ನು ನೋಡಿ ನಾನು ಭಾಗ್ಯವಂತನೆಂದು ಎಣಿಸುತ್ತೇನೆ.

ಈ ಜೀವನದ ಯುದ್ಧದಲ್ಲಿ, ಅದರಲ್ಲೂ ನಮ್ಮ ನಿರ್ಭಾಗ್ಯ ದೇಶದಲ್ಲಿ ಹೊಸ ವಿಚಾರ ಸರಣಿಯನ್ನು ಪ್ರಾರಂಭಿಸುವವನಿಗೆ ಪ್ರೋತ್ಸಾಹ ಕೊಡುವ ಪುರುಷರು ಬಹಳ ಅಪರೂಪ. ಅದರಲ್ಲೂ ಅವನಿಗೆ ಪ್ರೋತ್ಸಾಹ ಕೊಡುವ ಮಹಿಳೆಯ ಮಾತನ್ನು ಎತ್ತಬೇಕಾಗಿಯೇ ಇಲ್ಲ. ಆದುದರಿಂದ ವಿದ್ಯಾವಂತಳಾದ ಓರ್ವ ವಂಗ ಮಹಿಳೆಯ ಮೆಚ್ಚುಗೆಯು ಭರತಖಂಡದ ಎಲ್ಲಾ ಪುರುಷರ ಕರತಾಡನಕ್ಕಿಂತಲೂ ಪ್ರಶಸ್ತವಾದುದು.

ಈ ದೇಶದಲ್ಲಿ ನಿಮ್ಮಂತಹ ಅನೇಕ ನಾರಿಯರು ಜನ್ಮವೆತ್ತಿ ತಮ್ಮ ಮಾತೃದೇಶದ ಹಿತಕ್ಕೋಸುಗವಾಗಿ ಜೀವನ್ನು ವಿನಿಯೋಗಿಸಲೆಂದು ಜಗದೀಶನು ಆಶೀರ್ವದಿಸಲಿ!

ಭಾರತಿಯಲ್ಲಿ ನನ್ನ ವಿಚಾರವಾಗಿ ಬರೆದ ಲೇಖನದ ವಿಷಯವಾಗಿ ನಾನು ಸ್ವಲ್ಪ ಹೇಳಬೇಕಾಗಿರುವುದು ಇದೆ. ಅದೇ ಇದು: ಧಾರ್ಮಿಕ ವಿಷಯಗಳನ್ನು ಪಾಶ್ಚಾತ್ಯದೇಶಗಳಿಗೆ ಇಂದು ಬೋಧಿಸುವುದು ಮತ್ತು ಮುಂದೆ ಬೋಧಿಸುವುದು ಭರತಖಂಡದ ಹಿತಕ್ಕಾಗಿ. ಪಾಶ್ಚಾತ್ಯ ಜನಾಂಗದ ಸಹಾಯವಿಲ್ಲದೆ ನಾವು ಮುಂದೆ ಬರಲಾರೆವೆಂಬುದು ಅನೇಕ

ಕಾಲದಿಂದ ಬೇರೂರಿದ ನನ್ನ ದೃಢಮತ. ಈ ದೇಶದಲ್ಲಿ ಯೋಗ್ಯತೆಗೆ ಪುರಸ್ಕಾರಮಾಡುವವರು ಇನ್ನೂ ಸಿಕ್ಕಿಲ್ಲ. ಯಾವ ಧನಸಹಾಯವೂ ಇಲ್ಲ. ಎಲ್ಲಕ್ಕಿಂತ ಬಹಳ ಶೋಚನೀಯವಾದುದು ಯಾವುದೆಂದರೆ, ಸ್ವಲ್ಪವಾದರೂ ಕಾರ್ಯತಃ ಬುದ್ಧಿ ಓಡದು.

ಮಾಡಬೇಕಾದದ್ದು ಬಹಳವಿರುವುದು. ಆದರೆ ಈ ದೇಶದಲ್ಲಿ ಮಾಡುವುದಕ್ಕೆ ತಕ್ಕ ಅನುಕೂಲಗಳು ಬೇಕಾಗಿವೆ. ವೇದಾಂತ ಸಿದ್ಧಾಂತಗಳೇನೋ ನಮ್ಮಲ್ಲಿವೆ. ಆದರೆ ಅವುಗಳನ್ನು ಕಾರ್ಯರಂಗಕ್ಕೆ ತರುವ ಶಕ್ತಿ ಇಲ್ಲ. ನಮ್ಮ ಶಾಸ್ತ್ರಗಳಲ್ಲಿ ಜಗತ್ತಿನಲ್ಲಿರುವವರೆಲ್ಲರೂ ಸಮ ನೆಂದು ಸಾರುವ ಸಿದ್ಧಾಂತಗಳಿವೆ. ಆದರೆ ಕಾರ್ಯತಃ ಎಷ್ಟು ಪಂಗಡ ಗಳನ್ನು ಮಾಡಿರುತ್ತೇವೆ. ಅತ್ಯಂತ ಉತ್ತಮರೀತಿಯ ನಿಸ್ವಾರ್ಥತೆ ಮತ್ತು ನಿಶ್ಕಾಮ ಕರ್ಮ ಇವುಗಳನ್ನು ಬೋಧಿಸಿದುದು ಇಂಡಿಯಾ ದೇಶ ದಲ್ಲಿ. ಆದರೆ ನಮ್ಮ ನಡವಳಿಕೆಯಲ್ಲಿ ಬಹಳ ಕಠಿಣರು ನಿರ್ದಯರೂ ಆಗಿ ರುವೆವು. ಮಾಂಸರಾಶಿಯ ಈ ದೇಹ ಒಂದನ್ನಲ್ಲದೆ ಬೇರೆ ಯಾವುದನ್ನೂ ಆಲೋಚಿಸಲಾರೆವು.

ಆದರೂ ವರ್ತಮಾನ ಕಾಲದ ಸ್ಥಿತಿಯಿಂದ ಮಾತ್ರವೆ ಕೆಲಸ ಮಾಡಲು ಸಾಧ್ಯ. ಬೇರೆ ದಾರಿಯಿಲ್ಲ. ಪ್ರತಿಯೊಬ್ಬನಿಗೂ ಒಳ್ಳೆಯು ದನ್ನೂ ಕೆಟ್ಟದ್ದನ್ನೂ ಪರೀಕ್ಷಿಸುವ ಶಕ್ತಿ ಇದೆ. ಆದರೆ ಯಾವನು ಅಜ್ಞಾನ, ಮೋಹ, ದುಃಖಗಳಿಂದ ತುಂಬಿದ ಈ ಸಂಸಾರದ ಅಲೆಯ ಹೊಡೆತಗಳಿಗೆ ಅಂಜದೆ, ಒಂದು ಕೈಯಿಂದ ಕಣ್ಣೀರನ್ನು ಒರೆಸಿಕೊ ಳ್ಳುತ್ತಾ, ಎದೆಗೆಡದೆ, ಮತ್ತೊಂದರಿಂದ ಮುಕ್ತಿಗೆ ದಾರಿತೋರುವನೋ ಅವನೇ ಧೀರನು. ಒಂದುಕಡೆ ಪೂರ್ವಾಚಾರ ಪಾರಾಯಣರಿಂದ ತುಂಬಿದ ಸಮಾಜ, ಜಡವಸ್ತುವಿನ ರಾಶಿಯಂತಿದೆ. ಮತ್ತೊಂದುಕಡೆ ಅವಿಚಾರಿ ತರಾದ, ದುಡುಕುವ, ಬೆಂಕಿಯ ಜೂರನ್ನು ಕಾರುವ ಸಮಾಜ ಸುಧಾರಕ ರಿರುವರು. ಹಿತಕ್ಕೆ ಹಾದಿ ಇವುಗಳ ಮಧ್ಯದಲ್ಲಿದೆ. ಜಪಾನಿನ ಹುಡು ಗಿಯರು ತಮ್ಮ ಬೊಂಬೆಗಳನ್ನು ಹೃದಯ ಪೂರ್ವಕವಾಗಿ ಪ್ರೀತಿಸಿದರೆ ಅವು ಜೀವ ತಾಳುವುವೆಂಬ ನಂಬಿಕೆಯು ಅಲ್ಲಿರುವುದೆಂದು ನಾನು ಕೇಳಿ ರುವೆನು. ಜಪಾನಿನ ಹುಡುಗಿಯರ ತಮ್ಮ ಬೊಂಬೆಗಳನ್ನು ಎಂದೂ

ಮುರಿಯುದಿಲ್ಲ. ಓ! ಭಾಗ್ಯವತಿಯರು ನೀವು! ನಿಮ್ಮಲ್ಲಿ ಯಾರಾದರು ಹೃದಯ ಪೂರ್ವಕವಾಗಿ, ಐಶ್ವರ್ಯ ಹೀನರಾದ, ನಿರ್ಭಾಗ್ಯರಾದ, ವಿವೇಚನಾ ಶಕ್ತಿಯನ್ನು ಕಳೆದುಕೊಂಡು, ಪದದಳಿತರಾಗಿ, ಉಪವಾಸದಿಂದ ನರಳಿ, ಕಾದಾಡಿ ಅಸೂಯೆಪಡುವ ನಮ್ಮ ದೇಶದವರನ್ನು ಪ್ರೀತಿಸಿದರೆ ಅವರು ಮತ್ತೊಮ್ಮೆ ಮೇಲೆ ಏಳುವರೆಂದು ನಾನು ಕೂಡ ನಂಬುತ್ತೇನೆ. ನೂರಾರು ಜನ ಉದಾರ ಹೃದಯದ ಪುರುಷರು ಸ್ತ್ರೀಯರು, ಜೀವನದ ಸುಖವನ್ನು ಅನುಭವಿಸಬೇಕೆಂಬ ಆಸೆಯೆಲ್ಲವನ್ನು ತೊರೆದು, ಬಡತನ ಅಜ್ಞಾನ ಕೂಪದಲ್ಲಿ ದಿನ ಕಳೆದಂತೆಲ್ಲ ಆಳ ಆಳಕ್ಕೆ ಮುಳುಗುತ್ತಿರುವ ಅವರಿಗೆ ಲಕ್ಷಾಂತರ ಜನ ತಮ್ಮ ನಾಡಿನವರ ಹಿತಕ್ಕೋಸುಗವಾಗಿ ಆತುರರಾಗಿ ಕೈಲಾದಮಟ್ಟಿಗೆ ಕಷ್ಟಪಡುವರೋ, ಆಗ ಮಾತ್ರ ಭರತಖಂಡ ಮೇಲೇಳುವುದು. ನನ್ನ ಸ್ವಲ್ಪ ಜೀವಮಾನದಲ್ಲಿ ಕೂಡ, ಒಳ್ಳೆಯ ಉದ್ದೇಶ, ಸತ್ಯಸಂಧತೆ ಮತ್ತು ಅನಂತಪ್ರೇಮ ಇವು ಜಗತ್ತನ್ನೇ ಗೆಲ್ಲಬಲ್ಲವೆಂದು ನಾನು ಅನುಭವಿಸಿರುವೆನು. ಈ ಸುಗುಣಗಳನ್ನು ಹೊಂದಿದ ಒಂದು ವ್ಯಕ್ತಿಯು, ಕೋಟ್ಯಾಂತರ ಕಪಟಿಗಳ ದುಷ್ಟರ ದುರುದ್ದೇಶವನ್ನು ನಾಶ ಮಾಡಬಹುದು.

ನಾನು ಪಾಶ್ಚಾತ್ಯ ದೇಶಗಳಿಗೆ ಹೋಗುವ ವಿಚಾರ ಇನ್ನು ನಿಶ್ಚಿತವಾಗಿಲ್ಲ. ನಾನು ಹೋದರೆ ಅದೂ ಕೂಡ ಭರತಖಂಡದ ಹಿತಕ್ಕಾಗಿ ಎಂದು ತಿಳಿಯಿರಿ. ಈ ದೇಶದಲ್ಲಿ ಕೆಲಸಗಾರರ ಬಾಹುಳ್ಯವೆಲ್ಲಿದೆ? ಹಣದ ಬಾಹುಳ್ಯವೆಲ್ಲಿದೆ? ಪಾಶ್ಚಾತ್ಯ ದೇಶದ ಅನೇಕ ನರನಾರಿಯರು, ಅತ್ಯಂತ ನೀಚನಾದ ಚಂಡಾಲನನ್ನಾದರೂ, ಭಾರತೀಯ ರೀತಿಯಲ್ಲಿ ಭಾರತೀಯ ಧರ್ಮದ ಮೂಲಕ ಸೇವಿಸಿ ಭರತಖಂಡದ ಹಿತವನ್ನು ಸಾಧಿಸಲು ಸಿದ್ಧರಾಗಿರುವರು. ಈ ದೇಶದಲ್ಲಿ ಅಂತಹವರು ಎಷ್ಟು ಮಂದಿ ಇರುವರು? ಮತ್ತು ಹಣದ ಸಹಾಯವೋ! ನನ್ನ ಸ್ವಾಗತ ಖರ್ಚಿಗಾಗಿ ಕಲ್ಕತ್ತಾ ಪುರಜನರು ನನ್ನಿಂದ ಉಪನ್ಯಾಸವನ್ನು ಮಾಡಿಸಿ ಟಿಕೇಟುಗಳನ್ನು ಮಾರಿದರು. ನಾನು ಇದಕ್ಕೋಸುಗವಾಗಿ ಯಾರನ್ನೂ ನಿಂದಿಸುವುದಿಲ್ಲ. ಯಾರಮೇಲೆಯೂ ಆಕ್ಷೇಪಣೆ

ಹೊರಿಸುವುದಿಲ್ಲ. ಪಾಶ್ಚಾತ್ಯ ದೇಶದ ಜನ ಮತ್ತು ಧನ ಸಹಾಯವಿಲ್ಲದೆ ನಮ್ಮ ಹಿತರಕ್ಷಣೆ ಸಾಧ್ಯವಿಲ್ಲವೆಂಬುದನ್ನು ಮಾತ್ರ ನಾನು ತೋರಿಸುವೆನು.

ಚಿರಕೃತಜ್ಞನಾಗಿ ಅನವರತವೂ ನಿಮ್ಮ ಆಯುರಾರೋಗ್ಯಕ್ಕೆ ಜಗದೀಶನನ್ನು ಪ್ರಾರ್ಥಿಸುವ,

ವಿವೇಕಾನಂದ.

೮೨

ಡಾರ್ಜಿಲಿಂಗ್,
C/o ಎಂ. ಎನ್. ಬೆನರ್ಜಿ,
೨೪ನೇ ಏಪ್ರಿಲ್ ೧೮೯೭.

ಪ್ರಿಯ ತಾಯೆ,

ಕೆಲಸಮಾಡುವರೀತಿಯ ವಿಷಯವಾಗಿ ನೀವು ಕೇಳಿದ ಪ್ರಶ್ನೆಗೆ ಉತ್ತರವಾಗಿ, ಬಹಳ ಮುಖ್ಯವಾಗಿ ಒತ್ತಿ ಹೇಳಬೇಕಾದುದೇ ಇದು: ನಮಗೆ ಬೇಕಾಗಿರುವ ಫಲಕ್ಕೆ ಅನುಸಾರವಾಗಿ ಅದರ ಸರಿ ಪ್ರಮಾಣದಲ್ಲಿ ಕೆಲಸವನ್ನು ಮೊದಲು ಮಾಡಬೇಕು. ನನ್ನ ಸ್ನೇಹಿತಳಾದ ಶ್ರೀಮತಿ ಮುಲ್ಲರಳಿಂದ, ನಿಮ್ಮ ಉದಾರ ಬುದ್ಧಿ, ದೇಶ ಭಕ್ತಿ, ಹಿಡಿದ ಕೆಲಸವನ್ನು ಬಿಡದೆ ನೆರವೇರಿಸುವ ಪ್ರವೃತ್ತಿ, ಇವುಗಳೆಲ್ಲವನ್ನೂ ಕೇಳಿರುವೆನು. ನಿಮ್ಮ ಪಾಂಡಿತ್ಯಕ್ಕೆ ಸಾಕ್ಷಿ ವ್ಯಕ್ತವಾಗಿಯೇ ಇದೆ. ಈ ಅಲ್ಪ ಮಾನವನಾದ ನಾನು ಯಾವುದನ್ನು ಸಾಧಿಸಬೇಕೆಂದು ಪ್ರಯತ್ನಿಸುತ್ತಿರುವೆನೋ ಅದನ್ನು ನೀವು ತಿಳಿದುಕೊಳ್ಳಲು ಕುತೂಹಲಿಗಳಾಗಿರುವುದು ನನ್ನ ಒಂದು ಮಹಾ ಭಾಗ್ಯವೆಂದೇ ಎಣಿಸುತ್ತೇನೆ. ಈ ಸಣ್ಣ ಪತ್ರದಲ್ಲಿ ನಿಮಗೆ ಸಾಧ್ಯವಾದಷ್ಟು ಮಟ್ಟಿಗೆ ಹೇಳುತ್ತೇನೆ. ಆದರೆ ನಿಮ್ಮ ವಿಚಾರಕ್ಕೋಸುಗವಾಗಿ ಮೊದಲು ನನ್ನ ಪರಿಪಕ್ವವಾದ ಅಭಿಪ್ರಾಯಗಳನ್ನು ಮುಂದಿಡುವೆನು.

ನಾವು ಬಹಳಕಾಲದಿಂದಲೂ ಗುಲಾಮರಾಗಿರುವೆವು, ಅವಕ್ಕೋಸ್ಕರವೇ ಭರತಖಂಡದ ಸಾಧಾರಣ ಜನರಿಗೆ ಅವರ ಪಿತ್ರಾರ್ಜಿತವಾದ

ಆಂತರಿಕ ಜ್ಞಾನವನ್ನು ತಿಳಿಯಪಡಿಸಲು ಅವಕಾಶವೇ ಸಿಕ್ಕಿಲ್ಲ. ಪಾಶ್ಚಾತ್ಯ ದೇಶಗಳು ಕಳೆದ ಕೆಲವು ಶತಮಾನಗಳಿಂದಲೂ ಸ್ವಾತಂತ್ರ್ಯದ ಗುರಿ ಎಡೆಗೆ ವೇಗವಾಗಿ ಚಲಿಸುತ್ತಿವೆ. ಭರತಖಂಡದಲ್ಲಿ ಕುಲೀನ ಬ್ರಾಹ್ಮಣನಿಂದ ಹಿಡಿದು, ಯಾರು ಯಾವ ಆಹಾರವನ್ನು ತಿನ್ನಬಹುದು ತಿನ್ನಬಾರದು ಎಂಬ ವಿಚಾರದವರೆವಿಗೂ ಎಲ್ಲವನ್ನು ಹೇಳುವವನು ರಾಜನಾಗಿದ್ದನು. ಪಾಶ್ಚಾತ್ಯ ದೇಶಗಳಲ್ಲಿ ಜನರೇ ಇವುಗಳೆಲ್ಲವನ್ನೂ ಮಾಡುವರು.

ಈಗಲಾದರೋ ಸಾಮಾಜಿಕ ವಿಚಾರದ ಪರವಾಗಿ ಹೇಳುವುದಕ್ಕೆ ರಾಜನಿಗೆ ಏನೂ ಇಲ್ಲ. ಅದಲ್ಲದೆ ಭಾರತೀಯರಿಗಾದರೋ ತಮ್ಮಲ್ಲಿ ಸ್ವಲ್ಪವೂ ನಂಬಿಕೆ ಇಲ್ಲ. ಹಾಗಿರುವಲ್ಲಿ ಸ್ವಾವಲಂಬಿಗಳು ಹೇಗೆ ಆಗುವರು. ವೇದಾಂತದ ತಳಹದಿಯಾದ ಆತ್ಮಾವಲಂಬನೆಯನ್ನು ಅನುಷ್ಠಾನದಲ್ಲಿ ಸ್ವಲ್ಪವಾದರೂ ಇನ್ನೂ ತಂದಿಲ್ಲ. ಆದಕಾರಣ ಪಾಶ್ಚಾತ್ಯ ರೀತಿ ಅಂದರೆ, ಮೊದಲು, ನಾವು ಸೇರಬೇಕಾದ ಗುರಿಯು ವಿಚಾರವಾಗಿ ನಾವು ಮೊದಲು ಆಲೋಚಿಸಬೇಕು. ನಂತರ ಎಲ್ಲಾ ಶಕ್ತಿಯನ್ನು ಕೇಂದ್ರೀಕರಿಸಿ ಗುರಿಯೆಡೆಗೆ ಪ್ರಯಾಣ ಮಾಡುವುದು.— ಇದು ಈಗಲೂ ಕೂಡ ಈ ಪ್ರದೇಶದಲ್ಲಿ ಪ್ರಯೋಜನವಿಲ್ಲ. ಆದುದರಿಂದ ಹೊರಗಿನವರ ಆಳ್ವಿಕೆಯಲ್ಲಿ ನಾವು ಸ್ವಲ್ಪವಾದರೂ ಬದಲಾವಣೆ ಬೇಡವೆನ್ನುವಂತೆ ತೋರುವೆವು. ಇದು ನಿಜವಾದ ಪಕ್ಷದಲ್ಲಿ ಯಾವ ಮಹತ್ಕಾರ್ಯವನ್ನಾದರೂ ಸಾರ್ವಜನಿಕ ಚರ್ಚೆಯ ಮೂಲಕ ಮಾಡುವುದು ನಿರರ್ಥಕ. "ತಲೆ ಎಲ್ಲಿ ಇಲ್ಲವೋ ಅಲ್ಲಿ ತಲೆನೋವು ಬರಲು ಅವಕಾಶವಿಲ್ಲ" ಸಾರ್ವಜನಿಕರೆಲ್ಲಿ? ಅದೂ ಅಲ್ಲದೆ ನಮ್ಮಲ್ಲಿ ಶಕ್ತಿಯ ಅಭಾವ ಬೇರೆ. ಏನನ್ನಾದರೂ ಚರ್ಚಿಸುವುದಕ್ಕೆ ಪ್ರಯತ್ನಿಸಿದರೆ ನಮ್ಮ ಸತ್ವವೆಲ್ಲ ಅದರಲ್ಲಿ ನಷ್ಟವಾಗಿ ಹೋಗುವುದು. ಕೆಲಸ ಮಾಡುವುದಕ್ಕೆ ಏನೂ ಉಳಿಯುವುದಿಲ್ಲ. ಅದಕ್ಕೋಸ್ಕರ ವಾಗಿಯೋ ನಾವು ಬಂಗಾಳ ದೇಶದಲ್ಲಿ ಯಾವಾಗಲೂ ಮಾತು ಜೋರು ಕೆಲಸ ಕಡಿಮೆ ಎಂಬ ಗಾದೆಯನ್ನು ಉಪಯೋಗಿಸುತ್ತೇವೆಂದು ಭಾವಿಸುತ್ತೇನೆ. ಎರಡನೆಯದಾಗಿ ನಾನು ಮೊದಲು ಬರೆದಂತೆ

ಭರತಖಂಡದ ಶ್ರೀಮಂತರಿಂದ ಯಾವ ಸಹಾಯವನ್ನೂ ನಿರೀಕ್ಷಿಸುವುದಿಲ್ಲ. ನಾವು ಯಾರಲ್ಲಿ ನಂಬಿಕೆಯನ್ನು ಇಟ್ಟುಕೊಂಡಿರುವೆವೋ ಅಂತಹ ಯುವಕರಲ್ಲಿ ಸಾವಧಾನದಿಂದ ಸ್ಥಿರವಾಗಿ ಗದ್ದಲವಿಲ್ಲದೆ ಕೆಲಸಮಾಡುವುದು ಅತ್ಯುತ್ತಮ.

ಇಷ್ಟು ಕೆಲಸದ ವಿಚಾರವಾಗಿ. ವಿದ್ಯೆ ಮತ್ತು ಸಂಸ್ಕೃತಿ ಎಂದಿನಿಂದ ಕುಲೀನನಿಷ್ಠನಿಂದ ಜನಸಾಮಾನ್ಯನಿಗೆ ಬರಲು ಮೊದಲಾಯಿತೋ, ಅಂದಿನಿಂದ ಪಾಶ್ಚಾತ್ಯ ದೇಶದ ಆಧುನಿಕ ಸಂಸ್ಕೃತಿಗೂ, ಇಂಡಿಯ ಈಜಿಪ್ಟ್ ರೋಂ ಇತ್ಯಾದಿ ದೇಶಗಳ ಪುರಾತನ ಸಂಸ್ಕೃತಿಗೂ ವ್ಯತ್ಯಾಸವು ಮೊದಲಾಯಿತು. ವಿದ್ಯೆ ಮತ್ತು ಬುದ್ಧಿವಂತಿಕೆಗಳು ಜನಸಾಮಾನ್ಯರಲ್ಲಿ ಎಷ್ಟು ಹೆಚ್ಚು ಹರಡುವುದೋ ಅಷ್ಟೇ ಹೆಚ್ಚಾಗಿ ಆ ಜನಾಂಗವು ಅಭಿವೃದ್ಧಿಯಾಗಿರುವುದೆಂದು ಈಗ ನನಗೆ ತೋರುವುದು. ಭರತಖಂಡದ ಹೀನಸ್ಥಿತಿಗೆ ಮುಖ್ಯ ಕಾರಣವೇನೆಂದರೆ ದೇಶದ ವಿದ್ಯೆ ಮತ್ತು ಬುದ್ಧಿವಂತಿಕೆ ಎಲ್ಲವನ್ನೂ ಎಲ್ಲೋ ಅಲ್ಪ ಮಂದಿ ತಮ್ಮ ಕೈಯ್ಯಲ್ಲಿ ಅಹಂಕಾರದಿಂದಲೂ, ರಾಜಾಧಿಕಾರದ ಬಲದಿಂದಲೂ, ವಶಪಡಿಸಿಕೊಂಡದ್ದು. ಮತ್ತೊಮ್ಮೆ ನಾವು ಮೇಲೇಳಬೇಕಾದರೆ ಹೀಗೆಯೇ ಮಾಡಬೇಕು—ಅಂದರೆ ಜನಸಾಮಾನ್ಯರಲ್ಲಿ ವಿದ್ಯೆಯನ್ನು ಹರಡಬೇಕು. ಸಾಮಾಜಿಕ ಸುಧಾರಣೆಯ ವಿಚಾರವಾಗಿ ಕಳೆದ ಅರ್ಧ ಶತಮಾನದಿಂದಲೂ ಬಹಳ ಗಲಾಟೆಯನ್ನು ಮಾಡುತ್ತಿರುವರು. ಕಳೆದ ಹತ್ತು ವರುಷಗಳಿಂದಲೂ ಭರತಖಂಡದ ಅನೇಕ ಭಾಗಗಳಲ್ಲಿ ಸಂಚರಿಸುವಾಗ ಈ ದೇಶದಲ್ಲೆಲ್ಲಾ ಇರುವ ಸಾಮಾಜಿಕ ಸುಧಾರಣೆಯ ಸಂಸ್ಥೆಗಳನ್ನು ಕಂಡೆನು. ಇಂದು ಸಭ್ಯ (Gentleman) ರೆಂದು ಕರೆದುಕೊಳ್ಳುವ, ಮತ್ತು ದೊಡ್ಡ ಮನುಷ್ಯನಾಗಿ ಮುಂದೆಯೂ ಸಭ್ಯನಂತೆ ಇರಲು ಯತ್ನಿಸುವವರು, ಯಾರ ರಕ್ತವನ್ನು ಹೀರಿ ಆ ಸ್ಥಿತಿಗೆ ಬಂದರೋ, ಅವರ ಹಿತಕ್ಕೋಸುಗವಾಗಿ ಯಾವ ಒಂದು ಸಂಸ್ಥೆಯನ್ನೂ ಸ್ಥಾಪಿಸಿಲ್ಲ. ಎಷ್ಟು ಜನ ಸಿಪಾಯಿಗಳನ್ನು ಮುಸಲ್ಮಾನರು ಕರೆದುಕೊಂಡುಬಂದರು? ಈಗ ಆಂಗ್ಲೇಯರು ಎಷ್ಟು ಮಂದಿ ಇರುವರು? ಭರತಖಂಡದಲ್ಲಿ ಅಲ್ಲದೆ ಬೇರೆ ಯಾವ ಕಡೆಯಲ್ಲಿ,

ಆರು ರೂಪಾಯಿ ಸಂಬಳಕ್ಕೆ ತನ್ನ ತಂದೆಯ ಮತ್ತು ಸಹೋದರರ ತಲೆಯನ್ನು ಕೂಡ ಕತ್ತರಿಸುವ ಲಕ್ಷಾಂತರ ಮಂದಿ ಸಿಕ್ಕುವರು. ಏಳು ಶತಮಾನಗಳ ಮಹಮ್ಮದೀಯರ ಆಳ್ವಿಕೆಯಲ್ಲಿ ಆರು ಕೋಟಿ ಮಹಮ್ಮದೀಯರು, ಒಂದು ಶತಮಾನದ ಕ್ರೈಸ್ತರ ಆಳ್ವಿಕೆಯಲ್ಲಿ ಇಪ್ಪತ್ತು ಲಕ್ಷ ಕ್ರೈಸ್ಥರು—ಹೀಗೆ ಆಗುವುದಕ್ಕೆ ಕಾರಣವೇನು? ಸ್ವತಂತ್ರ ಆಲೋಚನೆ ಇಡೀ ದೇಶವನ್ನೇ ಏಕೆ ತ್ಯಜಿಸಿರುವುದು? ಹಸ್ತ ಕೌಶಲ್ಯವುಳ್ಳ ನಮ್ಮ ಶಿಲ್ಪಿಗಾರರು ಪಾಶ್ಚಾತ್ಯರೊಂದಿಗೆ ಸ್ಪರ್ಧಿಸಲಾರದೆ ಏಕೆ ಕ್ರಮೇಣ ಮಾಯವಾಗುತ್ತಿರುವರು? ಪುನಃ ಯಾವ ಶಕ್ತಿಯಿಂದ ಜರ್ಮನ್ ಕೂಲಿಕಾರನು ಅನೇಕ ಶತಮಾನಗಳಿಂದ ತಮ್ಮ ದೇಶದಲ್ಲಿ ಬೇರೂರಿದ ಆಂಗ್ಲ ಕೂಲಿಕಾರನನ್ನು ಜಯಿಸಿದನು?

ವಿದ್ಯೆ, ವಿದ್ಯೆ, ವಿದ್ಯೆಯೊಂದೇ. ಅನೇಕ ಐರೋಪ್ಯ ದೇಶಗಳಲ್ಲಿ ಪ್ರಯಾಣ ಮಾಡಿ ಅತಿ ದೀನರಿಗೂ ಅಲ್ಲಿರುವ ಸೌಕರ್ಯ ಮತ್ತು ವಿದ್ಯೆ ಇವುಗಳನ್ನು ಕಂಡಾಗ ನನ್ನ ದೇಶದ ಬಡಜನರ ಸ್ಥಿತಿಯೂ ನನಗೆ ನೆನಪಾಗಿ ನಾನು ಕಂಬನಿಯನ್ನು ಸುರಿಸುತ್ತಿದ್ದೆ. ಈ ವ್ಯತ್ಯಾಸ ಹೇಗೆ ಆಯಿತು? ನನಗೆ ಸಿಕ್ಕಿದ ಉತ್ತರವೇ ವಿದ್ಯೆ. ವಿದ್ಯೆಯಿಂದ ಆತ್ಮಾವಲಂಬನೆ. ಆತ್ಮಾವಲಂಬನೆಯಿಂದ ಅವರಲ್ಲಿ ಅಡಗಿರುವ ಬ್ರಹ್ಮ ಜಾಗ್ರತನಾಗುವನು. ಆದರೆ ನಮ್ಮಲ್ಲಿರುವ ಬ್ರಹ್ಮನಾದರೋ ಕ್ರಮೇಣ ಅಪ್ರಕಟಿತನಾಗುತ್ತಿರುವನು. ನಾನು ನ್ಯೂಯಾರ್ಕಿನಲ್ಲಿ ವಲಸೆ ಬರುವ ಐರಿಷ್ ಜನಾಂಗವನ್ನು ನೋಡುತ್ತಿದ್ದೆ. ಪದದಳಿತರಾಗಿ ನಿಸ್ತೇಜರಾಗಿ ಮನೆಯ ಸರ್ವಸ್ವವನ್ನು ಕಳೆದುಕೊಂಡು ಕೈಯ್ಯಲ್ಲಿ ಒಂದುಕಾಸಿಲ್ಲದೆ ಮಳೆ ಬಿಸಿಲಿಗೆ ಬರಿಯ ತಲೆಯೊಡ್ಡುತ್ತಿದ್ದರು. ಅವರ ಆಸ್ತಿಯೆಲ್ಲ ಒಂದು ಕೋಲು, ಅದರ ಕೊನೆಯಲ್ಲಿ ನೇತಾಡುವ ಒಂದು ಹರಕಲು ಬಟ್ಟೆಯ ಗಂಟು. ಕಾಲಿನಲ್ಲಿ ನಡುಕ, ಕಣ್ಣಿನಲ್ಲಿ ಭಯಸೂಚನೆ. ಆರು ತಿಂಗಳಲ್ಲಿ ಚಿತ್ರವೇ ಬದಲಾಯಿಸುವುದು. ಧೈರ್ಯದಿಂದ ನಡೆಯುವನು. ಉಡುಪು ಬದಲಾಯಿಸಿದೆ. ಅವನ ನೋಟದಲ್ಲಿ ಮತ್ತು ನಡಿಗೆಯಲ್ಲಿ ಅಂಜಿಕೆಯ ಸುಳಿವೇ ಇಲ್ಲ. ಇದಕ್ಕೆ ಕಾರಣವೇನು? ನಮ್ಮ ವೇದಾಂತ ಹೇಳುವುದೇನೆಂದರೆ,

ಆ ಐರ್ಲೆಂಡಿನವರನ್ನು ಅವನ ದೇಶದಲ್ಲಿ ತಾತ್ಸಾರ ವಾತಾವರಣದಲ್ಲಿಟ್ಟಿದ್ದರು. ಪ್ರಕೃತಿಯೆಲ್ಲವೂ ಒನ್ಮತದಿಂದ ಪ್ಯಾಟ್! ನಿನಗೆ ಯಾವ ನೆಚ್ಚುಗೆಯೂ ಇಲ್ಲ. ಗುಲಾಮನಾಗಿ ಹುಟ್ಟಿದೆ ಗುಲಾಮನಾಗಿಯೇ ಇರುವೆ, ಎಂದು ಹೇಳುತ್ತಿತ್ತು. ತನ್ನ ಜನನಾರಭ್ಯ ಹೀಗೆ ಹೇಳಿದುದರಿಂದ ಪ್ಯಾಟನು ಅದರಲ್ಲಿ ನಂಬಿದನು. ತಾನು ಬಹಳ ಹೀನನೆಂದು ಪುನಃ ಪೂರ್ತಿಯಾಗಿ ತಿಳಿಯುವುದಕ್ಕೆ ಆರಂಭಿಸಿದನು. ಅವನಲ್ಲಿದ್ದ ಬ್ರಹ್ಮ ಗುಪ್ತವಾಗತೊಡಗಿದನು. ಅವನು ಅಮೇರಿಕಾ ದೇಶಕ್ಕೆ ಕಾಲಿಟ್ಟ ತಕ್ಷಣವೇ ಎಲ್ಲೆಡೆಯುಲ್ಲೂ ಈ ಕೂಗು ಕೇಳಿಸಿತು— "ಪ್ಯಾಟ್ ನಮ್ಮಂತೆಯೇ ನೀನೂ ಮನುಷ್ಯ. ನಿನ್ನಂತೆ ನನ್ನಂತೆ ಇರುವ ಮನುಷ್ಯರು ಏನುಬೇಕಾದರೂ ಸಾಧಿಸಬಹುದು. ಧೈರ್ಯ ತಾಳು!" ಪ್ಯಾಟ್ ತಲೆ ಎತ್ತಿ ನೋಡಿದನು. ಅದು ನಿಜವಾಗಿಯೂ ಹಾಗೆಯೇ ತೋರಿತು. ಅಂತರಂಗದಲ್ಲಿದ್ದ ಬ್ರಹ್ಮ ಜಾಗ್ರತನಾದನು. ಪ್ರಕೃತಿಯೇ "ಏಳು ಜಾಗ್ರತನಾಗು, ಗುರಿ ಸೇರುವವರೆವಿಗೂ ನಿಲ್ಲದಿರು" ಎಂದು ಹೇಳುವಂತೆ ಇತ್ತು.

ಅದರಂತೆಯೆ ನನ್ನ ಹುಡುಗರಿಗೆ ದೊರಕುವ ವಿದ್ಯೆಯೂ ಕೂಡ ಎಲ್ಲಾ ಅಭಾವಸೂಚಕವಾಗಿದೆ. ಶಾಲೆಯ ಹುಡುಗನು ಏನನ್ನೂ ಕಲಿಯುವುದಿಲ್ಲ. ಆದರೆ ತನ್ನದಾದ ಎಲ್ಲವನ್ನು ಹಾಳುಮಾಡಿಕೊಳ್ಳುವನು. ಶ್ರದ್ಧೆಯ ಅಭಾವವೇ ಇದರ ಪರಿಣಾಮ. ವೇದವೇದಾಂತಗಳ ಮುಖ್ಯ ಪಲ್ಲವಿ ಶ್ರದ್ಧೆ. ಯಾವ ಶ್ರದ್ಧೆಯ ಮೂಲಕ ನಚಿಕೇತನು ಯಮರಾಜನನ್ನೂ ಕೂಡ ಸಂದರ್ಶಿಸಿ ಪ್ರಶ್ನೆ ಮಾಡುವುದಕ್ಕೆ ಧೈರ್ಯ ಹೊಂದಿದನೋ, ಯಾವ ಶ್ರದ್ಧೆಯ ಮೂಲಕ ಪ್ರಪಂಚ ಚಲಿಸುತ್ತಿರುವುದೋ- ಅಂತಹ ಶ್ರದ್ಧೆಯ ನಾಶ! "ಅಜ್ಞಶ್ಚ ಅಶ್ರದ್ಧದಾನಶ್ಚ ಸಂಶಯಾತ್ಮಾ ವಿನಶ್ಯತಿ" ಅಜ್ಞಾನಿ, ಜ್ಞಾನಹೀನನೂ, ಯಾವಾಗಲೂ ಅನುಮಾನಿಸುತ್ತಿರುವವನು ನಾಶವಾಗುವನು. ಆದಕಾರಣ ನಾವು ನಾಶದ ಬಹಳ ಸಮೀಪದಲ್ಲಿರುವೆವು. ಈಗ ಅದರ ಚಿಕಿತ್ಸೆಗಾಗಿ ವಿದ್ಯಾಭ್ಯಾಸ ಪ್ರಚಾರವಾಗಬೇಕು. ಮೊದಲು ಆತ್ಮಜ್ಞಾನ. ಅಂದರೆ ಈ ಪದಗಳು ಸೂಚಿಸುವಂತೆ ಜಟೆ ದಂಡ ಕಮಂಡಲು ಗುಹೆ, ಇವುಗಳನ್ನು ಹೇಳುವು

ದಿಲ್ಲ. ಆದರೆ ನಾನು ಹೇಳುವುದು ಏನನ್ನು? ಯಾವ ಜ್ಞಾನದ ಮೂಲಕ ಸಂಸಾರ ಬಂಧನದಿಂದ ಬಿಡುಗಡೆ ಹೊಂದಿ ಮುಕ್ತಿಯನ್ನು ಪಡೆಯುವೆವೋ ಅದು. ಅದು ಪ್ರಾಪಂಚಿಕ ಶ್ರೇಯಸ್ಸನ್ನು ಕೊಡಲಾರದೇನು? ನಿಜವಾಗಿಯೂ ಅದು ಕೊಡಬಲ್ಲದು. ಸ್ವಾತಂತ್ರ್ಯ ಅನಾಸಕ್ತಿ ತ್ಯಾಗ ಇವುಗಳೆಲ್ಲ ಬಹಳ ಉತ್ತಮವಾದ ಆದರ್ಶ. ಆದರೂ "ಸ್ವಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋ ಭಯಾತ್" ಈ ಧರ್ಮ ಸ್ವಲ್ಪವಾದರೂ ಕೂಡ ಜನನ ಮರಣಗಳ ಮಹಾ ಭಯದಿಂದ ನಮ್ಮನ್ನು ಪಾರುಮಾಡುವುದು. ದ್ವೈತ ವಿಶಿಷ್ಟಾದ್ವೈತ ಅದ್ವೈತವಾದಿಗಳಾಗಲೀ, ಸ್ಮಾರ್ತ ವೈಷ್ಣವ ಶಾಕ್ತರಾಗಲೀ ಮತ್ತು ಬೌದ್ಧರು ಜೈನರು ಅಥವಾ ಮತ್ತಾರೆ ಆಗಲೀ, ಭರತಖಂಡದಲ್ಲಿ ಹುಟ್ಟಿದ ಮತ್ತಾವ ಜಾತಿಗಳೇ ಸೇರಿರಲಿ ಅವರೆಲ್ಲರೂ ಈ ಒಂದು ವಿಷಯದಲ್ಲಿ ನಂಬುತ್ತಾರೆ. ಜೀವಾತ್ಮನಲ್ಲಿ ಅನಂತ ಶಕ್ತಿ ಸುಪ್ತವಾಗಿದೆ. ಇರುವೆಯಿಂದ ಹಿಡಿದು ಸಿದ್ಧನವರೆವಿಗೂ ಎಲ್ಲರಲ್ಲೂ ಒಂದೇ ಆತ್ಮವಿದೆ. ವ್ಯತ್ಯಾಸವಿರುವುದು ಅದರ ಸ್ಪಷ್ಟತೆಯಲ್ಲಿ ಮಾತ್ರ. "ರೈತನ ಕಾಲುವೆ ನೀರು ಹರಿಯುವುದಕ್ಕೆ ಇರುವ ಆತಂಕಗಳನ್ನು ಅಗಿಯುವಂತೆ (ಪತಂಜಲಿ ಯೋಗಸೂತ್ರ, ಕೈವಲ್ಯಪಾದ, ೩). ಆ ಶಕ್ತಿಗೆ ತಕ್ಕ ಅವಕಾಶ, ದೇಶ ಕಾಲ ಸಿಕ್ಕಿದೊಡನೆಯೇ ಅದು ವ್ಯಕ್ತವಾಗುವುದು. ಅದು ಸ್ಪಷ್ಟವಾಗಲೀ ಇಲ್ಲದೇ ಇರಲೀ ಪರಮಾತ್ಮನಿಂದ ಹಿಡಿದು ಸಣ್ಣ ಹುಲ್ಲಿನ ವರೆವಿಗೂ ಎಲ್ಲದರಲ್ಲಿಯೂ ಒಂದೇ ಶಕ್ತಿ ಇರುವುದು. ಮನೆಯಿಂದ ಮನೆಗೆ ಹೋಗಿ ಕರೆದು ಈ ಮಹಾ ಶಕ್ತಿಯನ್ನು ಜಾಗ್ರತವಾಗುವಂತೆ ಮಾಡಬೇಕು.

ಎರಡನೆಯದಾಗಿ ಇದರೊಂದಿಗೆ ವಿದ್ಯಾಭ್ಯಾಸವನ್ನು ಕಲಿಸಬೇಕು. ಬಾಯಿಮಾತಿನಲ್ಲೇನೋ ಅದು ಸುಲಭ. ಆದರೆ ಅದನ್ನು ಕಾರ್ಯತಃ ತರುವುದು ಹೇಗೆ? ಎಲ್ಲವನ್ನೂ ತ್ಯಜಿಸಿದ ಸಾವಿರಾರು ಜನ ನಿಸ್ಸ್ವಾರ್ಥರಾದ ದಯಾಪರರಾದವರು ನಮ್ಮ ದೇಶದಲ್ಲಿರುವರು. ಅವರು ಯಾವ ಪ್ರತಿಫಲದಾಸೆಯೂ ಇಲ್ಲದೆ ಪ್ರಯಾಣಮಾಡುವಾಗ ಧರ್ಮವನ್ನು ಹೇಗೆ ಬೋಧಿಸುತ್ತಾರೋ ಹಾಗೆಯೆ ಅಂತಹವರಲ್ಲಿ ಅರ್ಧಮಂದಿಯನ್ನಾದರೂ, ಉಪಾಧ್ಯಾಯರಂತೆ, ಅಥವಾ ನಮಗೆ ಎಂತಹ ವಿದ್ಯಾಭ್ಯಾ

ಸವು ಬೇಕೊ ಅಂತಹ ವಿದ್ಯೆಯ ಬೋಧಕರನ್ನಾಗಿ ತರಬೇತು ಮಾಡ ಬಹುದು. ಅದಕ್ಕಾಗಿ ಪ್ರತಿಯೊಂದು ಪ್ರಾಂತ್ಯದ ರಾಜಧಾನಿಯ ಲ್ಲಿಯೂ ಒಂದೊಂದು ಕೇಂದ್ರಬೇಕು. ಅಲ್ಲಿಂದ ಭರತಖಂಡದಲ್ಲೆಲ್ಲ ನಿಧಾನವಾಗಿ ಹರಡಬೇಕು. ಮದ್ರಾಸಿನಲ್ಲಿ ಮತ್ತು ಕಲ್ಕತ್ತೆಯಲ್ಲಿ ಈಗ ತಾನೆ ಎರಡು ಕೇಂದ್ರಗಳನ್ನು ತೆರೆದಾಗಿದೆ. ಬೇಗ ಹೆಚ್ಚು ಕೇಂದ್ರಗಳನ್ನು ತೆರೆಯುವ ಭರವಸೆಯೂ ಇದೆ. ನಂತರ, ಬಡವರಿಗೆ ವಿದ್ಯಾಭ್ಯಾಸದ ಹೆಚ್ಚು ಭಾಗವನ್ನು ಬಾಯಿಪಾಠದಲ್ಲಿ ಕಲಿಸಬೇಕು. ಪಾಠಶಾಲೆಗಳನ್ನು ತೆಗೆಯುವುದಕ್ಕೆ ಇನ್ನೂ ಸಕಾಲ ಒದಗಿಲ್ಲ. ಕ್ರಮೇಣ ಮುಖ್ಯ ಕೇಂದ್ರಗಳಲ್ಲಿ ವ್ಯವಸಾಯ ಕೈಗಾರಿಕೆ ಇತ್ಯಾದಿಗಳನ್ನು ಕೂಡ ಕಲಿಸ ಬೇಕಾಗುವುದು. ಕಲೆಯ ಪ್ರೋತ್ಸಾಹಕ್ಕೋಸುಗವಾಗಿ ಕಾರ್ಖಾನೆಗ ಳನ್ನು ತೆರೆಯಲಾಗುವುದು. ಈ ಕಾರ್ಖಾನೆಗಳಲ್ಲಿ ತಯಾರಾದ ಸಾಮಾನುಗಳನ್ನು ಯೂರೋಪ್ ಮತ್ತು ಅಮೆರಿಕಾ ದೇಶದಲ್ಲಿ ಮಾರಾಟ ಮಾಡಲು ಈಗಾಗಲೆ ಇರುವಂತಹ ಸಂಘಗಳನ್ನು ತೆರೆಯಬೇಕು. ಪುರು ಷರಿಗೆ ಇರುವಂತೆಯೇ ಸ್ತ್ರೀಯರಿಗೂ ಕೇಂದ್ರವನ್ನು ತೆರೆಯುವುದು ಅತ್ಯಾವಶ್ಯಕವಾಗಿರುವುದು. ಆದರೆ ಅದು ಈ ದೇಶದಲ್ಲಿ ಎಷ್ಟು ಕಷ್ಟ ವೆನ್ನುವುದು ನನಗೆ ಆಗಲೇ ಗೊತ್ತಾಗಿದೆ. ಮತ್ತು "ಕಚ್ಚಿದ ಹಾವೆ ವಿಷವನ್ನು ಪುನಃ ತೆಗೆದುಕೊಳ್ಳಬೇಕು." ಅದು ಹಾಗೆಯೇ ಆಗುವು ದೆಂಬುದು ನನ್ನ ದೃಢ ನಿಶ್ಚಯ. ಇವುಗಳಿಗೆ ಬೇಕಾದ ಧನ ಪಾಶ್ಚಾತ್ಯ ದೇಶಗಳಿಂದ ಬರಬೇಕು. ಆದಕಾರಣವೇ ನಮ್ಮ ಧರ್ಮವನ್ನು ಯೂರೋಪ್ ಮತ್ತು ಅಮೆರಿಕಾ ದೇಶಗಳಲ್ಲಿ ಪ್ರಚಾರ ಮಾಡಬೇಕು. ಆಧುನಿಕ ವಿಜ್ಞಾನಶಾಸ್ತ್ರ ಕ್ರೈಸ್ತಮತದಂತಹ ಧರ್ಮಗಳ ತಳಪಾಯವನ್ನು ಕದಲಿ ಸಿದೆ. ಅದೆಲ್ಲಕ್ಕಿಂತ ಹೆಚ್ಚಾಗಿ ಧಾರ್ಮಿಕ ಪ್ರವೃತ್ತಿಯನ್ನೇ, ಭೋಗ ನಾಶಮಾಡುವುದರಲ್ಲಿದೆ. ಯೂರೋಪ್ ಮತ್ತು ಅಮೆರಿಕಾ ದೇಶಗಳು ಭರತಖಂಡದ ಕಡೆ ಎದುರುನೋಡುತ್ತಿವೆ. ಪರೋಪಕಾರಕ್ಕೆ ಇದೇ ಸಮಯ. ಎದುರಾಳಿಗಳ ದುರ್ಗವನ್ನು ಆಕ್ರಮಿಸಿಕೊಳ್ಳುವುದಕ್ಕೆ ಇದೇ ಸಮಯ.

ಪಾಶ್ಚಾತ್ಯ ದೇಶಗಳಲ್ಲಿ ಆಳುವವರು ಹೆಂಗಸರು. ಎಲ್ಲಾ ಪ್ರಭಾವ ಮತ್ತು ಅಧಿಕಾರ ಅವರದು. ವೇದಾಂತ ತಿಳಿದುಕೊಂಡ ನಿಮ್ಮಂತಹ ಅನುಭವವುಳ್ಳ ಧೈರ್ಯಶಾಲಿಗಳಾದ ಮತ್ತು ಸುಸಂಸ್ಕೃತರಾದ ಹೆಂಗಸರು ಆಂಗ್ಲದೇಶಕ್ಕೆ ಬೋಧಿಸುವುದಕ್ಕೆ ಹೋದರೆ, ಪ್ರತಿವರುಷವೂ ನೂರಾರು ಜನ ಗಂಡಸರು ಮತ್ತು ಹೆಂಗಸರು ಭಾರತೀಯರ ಧರ್ಮವನ್ನು ಸ್ವೀಕರಿಸಿ ಧನ್ಯರಾಗುವರೆಂದು ನಾನು ನಿಜವಾಗಿ ನಂಬುತ್ತೇನೆ. ನಮ್ಮ ದೇಶದಿಂದ ಹೋದ ಒಬ್ಬಳೇ ಹೆಂಗಸು ರಾಮಾಬಾಯಿ. ಆಕೆಯ ಆಂಗ್ಲಭಾಷೆ, ಪಾಶ್ಚಾತ್ಯ ದೇಶಗಳ ಕಲೆ ಮತ್ತು ಶಾಸ್ತ್ರಗಳ ಪರಿಚಯ ಬಹಳ ಕಡಿಮೆಯಾಗಿತ್ತು. ಆದರೂ ಆಗ ಎಲ್ಲರನ್ನು ವಿಸ್ಮಯಗೊಳಿಸಿದಳು. ನಿಮ್ಮಂತಹವರು ಯಾರಾದರೊಬ್ಬರು ಹೋದರೆ ಇಂಗ್ಲೇಂಡ್ ದೇಶವನ್ನು ನಡುಗಿಸಬಹುದು; ಅಮೇರಿಕದ ಮಾತೇಕೆ! ಭಾರತೀಯ ನಾರಿಯು ಭಾರತೀಯ ಉಡುಪಿನಲ್ಲಿ ಭಾರತ ಋಷಿಗಳ ಮುಖದಿಂದ ಹೊರಟ ಧರ್ಮವನ್ನು ಬೋಧಿಸಿದರೆ—ನನ್ನ ಕಣ್ಣಿಗೆ ಒಂದು ಭವಿಷ್ಯ ಕಾಣು ವುದು. ಪಾಶ್ಚಾತ್ಯ ದೇಶಗಳೆಲ್ಲವನ್ನು ಮುಳುಗಿಸುವ ಒಂದು ಮಹಾ ತರಂಗವೇಳುವುದು. ಇದನ್ನು ಸಾಧಿಸುವುದಕ್ಕೆ ಧೈರ್ಯತಾಳುವ ನಾರಿ ಯರು, ಮೈತ್ರೇಯಿ, ಖಾನ, ಲೀಲಾವತಿ ಸಾವಿತ್ರಿ ಮತ್ತು ಉಭಯ ಭಾರತಿ ಇವರುಗಳನ್ನು ಹೆತ್ತನಾಡಲ್ಲಿ ಇಲ್ಲವೆ? ದೇವರಿಗೆ ಗೊತ್ತಿದೆ. ಇಂಗ್ಲೇಂಡನ್ನು ನಾವು ಜಯಿಸುತ್ತೇವೆ. ಆಧ್ಯಾತ್ಮಿಕ ಶಕ್ತಿಯ ಮೂಲಕ, ಇಂಗ್ಲೇಂಡನ್ನು ನಾವು ಸ್ವಾಧೀನ ಮಾಡಿಕೊಳ್ಳುವೆವು. "ನಾನ್ಯ ಪಂನ್ಥ ವಿದ್ಯತೆ ಅಯನಾಯ" ಮೋಕ್ಷಕ್ಕೆ ಬೇರೆದಾರಿಯಿಲ್ಲ ಸಭೆಗಳನ್ನು ಸಂಘಗಳನ್ನು ಸೇರಿಸುವುದರಿಂದ ಮೋಕ್ಷ ಸಿಕ್ಕುವುದೆ? ನಮ್ಮ ಆಧ್ಯಾತ್ಮಿಕ ಶಕ್ತಿಯಿಂದ ನಮ್ಮನ್ನು ಗೆದ್ದವರನ್ನು ದೇವತೆಗಳನ್ನಾಗಿ ಮಾಡಬೇಕು. ನಾನು ಒಬ್ಬ ನಮ್ರ ಭೈರಾಗಿ; ಅಲೆದಾಡುವ ಸನ್ಯಾಸಿ. ಏಕಾಂಗಿ. ನಿಸ್ಸಹಾಯಕನು. ಏನು ಮಾಡಬಲ್ಲೆ. ನಿಮಗೆ ಐಶ್ವರ್ಯ, ಬುದ್ಧಿ, ವಿದ್ಯೆಯ ಶಕ್ತಿ ಇದೆ. ಇಂತಹ ಸುಸಮಯವನ್ನು ಕಳೆದು ಕೊಳ್ಳುವಿರೇನು? ಇಂಗ್ಲೇಂಡ್ ಯೂರೋಪ್ ಅಮೇರಿಕಾ ದೇಶಗಳನ್ನು ಗೆಲ್ಲಬೇಕು. ಅದೊಂದೆ ಸದ್ಯಕ್ಕೆ ಪರಮ ಪವಿತ್ರ ಮಂತ್ರ

ವಾಗಬೇಕು. ದೇಶದ ಹಿತ ಅದರಲ್ಲಿದೆ. ವಿಕಾಸವೇ ಜೀವನದ ಚಿಹ್ನೆ. ನಮ್ಮ ಆಧ್ಯಾತ್ಮಿಕ ಭಾವನೆಗಳ ಮೂಲಕ ಪ್ರಪಂಚದಲ್ಲೆಲ್ಲಾ ನಾವು ಹಬ್ಬಬೇಕು. ಅಯ್ಯೋ! ಈ ದೇಹ ತುಂಬ ಕೃಶವಾಗಿದೆ. ಅದೂ ಅಲ್ಲದೆ ವಂಗದೇಶೀಯನ ದೇಹದಾರ್ಢ್ಯ. ಈ ಕಷ್ಟದಲ್ಲಿರುವಾಗಲೇ ಭಯಂಕರ ಖಾಯಿಲೆ ಧಾಳಿಇಟ್ಟಿದೆ. ಆದರೂ ನೆಚ್ಚಿಗೆ ಇದೆ.

ಉತ್ಪತ್ಸ್ಯತೆ ಅಸ್ತಿ ಮಮ ಕೋಽಪಿ ಸಮಾನ ಧರ್ಮಾ
ಕಾಲೋ ಹ್ಯಯಂ ನಿರವಧಿವಿಪುಲಾ ಚ ಪೃಥ್ವೀ ‖

(ಭವಭೂತಿ)

"ನನ್ನಂತೆ ಇರುವ ಆಲೋಚನೆಯುಳ್ಳವನು ಮತ್ತೊಬ್ಬನು ಇರುವನು; ಅಥವಾ ಈ ವಿಶಾಲವಾದ ಜಗತ್ತಿನಲ್ಲಿ, ಅನಂತ ಕಾಲದಲ್ಲಿ ಈ ಕಾರ್ಯ ವನ್ನು ಸಾಧಿಸುವುದಕ್ಕೆ ಹುಟ್ಟುವನು."

ಸಸ್ಯಾಹಾರ ವಿಚಾರದಲ್ಲಿ ನಾನು ಹೇಳುವುದು ಇದು. ಮೊದಲು ನನ್ನ ಗುರುಗಳು ಶಾಖಾಹಾರಿಗಳಾಗಿದ್ದರು. ಆದರೆ ಮಹಾಕಾಳಿಗೆ ನೈವೇದ್ಯ ಮಾಡಿದ ಮಾಂಸವನ್ನು ಕೊಟ್ಟರೆ ಅದನ್ನು ಶಿರಕ್ಕೆ ತಾಕಿಸು ತ್ತಿದ್ದರು. ಪ್ರಾಣಿಗಳನ್ನು ಕೊಲ್ಲುವುದು ನಿಸ್ಸಂದೇಹವಾಗಿ ಕೆಟ್ಟದ್ದು. ಆದರೆ ರಸಾಯನ ಶಾಸ್ತ್ರದ ಅಭಿವೃದ್ಧಿಯೊಂದಿಗೆ ಎಲ್ಲಿಯವರೆವಿಗೆ ಸಸ್ಯಾ ಹಾರವು ಮನುಷ್ಯನ ದೇಹಕ್ಕೆ ಒಗ್ಗುವಂತೆ ಮಾಡಿಲ್ಲವೋ ಅಲ್ಲಿಯ ವರೆವಿಗೂ ಮಾಂಸವನ್ನು ತಿನ್ನದೆ ವಿಧಿಯಿಲ್ಲ. ಈಗಿನ ವಾತಾವರಣಕ್ಕೆ ಸರಿಯಾಗಿ ಎಲ್ಲಿಯವರೆವಿಗೆ ಮನುಷ್ಯನು ರಾಜಸಿಕ (ಚಟುವಟಿಕೆಯ) ಜೀವನವನ್ನು ನಡೆಸಬೇಕೋ, ಅಲ್ಲಿಯವರೆವಿಗೂ ಮಾಂಸಾಹಾರದ ಮೂಲಕವಲ್ಲದೆ ಬೇರೆ ದಾರಿಯಿಲ್ಲ. ಅಶೋಕ ಚಕ್ರವರ್ತಿ ಕತ್ತಿಯ ಭಯದಿಂದ ಲಕ್ಷಾಂತರ ಪ್ರಾಣಿಗಳ ಬಲಿಯನ್ನೇನೊ ನಿಲ್ಲಿಸಿದನು. ಆದರೆ ಸಾವಿರ ವರುಷದ ಗುಲಾಮಗಿರಿ ಅದಕ್ಕಿಂತ ಭಯಂಕರವಲ್ಲವೆ? ಕೆಲವು ಕುರಿಗಳ ಪ್ರಾಣವನ್ನು ಕಾಪಾಡುವುದೋ, ಅಥವಾ ಅದರ ಬದಲು ಒಬ್ಬನ ಹೆಂಡತಿ ಮಕ್ಕಳ ಪ್ರಾಣವನ್ನು ಕಾಪಾಡಲು ಅಶಕ್ತ ನಾಗಿ ಆಹಾರವನ್ನು ತನ್ನ ಮಕ್ಕಳಿಗೋಸುಗವಾಗಿ ಅದನ್ನು ಲೂಟಿ

ಮಾಡುವ ದರೋಡೆಕಾರರಿಂದ ತಪ್ಪಿಸುವುದಕ್ಕೆ ಅಶಕ್ತನಾಗಿರುವುದೊ? ಇವೆರಡರಲ್ಲಿ ಯಾವುದು ಬಹಳ ಘೋರ ಪಾತಕ? ಬೇಕಾದರೆ ದೈಹಿಕ ಕಷ್ಟದ ಮೂಲಕವಾಗಿ ತಮ್ಮ ಜೀವನೋಪಾಯವನ್ನು ಯಾರು ಸಂಪಾದಿಸುವುದಿಲ್ಲವೋ, ಅಂತಹ ಮೇಲಿನ ವರ್ಗಕ್ಕೆ ಸೇರಿದ ಹತ್ತಾರು ಮಂದಿ ಮಾಂಸಾಹಾರವನ್ನು ಬಿಡಲಿ. ಆದರೆ ಯಾರು ತಮ್ಮ ಆಹಾರವನ್ನು ಹಗಲು ರಾತ್ರಿ ಬೆವರು ಸುರಿಸಿ ಸಂಪಾದನೆ ಮಾಡಬೇಕೊ ಅವರ ಮೇಲೆ ಶಾಖಾಹಾರವನ್ನು ಒಲವಂತ ಮಾಡುವುದೇ ನಮ್ಮ ದೇಶ ಸ್ವಾತಂತ್ರ್ಯ ಹಾನಿಗೆ ಒಂದು ಕಾರಣ. ಒಳ್ಳೆಯ ಮತ್ತು ದೇಹ ಪೋಷಕವಾದ ಆಹಾರ ಏನು ಮಾಡಬಲ್ಲದು ಎಂಬುದಕ್ಕೆ ಜಪಾನ್ ಒಂದು ಉದಾಹರಣೆ. ಸರ್ವಶಕ್ತಿ ಸ್ವರೂಪಿಣಿಯಾದ ವಿಶ್ವೇಶ್ವರಿ ನಿಮ್ಮ ಹೃದಯವನ್ನು ಪ್ರೇರೇಪಿಸಲಿ!

ವಿವೇಕಾನಂದ.

೮೩

ಆಲ್ಮೋರ,
೩ನೇ ಜೂ ೧೮೯೭.

ಪ್ರಿಯ ಮಹಾಶಯರೆ,

ಅನಿವಾರ್ಯವಾದ ಯಾವುದೋ ಸಂಸಾರದ ದುಃಖ ನಿಮಗೆ ತಗಲಿದೆ ಎಂದು ತಿಳಿದೆ. ನಿಮ್ಮಂತಹ ಜ್ಞಾನಿಗಳಿಗೆ ಈ ದುಃಖ ಏನು ಮಾಡಬಲ್ಲದು. ವ್ಯಾವಹಾರಿಕ ಜಗತ್ತಿನಲ್ಲಿ ಸಾಮಾನ್ಯವಾಗಿ ಪರಸ್ಪರ ಸ್ನೇಹಿತರ ಕುಶಲ ಪ್ರಶ್ನೆಯನ್ನು ಮಾಡುವ ಅನುಕೂಲವಿರುವಾಗ ಅದನ್ನು ನಾನು ಹೇಳಬೇಕಾಗಿರುವುದು. ಹೇಗಾದರೂ ಆಗಲಿ ಅಂತಹ ದುಃಖದ ಸ್ಥಿತಿ ಅನೇಕ ವೇಳೆ ಉತ್ತಮವಾದ ಆಧ್ಯಾತ್ಮಿಕ ಸಾಕ್ಷಾತ್ಕಾರಗಳನ್ನು ತರುವುವು. ಮೋಡ ಕೆಲವು ಕಾಲ ಮರೆಯಾಗಿ ಸತ್ಯ ಸೂರ್ಯನು ಪ್ರಕಾಶಿಸಿದಂತೆ. ಕೆಲವರಿಗೆ ಇದರಿಂದ ಅರ್ಧ ಬಂಧನ ಕಳಚಿಬಿದ್ದಂತೆ. ಎಲ್ಲಾ ಬಂಧನಗಳಿಗಿಂತಲೂ ಸ್ಥಾನ ಗೌರವ ಬಂಧನ ಬಹಳ ಕಠಿಣ. ತನ್ನ ಗೌರವದ ಅಂಜಿಕೆ ಸಾವಿನ ಅಂಜಿಕೆಗಿಂತ

ಒಲವಾದುದು. ಈ ಬಂಧನ ಕೂಡ ಸ್ವಲ್ಪ ಸಡಿಲವಾದಂತೆ ತೋರುವುದು. ಅಂತರ್ಯಾಮಿಯಾದ ಭಗವಂತನ ನುಡಿಯನ್ನು ಕೇಳುವುದು ಮನುಷ್ಯನ ಅಭಿಪ್ರಾಯವನ್ನು ಕೇಳುವುದಕ್ಕಿಂತ ಮೇಲೆಂದು ಮನಸ್ಸಿಗೆ ಕೆಲವು ಕಾಲ ತೋಚುವುದು. ಆದರೆ ಪುನಃ ಮೋಡ ಆವರಿಸುವುವು. ಇದು ನಿಜವಾಗಿಯೂ ಮಾಯೆ.

ಬಹಳಕಾಲದವರೆವಿಗೂ ನಿಮ್ಮೊಡನೆ ನೇರವಾಗಿ ಪತ್ರ ವ್ಯವಹಾರವಿಲ್ಲದೇ ಇದ್ದರೂ ಕೂಡ, ಉಳಿದವರಿಂದ ನಿಮ್ಮ ವಿಷಯವಾಗಿ ಅನೇಕ ಸಮಾಚಾರಗಳು ನನಗೆ ಬರುತ್ತಿದ್ದವು. ಕೆಲವು ಕಾಲದ ಹಿಂದೆ ಗೀತೆಯ ಒಂದು ಭಾಷಾಂತರದ ಪ್ರತಿಯನ್ನು ನೀವು ದಯವಿಟ್ಟು ನನಗಾಗಿ ಇಂಗ್ಲೇಂಡಿಗೆ ಕಳುಹಿಸಿದಿರಿ. ಪುಸ್ತಕದ ರಟ್ಟಿನ ಮೇಲೆ ಮಾತ್ರ ನಿಮ್ಮ ಬರವಣಿಗೆಯ ಒಂದು ಸಾಲು ಇತ್ತು. ಈ ಬಹುಮಾನವನ್ನು ಸ್ವೀಕರಿಸಿದೆನೆಂದು ಬರೆದ ಕೆಲವು ಪದಗಳು, ನಿಮ್ಮ ಮೇಲೆ ನನಗಿದ್ದ ಹಳೆಯ ಪ್ರೀತಿ ಇನ್ನೂ ಇರುವುದೆ ಎಂಬ ಸಂದೇಹವನ್ನು ನಿಮ್ಮಲ್ಲಿ ಹುಟ್ಟಿಸಿತೆಂದು ಕೇಳಿದೆ.

ಈ ಸಂಶಯಗಳು ನಿರಾಧಾರವಾದುದೆಂದು ನೀವು ದಯವಿಟ್ಟು ತಿಳಿಯಿರಿ. ನನ್ನ ಅಂಗೀಕಾರದ ಮಿತ ಭಾಷೆಗೆ ಕಾರಣ, ನನಗೆ ನಾಲ್ಕೈದು ವರುಷಗಳಲ್ಲಿ ನೀವು ಕಳುಹಿದ ಇಂಗ್ಲೀಷ್ ಗೀತೆಯ ಮೇಲೆ ನಿಮ್ಮ ಒಂದು ಪಂಕ್ತಿಯ ಬರವಣಿಗೆಯನ್ನು ಮಾತ್ರ ನೋಡುವ ಅವಕಾಶವಾದುದು. ಆದ ಕಾರಣ ನೀವು ನನಗೆ ಹೆಚ್ಚು ಬರೆಯಲು ಅವಕಾಶವಿಲ್ಲದೇ ಇದ್ದರೆ ಓದಲು ಅವಕಾಶವಿರುತ್ತದೆಯೆ ಎಂದು ಆಲೋಚಿಸಿದೆ. ಎರಡನೆಯದಾಗಿ, ನೀವು ಹಿಂದೂ ಧರ್ಮದ ಬಿಳಿಯ ಬಣ್ಣದ ಧರ್ಮಬೋಧಕರ ಆಪ್ತಸ್ನೇಹಿತರೆಂದೂ, ನಿಮಗೆ ಸ್ಥಳೀಯ ಮೋಸಗಾರರಾದ ಕಪ್ಪು ಜನರು ಅಸಹ್ಯಕರವೆಂದೂ ಕೇಳಿದೆ. ಈ ವಿಚಾರವಾಗಿ ನನಗೂ ಸ್ವಲ್ಪ ಸುಳಿವು ತೋರಿತು. ಮೂರನೇದಾಗಿ ನಾನು ಮ್ಲೇಚ್ಛನೆಂದೂ, ಶೂದ್ರನೆಂದೂ, ಏನನ್ನು ಬೇಕಾದರೂ ಎಲ್ಲವನ್ನೂ ಯಾರ ಸಂಗಡ ಬೇಕಾದರೆ ಅವರೊಡನೆ—ಅದರಲ್ಲೂ ಬಹಿರಂಗದಲ್ಲಿ ಇಂಡಿಯಾದೇಶದಲ್ಲಿ ಮತ್ತು ಹೊರಗೆ ತಿನ್ನುತ್ತೇನೆಂದಿರುವಿರಿ. ಅದೂ ಅಲ್ಲದೆ ನನ್ನ ದೃಷ್ಟಿಯಲ್ಲಿ ಹೆಚ್ಚು

ಮಬ್ಬು ಬೇರೆ ಕವಿದಿದೆ ಎನ್ನುವಿರಿ. ಒಬ್ಬ ಗುಣಾತೀತನಾದ ಆನಂದಮಯ ನಾದ ಬ್ರಹ್ಮನನ್ನು ನಾನು ನೋಡುತ್ತೇನೆಂದು ಭಾವಿಸುವೆನು. ಕೆಲವು ವ್ಯಕ್ತಿಗಳಲ್ಲಿ ಆ ಬ್ರಹ್ಮದ ವಿಶೇಷ ಪ್ರಕಟನೆಯನ್ನು ಕಾಣುತ್ತೇನೆ. ಅಂತಹ ಕೆಲವರನ್ನು ದೇವರೆಂದು ಕರೆದರೆ ನಾವು ಅವರನ್ನು ಸರಿಯಾಗಿ ಅನುಸರಿಸ ಬಹುದು. ಇಲ್ಲದೆ ಇದ್ದರೆ, ಸೃಷ್ಟಿಕರ್ತನಿರುವನು ಮುಂತಾದ ಮಾಹೆಯ ಬುದ್ಧಿವಂತಿಕೆಯ ಸಿದ್ಧಾಂತ ನನಗೆ ಅಷ್ಟು ರುಚಿಸದು.

ನನ್ನ ಜೀವನದಲ್ಲಿ ಅಂತಹ ದೇವರನ್ನು ನೋಡಿರುವೆನು. ಆತನ ಆಜ್ಞೆಯನ್ನು ನೆರವೇರಿಸುವುದಕ್ಕೇ ನಾನು ಜೀವಿಸಿರುವೆನು. ಸ್ಮೃತಿ ಪುರಾಣಗಳೆಲ್ಲ ಅಲ್ಪಮತಿಗಳಿಂದ ರಚಿಸಿದವು. ಅವುಗಳಲ್ಲಿ ಬೇಕಾದಷ್ಟು ತಪ್ಪುಗಳಿವೆ. ಜಾತಿ, ಕುಲದ ಹೆಮ್ಮೆ ಅಸೂಯೆ ಇವೆ. ಅವುಗಳಲ್ಲಿ ಹೃದಯ ವೈಶಾಲ್ಯ ಮತ್ತು ಪ್ರೀತಿಯನ್ನು ಬೋಧಿಸುವ ಕೆಲವು ಭಾಗ ಗಳು ಮಾತ್ರ ಸ್ವೀಕಾರಕ್ಕೆ ಯೋಗ್ಯ. ಉಳಿದವುಗಳನ್ನು ತಿರಸ್ಕರಿಸ ಬೇಕಾಗುವುದು. ಉಪನಿಷತ್ತು ಮತ್ತು ಗೀತೆ ಇವುಗಳು ಮಾತ್ರ ನಿಜವಾದ ಶಾಸ್ತ್ರಗಳು—ರಾಮ, ಕೃಷ್ಣ, ಬುದ್ಧ, ಚೈತನ್ಯ, ನಾನಕ್, ಕಬೀರ್ ಮುಂತಾದವರು ನಿಜವಾದ ಅವತಾರಗಳು. ಏಕೆಂದರೆ ಅವರ ಹೃದಯ ಆಕಾಶದಷ್ಟು ವಿಶಾಲವಾಗಿತ್ತು. ಇವರೆಲ್ಲರಿಗಿಂತ ಹೆಚ್ಚು ಶ್ರೀರಾಮಕೃಷ್ಣರು. ರಾಮಾನುಜ ಮತ್ತು ಶಂಕರ ಮುಂತಾದ ವರು ಹೆಚ್ಚು ಹೃದಯ-ಸಂಕುಚಿತರಾದ ಪಂಡಿತರಂತೆ ತೋರುವರು. ಆ ಪ್ರೇಮದಲ್ಲಿ ಮತ್ತೊಬ್ಬರ ದುಃಖಕ್ಕೆ ಮರಗುವ ಹೃದಯವೆಲ್ಲಿ? ಪಂಡಿತನ ನಿಸ್ಸಾರ ವಿದ್ಯೆಯ ಅಲಂಕಾರ. ತಾವೊಬ್ಬರೇ ಮುಕ್ತಿ ಯನ್ನು ಗಳಿಸಬೇಕೆಂಬ ತವಕದ ಭಾವನೆ. ಆದರೆ ಅದು ನಿಜವಾಗಿ ಸಾಧ್ಯವೆ? ಹಾಗೆ ಎಂದಾದರೂ ಇತ್ತೆ? ಅಥವಾ ಮುಂದೆ ಹೇಗಾದ ರಾಗಲಿ ಇರುವುದೋ? ನಾನು ಎಂಬುವ ಅಹಂಕಾರ ಉಳಿಯುವ ತನಕ ಏನನ್ನಾದರೂ ನಾವು ಸಾಧಿಸಬಹುದೆ.

ಇನ್ನೊಂದು ದೊಡ್ಡ ತಪ್ಪು ಏನೆಂದರೆ: ಜಾತಿ ಭಾವನೆಯೆ ಪರಸ್ಪರ ಭೇದ ಬುದ್ಧಿಯನ್ನು ಕಲ್ಪಿಸುವುದಕ್ಕೆ ಮುಖ್ಯ ಕಾರಣ. ಮತ್ತು ಅದೇ ಮಾಯೆಯ ಮೂಲ—ಎಲ್ಲಾ ಜಾತಿಯೂ, ಅದು ಜನನದ

ಮೇಲಿರಲಿ ಅಥವಾ ಯೋಗ್ಯತೆಯ ಮೇಲಿರಲಿ ಅದು ಬಂಧನವೆಂಬ ನಿರ್ಧಾರವು, ಕ್ರಮೇಣ ನನ್ನ ಮನಸ್ಸಿನಲ್ಲಿ ದೃಢವಾಗುತ್ತಿದೆ. ಕೆಲವು ಸ್ನೇಹಿತರು ಹೀಗೆಂದು ಬುದ್ಧಿವಾದ ಹೇಳುವರು: " ನಿಜ. ಅದೆಲ್ಲವನ್ನು ನಿನ್ನ ಮನಸ್ಸಿನಲ್ಲಿಟ್ಟುಕೊಂಡಿರು. ಆದರೆ, ಹೊರಗೆ ವ್ಯಾವಹಾರಿಕ ಪ್ರಪಂಚದಲ್ಲಿ, ಜಾತಿಯಂತಹ ಭೇದಗಳನ್ನು ಇಟ್ಟುಕೊಂಡಿರಲೇ ಬೇಕಾಗುವುದು " . . . . . ಅಂತರಾಳದಲ್ಲಿ ಐಕ್ಯತೆಯ ಭಾವ, ಹೊರಗೆ ಪೈಶಾಚಿಕ ನರಕದ ದೃಶ್ಯ—ಅನ್ಯಾಯ ಮತ್ತು ಕ್ರೂರತನ—ವೆ! ದೀನರಿಗೆ ಸಾವನ್ನು ತರುವವರೆ! ಆದರೆ ಪಂಚಮನು ಏನಾದರು ಧನಿಕ ನಾಗಿದ್ದರೆ, ಓ! ಇವನು ಧರ್ಮೋದ್ಧಾರಕ ಎನ್ನುವುದು.

ಇದೆಲ್ಲ ಆದ ಮೇಲೆ ನನ್ನ ವ್ಯಾಸಂಗದ ಮೂಲಕ ತಿಳಿಯುವು ದೇನೆಂದರೆ, ಧಾರ್ಮಿಕ ನಿಯಮಗಳು ಶೂದ್ರನಿಗಲ್ಲ. ಅವನೇನಾದರೂ ಆಹಾರದ ವಿಷಯದಲ್ಲಿ, ಪರದೇಶಕ್ಕೆ ಪ್ರಯಾಣ ಮಾಡುವ ವಿಚಾರದಲ್ಲಿ, ಏನಾದರೂ ಔಚಿತ್ಯ ಅನೌಚಿತ್ಯಗಳನ್ನು ಕಂಡುಹಿಡಿಯಲು ಯತ್ನಿಸಿದರೆ ಇದೆಲ್ಲ ಅವನ ಭಾಗಕ್ಕೆ ನಿಷ್ಪ್ರಯೋಜನ. ವೃಥಾ ಅಷ್ಟೊಂದು ಕಷ್ಟ ವ್ಯರ್ಥ. ನಾನೊಬ್ಬ ಶೂದ್ರ. ನಾನೊಬ್ಬ ಮ್ಲೇಚ್ಛ. ಆ ತಾಪತ್ರಯದ ತಂಟೆಯೇ ನನಗೆ ಇಲ್ಲ. ನನಗೆ ಮ್ಲೇಚ್ಛರ ಆಹಾರ ವಾದರೇನು? ಪರಯನ ಆಹಾರವಾದರೇನು? ಪುರೋಹಿತರು ಬರೆದ ಪುಸ್ತಕಗಳಲ್ಲಿ ಮಾತ್ರ ಜಾತಿ ಎಂಬ ಹುಚ್ಚು ಸಿಕ್ಕುವುದು. ಈಶ್ವರ ಲಾಭವಾದವರು ಬರೆದ ಪುಸ್ತಕಗಳಲ್ಲಿ ಇಲ್ಲ. ಪುರೋಹಿತರು ತಮ್ಮ ಮುತ್ತಾತಂದಿರು ಸಂಪಾದಿಸಿದ ಮಹತ್ ಕೀರ್ತಿಯನ್ನು ಅನುಭವಿಸಲಿ. ನಾನಾದರೂ ದೇವರ ವಾಣಿಯನ್ನು ಅನುಸರಿಸುವೆನು. ಏಕೆಂದರೆ ನನ್ನ ಶುಭ ಅಲ್ಲಿರುವುದು.

ನನಗೆ ತೋರಿದ ಮತ್ತೊಂದು ಸತ್ಯವೇನೆಂದರೆ ಪರೋಪಕಾರ ವೊಂದೇ ಧರ್ಮ. ಉಳಿದ ಬಾಹ್ಯ ಸಂಸ್ಕಾರ ವಿಧಿಗಳೆಲ್ಲ ಹುಚ್ಚುತನ— ತನ್ನ ಸ್ವಂತ ಮೋಕ್ಷಕ್ಕೋಸುಗವಾಗಿ ಆಶಿಸುವುದು ಕೂಡ ತಪ್ಪು. ಪರರಿಗೆ ತನ್ನ ಸರ್ವಸ್ವವನ್ನು ಯಾರು ತ್ಯಾಗ ಮಾಡುವನೊ ಅವನಿಗೆ ಮಾತ್ರ ಮುಕ್ತಿ. ಅದಲ್ಲದೆ ಯಾರು ಹಗಲು ರಾತ್ರಿ " ನನ್ನ ಮೋಕ್ಷ,,

"ನನ್ನ ಮೋಕ್ಷ" ಎಂಬ ಪಲ್ಲವಿ ಹಾಡಿ ತಮ್ಮ ಬುದ್ಧಿವಂತಿಕೆಯನ್ನು ವ್ಯಯ ಮಾಡುತ್ತಿರುವರೋ ಅವರು ಇಂದಿನ ಮತ್ತು ಮುಂದಿನ ಆತ್ಮಹಿತವನ್ನು ನೀಗಿಕೊಂಡು ಅಲೆದಾಡುವರು. ಇದನ್ನು ನಾನು ಹಲವು ಬಾರಿ ನನ್ನ ಕಣ್ಣುಗಳಿಂದಲೇ ನೋಡಿರುವೆನು. ಈ ಹಲವು ಬಗೆಯ ವಿಷಯಗಳ ಮೇಲೆಲ್ಲ ಆಲೋಚಿಸುತ್ತ ನಿಮಗೆ ಕಾಗದ ಬರೆಯುವುದಕ್ಕೆ ನನಗೆ ಮನಸ್ಸಿರಲಿಲ್ಲ. ಈ ಸಹಿಸಲಾರದ ವ್ಯತ್ಯಾಸಗಳಿದ್ದರೂ ಕೂಡ, ನಿಮಗೆ ನನ್ನ ಮೇಲಿರುವ ವಿಶ್ವಾಸವು ಕಡಿಮೆಯಾಗದೆ ಇದ್ದರೆ, ನಿಜವಾಗಿ ನನಗೆ ಸಂತೋಷದಾಯಕವಾದ ಸುದ್ದಿಯೇ ಸರಿ.

ನಿಮ್ಮ ವಿವೇಕಾನಂದ.

೮೪

ಆಲ್ಮೋರ.
೧೫ನೇ ಜೂನ್ ೧೮೯೭.

ಪ್ರಿಯ,

ನಿನ್ನ ವಿಚಾರವಾಗಿ ವಿವರವಾದ ಸುದ್ದಿಗಳು ನನಗೆ ಬರುತ್ತಿವೆ ಇದರಿಂದ ಸಂತೋಷವಾಗುತ್ತಿದೆ. ಪ್ರಪಂಚವನ್ನು ಗೆಲ್ಲಬೇಕಾದರೆ ಅಂತಹ ಕೆಲಸ ಬೇಕು. ಜಾತಿ ಮತ್ತು ಅಭಿಪ್ರಾಯಗಳ ಭಿನ್ನತೆ ಇದ್ದರೆ ಏನಂತೆ? ಎದೆಗಾರ ನೀನು. ಲಕ್ಷ ಆಲಿಂಗನ ಆಶೀರ್ವಾದಗಳನ್ನು ನನ್ನಿಂದ ಸ್ವೀಕರಿಸು. ಕೆಲಸ, ಕೆಲಸ, ಕೆಲಸ, ನನಗೆ ಇನ್ನು ಏನೂ ಬೇಕಾಗಿಲ್ಲ. ಕೆಲಸ, ಕೆಲಸ, ಪ್ರಾಣ ಹೋಗುವವರೆಗೂ ಕೆಲಸ; ಯಾರು ಬಲಹೀನರೊ ಅವರು ಬಹಳ ಉತ್ತಮ ಕೆಲಸಗಾರರಾಗಬೇಕು ಪುರುಷಸಿಂಹರಾಗಬೇಕು. ಹಣದ ವಿಚಾರದಲ್ಲಿ ನೀವುಗಳು ಅಷ್ಟು ಆತುರಪಡಬೇಡಿ. ಅದು ಆಕಾಶದಿಂದ ಕೆಳಗೆ ಉದುರುವುದು. ಯಾರ ದಾನವನ್ನು ನೀನು ಸ್ವೀಕರಿಸುವೆಯೊ ಅವರು ಇಚ್ಛೈಸಿದರೆ ತಮ್ಮ ಹೆಸರಿನಲ್ಲಿ ಬೇಕಾದರೂ ಕೊಡಲಿ—ಇದರಲ್ಲಿ ಏನೂ ತೊಂದರೆ ಇಲ್ಲ. ಯಾರ ಹೆಸರು, ಅದರಿಂದ ಪ್ರಯೋಜನವೇನು? ಕೀರ್ತಿ ಯಾರಿಗೆ ಬೇಕು. ಅದರಿಂದ ಪಾರಾಗು! ಹಸಿದವರಿಗೆ ಒಂದು ತುತ್ತು ಅನ್ನ

ವನ್ನು ಒದಗಿಸುವ ಪ್ರಯತ್ನದಲ್ಲಿ ಹೆಸರು ಮತ್ತು ಗೌರವ ಹೋದರೂ ಹೋಗಲಿ— "ಅಹೋ ಭಾಗ್ಯಯ ಹೋ ಭಾಗ್ಯಯಂ" ನಿನ್ನ ಜೀವನ ಪವಿತ್ರವಾಗುವುದು ! ಪ್ರೀತಿ, ಗೆಲ್ಲುವುದು ಪ್ರೀತಿ. ಬುದ್ಧಿವಂತಿಕೆ ಯಲ್ಲ. ಪುಸ್ತಕಗಳು ಮತ್ತು ಪಾಂಡಿತ್ಯ, ಯೋಗಧ್ಯಾನ ಮತ್ತು ಸಾಕ್ಷಾತ್ಕಾರ ಇವನ್ನು ಪ್ರೇಮದೊಂದಿಗೆ ಹೋಲಿಸಿ ನೋಡಿದರೆ ಕೆಲಸಕ್ಕೆ ಬಾರದ ಬರೀ ಮಣ್ಣು. ನಿನಗೆ ಅದ್ಭುತ ಅತೀಂದ್ರಿಯ ಶಕ್ತಿಯನ್ನು ಕೊಡುವುದು ಪ್ರೀತಿ. ಭಕ್ತಿಯನ್ನು ಕೊಡುವುದು ಪ್ರೀತಿ. ಸಾಕ್ಷಾತ್ಕಾರವನ್ನು ಕೊಡುವುದು ಪ್ರೀತಿ. ಮತ್ತೆ ಪುನಃ ಮುಕ್ತಿಗೆ ದಾರಿ ತೋರುವುದೇ ಪ್ರೀತಿ. ಮಾನವ ದೇಹ ಮಂದಿರದಲ್ಲಿರುವ ಮಾನವ ಪೂಜೆಯೆ ನಿಜವಾದ ಪೂಜೆ. "ನೇದಂ ಯದಿದಂಮುಪಾಸತೆ" ಜನರು ಸಾಧಾರಣವಾಗಿ ಪೂಜಿಸುವುದಲ್ಲ. ಇದು ಇನ್ನೂ ಆರಂಭ. ನಾವು ಭರತಖಂಡದಲ್ಲೆಲ್ಲಾ, ಅಲ್ಲ, ಇಡೀ ಪ್ರಪಂಚದಲ್ಲಿ ಹಬ್ಬದೇ ಇದ್ದರೆ ನಮ್ಮ ಭಗವಾನರ ಮಹತ್ವವೆಲ್ಲಿರುವುದು ?

ಜನರು ನೋಡಲಿ ನೋಡದಿರಲಿ ನಮ್ಮ ಭಗವಾನರ ಪಾದ ಸ್ಪರ್ಶ ಮನುಷ್ಯನಿಗೆ ದೇವತ್ವವನ್ನು ಕೊಡುವುದು. ಇದನ್ನೇ ಜೀವ ನ್ಮುಕ್ತಿ ಎನ್ನುವುದು. ಇದು ದೊರಕುವುದು ಅಹಂಕಾರ ಮತ್ತು ಸ್ವಾರ್ಥತೆಯ ಕೊನೆಯ ಸುಳಿವು ನಾಶವಾದ ಮೇಲೆ. ಒಳ್ಳೆ ಯದು ಮಾಡಿದಿರಿ. ಭಗವಂತನಿಗೆ ಜಯವಾಗಲಿ ! ಕ್ರಮೇಣ ಹರಡು ವುದಕ್ಕೆ ಪ್ರಯತ್ನಿಸಿ. ಚಂದಾ ಎತ್ತಲು ಸಾಧ್ಯವಾದರೆ ನೀನು ಬೇರೊಂದು ಹುಡುಗರ ಗುಂಪಿನೊಂದಿಗೆ ಕಲ್ಕತ್ತೆಗೆ ಹೋಗಿ ಅವರಲ್ಲಿ ಒಬ್ಬರನ್ನು ಒಂದು ಸ್ಥಳದಲ್ಲಿ ಕೆಲಸ ಮಾಡುವುದಕ್ಕೆ ಬಿಟ್ಟು ನೀನು ಮತ್ತೊಂದು ಸ್ಥಳಗಲ್ಲಿ ಪ್ರಾರಂಭ ಮಾಡಬಹುದು. ಈ ರೀತಿಯಾಗಿ ಹರಡು. ಅವರನ್ನು ಪರೀಕ್ಷೆ ಮಾಡುತ್ತಾ ಹೋಗು. ಕೆಲಸ ಕ್ರಮೇಣ ಸ್ಥಿರವಾಗುವುದನ್ನು ನೀನು ನೋಡುವೆ. ಧರ್ಮ ಮತ್ತು ವಿದ್ಯೆಯ ಪ್ರಚಾರ ನಂತರ ತಾನಾಗಿಯೇ ಬರುವುದು. ಅವರಿಗೆ ನಾನು ಕಲ್ಕತ್ತೆಯಲ್ಲಿ ಪ್ರತ್ಯೇಕವಾಗಿ ಅಪ್ಪಣೆ ಮಾಡಿರುವೆನು. ಅಂತಹ ಕೆಲಸವನ್ನು ಮಾಡು. ನನ್ನ ಭುಜದ ಮೇಲೆ ನಿನ್ನನ್ನು

ಹೊತ್ತುಕೊಂಡು ಹೋಗುವೆನು.—ಕೆಚ್ಚೆದೆಯ ವೀರ! ಕ್ರಮೇಣ ಪ್ರತಿಯೊಂದು ಜಿಲ್ಲೆಯೂ ಒಂದು ಕೇಂದ್ರವಾಗುವುದು. ಇದನ್ನು ನೀನು ನೋಡುವೆ. ನಾನು ಬೇಗ ಬಯಲು ಸೀಮೆಯ ಕಡೆ ಹೊರಡು ತ್ತೇನೆ. ಹೋರಾಡುವವನು ನಾನು. ಕಾರ್ಯಕ್ಷೇತ್ರದಲ್ಲಿ ಪ್ರಾಣ ಬಿಡುವೆನು. ಜನಾನ ಹೆಂಗಸರಂತೆ ಇಲ್ಲಿ ಕುಳಿತು ಕೊಳ್ಳುವುದು ನನಗೆ ಸರಿಯೆ?

ನಿನ್ನ ಪ್ರೇಮದ
ವಿವೇಕಾನಂದ.

೮೫

ಆಲ್ಮೋರ.
೪ನೇ ಜುಲೈ, ೧೮೯೭.

(ಒಬ್ಬ ಆಂಗ್ಲೇಯ ಸ್ನೇಹಿತನಿಗೆ)—

ನಾನು ಇನ್ನೂ ಹಿಮಾಲಯದಲ್ಲೆ ಇದ್ದರೂ, ಇನ್ನು ಮುಂದೆಯೂ ಒಂದು ತಿಂಗಳು ಇರುವುದಾದರೂ, ನಾನು ಇಲ್ಲಿಗೆ ಬರುವುದಕ್ಕೆ ಮುಂಚೆ ಕಲ್ಕತ್ತೆಯಲ್ಲಿ ಕೆಲಸವನ್ನು ಪ್ರಾರಂಭಿಸಿದೆನು. ಪ್ರತಿ ವಾರವೂ ಅದು ಹೇಗೆ ಮುಂದುವರಿಯುತ್ತದೆ ಎಂದು ಕಾಗದ ಬರೆ ಯುವರು.

ಈಗ ನಾನು ಬರಗಾಲದ ಕೆಲಸದಲ್ಲಿ ನಿರತನಾಗಿರುವೆನು. ಮುಂದಿನ ಕೆಲಸಗಳಿಗೆ ಕೆಲವು ಯುವಕರನ್ನು ತರಬೇತು ಮಾಡು ವುದಲ್ಲದೆ ಬೋಧನೆಯ ಕೆಲಸಕ್ಕೆ ಹೆಚ್ಚು ಗಮನ ಕೊಡಲು ಸಾಧ್ಯ ವಾಗಲಿಲ್ಲ. "ಅನ್ನ ದಾನದ" ಕೆಲಸ ನನ್ನ ಶಕ್ತಿ ಮತ್ತು ದ್ರವ್ಯವೆಲ್ಲ ವನ್ನು ತೆಗೆದುಕೊಳ್ಳುತ್ತಿದೆ. ನಾನು ಇನ್ನೂ ಬಹಳ ಸ್ವಲ್ಪ ಕೆಲಸ ಮಾಡಲು ಸಾಧ್ಯವಾದರೂ, ಪ್ರತಿಫಲ ಅತ್ಯಾಶ್ಚರ್ಯಕರವಾಗಿರುವುದು. ಬುದ್ಧನ ಕಾಲಾನಂತರ ಮೊದಲನೆ ಸಾರಿ ಬ್ರಾಹ್ಮಣ ಹುಡುಗರು, ಕಾಲರಾ ರೋಗದಿಂದ ನರಳುತ್ತಿರುವ ಹೊಲೆಯರ ಹಾಸಿಗೆ ಪಕ್ಕದಲ್ಲಿ ಕುಳಿತು ಶುಶ್ರೂಷೆ ಮಾಡುತ್ತಿರುವುದನ್ನು ಕಾಣಬಹುದು.

ಭರತಖಂಡದಲ್ಲಿ ಉಪನ್ಯಾಸ ಮತ್ತು ಉಪದೇಶಗಳಿಂದ ಏನೂ ಪ್ರಯೋಜನವಿಲ್ಲ. ನಮಗೆ ಬೇಕಾಗಿರುವುದು ಕ್ರಿಯೋತ್ತೇಜಕ ಧರ್ಮ. ಮುಹಮ್ಮದೀಯರು ಹೇಳುವಂತೆ, "ಅಲ್ಲ ಮನಸ್ಸು ಮಾಡಿದರೆ" ಅದನ್ನು ತೋರಿಸುವುದಕ್ಕೆ ಶಪಥ ಮಾಡಿರುವೆನು.

೮೬

ಆಲ್ಮೋರ,
೯ ನೇ, ಜುಲೈ ೧೮೯೭.

ಪ್ರಿಯ.

ನಿರಾಶಾ ಸೂಚಕವಾದ ನಿಮ್ಮ ಪತ್ರದ ಒಳ ಅರ್ಥವನ್ನು ನೋಡಿ ನನಗೆ ಬಹಳ ದುಃಖವಾಯಿತು. ಅದರ ಕಾರಣ ನನಗೆ ತಿಳಿಯುದು. ನಿನ್ನ ಮುಂಜಾಗ್ರತೆಗೆ ಬಹಳ ವಂದನೆಗಳು. ನಿನ್ನ ಉದ್ದೇಶ ನನಗೆ ಸಂಪೂರ್ಣವಾಗಿ ಗೊತ್ತಿದೆ. ಅ—ಒಂದಿಗೆ ಇಂಗ್ಲೇಂಡಿಗೆ ಹೋಗುವುದಕ್ಕೆ ನಾನು ಅಣಿಮಾಡಿದ್ದೆ "ವೈದ್ಯರು ಅವಕಾಶ ಕೊಡದೆ ಇದ್ದುದರಿಂದ ಅದು ನಿಂತುಹೋಯಿತು" ಹ—ಅವನನ್ನು ಕಂಡನು ಎಂದು ತಿಳಿದರೆ ನನಗೆ ಎಷ್ಟೋ ಸಂತೋಷವಾಗುವುದು. ನಿಮ್ಮಲ್ಲಿ ಯಾರನ್ನಾದರೂ ನೋಡುವುದಕ್ಕೆ ಅವನಿಗೆ ತುಂಬ ಸಂತೋಷವಾಗುವುದು.

ನನ್ನ ಜಾತಿಯು ಹೋಗದೆ ಇರುವುದು ಮಾತ್ರವಲ್ಲ. ನಾನು ಪಾಶ್ಚಾತ್ಯ ದೇಶಗಳಿಗೆ ಹೋದದ್ದು ಸಮುದ್ರ ಪ್ರಯಾಣಕ್ಕೆ ಇದ್ದ ವಿರೋಧವನ್ನು ನಾಶ ಮಾಡಿದೆ. ನನ್ನನ್ನು ಅವರು ಭಹಿಷ್ಕಾರ ಹಾಕಬೇಕಾದರೆ ಭರತ ಖಂಡದ ಅರ್ಧ ಆಳುವ ಅರಸರು, ಮುಕ್ಕಾಲುಪಾಲು ಇಂಡಿಯಾದೇಶದ ವಿದ್ಯಾವಂತರು ಇವರುಗಳೊಂದಿಗೆ ಮಾಡಬೇಕು ಅದಲ್ಲದೆ ನನ್ನ ಪೂರ್ವಾಶ್ರಮದ ಜಾತಿಗೆ ಸೇರಿದ ಹೆಸರಾದ ರಾಜನೊಬ್ಬನು. ನನ್ನ ಗೌರವಾರ್ಥವಾಗಿ ಒಂದು ಸಂತೋಷ ಕೂಟವನ್ನು ಏರ್ಪಡಿಸಿದ್ದನು. ಅದರಲ್ಲಿ ಆ ಜಾತಿಯ ಮುಖ್ಯರಾದವರೆಲ್ಲರೂ ಇದ್ದರು. ಅದಲ್ಲದೆ ಇಂಡಿಯಾ ದೇಶದಲ್ಲಿ ಸಂನ್ಯಾಸಿಗಳು ಬೇರೆಯವರೊಡನೆ ಕುಳಿತು ಊಟಮಾಡುವುದಿಲ್ಲ. ಏಕೆಂದರೆ, ಅದು, ಸಾಧಾರಣ ಮಾನವರೊಡನೆ ಕುಳಿತು ಊಟಮಾಡುವುದು ದೇವತೆಗಳ ಗೌರವಕ್ಕೆ ಕುಂದು ತರುವುದು. ಉಳಿದವರು ಸಾಧಾರಣ ಮಾನವರಾಗಿರುವಾಗ ಸಂನ್ಯಾಸಿಗಳನ್ನು ನಾರಾಯಣ ಎಂದು ನೋಡುತ್ತಾರೆ. ಪ್ರಿಯ ಮ—ಈ ಪಾದಗಳು ರಾಜರ ಮನೆತನಕ್ಕೆ ಸೇರಿದವರಿಂದ ತೊಳೆದು ಆದರಿಸಿ, ಪೂಜಿಸಲ್ಪಟ್ಟಿವೆ. ದೇಶದಲ್ಲೆಲ್ಲಾ ಹಿಂದೆ ಯಾರಕಾಲದಲ್ಲಿಯೂ ಇಲ್ಲದ ಅಸಾಧ್ಯ ಪುರೋಗಮನದ ಚಿಹ್ನೆ ಕಾಣುತ್ತಿದೆ.

ನಾನು ರಸ್ತೆಯೊಳಗೆ ಹೋಗಲು ಯತ್ನಿಸಿದರೆ ಶಿಸ್ತನ್ನು ಕಪಾಡಲು ಪೋಲಿಸಿನವರು ಅವಶ್ಯಕವಾಗಿತ್ತು ಎಂದರೆ ಸಾಕಾಗಿದೆ! ನಿಜವಾಗಿಯೂ ಇದಲ್ಲವೆ ಬಹಿಷ್ಕಾರ! ಇದು ಪಾದ್ರಿಗಳನ್ನು ವಿಸ್ಮಯ ಮಾಡಿತು. ಅದೇನೊ ನಿಜ. ಇಲ್ಲಿ ಅವರು ಯಾರು? ಅನಾಮಧೇಯರು. ಇದುವರೆವಿಗೂ ಅವರು ಇರುವುದು ಕೂಡ ಜ್ಞಾಪಕವಿಲ್ಲ. ನಾನು ಒಂದು ಉಪನ್ಯಾಸದಲ್ಲಿ ಪಾದ್ರಿಗಳು (ಆಂಗ್ಲೇಯ ಚರ್ಚಿಗೆ ಸೇರಿದ ಸಭ್ಯರನ್ನು ಬಿಟ್ಟು) ಮತ್ತು ಅವರ ತಂಡ ಹೇಗೆ ಬಂದಿತು ಎಂಬುದನ್ನು ವಿವರಿಸುವಾಗ, ಅಮೇರಿಕಾ ದೇಶದ ಚರ್ಚಿಗೆ ಸೇರಿದ ಹೆಂಗಸರು ಮತ್ತು ಸುಳ್ಳು ಸುದ್ದಿಗಳನ್ನು ಹುಟ್ಟಿಸುವ ಅಲ್ಲಿಯ ಹೆಂಗಸರ ಪರಾಕ್ರಮವನ್ನು ಹೇಳಬೇಕಾಯಿತು. ಇದನ್ನು ಈ ಪಾದ್ರಿಗಳು ನಾನು ಅಲ್ಲಿ ಮಾಡಿದ ಕೆಲಸವನ್ನು ಹಾಳುಮಾಡುವುದಕ್ಕಾಗಿ, ಒಟ್ಟು ಅಮೇರಿಕಾ ದೇಶದ ಸ್ತ್ರೀಯರನ್ನು ನಾನು ಖಂಡಿಸುತ್ತಿರುವೆನೆಂದು ಸಾರುತ್ತಿರುವರು. ವಿರೋಧವಾಗಿ ಏನನ್ನು ಹೇಳಿದರೂ ಅದನ್ನೆಲ್ಲ ಅಮೇರಿಕಾದವರು ಪ್ರೀತಿಸುವರೆಂದು ಪಾದ್ರಿಗಳು ತಿಳಿದಿರುವರು.

ನನ್ನ ಪ್ರಿಯ ಮ—, ಒಂದು ವೇಳೆ ನಾನು ಅಮೇರಿಕಾ ನಾರಿಯರ ಮೇಲೆ ವಿರೋಧವಾಗಿ ಏನನ್ನಾದರೂ, ಘೋರ ನಿಂದನೆಗಳನ್ನು ಹೊರಸಿದ್ದರೂ, ಅದು, ಅವರು ನಮ್ಮ ತಾಯಂದಿರು ಮತ್ತು ಸಹೋದರಿಯರ ಮೇಲೆ ಹೊರಸುತ್ತಿರುವ ಅಪವಾದದ ಹೊರೆಯ ಲಕ್ಷದ ಒಂದು ಭಾಗವಾದರೂ ಆಗುವುದೇ? ಪುರುಷರೂ ಸ್ತ್ರೀಯರೂ ಕೂಡಿ ಎಲ್ಲಾ ಕ್ರೈಸ್ತ ಯಾಂಕಿಗಳು ವಿಧರ್ಮಿಗಳಾದ ಭಾರತಿಯರ ಮೇಲೆ ಅವರಿಗಿರುವ ದ್ವೇಷವನ್ನು ತೊಳೆಯಲು ಗಂಗಾಜಲವೂ ಕೂಡ ಸಾಲದು. ನಾವೇನು ಅವರಿಗೆ ತಪ್ಪು ಮಾಡಿರುವುದು. ಇನ್ನೊಬ್ಬರು ಟೀಕಿಸುವಾಗ ಯಾಂಕಿಗಳು ಮೊದಲು ಸಮಾಧಾನವಾಗಿರುವುದನ್ನು ಕಲಿಯಲಿ. ನಂತರ ಇನ್ನೊಬ್ಬರನ್ನು ಖಂಡಿಸಲಿ. ಯಾರು ಇನ್ನೊಬ್ಬರನ್ನು ನಿಂದಿಸುವುದಕ್ಕೆ ಸದಾ ಸಿದ್ಧರಾಗಿರುವರೋ, ಅವರು ಇನ್ನೊಬ್ಬರಿಂದ ಸ್ವಲ್ಪವಾದರೂ ಖಂಡನೆಯನ್ನು ಸಹಿಸಲಾರರು, ಎಂಬುದು ಪ್ರಖ್ಯಾತವಾದ ಮಾನಸಿಕ ಸಂಗತಿ. ಪುನಃ, ನಾನು ಅವರಿಂದ ಎಷ್ಟನ್ನು ಸ್ವೀಕರಿಸಿರುವೆನು? ನಿಮ್ಮ

ಮನೆ, ಶ್ರೀಮತಿ ಬಿ—; ರಿಗೆಟ್ಸ್ ಮತ್ತು ಇತರ ಕೆಲವು ದಯಾಪರರು ಅಲ್ಲದೆ ಬೇರೆ ಯಾರು ನನ್ನನ್ನು ದಯೆಯಿಂದ ಕಂಡರು? ನನ್ನ ಆಲೋಚನೆಯನ್ನು ಕಾರ್ಯರೂಪಕ್ಕೆ ತರಲು ಸಹಾಯ ಮಾಡುವುದಕ್ಕಾಗಿ ಯಾರು ಮುಂದೆ ಬಂದರು? ನಾನು ಮರಣೋನ್ಮುಖನಾಗುವವರೆವಿಗೂ ಕೆಲಸ ಮಾಡಬೇಕಾಯಿತು. ಅಮೇರಿಕಾದವರು ವಿಶಾಲ ಹೃದಯರಾಗಲಿ, ಹೆಚ್ಚು ಆಧ್ಯಾತ್ಮಿಕ ಆಸಕ್ತರಾಗಲಿ, ಎಂದು ನಾನು ನನ್ನ ಶಕ್ತಿಯನ್ನೆಲ್ಲ ಅಲ್ಲಿ ವ್ಯಯ ಮಾಡಬೇಕಾಯಿತು. ನಾನು ಇಂಗ್ಲೇಂಡಿನಲ್ಲಿ ಆರುತಿಂಗಳು ಮಾತ್ರ ಕೆಲಸ ಮಾಡಿದೆನು. ನನ್ನ ವಿಷಯವಾಗಿ ಅಪಮಾನಕರವಾದ ಮಾತು ಒಂದಾದರೂ ಇಲ್ಲ. ಆದರೆ ಒಂದು ಮಾತ್ರ; ಅದು ಅಮೇರಿಕಾ ಚರ್ಚಿಗೆ ಸೇರಿದ ಓರ್ವ ಮಹಿಳೆಯಿಂದ. ಇದರಿಂದ ನನ್ನ ಆಂಗ್ಲೇಯ ಸ್ನೇಹಿತರಿಗೆ ಉಪಶಮನವಾಯಿತು—ನಿಂದೆ ಇಲ್ಲದುದು ಮಾತ್ರವಲ್ಲ, ಅನೇಕ ಆಂಗ್ಲೇಯ ಚರ್ಚಿನ ಉತ್ತಮ ಪಾದ್ರಿಗಳು ಕೂಡ ನನ್ನ ಚಿರ ಸ್ನೇಹಿತರಾದರು. ಕೇಳದೆ ನನ್ನ ಕೆಲಸಕ್ಕೆ ಹೆಚ್ಚು ಸಹಾಯ ಒದಗಿತು. ಇದಕ್ಕಿಂತ ಇನ್ನೂ ಹೆಚ್ಚು ಸಿಕ್ಕುವುದೆಂಬುವದರಲ್ಲಿ ಸಂದೇಹವಿಲ್ಲ. ನನ್ನ ಕೆಲಸವನ್ನು ನೋಡಿ ಅದಕ್ಕೆ ಸಹಾಯವನ್ನು ಒದಗಿಸಿಕೊಡುವುದಕ್ಕೆ ಒಂದು ಸಂಘವಿದೆ. ನಾಲ್ಕು ಜನ ಗೌರವಸ್ಥರು ನನ್ನ ಕೆಲಸಕ್ಕೆ ಸಹಾಯ ಮಾಡಲು ಇಂಡಿಯಾದೇಶಕ್ಕೆ ನನ್ನೊಡನೆ ಬಂದರು. ಹತ್ತಾರು ಜನರು ಸಿದ್ಧರಾಗಿರುವರು. ನಾನು ಇನ್ನೊಮ್ಮೆ ಹೋದಾಗ ನೂರಾರು ಜನ ಸಿದ್ಧರಾಗುವರು.

ಪ್ರಿಯ, ಪ್ರಿಯ ಮ—ನನಗೋಸುಗವಾಗಿ ಅಂಜಬೇಕಾಗಿಲ್ಲ. ಪ್ರಪಂಚ ವಿಶಾಲವಾಗಿದೆ, ಬಹಳ ವಿಶಾಲವಾಗಿದೆ. "ಯಾಂಕಿಗಳು" ಕೋಪಿಸಿಕೊಂಡರೂ ನನಗೆ ಇರುವುದಕ್ಕೆ ಸ್ವಲ್ಪ ಸ್ಥಳವಿರಬೇಕು. ಹೇಗಾದರೂ ಆಗಲಿ ನನ್ನ ಕೆಲಸದಲ್ಲಿ ನನಗೆ ತುಂಬ ಸಮಾಧಾನ ವಿದೆ. ನಾನು ಯಾವುದನ್ನು ಮುಂದಾಗಿ ಹಂಚಿಕೆ ಮಾಡಲಿಲ್ಲ. ಅದು ಬಂದಹಾಗೆ ನಾನು ತೆಗೆದುಕೊಂಡಿರುವೆನು. ನನ್ನ ತಲೆಯಲ್ಲಿ ಒಂದು ಆಲೋಚನೆ ಮಾತ್ರ ಕುದಿಯುತ್ತಿತ್ತು. ಅದೇ, ಭರತಖಂಡದ ಸರ್ವಸಾಮಾನ್ಯರನ್ನು ಮೇಲೆತ್ತುವ ಒಂದು ಯಂತ್ರ ಕೆಲಸಮಾಡುವಂತೆ ಮಾಡುವುದು. ಸ್ವಲ್ಪ

ಮಟ್ಟಿಗೆ ನಾನು ಅದನ್ನು ನೆರವೇರಿಸುವುದರಲ್ಲಿ ಜಯಶೀಲನಾಗಿರುವೆನು. ನನ್ನ ಹುಡುಗರು ಬರಗಾಲ, ಸಂಕ್ರಾಮಿಕ ರೋಗ, ದುಃಖ, ಇವುಗಳ ಮಧ್ಯದಲ್ಲಿ ಈಗ ಕೆಲಸ ಮಾಡುತ್ತಿರುವರು ಎಂಬುದನ್ನು ನೋಡಿದರೆ ನಿನ್ನ ಹೃದಯಕ್ಕೆ ಆನಂದವಾಗುತ್ತಿತ್ತು—ಕಾಲರಾ ರೋಗದಿಂದ ನರಳುವ ಪರೆಯನ ಚಾಪೆಯ ಹತ್ತಿರ ಕುಳಿತು ಸೇವೆ ಮಾಡುವರು. ಉಪವಾಸ ದಿಂದ ನರಳುವ ಚಂಡಾಲರಿಗೆ ಊಟ ವಿಡುವರು. ನನಗೆ ಮತ್ತು ಅವರಿ ಗೆಲ್ಲರಿಗೂ ದೇವರು ಸಹಾಯವನ್ನು ಒದಗಿಸುವನು. "ಮನುಷ್ಯ ಯಾರು?" ಪ್ರಿಯತಮನಾದ ಆತನು ನನ್ನಲ್ಲಿರುವನು. ನಾನು ಅಮೇರಿ ಕಾದಲ್ಲಿದ್ದಾಗ, ಇಂಗ್ಲೇಂಡಿನಲ್ಲಿದ್ದಾಗ, ಇಂಡಿಯಾ ದೇಶದಲ್ಲಿ ಅನಾಮಧೇ ಯನಾಗಿ ಊರಿಂದ ಊರಿಗೆ ಅಲೆಯುತ್ತಿದ್ದಾಗ ಆತನು ನನ್ನಲ್ಲಿದ್ದನು. ಅವರು ಏನು ಮಾಡುತ್ತಾರೆ ಎಂಬ ವಿಚಾರದಿಂದ ನನಗೆ ಏನು ಆಗ ಬೇಕು—ಮಕ್ಕಳವರು. ಅವರಿಗೆ ಇನ್ನೂ ಏನೂ ಹೆಚ್ಚು ಗೊತ್ತಿಲ್ಲ. ಏನು? ನಾನು, ಆತ್ಮಸಾಕ್ಷಾತ್ಕಾರ ಪಡೆದುಕೊಂಡವನು, ಅರ್ಥವಿಲ್ಲದ ಪ್ರಾಪಂಚಿಕ ವಸ್ತುವಿನ ನಿಸ್ಸಾರವನ್ನು ತಿಳಿದವನು, ಈ ಮಕ್ಕಳ ಕೂಗಾ ಟದಿಂದ, ನಡೆಯುವ ಹಾದಿಯಿಂದ ತಪ್ಪುವೆನೆ? ಏನು ನಾನು ಹಾಗೆ ಕಾಣುವೆನೊ?

ನನ್ನ ವಿಚಾರವಾಗಿ ನಾನು ಹೆಚ್ಚು ಮಾತನಾಡಬೇಕಾಯಿತು. ಏಕೆಂದರೆ ನಿನಗೆ ಅದನ್ನು ಕೊಡಬೇಕಾಗಿತ್ತು. ನನ್ನ ಕೆಲಸ ಪೂರೈಸಿ ತೆಂದು ನನಗೆ. ತೋರುತ್ತದೆ—ಹೆಚ್ಚು ಎಂದರೆ ಮೂರು ನಾಲ್ಕು ವರ್ಷ ಆಯುಸ್ಸು ಇನ್ನು ನನಗೆ ಮಿಕ್ಕಿರುವುದು. ನನ್ನ ಮುಕ್ತಿಯ ಆಸೆಯನ್ನೆಲ್ಲ ನಾನು ಕಳೆದುಕೊಂಡಿರುವೆನು. ನನಗೆ ಪ್ರಾಪಂಚಿಕ ಭೋಗ ಎಂದಿಗೂ ಬೇಕಾಗಿರಲಿಲ್ಲ. ನನ್ನ ಯಂತ್ರ ಚೆನ್ನಾಗಿ ಕೆಲಸ ಮಾಡುವುದನ್ನು ನೋಡಬೇಕು. ಮಾನವನ ಅಭಿವೃದ್ಧಿಗೋಸುಗವಾಗಿ ಭರತಖಂಡದಲ್ಲಾ ದರೂ ಪ್ರಯತ್ನ ಮಾಡಿರುವೆನು. ಅದನ್ನು ಪ್ರಪಂಚದಲ್ಲಿ ಯಾವ ಶಕ್ತಿಯೂ ತಡೆಯಲಾರದೆಂದು ನಿಸ್ಸಂಶಯವಾಗಿ ತಿಳಿದಮೇಲೆ ಮುಂದೆ ಏನಾಗುವುದೆಂಬುದನ್ನು ಆಲೋಚಿಸದೆ ನಾನು ಮಲಗುವೆನು. ಪುನಃ ಪುನಃ ನನಗೆ ಜನ್ಮ ಪ್ರಾಪ್ತವಾಗಲಿ. ಸಾವಿರಾರು ಕಷ್ಟ ನಷ್ಟಗಳನ್ನು

ಅನುಭವಿಸಲು ಸಿದ್ಧನಾಗಿರುವೆನು. ಇದರಿಂದ, ಇರುವ ಒಬ್ಬನೇ ದೇವರನ್ನು, ಎಲ್ಲಾ ಜೀವಿಗಳ ಮೊತ್ತವನ್ನು ನಾನು ಪೂಜೆ ಮಾಡುವೆ. ಎಲ್ಲಕ್ಕಿಂತ ಹೆಚ್ಚಾಗಿ ದುರುಳನಾದ ನನ್ನ ದೇವರನ್ನು—ದುಃಖಿಯಾದ ನನ್ನ ದೇವರನ್ನು, ಎಲ್ಲಾ ಜನನಾಂಗದ ಎಲ್ಲಾ ಜಾತಿಯ ದೀನರಾದ ನನ್ನ ದೇವರನ್ನು ಪೂಜಿಸಬೇಕೆಂಬುವುದೆ ನನ್ನ ಪ್ರಾರ್ಥನೆಯ ಪರಮ ಗುರಿ.

"ಯಾರು ಶ್ರೀಮಂತರಲ್ಲಿ ಮತ್ತು ಬಡವರಲ್ಲಿರುವನೋ, ಯಾರು ಪಾಪಿ ಪುಣ್ಯಾತ್ಮ ದೇವ ಮತ್ತು ಕೀಟವಾಗಿರುವನೋ, ಅವನ ಪೂಜೆಯೆ ಪ್ರತ್ಯಕ್ಷವಾದ ತಿಳಿಯಬಹುದಾದ, ನಿಜವಾದ ಸರ್ವಾಂತರ್ಯಾಮಿಯ ಪೂಜೆ. ಉಳಿದ ಎಲ್ಲಾ ವಿಗ್ರಹಗಳನ್ನು ಚೂರು ಮಾಡು."

"ಯಾರಿಗೆ ಹಿಂದಿನ ಜನ್ಮವಿಲ್ಲವೋ, ಮುಂದೆ ಜನ್ಮವಿರದೋ, ನಾವು ಬರುವುದು ಹೋಗುವುದು ಇಲ್ಲವೋ, ಯಾರಲ್ಲಿ ನಾವು ಹಿಂದೆ ಯಾವಾಗಲೂ ಐಕ್ಯರಾಗಿದ್ದವೋ ಮತ್ತು ಮುಂದೆ ಇರುವೆವೋ ಅವನನ್ನು ಪೂಜಿಸು. ಉಳಿದೆಲ್ಲ ವಿಗ್ರಹಳನ್ನು ಚೂರು ಮಾಡು"

ನನಗೆ ಕಾಲವಿರುವುದು ಅಲ್ಪ. ನಾದು ಏನನ್ನು ಹೇಳಬೇಕೆಂದಿರುವೆನೋ ಅದನ್ನು ವ್ಯಕ್ತಪಡಿಸುವೆನು. ಕೆಲವರಿಗೆ ಅದರಿಂದ ವ್ಯಥೆಯಾಗಬಹುದು. ಕೆಲವರಿಗೆ ಅದರಿಂದ ಕೋಪವಾಗ ಬಹುದು. ಇದಾವುದನ್ನು ಲೆಕ್ಕಿಸದೆ ಹೊರಗೆಡಹುವೆನು ಆದಕಾರಣ, ಪ್ರಿಯ ಮ—ನನ್ನ ಬಾಯಿಂದ ಏನೂ ಬಿದ್ದರೂ ನೀನು ಅಂಜಧಿರು. ಏಕೆಂದರೆ ನನ್ನ ಹಿಂದಿರುವ ಶಕ್ತಿ ವಿವೇಕಾನಂದನಲ್ಲ, ಆದರೆ ದೇವರು. ಯಾವುದು ಹಿತವೆಂಬುದು ಆತನಿಗೆ ಗೊತ್ತಿದೆ. ನಾನು ಪ್ರಪಂಚವನ್ನು ಮೆಚ್ಚಿಸಲೆತ್ನಿಸುವುದು ಪ್ರಪಂಚಕ್ಕೆ ನೋವನ್ನುಂಟುಮಾಡಿದಂತೆ. ಬಹುಮತದವರ ವಾಣಿ ತಪ್ಪು. ಅವರು ಆಳುತ್ತಿದ್ದರೂ, ಪ್ರಪಂಚ ಹೀನಸ್ಥಿತಿಯಲ್ಲಿರುವುದನ್ನು ನೋಡುವೆವು. ಪ್ರತಿಯೊಂದು ಹೊಸ ಭಾವನೆಯೂ ಒಂದು ವಿರೋಧವನ್ನು ಎಬ್ಬಿಸಲೇಬೇಕು—ನಾಗರಿಕರಲ್ಲಿ ಗೌರವ ತಾತ್ಸಾರ—ಅನಾಗರಿಕರಲ್ಲಿ ಮೃಗೀಯ ಕೂಗಾಟ ಮತ್ತು ಅನಿಷ್ಟವಾದ ಅಪವಾದಗಳು ಬರುವುವು.

ಈ ಮಣ್ಣು ಹುಳುಗಳು ಕೂಡ ನೇರವಾಗಿ ನಿಲ್ಲಬೇಕು. ಮಕ್ಕಳು ಕೂಡ ಬೆಳಕನ್ನು ನೋಡಬೇಕು. ಅಮೇರಿಕಾದವರು

ಹೊಸ ಸುರಾಪಾನಾದಿಂದ ಉನ್ಮತ್ತರಾಗಿರುವರು. ನಮ್ಮ ದೇಶದ ಮೇಲೆ ಅಭಿವೃದ್ಧಿಯ ನೂರಾರು ತರಂಗಗಳು ಬಂದುಹೋಗಿವೆ. ಯಾವ ಮಗುವೂ ಇನ್ನು ತಿಳಿದುಕೊಳ್ಳಲಾರದ ಬುದ್ಧಿವಾದವನ್ನು ನಾವು ಕಲಿತಿರುವೆವು. ಇದೆಲ್ಲ ವ್ಯರ್ಥ. ಈ ಭಯಾನಕ ಪ್ರವಾಹವೆಲ್ಲ ಬರಿಯ ಮಾಯೆ—ತ್ಯಾಗ ಮಾಡು. ಸೌಖ್ಯದಿಂದಿರು.—ಕಾಮಕಾಂಚನ ಗಳಾಸೆಯನ್ನು ತೊರೆ. ಬೇರೆ ಯಾವ ಬಂಧನವೂ ಇಲ್ಲ. ಮದುವೆ, ಕಾಮ, ಕಾಂಚನ ಇವೇ ಜೀವಂತ ಪಿಶಾಚಿಗಳ ತಂಡ. ಪ್ರಾಪಂಚಿಕ ಪ್ರೀತಿಯೆಲ್ಲ ದೇಹದಿಂದ ಮೊದಲಾಗುವುದು. ಕಾಮವೆಲ್ಲ, ಕಾಂಚನ ವೆಲ್ಲ, ಹೋದಮೇಲೆ ಆಧ್ಯಾತ್ಮಿಕ ದರ್ಶನಕ್ಕೆ ಕಣ್ಣುಗಳು ತೆರೆಯು ವುವು. ಆತ್ಮ ತನ್ನ ಸ್ವಂತ ಅನಂತ ಶಕ್ತಿಯನ್ನು ಹೊಂದುವುದು.

ಅನವರತವೂ ನಿನ್ನ ವಿಶ್ವಾಸಪೂರ್ವಕ,

ವಿವೇಕಾನಂದ.

೮೭

ಅಲ್ಮೋರ.

೧೦ನೇ ಜುಲೈ ೧೮೯೭.

ಪ್ರಿಯ ಅಖಂಡಾನಂದ,

ಇಂದು ನೀನು ನನಗೆ ಕಳುಹಿಸಿದ ನಮ್ಮ ಸಂಘದ ಗುರಿಯು ಕರಡು (Proof) ಪತ್ರಗಳನ್ನು ತಿದ್ದಿ ಕಳುಹಿಸುತ್ತೇನೆ. ನಮ್ಮ ಸಂಘ ದವರು ಓದಿದ ವಿಧಿ ನಿಯಮಗಳ ಭಾಗ ತುಂಬ ತಪ್ಪಿನಿಂದ ಕೂಡಿದೆ. ಅದನ್ನು ಚೆನ್ನಾಗಿ ತಿದ್ದಿ ಪುನಃ ಮುದ್ರಿಸು. ಇಲ್ಲದೇ ಇದ್ದರೆ ಜನರು ನೋಡಿ ನಗುವರು.

ಬರ್ಹಾಂಪುರದಲ್ಲಿ ನಡೆಯುತ್ತಿರುವ ಕೆಲಸ ಬಹಳ ಚೆನ್ನಾಗಿದೆ. ಅಂತಹ ಕೆಲಸಗಳು ಜಯಪ್ರದವಾಗುವುವು. ಸಿದ್ಧಾಂತಗಳು ಮತ್ತು ಮತಗಳು ಹೃದಯವನ್ನು ಮುಟ್ಟಬಲ್ಲವೆ? ಕೆಲಸ, ಕೆಲಸ. ಆದರ್ಶ ಜೀವನವನ್ನು ಅನುಸರಿಸು.—ಸಿದ್ಧಾಂತಗಳು ಮತ್ತು ಅಭಿಪ್ರಾಯಗ ಳಿಂದ ಪ್ರಯೋಜನವೇನು? ತತ್ತ್ವ ಯೋಗ, ತಪಸ್ಸು—ಪೂಜೆಯುಮನೆ—

ನಿನ್ನ ಅನ್ನ ಅಥವಾ ತರಕಾರಿಯ ನೈವೇದ್ಯ—ಇವುಗಳೆಲ್ಲ ಒಬ್ಬ ಮನುಷ್ಯನ ಅಥವಾ ಒಂದು ದೇಶದ ಧರ್ಮವಾಗಿದೆ. ಪರೋಪಕಾರ ಒಂದು ಮಹತ್ತಾದ ವಿಶ್ವ ಧರ್ಮ. ಗಂಡಸರು, ಹೆಂಗಸರು, ಅಬಾಲ ವೃದ್ಧರು, ಪಂಚಮನವರೆಗೂ, ಎಲ್ಲಾ ಪ್ರಾಣಿಗಳವರೆಗೂ—ಎಲ್ಲರೂ ಈ ಧರ್ಮವನ್ನು ತಿಳಿದುಕೊಳ್ಳಬಹುದು. ಬರಿಯ ಅಭಾವ ಸೂಚಕವಾದ ಧರ್ಮದಿಂದ ಏನಾದರೂ ಪ್ರಯೋಜನವಿದೆಯೇನು? ಕಲ್ಲು ಎಂದಿಗೂ ಅಶುದ್ಧವಾಗುವುದಿಲ್ಲ. ಹಸು ಎಂದಿಗೂ ಸುಳ್ಳನ್ನು ಹೇಳುವುದಿಲ್ಲ, ಕಳ್ಳತನ ಅಥವಾ ದರೋಡೆಯನ್ನು ಮಾಡುವುದಿಲ್ಲ. ಆದರೆ ಇದರಿಂದ ಪ್ರಯೋಜನವೇನು? ಆಗಲಿ ನೀನು ಕದಿಯುವುದಿಲ್ಲ, ಸುಳ್ಳು ಹೇಳು ವುದಿಲ್ಲ, ಸ್ತ್ರೀ ವ್ಯಾಮೋಹಿಯಲ್ಲ; ಆದರೆ ದಿನಕ್ಕೆ ನಾಲ್ಕು ಗಂಟೆ ಧ್ಯಾನ ಮಾಡುತ್ತಿ. ಭಕ್ತಿಯಿಂದ ಬಹಳ ಹೊತ್ತು ಎರಡು ವೇಳೆ ಗಂಟೆ ಬಾರಿಸುತ್ತಿ, ಎಂದು ಇಟ್ಟುಕೊಳ್ಳೋಣ. ಆದರೂ ಇವುಗಳಿಂದ ಏನು ಪ್ರಯೋಜನ? ನೀನು ಮಾಡಿದ ಕೆಲಸ ಸ್ವಲ್ಪವಾದರೂ, ಬರ್ಹಾಂ ಪುರವು ನಿನಗೆ ಚಿರಕಾಲವೂ ಕೃತಜ್ಞವಾಗಿರುತ್ತದೆ. ಈಗ ನೀನು ಹೇಳಿದರೆ ಜನರು ಅದನ್ನು ಮಾಡುವರು. ಈಗ ನೀನು ಇನ್ನೆಂದಿಗೂ ಜನರೊಂದಿಗೆ "ರಾಮಕೃಷ್ಣರು ಅವತಾರ ಪುರುಷರೆಂದು" ವಾದ ಮಾಡಬೇಕಾಗಿಲ್ಲ. ಅದಿಲ್ಲದೆ ಬರೀ ಉಪನ್ಯಾಸದಿಂದ ಪ್ರಯೋಜನ ವೇನು? ಬಾಯಿಮಾತಿನಿಂದ ಹೊಟ್ಟೆ ತುಂಬುವುದೆ? ನೀನು ಹತ್ತು ಜಿಲ್ಲೆಗಳಲ್ಲಿ ಹಾಗೆ ಮಾಡಿದರೆ ಹತ್ತು ಜಿಲ್ಲೆಗಳೂ ನಿನ್ನದಾಗಿ ಎಂದೆಂದಿಗೂ ಹಾಗೆಯೆ ಇರುವುದು. ನೀನು ಬುದ್ಧಿವಂತನಾದ ಹುಡುಗ. ಆದಕಾರಣ, ಸಧ್ಯಕ್ಕೆ ಕೆಲಸದ ಇಲಾಖೆಯ ಮೇಲೆ ಗಮನ ಕೊಡು. ಕಾಯಾ ವಾಚಾ ಮನಸಾ ಅವುಗಳ ಪ್ರಯೋಜನ ಮಾತ್ರ ಹೆಚ್ಚುವಂತೆ ಮಾಡು. ಮನೆಯಿಂದ ಮನೆಗೆ ಹೋಗುವುದಕ್ಕೆ ಕೆಲವು ಹುಡುಗರನ್ನು ಜತೆಗೂಡಿಸು. ಅಲಾಖಿಯ ಸಾಧುಗಳಂತೆ ಅವರು ತಮಗೆ ಏನು ಸಿಕ್ಕುವುದೋ—ಹಣ—ಅಥವಾ ಹಳೆಯ ಬಟ್ಟೆ—ಅಕ್ಕಿ— ತಿನ್ನುವ ಸಾಮಾನುಗಳು—ಅಥವಾ ಏನು ಸಿಕ್ಕಿದರೆ ಅವುಗಳನ್ನು ತೆಗೆದುಕೊಂಡು ಬರಲಿ. ನಂತರ ಅವುಗಳನ್ನು ದೀನರಿಗೆ ಹಂಚು. ಅದು

ಕೆಲಸ; ನಿಜವಾದ ಕೆಲಸ—ನಂತರ ಜನರಿಗೆ ನಂಬಿಕೆ ಹುಟ್ಟುವುದು. ಏನು ಹೇಳಿದರೆ ಅದನ್ನು ಮಾಡುವರು.

ಕಲ್ಕತ್ತಾ ಸಭೆಯ ಖರ್ಚು ಕಳೆದು ಮಿಕ್ಕ ಎಲ್ಲಾ ದುಡ್ಡನ್ನು ಕ್ಷಾಮ ನಿವಾರಣೆಗೆ, ಅಥವಾ ಕಲ್ಕತ್ತೆಯಲ್ಲಿ ವಾಸಿಸುವ ಅನೇಕ ಬಡವರಿಗೆ ಕೊಡು. ಸ್ಮಾರಕ ಭವನ ಮುಂತಾದುವುಗಳು ಬೇಕಿಲ್ಲ. ದೇವರು ತನಗೆ ಯಾವುದು ಒಳ್ಳೆಯದೆಂದು ತೋರುವುದೊ ಅದನ್ನು ಮಾಡುತ್ತಾನೆ. ಸಧ್ಯಕ್ಕೆ ನಾನು ಆರೋಗ್ಯದಿಂದ ಇರುವೆನು . . . . .

ಸಾಮಗ್ರಿಯಗಳನ್ನು ಏತಕ್ಕೆ ನೀನು ಶೇಖರಿಸುತ್ತಿಲ್ಲ. ನಾನೆ ಹೋಗಿ ಪತ್ರಿಕೆಯನ್ನು ಹೊರಡಿಸುವೆನು. ದಯೆ ಪ್ರೀತಿಗಳಿಂದ ಪ್ರಪಂಚವನ್ನೇ ಕೊಳ್ಳಬಹುದು. ಉಪನ್ಯಾಸ, ಪುಸ್ತಕ, ತತ್ತ್ವ, ಇವು ಅದಕ್ಕಿಂತ ಕಡಿಮೆ. ದೀನರ ಸೇವೆಗೋಸುಗವಾಗಿ ಇಂತಹ ಒಂದು ಶಾಖೆಯನ್ನು ತೆರೆಯಬೇಕೆಂದು ದಯವಿಟ್ಟು ಅವನಿಗೊಂದು ಕಾಗದ ಬರೆ.

ಪೂಜೆಯ ಖರ್ಚನ್ನು ತಿಂಗಳಿಗೆ ಎರಡು ರೂಪಾಯಿಗೆ ಇಳಿಸು. ದೇವರ ಮಕ್ಕಳು ಉಪವಾಸದಿಂದ ನರಳುತ್ತಿರುವರು. . . . . ನೀರು ಮತ್ತು ತುಳಸಿ ದಳದಿಂದ ಮಾತ್ರ ಪೂಜಿಸು. ದೇವರ ನೈವೇದ್ಯಕ್ಕೆ ಕೊಡುವ ಹಣವನ್ನು, ದೀನರಲ್ಲಿರುವ ಜೀವಂತನಾದ ದೇವರಿಗೆ, ಆಹಾರವನ್ನು ನೈವೇದ್ಯ ಮಾಡುವುದರಲ್ಲಿ ವ್ಯಯ ಮಾಡಲಿ. ಆಗ ಅವನ ದಯೆ ಎಲ್ಲರ ಮೇಲೂ ಬರುವುದು. ಜ—ಗೆ ಇಲ್ಲಿ ಶರೀರ ಸ್ಥಿತಿ ಸರಿಯಾಗಿಲ್ಲ. ಆದಕಾರಣ ಇಂದು ಕಲ್ಕತ್ತೆಗೆ ಹೊರಟನು. ನಾನು ಪುನಃ ದಿವಾಲ್ ಧಾರಿಗೆ ನಾಳೆ ಹೋಗುತ್ತೇನೆ. ನನ್ನ ಪ್ರೀತಿಯನ್ನು ನೀನು ಸ್ವೀಕರಿಸಿ ಇತರರಿಗೂ ತಿಳಿಸು.

ವಿಶ್ವಾಸಪೂರ್ವಕ ನಿನ್ನ
ವಿವೇಕಾನಂದ.

ಆಲ್ಮೋರ.
೨೯ನೇ ಜುಲೈ ೧೮೯೭.

ಪ್ರಿಯ ಶ್ರೀಮತಿ ನೋಬಲ್,

ಸ—ನಿಂದ ಒಂದು ಪತ್ರ ನನಗೆ ತಲಪಿತು. ನೀನು ಭರತ ಖಂಡಕ್ಕೆ ಬಂದು ಸ್ಥಿತಿಯನ್ನು ಕಣ್ಣಾರೆ ನೋಡುತ್ತೀನೆಂದು ನಿಶ್ಚಯ ಮಾಡಿರುವಿ ಎಂದು ತಿಳಿಸುತ್ತಾನೆ. ಆದರೆ ನಾನು ಶ್ರೀಮತಿ—ಯಿಂದ ನಿನ್ನ ಹಂಚಿಕೆ ತಿಳಿದ ಮೇಲೆ ಇನ್ನೊಂದು ಪತ್ರವನ್ನು ಒರೆಯುವ ಆವಶ್ಯಕ ಉಂಟಾಯಿತು. ಇದರಲ್ಲಿ ಮುಚ್ಚುಮರೆಯೊಂದೂ ಇಲ್ಲದೇ ಇರುವುದು ಒಳ್ಳೆಯದು.

ಈಗ ನಾನು ನಿನಗೆ ಹೃತ್ಪೂರ್ವಕವಾಗಿ ಹೇಳುತ್ತೇನೆ. ಭರತ ಖಂಡದ ಕೆಲಸದಲ್ಲಿ ನಿನಗೆ ಬಹಳ ದೊಡ್ಡ ಭವಿಷ್ಯವಿದೆ ಎಂದು ನನಗೆ ಈಗ ನಿರ್ಧಾರವಾಯಿತು. ಭಾರತೀಯರಿಗೆ ಕೆಲಸ ಮಾಡುವುದಕ್ಕೆ ಪುರುಷನಲ್ಲ ಸ್ತ್ರೀ, ನಿಜವಾದ ಸಿಂಹಿಣಿ ಬೇಕಾಗಿರುವುದು.

ಭರತಖಂಡ ಇನ್ನೂ ಮಹಾ ಮಹಿಳೆಯರನ್ನು ಹೆತ್ತಿಲ್ಲ. ಬೇರೆ ದೇಶಗಳಿಂದ ಅವರನ್ನು ಎರವಲಾಗಿ ತೆಗೆದುಕೊಳ್ಳಬೇಕಾಗಿದೆ. ನಿನ್ನ ವಿದ್ಯೆ ನಿಶ್ಕಾಪಟ್ಯ, ಪವಿತ್ರತೆ, ಅನಂತ ಪ್ರೀತಿ, ಸ್ಥಿರ ಸಂಕಲ್ಪ, ಎಲ್ಲಕ್ಕಿಂತ ಹೆಚ್ಚಾಗಿ ನಿನ್ನ ನಾಡಿಯಲ್ಲಿ ಸಂಚರಿಸುವ ಕೆಲ್ಟ್ ಜನಾಂಗದ ರಕ್ತ ಇವು ನಿನ್ನನ್ನು ನಮಗೆ ಬೇಕಾದ ಮಹಿಳೆಯನ್ನಾಗಿ ಮಾಡಿವೆ.

ಆದರೂ ತೊಂದರೆಗಳು ಹಲವಿವೆ. ಇಲ್ಲಿರುವ ದುಃಖ, ಮೂಢ ನಂಬಿಕೆ, ಗುಲಾಮಗಿರಿ ಇವನ್ನು ನೀನು ಊಹಿಸಲಾರೆ. ನೀನು, ಅರ್ಧ ಬೆತ್ತಲೆ ಇರುವ ಪುರುಷರು, ಸ್ತ್ರೀಯರು, ವಿಚಿತ್ರವಾದ ಜಾತಿ ಮತ್ತು ತಮ್ಮದೇ ಒಂದು ಪ್ರತ್ಯೇಕತೆ ಇವುಗಳ ಮಧ್ಯದಲ್ಲಿರಬೇಕಾಗುವುದು. ಅಂಜಿಕೆಯಿಂದ ಅಥವಾ ದ್ವೇಷದಿಂದ ಬಿಳೀ ಜನರಿಂದ ದೂರವಿರುವರು. ಅವರಿಂದ ವಿಪರೀತವಾಗಿ ದ್ವೇಷಕ್ಕೆ ಗುರಿಯಾಗಬೇಕು. ಅದಲ್ಲದೆ ಬಿಳಿಯ ಜನರು ನೀನೊಬ್ಬಳು ಹುಚ್ಚಿಯೆಂದು ತಿಳಿದು ನಿನ್ನ ಪ್ರತಿಯೊಂದು ವ್ಯವಹಾರವನ್ನು ಅನುಮಾನದಿಂದ ನೋಡುವರು.

ನಂತರ ಹವಾಗುಣವಾದರೋ ವಿಪರೀತ ಶಖೆ. ಅನೇಕ ಸ್ಥಳಗಳಲ್ಲಿ ನಮ್ಮ ಚಳಿಗಾಲ ನಿಮ್ಮ ಬೇಸಗೆಯ ಕಾಲದಂತೆ ಇರುವುದು. ದಕ್ಷಿಣದಲ್ಲಿಯಾದರೋ ಯಾವಾಗಲೂ ಬಿಸಿಲು ಉರಿಯುತ್ತಲೇ ಇರುವುದು.

ಪಟ್ಟಣಗಳಿಂದ ಹೊರಗೆ ಇರುವ ಸ್ಥಳಗಳಲ್ಲಿ, ಐರೋಪ್ಯ ಜನರಿಗೆ ಸುಖವನ್ನು ಕೊಡುವ ಒಂದು ಅನುಕೂಲವಾದರೂ ಸಿಕ್ಕು ವುದಿಲ್ಲ. ಇಷ್ಟೊಂದು ಅನಾನುಕೂಲಗಳಿದ್ದರೂ ನೀನು ಕೆಲಸ ಮಾಡಲು ನಿರ್ಧರಿಸಪಟ್ಟಿದ್ದರೆ ಬರಬಹುದು. ನಿನಗೆ ನೂರು ಸುಖಾ ಗಮನಗಳು. ನಾನಾದರೋ ಎಲ್ಲಾ ಕಡೆಯಂತೆ ಇಲ್ಲಿಯೂ ಕೂಡ ಒಬ್ಬ ಅನಾಮಧೇಯ. ಆದರೆ ನನಗೆ ಇರುವ ಅಲ್ಪ ಪ್ರಭಾವವನ್ನು ನಿನ್ನ ಸಹಾಯಕ್ಕೆ ಉಪಯೋಗಿಸುತ್ತೇನೆ. ನೀನು ಕಾರ್ಯರಂಗಕ್ಕೆ ಕಾಲಿಡುವುದಕ್ಕೆ ಮುಂಚೆ ಚೆನ್ನಾಗಿ ಆಲೋಚಿಸಿ ನೋಡಬೇಕು. ಕೆಲಸವಾದಮೇಲೆ ನೀನು ಇದರಲ್ಲಿ ಸೋತರೆ ಅಥವಾ ಬೇಜಾರಾದರೆ, ನಾನು ಮಾತ್ರ ನೀನು ಭರತಖಂಡಕ್ಕೆ ಸಹಾಯ ಮಾಡಲಿ ಹೋಗಲಿ, ನೀನು ವೇದಾಂತವನ್ನು ಸ್ವೀಕರಿಸಲಿ ನಿರಾಕರಿಸಲಿ, ಜೀವನವಿರುವ ವರೆವಿಗೂ ನಿನ್ನೊಂದಿಗೆ ನಿಲ್ಲುವೆನೆಂದು ಮಾತು ಕೊಡುವೆನು. "ಆನೆಯ ಕೊಂಬು ಹೊರಗೆ ಬರುವುದೇ ವಿನಃ ಒಳಗೆ ಹೋಗುವುದಿಲ್ಲ" ಅದರಂತೆಯೇ ಮನುಷ್ಯನ ಮಾತುಗಳು ಕೂಡ ಎಂದಿಗೂ ಹಿಂತೆಗೆಯ ಲಾಗುವುದಿಲ್ಲ. ಅದನ್ನು ನಾನು ನಿನಗೆ ಮಾತು ಕೊಡುತ್ತೇನೆ ಪುನಃ ನಾನು ನಿನಗೆ ಸ್ವಲ್ಪ ಎಚ್ಚರಿಕೆಯನ್ನು ಕೊಡಬೇಕಾಗಿದೆ. ನೀನು ನಿನ್ನ ಕಾಲಿನ ಮೇಲೆ ನಿಂತುಕೊಳ್ಳಬೇಕು. —ಆಕೆಯ ಅಥವಾ ಇನ್ನು ಯಾರಾದರ ಸಹಾಯಕ್ಕೆ ನಂಬಕೂಡದು. —ಆಕೆಯು ತನ್ನ ರೀತಿಯ ಲ್ಲೇನೊ ಬಹಳ ಒಳ್ಳೆಯ ಹೆಂಗಸು. ಆದರೆ ದುರದೃಷ್ಟವಶಾತ್ ಆಕೆ ಮಗುವಾಗಿದ್ದಾಗ, ತಾನು ಹುಟ್ಟುನಾಯಕಿ, ಪ್ರಪಂಚವನ್ನು ಎಚ್ಚರಿಸು ವುದಕ್ಕೆ ಹಣವಲ್ಲದೆ ಬೇರೆ ಯಾವ ಗುಣಗಳೂ ಆವಶ್ಯಕವಿಲ್ಲವೆಂಬ ಅಭಿಪ್ರಾಯ ಅವಳ ತಲೆಯನ್ನು ಹೊಕ್ಕಿತು! ಅವಳೆಷ್ಟು ಪ್ರಯತ್ನ ಪಟ್ಟರೂ ಅದಕ್ಕೆ ವಿರೋಧವಾಗಿ ಈ ಭಾವನೆ ಅವಳ ಮನಸ್ಸಿನಲ್ಲಿ

ಅನೇಕ ವೇಳೆ ಬರುತ್ತಿರುವುದು. ಕೆಲವು ದಿನಗಳಲ್ಲಿ ಅವಳೊಂದಿಗೆ ಇರುವುದಕ್ಕೆ ನಿನಗೆ ಸರಿಹೋಗುವುದಿಲ್ಲವೆಂದು ತಿಳಿಯುವೆ. ಸಧ್ಯಕ್ಕೆ ಅವಳಿಗೆ ಕಲ್ಕತ್ತೆಯಲ್ಲಿ ತನಗೆ, ನಿನಗೆ, ಮತ್ತು ಬರಬಹುದಾದ ಐರೋಪ್ ಮತ್ತು ಅಮೇರಿಕಾ ದೇಶೀಯ ಸ್ನೇಹಿತರಿಗೆ ಒಂದು ಮನೆಯನ್ನು ಮಾಡಬೇಕೆಂಬ ಆಲೋಚನೆ ಇದೆ.

ಇದೇನೊ ಅವಳ ಒಳ್ಳೆಯ ದಯಾಳುತನದ ಕೆಲಸ. ಆದರೆ ಅವಳ ನಾಯಕತ್ವದ ಹಂಚಿಕೆ, ಮುಂದಿನ ಕಾರಣಗಳಿಗಾಗಿ ಎಂದಿಗೂ ಫಲಿಸುವುದಿಲ್ಲ—ಮುಂಗೋಪ, ತನ್ನ ಸಮಾನ ಯಾರೂ ಇಲ್ಲವೆಂಬ ಅಹಂಕಾರ, ಮತ್ತು ವಿಪರೀತಿ ಮಾನಸಿಕ ಚಂಚಲತೆ. ಹಲವರೊಂದಿಗೆ ಸ್ನೇಹ ದೂರದಿಂದ ಒಳ್ಳೆಯದು. ಸ್ವತಂತ್ರವಾಗಿ ನಿಲ್ಲುವ ವ್ಯಕ್ತಿ ಗಳೊಂದಿಗೆ ಎಲ್ಲಾ ಸರಿಹೋಗುವುದು.

ಶ್ರೀಮತಿ—ಒಂದು ನಾರೀರತ್ನ, ಎಷ್ಟೋ ಒಳ್ಳೆಯವಳು. ಎಷ್ಟೋ ದಯಾಳು. ಭಾರತೀಯರನ್ನು ದ್ವೇಷಿಸದವರು ಅವರು ಮಾತ್ರ. —ಅವರೂ ಕೂಡ ವಿರೋಧವಲ್ಲ. ಶ್ರೀಮಾನ್ ಮತ್ತು ಶ್ರೀಮತಿ ಇವರುಗಳು ಮಾತ್ರ ನಮಗೆ ಏನೂ ಒಳ್ಳೆಯದನ್ನು ಮಾಡು ತ್ತೇವೆಂಬ ಅಹಂಕಾರದಿಂದ ಬಂದವರಲ್ಲ. ಆದರೆ ಅವರಲ್ಲಿ ಯಾವ ರೀತಿ ಕೆಲಸ ಮಾಡಬೇಕೆಂಬ ಯೋಚನೆ ಸ್ಪಷ್ಟವಾಗಿಲ್ಲ. ನೀನು ಬರುವಾಗ ನಿನ್ನೊಂದಿಗೆ ಕೆಲಸ ಮಾಡುವುದಕ್ಕೆ ಅವಳನ್ನು ಕರೆತರ ಬಹುದು. ಅದರಿಂದ ನಿಜವಾಗಿ ಅವರಿಗೂ ಮತ್ತು ನಿನಗೂ ಸಹಾಯ ವಾಗುವುದು. ಆದರೆ ಕೊನೆಗೆ ತನ್ನ ಕಾಲಮೇಲೆ ನಿಂತುಕೊಳ್ಳುವುದು ಸಂಪೂರ್ಣವಾಗಿ ಆವಶ್ಯಕ. ಈ ಶರದೃತುವಿನಲ್ಲಿ ಅಮೇರಿಕಾದಿಂದ ನನ್ನ ಇಬ್ಬರು ಸ್ನೇಹಿತರು ಬಾಸ್ಟನ್ನಿನಿಂದ, ಶ್ರೀಮತಿ—ಮತ್ತು ಕುಮಾರಿ ಇವರು ಇಂಡಿಯಾ ದೇಶವನ್ನು ನೋಡುವುದಕ್ಕೆ ಬರುತ್ತಾರೆ ಎಂದು ತಿಳಿದೆ. ಕುಮಾರಿ—ಇವಳನ್ನು ನೀನು ಆಗಲೇ ಲಂಡನ್ನಿನಲ್ಲಿ ನೋಡಿರುವೆ. —ಪ್ಯಾರಿಸ್ ಪೋಶಾಕಿನ ಯೌವನಸ್ಥೆಯಾದ ಅಮೇರಿಕಾ ಮಹಿಳೆ. ಶ್ರೀಮತಿ—ಸುಮಾರು ಐವತ್ತು ವರುಷ ವಯಸ್ಸಿನವಳು. ಅಮೇರಿಕಾದಲ್ಲಿ ನನಗೆ ಬಹಳ ಒಳ್ಳೆಯ ಸ್ನೇಹಿತ

ಳಾಗಿದ್ದಳು. ಪ್ರಯಾಣದ ಬೇಜಾರು ನಿವಾರಣೆಗಾಗಿ ನೀನು ಅವರನ್ನು ಸೇರಬಹುದೆಂದು ಅವರು ಯೂರೋಪ್ ಮಾರ್ಗದ ಮೂಲಕವಾಗಿ ಬರುತ್ತಿರುವರೆಂದು ನಾನು ನಿನಗೆ ಸೂಚಿಸುತ್ತೇನೆ.

ಬಹಳ ದಿನಗಳಾದ ಮೇಲೆ ಸ—ನಿಂದ ಪತ್ರವು ತಲಪಿತು ಸಂತೋಷವಾಯಿತು. ಬಹಳ ನಿರಾಶಾ ಸೂಚಕವಾಗಿತ್ತು. ಲಂಡನ್ನಿನ ಕಾರ್ಯ ನಿಂತು ಹೋದುದಕ್ಕೆ ಅವನು ನಿರಾಶನಾದಂತೆ ತೋರುತ್ತದೆ.

ಶಾಶ್ವತವಾದ ಪ್ರೀತಿಯೊಂದಿಗೆ—ಅನವರತವೂ ದೇವರಲ್ಲಿ ನಿನ್ನ

ವಿವೇಕಾನಂದ.

೮೯

ದೇವಘರ್,
೩ ನೇ, ಜನವರಿ ೧೮೯೮.

ಪ್ರಿಯ ತಾಯೆ,

ತಮ್ಮ ಪತ್ರದಲ್ಲಿ ಕೆಲವು ಗುರುತರವಾದ ಪ್ರಶ್ನೆಗಳೆದ್ದಿರುವುವು. ಈ ಒಂದು ಸಣ್ಣ ಪತ್ರದಲ್ಲಿ ಅವುಗಳಿಗೆಲ್ಲ ಸಂಪೂರ್ಣವಾಗಿ ಉತ್ತರ ಹೇಳುವುದಕ್ಕೆ ಸಾಧ್ಯವಿಲ್ಲ. ಆದರೂ ಅವುಗಳಿಗೆ ಸಾಧ್ಯವಾದಷ್ಟು ಸಂಕ್ಷೇಪವಾಗಿ ಉತ್ತರ ಕೊಡುತ್ತೇನೆ.

(೧) ಋಷಿ, ಮುನಿ, ಅಥವಾ ದೇವರು ಯಾರಾಗಲಿ—ಸಮಾಜದ ಮೇಲೆ ಕಟ್ಟುಗಳನ್ನು ವಿಧಿಸುವುದಕ್ಕೆ ಸಾಧ್ಯವಿಲ್ಲ. ಆವಶ್ಯಕತೆಯ ಆವೇಗ ಹೆಚ್ಚಿದಾಗ, ಸಮಾಜ ಆತ್ಮರಕ್ಷಣೆಗಾಗಿ ಕೆಲವು ಆಚಾರಗಳನ್ನು ಜಾರಿಗೆ ತರುವುದು. ಋಷಿಗಳು ಅಂತಹ ಆಚಾರವನ್ನು ಬರೆದಿಟ್ಟಿರುವರು. ಹೇಗೆ ಮನುಷ್ಯನು ತನಗೆ ಕೆಲವು ಅಭ್ಯಾಸಗಳಿಂದ ಭವಿಷ್ಯದಲ್ಲಿ ಬಹಳ ತೊಂದರೆಗೆ ಈಡಾದರೂ ತಾತ್ಕಾಲಿಕ ಪ್ರಾಣಸಂರಕ್ಷಣೆಗೆ ಯೋಗ್ಯವೆಂದು ತಿಳಿದು ಅದನ್ನು ಸ್ವೀಕರಿಸುವನೋ, ಅದರಂತೆಯೇ ಸಮಾಜವೂ ಕೂಡ ಅನೇಕ ವೇಳೆ ತತ್ಕಾಲಕ್ಕೆ ತನ್ನನ್ನು ರಕ್ಷಿಸಿಕೊಂಡರೂ, ಸಧ್ಯಕ್ಕೆ ತನ್ನ ಆತ್ಮ ರಕ್ಷಣೆಮಾಡಿದ ಅಭ್ಯಾಸಗಳೇ ಕೊನೆಗೆ ಬಹಳ ದುಸ್ಥಿತಿಗೆ ತರುತ್ತವೆ.

ಉದಾಹರಣೆಗಾಗಿ ನಮ್ಮ ದೇಶದಲ್ಲಿ ವಿಧವಾ ವಿವಾಹಕ್ಕೆ ಇರುವ ಅಡ್ಡಿಯನ್ನು ತೆಗೆದು ಕೊಳ್ಳೋಣ. ಋಷಿಗಳು ಅಥವಾ ಇನ್ನು ಕೆಲವು ದೃಷ್ಟರು ಇವುಗಳಿಗೆ ಸಂಬಧಪಟ್ಟ ಕಾನೂನನ್ನು ಜಾರಿಗೆ ತಂದರು ಎಂದು ತಿಳಿದು ಕೊಳ್ಳಬೇಡಿ. ಹೆಂಗಸರನ್ನು ಸಂಪೂರ್ಣವಾಗಿ ತಮ್ಮ ಕೈ ಕೆಳಗೆ ಇಟ್ಟುಕೊಂಡಿರಬೇಕೆಂಬ ಆಸೆ ಇದ್ದರೂ, ಆ ಕಾಲದ ಸಮಾಜ ರಕ್ಷಣೆಗೆ ಅದು ಅತ್ಯಾವಶ್ಯಕವಾಗಿ ಕಂಡು ಬಂದುದರಿಂದ ಮಾತ್ರ, ಆ ನಿಯಮ ಗಳನ್ನು ಜಾರಿಗೆ ತರುವುದರಲ್ಲಿ ಜಯಶೀಲರಾದರೆ ಹೊರತು ಇಲ್ಲದೆ ಇದ್ದರೆ ಆಗುತ್ತಿರಲಿಲ್ಲ. ಈ ಪದ್ಧತಿಯ ಎರಡು ವಿಷಯಗಳನ್ನು ಮುಖ್ಯವಾಗಿ ಪರ್ಯಾಲೋಚಿಸಬೇಕು.

(*a*) ವಿಧವಾ ವಿವಾಹ ಕೆಳಗಿನ ವರ್ಗದಲ್ಲಿ ನಡೆಯುತ್ತವೆ.

(*b*) ಮೇಲಿನ ವರ್ಗದಲ್ಲಿ ಹೆಂಗಸರ ಸಂಖ್ಯೆ ಗಂಡಸರ ಸಂಖ್ಯೆಗಿಂತ ಹೆಚ್ಚು,

ಈಗ ಪ್ರತಿಯೊಂದು ಕನ್ಯೆಗೂ ವಿವಾಹವಾಗಬೇಕೆಂಬ ನಿಯಮ ವಿದ್ದರೆ ಒಬ್ಬೊಬ್ಬಳಿಗೆ ಒಬ್ಬನು ಗಂಡಸನ್ನು ಸಂಪಾದಿಸುವುದೆ ದುರ್ಲಭ ವಾಗುವುದು? ಹಾಗಿದ್ದರೆ ಒಬ್ಬೊಬ್ಬರಿಗೆ ಕ್ರಮೇಣ ಇಬ್ಬರು ಮೂವರನ್ನು ಹೇಗೆ ಒದಗಿಸುವುದು. ಆದುದರಿಂದ ಸಮಾಜ ಒಂದು ಪಕ್ಷಕ್ಕೆ ಅನಾನುಕೂಲವನ್ನುಂಟು ಮಾಡುವುದು. ಅಂದರೆ ಯಾರಿಗೆ ಆಗಲೇ ಒಮ್ಮೆ ಮದುವೆಯಾಗಿತ್ತೋ ಅವಳಿಗೆ ಮತ್ತೊಬ್ಬ ಗಂಡಸನ್ನು ಕೊಡುವ ಅವಕಾಶ ಕೊಡುವುದಿಲ್ಲ. ಹಾಗೆ ಸಮಾಜ ಅವಕಾಶ ಕೊಟ್ಟಿದ್ದರೆ ಕನ್ಯೆಯೊಬ್ಬಳಿಗೆ ಗಂಡಸಿಲ್ಲದೇ ಹೋಗಬೇಕಾಗುವುದು. ಅದಲ್ಲದೆ ವಿಧವಾ ವಿವಾಹ ಯಾವ ಜಾತಿಯಲ್ಲಿ ಪುರುಷರ ಸಂಖ್ಯೆ ಸ್ತ್ರೀಯರ ಸಂಖ್ಯೆಗಿಂತ ಹೆಚ್ಚು ಇರುವುದೋ ಅಲ್ಲಿ ಜಾರಿಯಲ್ಲಿರುವುದು. ಇದರ ವಿಚಾರದಲ್ಲಿ ಮೇಲೆ ಹೇಳಿದ ಆಕ್ಷೇಪಣೆಗೆ ಅವಕಾಶವಿಲ್ಲ. ಪಾಶ್ಚಾತ್ಯ ದೇಶಗಳಲ್ಲಿಯೂ ಕೂಡ ಮದುವೆ ಯಾಗದ ಹುಡಿಗಿಯರಿಗೆ ಗಂಡಸನ್ನು ಪಡೆಯಲು ಕ್ರಮೇಣ ಕಷ್ಟವಾಗುತ್ತಿರುವುದು.

ಜಾತಿ ಮತ್ತು ಇನ್ನು ಇತರ ಸಾಮಾಜಿಕ ಸಂಪ್ರದಾಯಗಳ ಸ್ಥಿತಿಯೂ ಅಷ್ಟೆ.

ಆದುದರಿಂದ ಯಾವುದಾದರೂ ಸಮಾಜಿಕ ನಿಯಮಗಳನ್ನು ಬದಲಾಯಿಸುವ ಅವಶ್ಯಕತೆ ಇದ್ದರೆ, ಮೊದಲು ಅದರ ಅವಶ್ಯಕತೆಗೆ ಕಾರಣವನ್ನು ಕಂಡು ಹಿಡಿಯಬೇಕು. ಅದನ್ನು ಬದಲಾಯಿಸುವುದರಿಂದ ಪದ್ಧತಿಯು ತಾನಾಗಿಯೇ ಮಾಯವಾಗುವುದು. ಅದಲ್ಲದೆ ಸುಮ್ಮನೆ ಅದನ್ನು ದೂರುವುದರಿಂದಲಾಗಲೀ ಅಥವಾ ಹೊಗಳುವುದರಿಂದಾಗಲೀ ಯಾವ ಹಿತಸಾಧನೆಯೂ ಆಗುವುದಿಲ್ಲ.

ಈಗಿನ ಸಮಸ್ಯೆ ಇದು. ಹೆಚ್ಚು ಸಾರ್ವಜನಿಕ ಹಿತಕ್ಕೋಸುಕವಾಗಿ ಸಮಾಜ ನಿಯಮಗಳನ್ನು ಜಾರಿಗೆ ತರುವುದು ಅಥವಾ ಸಮಾಜಸ್ಥಾಪನೆ ಯಾಗುವುದು. ಅನೇಕರು ಇದಕ್ಕೆ ಹೌದು ಎನ್ನುವರು. ಮತ್ತೆ ಕೆಲವರು ಅಲ್ಲ ಎಂದು ಹೇಳುವರು. ಕೆಲವರು ಉಳಿದವರಿಗಿಂತ ಹೆಚ್ಚು ಬಲಶಾಲಿ ಗಳಾಗಿದ್ದು, ನಂತರ ಎಲ್ಲರನ್ನು ತಮ್ಮ ಅಧೀನಕ್ಕೆ ತರುವರು. ಉಪಾಯ ಬಲವಂತ ಅಥವಾ ಚಾತುರ್ಯದಿಂದ ತಮ್ಮ ಸ್ವಾರ್ಥವನ್ನು ಹೊಂದುವರು. ಇದು ನಿಜವಾದ ಪಕ್ಷದಲ್ಲಿ ಬುದ್ಧಿಹೀನನಿಗೆ ಸ್ವಾತಂತ್ರ್ಯವನ್ನು ಕೊಡುವು ದರಿಂದ ಅಪಾಯವಿದೆ ಎಂಬ ಮಾತಿನ ಅರ್ಥವೇನು? ಹಾಗಾದರೆ ಸ್ವತಂತ್ರವೆಂಬ ಪದದ ಅರ್ಥವೇನು ?

ಸ್ವಾತಂತ್ರ್ಯವೆಂದರೆ, ನಿಜವಾಗಿಯೂ ಮತ್ತೊಬ್ಬರ ಆಸ್ತಿ ಪಾಸ್ತಿ ಗಳನ್ನು ನನ್ನಿಂದ ಮತ್ತು ನಿಮ್ಮಿಂದ ಅಪಹರಿಸುವುದಕ್ಕೆ ಆತಂಕವಿಲ್ಲದಿರು ವುದೆಂದಲ್ಲ. ಆದರೆ ನಮ್ಮ ದೇಹ, ಬುದ್ಧಿ, ಆಸ್ತಿಗಳನ್ನು ನಮ್ಮ ಇಚ್ಛೆ ಯಂತೆ ಇತರರರಿಗೆ ಕೇಡು ಮಾಡದಂತೆ ಉಪಯೋಗಿಸಿಕೊಳ್ಳುವುದಕ್ಕೆ ಒಂದೇ ಸಮನಾದ ಅನುಕೂಲಗಳಿರಬೇಕು. ಎರಡನೆಯ ಪ್ರಶ್ನೆಯೆ ಇದು. ತಿಳುವಳಿಕೆ ಇಲ್ಲದವರಿಗೆ ಮತ್ತು ಬಡವರಿಗೆ ಸ್ವಾತಂತ್ರ ಕೊಟ್ಟರೆ ಅಂದರೆ, ತಮ್ಮ ದೇಹ, ಐಶ್ವರ್ಯ ಮುಂತಾದುಗಳ ಮೇಲೆ ಸಂಪೂರ್ಣ ಸ್ವಾತಂತ್ರವಿರಬೇಕು. ಮತ್ತು ಅವರ ಮಕ್ಕಳಿಗೆ ಮೇಲು ವರ್ಗದ ಮತ್ತು ಶ್ರೀಮಂತರಿಗಿರುವಂತೆಯೇ ತಮ್ಮ ಸ್ಥಿತಿಯನ್ನು ಉತ್ತಮ ಪಡಿಸಿ ವಿದ್ಯಾರ್ಜನೆ ಮಾಡುವುದಕ್ಕೆ ಅನುಕೂಲವಿರಬೇಕು ಎನ್ನುವರು. ಇದನ್ನು ವಿರೋಧಿಸುವವರು ಇವುಗಳಿಂದ ಬುದ್ಧಿ ಕೆಡುವುದು ಎನ್ನುವರು—ಇದನ್ನು ಅವರು ಸಮಾಜದ ಹಿತಕ್ಕಾಗಿ ಹೇಳುವರೆ, ಅಥವಾ ತಮ್ಮ ಸ್ವಾರ್ಥಪರತೆ

ಯಿಂದ ಅಂಧರಾಗಿರುವರೇ ? ಇಂಗ್ಲೆಂಡಿನಲ್ಲಿಯೂ ಕೂಡ ಈ ಕೆಳಗಿನ ದರ್ಜೆಯವರಿಗೆ ವಿದ್ಯೆ ದೊರತರೆ ಯಾರು ನಮಗೆ ದುಡಿಯುವರು ಎಂಬುದನ್ನು ಕೇಳಿರುವೆನು.

ಕೆಲವು ಮಂದಿ ಶ್ರೀಮಂತರ ಸೌಕರ್ಯಕ್ಕಾಗಿ ಲಕ್ಷಾಂತರ ಗಂಡ ಸರು ಮತ್ತು ಹೆಂಗಸರು, ಬಡತನ, ಮೌಢ್ಯತೆಯ ನರಕದ ಗಾಢಾಂಧ ಕಾರದಲ್ಲಿ ಮುಳಿಗಿರಬೇಕು ! ಬಡವರಿಗೆ ವಿದ್ಯೆ ಮತ್ತು ಐಶ್ವರ್ಯ ದೊರೆತರೆ ಸಮಾಜ ಮುಳುಗಿ ಹೋಗುವುದು !

ಯಾರು ಸಮಾಜ ! ಲಕ್ಷಾಂತರ ಜನರೋ, ಅಥವಾ ನಾನು ನೀನು ಮತ್ತು ಮೇಲಿನ ವರ್ಗದ ಕೆಲವರೊ ?

ಪುನಃ ಕೊನೆಯದೇ, ಮೇಲಿನ ವರ್ಗದ ಅಲ್ಪ ಮಂದಿ, ಸತ್ಯ ವಾದರೂ ನಾವು ಮತ್ತೊಬ್ಬರಿಗೆ ದಾರಿತೋರುವವರು ಎಂಬ ಅಹಂಕಾರಕ್ಕೆ ಕಾರಣ ವೇನು ? ನಾವೇನು ಸರ್ವಜ್ಞರೆ ? "ಉದ್ಧರೇ ದಾತ್ಮನಾ ತ್ಮಾನಂ" ಪ್ರತಿಯೊಬ್ಬರು ತಮ್ಮ ಮುಕ್ತಿಗೆ ಪ್ರಯತ್ನ ಪಡಲಿ. ಎಲ್ಲಾ ವಿಧ ಸ್ವಾತಂತ್ರ್ಯವೂ ಅಂದರೆ ಮುಕ್ತಿಯ ಕಡೆ ಮುಂದುವರಿಯು ವುದೇ, ಮನುಷ್ಯನ ಅತ್ಯಂತ ಯೋಗ್ಯವಾದ ಶ್ರೇಯಸ್ಸು. ಶಾರೀರಿಕ ಮಾನಸಿಕ, ಅಧ್ಯಾತ್ಮಿಕ ಸ್ವಾತಂತ್ರ್ಯದೆಡೆಗೆ ಮುಂದುವರಿಯುವುದು, ಮತ್ತು ಹಾಗೆ ಮಾಡುವುದಕ್ಕೆ ಇತರರಿಗೆ ಸಹಾಯ ಮಾಡುವುದು, ಮನು ಷ್ಯನ ಅತ್ಯಮೂಲ್ಯವಾದ ಬಹುಮಾನ. ಈ ಸ್ವಾತಂತ್ರ್ಯದ ವಿಕಾಸಕ್ಕೆ ಅಡ್ಡಿ ಒರುವ ಸಾಮಾಜಿಕ ನಿಯಮಗಳು ಬಹಳ ಅಪಾಯಕರ. ಅವುಗಳನ್ನು ಸಾಧ್ಯವಾದಷ್ಟು ಬೇಗ ಧ್ವಂಸ ಮಾಡುವುದಕ್ಕೆ ಪ್ರಯತ್ನ ಪಡಬೇಕು. ಯಾವ ಸಂಘಗಳ ಮೂಲಕ ಮಾನವನು ಸ್ವಾತಂತ್ರ್ಯದೆಡೆಗೆ ಮುಂದು ವರಿಯುವನೋ ಅವುಗಳನ್ನು ಪ್ರೋತ್ಸಾಹಿಸಬೇಕು.

ಈ ಜನ್ಮದಲ್ಲಿ ನೋಡಿದ ಕೂಡಲೇ, ಒಬ್ಬರ ಮೇಲೆ ಅವರಲ್ಲಿ ಯಾವ ವಿಧವಾದ ಅದ್ಭುತ ಗುಣಗಳಿಲ್ಲದೆ ಇದ್ದರೂ ಪ್ರೀತಿ ಜನಿಸುವುದು. ಇದು ಪೂರ್ವ ಜನ್ಮದ ಸಂಬಂಧವೆಂದು ನಮ್ಮ ದೇಶದ ತತ್ತ್ವಜ್ಞರು ಹೇಳುತ್ತಾರೆ.

ಇಚ್ಛೆಯ ಮೇಲಿನ ನಿಮ್ಮ ಪ್ರಶ್ನೆ ಬಹಳ ಮನೋರಂಜಕವಾಗಿದೆ. · ಅದೇ ತಿಳಿದುಕೊಳ್ಳುವ ಕತ್ಯ. ಎಲ್ಲಾ ಧರ್ಮದ ಸಾರವೆ ಆಸೆಯು ನಿರ್ಮೂಲ. ಅವುಗಳೊಂದಿಗೆ ಸಂಶಯ ವಿಲ್ಲದೆ ಇಚ್ಛೆಯ ನಾಶವು ಬರುವುದು. ಏಕೆಂದರೆ ಆಸೆ ಎಂಬುದು ಇಚ್ಛೆಯ ಒಂದು ವಿಶೇಷ ರೂಪದ ಹೆಸರು. ಹಾಗಾದರೆ ಈ ಪ್ರಪಂಚವೇತಕ್ಕೆ ? ಅಥವಾ ಇಚ್ಛೆಯ ಈ ಭಿನ್ನ ಆವಿರ್ಭಾವಗಳೇಕೆ ? ಕೆಲವು ಧರ್ಮಗಳು ಹೀನ ಇಚ್ಛೆಯನ್ನು ನಾಶ ಮಾಡಬೇಕು, ಉತ್ತಮ ಇಚ್ಛೆಯನ್ನಲ್ಲ ಎನ್ನುವುದು. ಇಲ್ಲಿ ಆಸೆಯನ್ನು ನಿರೋಧಿಸುವುದರಿಂದ ಆದ ನಷ್ಟ ಅಲ್ಲಿ (ಮರಣಾನಂತರ) ಸೌಖ್ಯಾನುಭವದಿಂದ ಭರ್ತಿಯಾಗುವುವು. ಈ ಉತ್ತರ ಪ್ರಾಜ್ಞರಿಗೇನೂ ತೃಪ್ತಿ ತರದು ; ಮತ್ತು ಬೌದ್ಧರು ಹೇಳುವಂತೆ ಆಸೆಯೇ ದುಃಖಕ್ಕೆ ಮೂಲ. ಅದರ ನಾಶವಾಗಲೇಬೇಕು. ಆದರೆ ಮನುಷ್ಯನ ಕೆನ್ನೆಯ ಮೇಲೆ ಕುಳಿತ ಸೊಳ್ಳೆಯನ್ನು ಕೊಲ್ಲಲು ಹೋಗಿ ಮನುಷ್ಯನನ್ನೇ ಕೊಂದಂತೆ. ಬೌದ್ಧರ ಸಿದ್ಧಾಂತವು ದುಃಖವನ್ನು ನಾಶಮಾಡುವ ಪ್ರಯತ್ನದಲ್ಲಿ ತಮ್ಮ ಆತ್ಮವನ್ನು ನಾಶ ಮಾಡುವವರೆವಿಗೂ ಹೋಗಿರುವುದು.

ನಿಜಾಂಶವೇನೆಂದರೆ ನಾವು ಯಾವುದನ್ನು ಇಚ್ಛೆ ಎಂದು ಹೇಳುತ್ತೇವೆಯೊ ಅದು ಯಾವುದೋ ಒಂದು ಉತ್ತಮ ವಸ್ತುವಿನ ಕೀಳು ರೂಪ; ಆಸೆಯ ನಾಶವೆಂದರೆ ಇಚ್ಛಾರೂಪದಲ್ಲಿರುವ ಕೀಳುರೂಪಾಂತರದ ನಾಶ, ಮತ್ತು ಉತ್ತಮ ಸ್ಥಿತಿಯ ತೋರಿಕೆ. ಆ ಸ್ಥಿತಿಯು ಬುದ್ಧಿ ಮತ್ತು ಮನಸ್ಸಿನ ಎಲ್ಲೆಯನ್ನು ಮೀರಿರುವುದು. ಚಿನ್ನದ ಮೊಹರು, ನೋಡುವುದಕ್ಕೆ ರೂಪಾಯಿ ಮತ್ತು ಕಾಸಿಗಿಂತ ಬೇರೆಯಾದರೂ, ಇವುಗಳೆರಡಕ್ಕಿಂತಲೂ ಹೇಗೆ ಹೆಚ್ಚು ಬೆಲೆ ಬಾಳುವುದೆಂಬುದನ್ನು ಅರಿತಿರುವರೋ, ಅಂತೆಯೇ ಆ ಉತ್ತಮ ಸ್ಥಿತಿಯನ್ನು, ಮುಕ್ತಿ, ನಿರ್ವಾಣ ಮತ್ತು ಇನ್ನು ಯಾವುದಾದರೂ ಹೆಸರಿನಿಂದ ಬೇಕಾದರೂ ಕರೆಯುವ ; ಅದು ಮನಸ್ಸು ಬುದ್ಧಿಗಳ ಮೇರೆ ಆಚೆ ಇದ್ದರೂ, ಇಚ್ಛೆ ಮತ್ತು ಇನ್ನೂ ಇತರ ಶಕ್ತಿಗಳೆಲ್ಲಕ್ಕಿಂತ ಇನ್ನೂ ಹೆಚ್ಚಾದುದು. ಅದು ಒಂದು ಶಕ್ತಿಯಲ್ಲ : ಶಕ್ತಿಯೇ ಅದರ ಒಂದು ರೂಪಾಂತರ. ಆದುದರಿಂದ

ಇದು ಶಕ್ತಿಗಿಂತ ಉತ್ತಮವಾದುದು. ಆದುದರಿಂದ ಇಚ್ಛಾಶಕ್ತಿಯೆಯ ಪ್ರತಿಫಲನಾಗಿ, ಮೊದಲು ಬಾಹ್ಯ ವಸ್ತುವನ್ನು ಉದ್ದೇಶಿಸಿ ನಂತರ ಯಾವ ಉದ್ದೇಶವೂ ಇಲ್ಲದೆ ಇರುವುದರಿಂದ ಆಗುವುದೇನಂದರೆ, ಇಚ್ಛಾಶಕ್ತಿಯು ಮತ್ತೂ ಉತ್ತಮ ಸ್ಥಿತಿಯನ್ನು ಹೊಂದುವುದು.

ಮೊದಲಲ್ಲಿ ಶಿಷ್ಯ ಗುರುವಿನ ಆಕಾರವನ್ನು ಧ್ಯಾನಿಸಬೇಕು. ಇಷ್ಟದೇವತೆ ಎಂದರೆ ಪ್ರೀತಿಸುವ ಮತ್ತು ಪೂಜಿಸುವ ಒಂದು ವಸ್ತು.

ಮಾನವನ ಮೇಲೆ ದೇವತ್ವವನ್ನು ಹೊರಿಸುವುದು ಬಹಳ ಕಷ್ಟ. ಮರಳಿ ಪ್ರಯತ್ನಗಳಿಂದ ಜಯ ನಿಶ್ಚಯ. ದೇವರು ಪ್ರತಿಯೊಬ್ಬನಲ್ಲಿಯೂ ಇರುವನು. ಅವನಿಗೆ ತಿಳಿಯಲಿ ತಿಳಿಯದೆ ಇರಲಿ. ನಿನ್ನ ವಿಶ್ವಾಸ ಭಕ್ತಿಗಳು ಅವನಲ್ಲಿರುವ ದೇವತ್ವವನ್ನು ಕಾಣುವಂತೆ ಮಾಡುವುದು. ಇದರಲ್ಲಿ ಸಂದೇಹವಿಲ್ಲ.

ಅನವರತವೂ ನಿನ್ನ ಹಿತಚಿಂತಕ
ವಿವೇಕಾನಂದ.

೯೦

ಆಲ್ಮೋರ
೧೦ನೇ ಜೂನ್ ೧೮೯೮.

(ನೈನಿಟಾಲಿನಲ್ಲಿರುವ ಒಬ್ಬ ಮುಹಮ್ಮದೀಯನಿಗೆ)

ನನ್ನ ಪ್ರಿಯ ಸ್ನೇಹಿತನೆ,

ನಿನ್ನ ಪತ್ರವನ್ನು ನಾನು ಹೆಚ್ಚು ಮೆಚ್ಚುತ್ತೇನೆ. ಜಗದೀಶನು ಮೌನವಾಗಿ ನಮ್ಮ ತಾಯ್ನಾಡಿಗೆ ಅಮೋಘವಾದ ಮಾರ್ಪಾಡುಗಳನ್ನು ಮಾಡುತ್ತಿರುವನೆಂದು ಕೇಳಿ ನನಗೆ ತುಂಬಾ ಸಂತೋಷವಾಯಿತು.

ನಾವು ಅದನ್ನು ವೇದಾಂತಿಸಮ್ ಅಥವಾ ಇನ್ನು ಯಾವ ಇಸಮ್ ಎಂದಾದರೂ ಕರೆಯೋಣ. ಸತ್ಯವೇನೆಂದರೆ, ಧರ್ಮದ ಮತ್ತು ತತ್ತ್ವದ ಕೊನೆಯ ಮಾತೆ ಅದ್ವೈತ. ಆ ಒಂದು ಸ್ಥಿತಿಯಿಂದ ಮಾತ್ರ ಎಲ್ಲಾ ಧರ್ಮಗಳನ್ನು ಪಂಗಡಗಳನ್ನು ಪ್ರೀತಿಯಿಂದ ನೋಡಬಹುದು. ಮುಂದಿನ ಬುದ್ಧಿವಂತರಾದ ಮಾನವರ ಧರ್ಮವದು ಎಂದು ನಾವು ನಂಬು

ತ್ತೇವೆ. ಹಿಂದೂಗಳು ಉಳಿದ ಜನಾಂಗಕ್ಕೆಲ್ಲಕ್ಕಿಂತಲೂ ಬೇಗ ಅದನ್ನು ಕಂಡು ಹಿಡಿದರು, ಎಂಬ ಕೀರ್ತಿಯನ್ನು ಹೊಂದಬಹುದು. ಏಕೆಂದರೆ ಅವರು ಯೆಹೂದ್ಯರು ಮತ್ತು ಅರಬ್ಬೀಯರಿಗಿಂತ ಪುರಾತನರು. ಆದರೂ ಕೂಡ ಅನುಷ್ಠಾನ ಅದ್ವೈತ, ಅಂದರೆ, ಯಾವುದು ಎಲ್ಲಾ ಮಾನವನನ್ನು ತನ್ನ ಆತ್ಮವೆಂದು ತಿಳಿದು ಅದರಂತೆ ಅನುಸರಿಸುವುದು, ಎಲ್ಲಾ ಹಿಂದೂಗಳಲ್ಲಿಯೂ ಇನ್ನೂ ಅಭಿವೃದ್ಧಿಯಾಗಬೇಕಾಗಿದೆ.

ಅದಲ್ಲದೆ ನಮ್ಮ ಅನುಭವವೇನೆಂದರೆ, ಈ ಸಮತ್ವವನ್ನು ಯಾವ ಮತಾನುಯಾಯಿಗಳಾದರೂ ಆಗಲಿ ಸಾಧ್ಯವಾದಷ್ಟು ಅನುಷ್ಠಾನ ರೂಪಕ್ಕೆ, ಇದರ ಗುಪ್ತ ಅರ್ಥ ಅಥವಾ ಅಂತರಾಳದಲ್ಲಿ ಹರಿಯುವ ನಿಯಮವನ್ನು ತಿಳಿದೂ ತಿಳಿಯದೆ ಮೇಲೆ ತಂದಿದ್ದರೆ ಅದೇ ಇಸ್ಲಾಂ ಧರ್ಮ. ಹಿಂದೂಗಳು ಈ ನಿಯಮವನ್ನು ಸ್ಪಷ್ಟವಾಗಿ ಅರಿತಿರುವರು ಆದರೆ ಕಾರ್ಯರೂಪಕ್ಕೆ ತಂದಿಲ್ಲ.

ಆದುದರಿಂದ ಅನುಷ್ಠಾನದ ಇಸ್ಲಾಂ ಧರ್ಮದ ಸಹಾಯವಿಲ್ಲದೆ ವೇದಾಂತ ತತ್ತ್ವಗಳು ಎಷ್ಟು ಸೂಕ್ಷ್ಮವಾಗಿ ಅಮೋಘವಾಗಿದ್ದರೂ, ಮಾನವವರ್ಗದ ಬಹು ಮಂದಿಗೆ ಪ್ರಯೋಜನವಿಲ್ಲವೆಂದು ನಾವು ದೃಢ ವಾಗಿ ನಂಬಿರುವೆವು. ನಾವು ಮಾನವವರ್ಗವನ್ನು ಎಲ್ಲಿ ವೇದಗಳು, ಬೈಬಲ್, ಖೊರಾನ್ ಇಲ್ಲವೊ ಅಲ್ಲಿಗೆ ಕರೆದೊಯ್ಯಬೇಕು; ಆದರೂ ಕೂಡ ವೇದ, ಬೈಬಲ್ ಮತ್ತು ಖೊರಾನುಗಳ ಐಕ್ಯತೆಯಿಂದ ಇದನ್ನು ಸಾಧಿಸಬೇಕಾಗಿದೆ. ಮಾನವವರ್ಗಕ್ಕೆ ಬಿನ್ನಧರ್ಮಗಳು ಏಕವಾದ ಒಂದೇ ಧರ್ಮದ ಅನಂತ ರೂಪಗಳೆಂಬುದನ್ನು ಕಲಿಸಬೇಕು. ಇದರಿಂದ ಪ್ರತಿ ಯೊಬ್ಬನೂ ತನಗೆ ಯಾವುದು ಉತ್ತಮ ಮಾರ್ಗವೋ ಅದನ್ನು ಆರಿಸಿ ಕೊಳ್ಳಬಹುದು.

ನಮ್ಮ ಮಾತೃಭೂಮಿಗೆ ಹಿಂದೂ ಮತ್ತು ಮುಸಲ್ಮಾನ ಎರಡು ಧರ್ಮದ ಸಮ್ಮೇಳನವಾಗಬೇಕು. ವೇದಾಂತದ ಮಿದುಳು ಇಸ್ಲಾಮಿನ ದೇಹ. ಇದೊಂದೇ ನಮ್ಮ ಪುರೋಗಮನಕ್ಕೆ ಹಾದಿ.

ನನ್ನ ಒಳಗಣ್ಣಿಗೆ ಇಂದಿನ ಗೊಂದಲ ಮತ್ತು ತಿಕ್ಕಾಟದಿಂದ ವೇದಾಂತದ ಮಿದುಳು, ಇಸ್ಲಾಮಿನ ದೇಹದಿಂದ ಕೂಡಿದ ತೇಜೋಮಯ

ವಾದ, ಅಜೇಯವಾದ ಮುಂದಿನ ನಿಷ್ಕಳಂಕ ಭಾರತದ ಉದಯವು ಕಾಣುವುದು.

ಮಾನವನ ಉದ್ಧಾರಕ್ಕೆ, ಅದರಲ್ಲೂ ದೀನ, ಅತಿ ದೀನರಾದ ನಮ್ಮ ತಾಯ್ನಾಡಿನವರ ಸೇವೆಗೆ ಜಗದೀಶನು ನಿನ್ನನ್ನು ಒಂದು ಯಂತ್ರವನ್ನಾಗಿ ಮಾಡಲಿ ಎಂದು ಬೇಡುವೆ.

ವಿಶ್ವಾಸ ಪೂರ್ವಕ.
ವಿವೇಕಾನಂದ.

೯೧

ಲಾಸ್ ಅಂಜಿಲಿಸ್,
೬ನೇ ಡಿಸೆಂಬರ್ ೧೮೯೯.

ಪ್ರಿಯ ಮ—,

ನಿನ್ನ ಆರನೇ ತಾರೀಖಿನ ಪತ್ರ ತಲಪಿತು. ಆದರೆ ನನ್ನ ಅದೃಷ್ಟದಲ್ಲಿ ಬದಲಾವಣೆ ಆಗಿಲ್ಲ. ಬದಲಾವಣೆಯಿಂದ ಏನಾದರೂ ಉತ್ತಮವಾಗುವುದೆಂದು ನೀನು ಭಾವಿಸುವಿಯೇನು ? ಕೆಲವರ ಸ್ವಭಾವವೇ ಹಾಗೆ. ದುಃಖವೇ ಅವರಿಗೆ ಪ್ರೀತಿ. ನಾನು ದೇಶದ ಜನರಿಗೆ ಕಷ್ಟಪಡದೆ ಇದ್ದರೆ ಮತ್ತೊಬ್ಬರಿಗೆ ಪಡುತ್ತಿದ್ದೆ. ಇದು ನಿಜ. ಕೆಲವರ ಸ್ವಭಾವವೇ ಹೀಗೆ. ನನಗೆ ಈಗ ಗೊತ್ತಾಗುತ್ತಿದೆ. ನಾವೆಲ್ಲ ಸುಖವನ್ನು ಅರಸುತ್ತಿರುವುದೇನೋ ನಿಜ. ಆದರೆ ಕೆಲವರು ದುಃಖದಲ್ಲೆ ಸುಖವಾಗಿರುವರು. ಇದು ವಿಚಿತ್ರವಲ್ಲವೆ? ಇದರಲ್ಲಿ ಅಪಾಯವೇನೂ ಇಲ್ಲ. ಆದರೆ ಸುಖ ದುಃಖ ಎರಡೂ ಸಾಂಕ್ರಾಮಿಕ. ಇಂಗರ್‌ಸಾಲನು ಒಮ್ಮೆ ತಾನು ದೇವರಾಗಿದ್ದರೆ ರೋಗ ಮನುಷ್ಯನನ್ನು ಮುಟ್ಟುವ ಬದಲು ಆರೋಗ್ಯ ಮನುಷ್ಯನನ್ನು ಮುಟ್ಟುವಂತೆ ಮಾಡುತ್ತಿದ್ದೆ ಎಂದು ಹೇಳಿದನು. ಪಾಪ ಆರೋಗ್ಯ ರೋಗದಷ್ಟೇ ಕ್ಷಣಿಕ ಎಂಬುದನ್ನು ಅವನು ಅರಿಯ! ಇದೇ ಅಪಾಯ. ನಾನು ಸುಖಿಯಾಗಿದ್ದರೆ ದುಃಖಿಯಾಗಿದ್ದರೆ ಪ್ರಪಂಚಕ್ಕೆ ಏನೂ ನಷ್ಟವಿಲ್ಲ. ಆದರೆ ಮತ್ತೊಬ್ಬರಿಗೆ ಇದು ಅಂಟಕೂಡದು. ಇದೇ ದೊಡ್ಡ ಉಪಾಯ. ಮನುಷ್ಯನ ದುಸ್ಥಿತಿಗೆ

ಒಬ್ಬ ಮಹಾತ್ಮ ಮರುಗಿದೊಡನೆಯೆ ಮೊಗಬಾಡುವುದು, ಎದೆ ಯೊಡೆದು ಕೊಳ್ಳುತ್ತಾ, ಪ್ರತಿಯೊಬ್ಬರೂ ಟಾರ್ಟರಿಕ್ ಆಸಿಡ್ ಕುಡಿದು, ಇದ್ದ ಲನ್ನು ಮೆದ್ದು ಕಸದಮೇಲೆ ಬೂದಿ ಬಳೆದುಕೊಂಡು ಕುಳಿತುಕೊಳ್ಳಿ ಎಂದು ಹೇಳಿ, ಕಣ್ಣೀರು ಕರೆಯುತ್ತಾ ಅಳುತ್ತಾ ಮಾತನಾಡಲು ಮೊದಲು ಮಾಡುವನು! ಅವರಲ್ಲಿ ಏನೋ ಒಂದು ಕೊರತೆ ಇತ್ತು ಎಂದು ನನಗೆ ತೋರುವುದು. ಹೌದು ಅಂಥಾವರಲ್ಲಿ ಏನೋ ಬೇಕಾ ಗಿತ್ತು. ಪ್ರಪಂಚದ ಭಾರವನ್ನು ನೀನು ಹೊರಲು ಸಿದ್ಧನಾಗಿದ್ದರೆ ಅಗತ್ಯವಾಗಿ ಭುಜ ನೀಡು. ಆದರೆ ನಿನ್ನ ಬೈಗಳ ನೆರಳಾಟ ನಮಗೆ ಕೇಳಿಸದೆ ಇರಲಿ. ನಿನ್ನ ನೋಪನಿಂದ ನಮ್ಮನ್ನು ಅಂಜಿಸಬೇಡಿ. ನಮ್ಮ ಭಾರವೆ ನಮಗೆ ಮೇಲಾಗಿತ್ತು ಎನ್ನಿಸದಿರಲಿ. ಯಾರು ಭಾರ ವನ್ನು ಸ್ವೀಕರಿಸುವರೊ ಅವರು ಪ್ರಪಂಚವನ್ನು ಹರಸಿ ತಮ್ಮ ದಾರಿ ಯಲ್ಲಿ ತಾವು ಹೋಗುವರು. ಆತ ಸ್ವಲ್ಪವೂ ನಿಂದಿಸುವುದಿಲ್ಲ, ಟೀಕಿ ಸುವುದಿಲ್ಲ. ಆದರೆ ಇಲ್ಲಿ ಪಾಪ ಇಲ್ಲವೆಂತಲ್ಲ. ತಾನೆ ಅದನ್ನು ಸ್ವೇಚ್ಛೆ ಯಿಂದ ಮನಃಪೂರ್ತಿಯಾಗಿ ಹೊತ್ತಿರುವನು. ರಕ್ಷಕ "ಸಂತೋಷಿ ಸುತ್ತಾ ನಡೆಯಬೇಕು" ರಕ್ಷಿಸಲ್ಪಟ್ಟವರಲ್ಲ.

ಈ ಪ್ರಾತಃಕಾಲ ನನಗೆ ಸಿಕ್ಕಿದ ಬೆಳಕೇ ಇದು. ಇದು ನನ್ನಲ್ಲಿ ಬಾಳಿ, ಜೀವನದ ಹಾಸುಹೊಕ್ಕಾದರೆ ಸಾಕು.

ಭಾರದಿಂದ ಕುಗ್ಗಿಹೋಗಿರುವವರೆಲ್ಲ ಬನ್ನಿ, ಆ ಹೊರೆಯನ್ನು ನನ್ನ ಮೇಲಿಡಿ. ನಂತರ ನೀವು ಏನುಬೇಕಾದರೂ ಮಾಡಿ. ಸಂತೋಷ ವಾಗಿರಿ. ನನ್ನ ಇರವನ್ನೇ ಮರೆಯಿರಿ.

ಅನವರತವೂ ನಿನ್ನ ಪ್ರೀತಿಯ ತಂದೆ,
ವಿವೇಕಾನಂದ.

೧೨ನೇ ಡಿಸೆಂಬರ್,
೧೮೯೯.

ಪ್ರಿಯ ಶ್ರೀಮತಿ, . . . .

ಸತ್ಯ ನೀನು ಹೇಳುವುದು. ನಾನೊಬ್ಬ ಒರಟ. ಶುದ್ಧ ಒರಟ. ಮೃದು ಹೃದಯ ಮುಂತಾದ ವಿಚಾರ—. . . . ಇದು ನನ್ನ ತಪ್ಪು. ಇದು ನನಗೆ ಕಡಿಮೆ ಇದ್ದರೆ, ತುಂಬಾ ಕಡಿಮೆ ಇದ್ದರೆ— ಇದೇ ನನ್ನ ದುರ್ಬಲತೆ. ಅಯ್ಯೋ ದೇವರೆ ನನ್ನ ದುಃಖವೆಲ್ಲ ಅದರಿಂದ ಬಂದಿದೆ. ಪೌರಸಂಸ್ಥೆ ನಮ್ಮ ಮೇಲೆ ತೆರಿಗೆ ಹೊರಿಸಲು ಯತ್ನಿಸುತ್ತಿದೆ. ಒಳ್ಳೆಯದು-ಭರವಸೆಯ ನನ್ನದು ಪತ್ರದಿಂದ ಅದನ್ನು ಸಾರ್ವಜನಿಕ ವಸ್ತುವನ್ನಾಗಿ ಮಾಡದೆಹೋದುದು ನನ್ನ ತಪ್ಪು. ಹುಡುಗರನ್ನು ನಾನು ಕಟುವಾಗಿ ಮಾತನಾಡಿಸುವುದಕ್ಕೆ ತುಂಬಾ ವ್ಯಥೆಯಾಗುವುದು. ಆದರೆ ನಾನು ಅವರನ್ನು ಪ್ರಪಂಚದಲ್ಲಿ ಎಲ್ಲರಿಗಿಂತ ಹೆಚ್ಚು ಪ್ರೀತಿಸುತ್ತೇನೆ ಎಂಬುದೂ ಗೊತ್ತಿದೆ. ನನಗೆ ದೇವರು ಸಹಾಯ ಮಾಡಿರಬಹುದು, ನಿಜ. ಆದರೆ ದೇವರ ಸಹಾಯದ ಪ್ರತಿಯೊಂದು ಚೂರು ನನ್ನ ಹೃದಯ ರಕ್ತವನ್ನು ಶೋಷಿಸಿದೆ! ಇದು ಇಲ್ಲದೇ ಇದ್ದರೆ ಹೆಚ್ಚು ಸಂತೋಷಿಸುತ್ತಿದ್ದೆ, ಸುಖಿಯಾಗಿರುತ್ತಿದ್ದೆ. ನಿಜವಾಗಿಯೂ ಈಗಿನ ಸ್ಥಿತಿ ಆಶಾದಾಯಕವಾಗಿಲ್ಲ. ಆದರೆ ನಾನು ಯೋಧ, ಹೋರಾಡುತ್ತ ಮಡಿಯುವೆನು, ಬಿಡುವುದಿಲ್ಲ. ಆದ ಕಾರಣವೆ ಹುಡುಗರ ಮೇಲೆ ಕೋಪ. ಹೋರಾಡಿ ಎಂದು ನಾನು ಅವರಿಗೆ ಹೇಳುವುದಿಲ್ಲ. ನನ್ನ ಹೋರಾಟವನ್ನು ತಡೆಯಬೇಡಿ ಎನ್ನುವೆನು.

ನಾನು ಅದೃಷ್ಟವನ್ನು ದೂರುವುದಿಲ್ಲ. ಆದರೆ ನನಗೆ ಈಗ ಒಬ್ಬ ಮನುಷ್ಯ ಬೇಕಾಗಿದೆ, ನನ್ನ ಹುಡುಗನೊಬ್ಬ ಎಲ್ಲಾ ನ್ಯೂನತೆಗಳೊಂದಿಗೆ ನನ್ನೊಂದಿಗೆ ನಿಂತು ಹೋರಾಡುವುದಕ್ಕೆ ಬೇಕಾಗಿದೆ. ನೀವು ವ್ಯಾಕುಲರಾಗಬೇಕಾಗಿಲ್ಲ. ಭರತಖಂಡದಲ್ಲಿ ಏನನ್ನಾದರೂ ಮಾಡಬೇಕಾದರೆ ಅಲ್ಲಿ ನನ್ನ ಇರವು ಆವಶ್ಯಕ. ಈಗ ನನ್ನ ಆರೋಗ್ಯ ಉತ್ತಮವಾಗಿದೆ.

ಸಮುದ್ರ ಪ್ರಯಾಣ ಮತ್ತೂ ಉತ್ತಮ ಮಾಡಬಹುದು. ನನ್ನ ಸ್ನೇಹಿತರಿಗೆ ತೊಂದರೆ ಕೊಡುವುದಲ್ಲದೆ ಅಮೇರಿಕಾದಲ್ಲಿ ನಾನು ಈ ವೇಳೆ ಏನನ್ನೂ ಮಾಡಲಿಲ್ಲ. ಬಹುಶಃ ಮಿಸ್ ಜೊ ನನ್ನ ಪ್ರಯಾಣ ಖರ್ಚನ್ನು ಕೊಡಬಹುದು, ಮಿ-ಲಾ - - - ಬಳಿ ನನ್ನ ಸ್ವಲ್ಪ ಹಣವಿದೆ. ಭರತಖಂಡದಲ್ಲಿ ಸ್ವಲ್ಪ ಹಣವನ್ನು ಎತ್ತುವ ಭರವಸೆ ಇನ್ನೂ ಇದೆ. ಇಂಡಿಯಾ ದೇಶದಲ್ಲಿ ಹಲವು ಕಡೆ ಇರುವ ನನ್ನ ಸ್ನೇಹಿತರನ್ನು ನೋಡಿಲ್ಲ. ಹದಿನೈದು ಸಾವಿರ ರೂಪಾಯಿ ವಸೂಲಿ ಮಾಡುವ ಭರವಸೆ ಇದೆ. ಆಗ ಐವತ್ತು ಸಾವಿರವಾಗುವುದು. ನನ್ನದು ಪತ್ರ ವಾದರೆ ಪೌರಸಂಸ್ಥೆಯು ತೆರಿಗೆಯಿಂದಾ ಪಾರಾಗಬಹುದು. ಅದನ್ನು ನಾನು ಶೇಖರಿಸಲು ಸಾಧ್ಯವಿಲ್ಲದೇ ಇದ್ದರೆ ಸುಮ್ಮನೆ ಅಮೇರಿಕದಲ್ಲಿ ಕುಳಿತು ಕಾಲಹರಣ ಮಾಡುವುದಕ್ಕಿಂತ ಹೋರಾಡಿ ಮಡಿಯುವುದು ಮೇಲು. ನನ್ನ ಅಪರಾಧಗಳು ಹೇರಳವಾಗಿವೆ. ಇವೆಲ್ಲಾ ಪ್ರೇಮಾಧಿಕ್ಯದಿಂದ ಆದುವು. ನಾನು ಪ್ರೀತಿಯನ್ನು ಎಷ್ಟು ದ್ವೇಷಿಸುತ್ತೇನೆ! ಲವಲೇಶವೂ ಭಕ್ತಿ ಇಲ್ಲದೇ ಇದ್ದರೆ! ಶಾಂತನಿರ್ದಯ ನಾದ ಅದ್ವೈತಿಯಾಗಿದ್ದರೆ! ಸರಿ ಈ ಜೀವನ ಮುಗಿಯಿತು. ಮುಂದಿನ ಜನ್ಮದಲ್ಲಿ ಯತ್ನಿಸುತ್ತೇನೆ. ಈಗ ನನಗೆ ಎಂದಿಗಿಂತ ಹೆಚ್ಚು ವ್ಯಥೆಯಾಗುವುದು. ನನ್ನ ಸ್ನೇಹಿತರಿಗೆ ಆಶೀರ್ವಾದ ಕೊಡು ವುದಕ್ಕಿಂತ ಹೆಚ್ಚು ಅಪರಾಧ ಮಾಡಿರುವೆನು. ನಾನು ಅರಸುತ್ತಿರುವ ಶಾಂತಿ, ಮೌನ, ದೊರಕಲೇ ಇಲ್ಲ.

ಹಲವು ವರುಷಗಳ ಹಿಂದೆ ಹಿಮಾಲಯ ಪ್ರಾಂತ್ಯಕ್ಕೆ ಪುನಃ ಹಿಂತಿರುಗಿ ಬರುವುದಿಲ್ಲವೆಂದು ಹೋದೆ. ನನ್ನ ತಂಗಿ ಆತ್ಮಹತ್ಯ ಮಾಡಿ ಕೊಂಡಳು. ಈ ಸುದ್ದಿ ನನಗೆ ತಲಪಿತು. ಈ ದುರ್ಬಲ ಹೃದಯ ಸಿಕ್ಕಬಹುದಾದ ಶಾಂತಿಯಿಂದ ಜಾರಿತು! ಈ ದುರ್ಬಲ ಹೃದಯವೇ ನಾನು ಪ್ರೀತಿಸುವ ಕೆಲವರ ಸಹಾಯಕ್ಕಾಗಿ ಹುಡುಕಿಕೊಂಡು ಹೋಗುವಂತೆ ನನ್ನನ್ನು ಭರತಖಂಡದಿಂದ ಓಡಿಸಿತು. ಈಗ ನಾನು ಇಲ್ಲಿರುವೆ. ಶಾಂತಿಯನ್ನು ಪಡೆಯಬೇಕೆಂದೆ. ಆದರೆ ಭಕ್ತಿಯ ಪೀಠವಾದ

ಹೃದಯ ಇದಕ್ಕೆ ಅವಕಾಶ ಕೊಡಲಿಲ್ಲ. ಹೋರಾಟ, ವ್ಯಥೆ, ವ್ಯಥೆ, ಹೋರಾಟ! ಆಗಲಿ ಇನ್ನೇನುಮಾಡುವುದು, ಇದು ನನ್ನ ಅದೃಷ್ಟ. ಇದು ಎಷ್ಟು ಬೇಗ ಮುಗಿದರೆ ಅಷ್ಟು ಒಳ್ಳೆಯದು. ನನ್ನನ್ನು ಅತಿ ಉದ್ವೇಗಪರನೆನ್ನುವರು. ಆದರೆ ಸಂದರ್ಭವನ್ನು ನೋಡಿ!!! ನಾನು ನಿಮ್ಮ ವ್ಯಥೆಗೆ ಕಾರಣನಾಗಿರುವುದಕ್ಕೆ ತುಂಬಾ ವ್ಯಾಕುಲ ಪಡುವೆನು. ಎಲ್ಲರಿಗಿಂತ ಹೆಚ್ಚಾಗಿ ನಿಮಗೆ, ಯಾರು ನನ್ನನ್ನು ಇಷ್ಟು ಪ್ರೀತಿಸುತ್ತಿದ್ದರೊ, ಇಷ್ಟೊಂದು ದಯತೋರಿದ್ದರೊ ಅವರಿಗೆ ವ್ಯಥೆಪಡುವೆನು. ನಡೆದುಹೋಯಿತು—ಅದು ನಿಜ. ನಾನು ಈಗ ಗ್ರಂಥಿಯನ್ನು ಬಿಚ್ಚಲು ಯತ್ನಿಸುತ್ತೇನೆ. ಅಥವಾ ಉದ್ಯಮದಲ್ಲಿ ಪ್ರಾಣಾರ್ಪಣೆ ಮಾಡುತ್ತೇನೆ.

ವಿ. ಸೂ. ಮಾತೆ ಇಚ್ಛಿಸಿದಂತೆ ಆಗಲಿ. ಸಾನ್‌ಫ್ರಾನ್ಸಿಸ್ಕೊ ಮೂಲಕ ಇಂಡಿಯಾಕ್ಕೆ ಪಯಣದ ಖರ್ಚನ್ನು ಜೊ ಹತ್ತಿರ ಬೇಡುವೆನು. ಅವಳು ಕೊಟ್ಟರೆ ತಕ್ಷಣವೆ ಜಪಾನಿನ ಮೂಲಕ ಹೊರಡುವೆನು. ಒಂದು ತಿಂಗಳಾಗುವುದು. ಸ್ಥಿತಿಯನ್ನು ಸರಿಮಾಡುವುದಕ್ಕೆ ಅಥವಾ ಅದನ್ನು ಉತ್ತಮ ಮಾಡುವುದಕ್ಕೆ ಇಂಡಿಯಾ ದೇಶದಲ್ಲಿ ಸ್ವಲ್ಪ ಹಣವನ್ನು ವಸೂಲಿ ಮಾಡಬಹುದೆಂಬ ಭರವಸೆ ಇದೆ. ಇದಿಲ್ಲದೇ ಇದ್ದರೆ, ಈಗಿರುವ ಅಸ್ತವ್ಯಸ್ಥ ಜಾತಿಯಿಂದ ಉತ್ತಮಪಡಿಸಲಾದರೂ ಯತ್ನಿಸುವೆನು. ಅಂತ್ಯ ಅಂಧಕಾರವಾಗುತ್ತಿದೆ, ಗೋಜಿನಿಂದ ಕೂಡಿದೆ; ನಾನು ಇದನ್ನು ನಿರೀಕ್ಷಿಸಿದ್ದೆ. ನಾನು ತಕ್ಷಣ ನಿರಾಶನಾದೆ ಎಂದು ಊಹಿಸದಿರು. ದೇವರು ಆಶೀರ್ವದಿಸಲಿ. ದೇವರು ತನ್ನ ಕೆಲಸ ಮಾಡುವುದಕ್ಕೆ ನನ್ನನ್ನು ಯಂತ್ರವಾಗಿ ಮಾಡಿ ದಾರಿಯಲ್ಲಿ ಸಾಯಿಸಿದರೆ ಸಾಯಿಸಲಿ. ನಿನ್ನ ಪತ್ರ ತಲುಪಿದ ಮೇಲೆ ನಾನು ಸಂತೋಷಭರಿತನಾಗಿರುವೆನು. ಹಿಂದೆ ಕೆಲವು ವರ್ಷಗಳು ಹೀಗೆ ಇರಲಿಲ್ಲ. ವಾ ಗುರುಕಿ ಫತೆ. ಗುರುದೇವನಿಗೆ ಜಯವಾಗಲಿ!! ಆಗಲಿ; ಪ್ರಪಂಚ ಬರಲಿ, ಸ್ವರ್ಗ ಬರಲಿ, ದೇವತೆಗಳು ಬರಲಿ, ಜಗನ್ಮಾತೆ ಬರಲಿ, ನಾನು ಹೋರಾಡುವೆನು. ನಿರಾಶನಾಗುವುದಿಲ್ಲ.

ರಾವಣ ದೇವರೊಂದಿಗೆ ಹೋರಾಡಿ ಮೂರು ಜನ್ಮಗಳಲ್ಲಿ ಮುಕ್ತಿಯನ್ನು ಗಳಿಸಿದ. ಜಗನ್ಮಾತೆಯೊಂದಿಗೆ ಹೋರಾಡುವುದೆ ಮಹದಾನಂದ.

ನಿಮಗೆ ಮತ್ತು ನಿಮ್ಮವರಿಗೆ ಅನಂತ ಆಶೀರ್ವಾದಗಳು. ನೀವು ನನ್ನ ಅರ್ಹತೆಗಿಂತ ಹೆಚ್ಚು, ಅತಿ ಹೆಚ್ಚು, ಸಹಾಯ ಮಾಡಿರುವಿರಿ.

ಕ—ಮತ್ತು ತ—ಗೆ ನನ್ನ ಪ್ರೀತಿಗಳು—

ವಿವೇಕಾನಂದ

೯೩

ಕ್ಯಾಲಿಫೋರ್ನಿಯ.
೨೧ನೇ ಫೆಬ್ರವರಿ ೧೯೦೦.

ಪ್ರಿಯ ಅ—

ನಿನ್ನ ಪತ್ರ ಸೇರಿ ಅದರ ವಿಷಯ ವಿವರಣೆಯನ್ನು ಓದಿ ತುಂಬಾ ಸಂತೋಷವಾಯಿತು. ಪಾಂಡಿತ್ಯ ಮತ್ತು ಜಾಣತನಗಳಾವುವೂ ಕೆಲಸಕ್ಕೆ ಬರುವುದಿಲ್ಲ. ಇವೆಲ್ಲ ಕೇವಲ ಮೇಲಿನ ಮೆರಗು. ಎಲ್ಲಾ ಶಕ್ತಿಯ ಮೂಲವೇ ಹೃದಯ. ಜ್ಞಾನ, ಶಕ್ತಿ, ಕ್ರಿಯೆಯಿಂದ ಕೂಡಿನ ಆತ್ಮ ಇರುವುದು ಮೆದುಳಿನಲ್ಲಿ ಅಲ್ಲ. ಅದರ ಪೀಠವಿರುವುದು ಹೃದಯದಲ್ಲಿ "ಶತಂ ಚೈಕಾಚ ಹೃದಯಸ್ಯನಾಡ್ಯಃ" (ಹೃದಯದ ನಾಡಿಗಳಿರುವುದು ನೂರೊಂದು ಇತ್ಯಾದಿ). ಹೃದಯದ ಸಮೀಪದಲ್ಲಿ Sympathetic ganglia ಎಂಬ ಮುಖ್ಯನರಗಳ ಕೇಂದ್ರದ ಸಮೀಪದಲ್ಲಿ ಆತ್ಮನ ಸ್ಥಾನವಿರುವುದು. ಎಷ್ಟು ಕರುಣೆಯನ್ನು ನೀನು ಹೊರತೋರುವೆಯೋ, ನೀನು ಪಡೆಯುವ ಜಯವೂ ಅಷ್ಟೇ ಅಧಿಕವಾಗುವುದು. ಮೆದುಳಿನ ಭಾಷೆಯನ್ನು ತಿಳಿದುಕೊಳ್ಳಬಲ್ಲವರು ಕೆಲವರು. ಆದರೆ ಪ್ರತಿಯೊಬ್ಬನೂ ಸೃಷ್ಟಿಕರ್ತನಿಂದ ಹಿಡಿದು ಒಂದು ಚೂರು ಹುಲ್ಲಿನ ವರೆಗೆ ಹೃದಯದಮೂಲಕ ಬರುವ ಭಾಷೆಯನ್ನು ತಿಳಿದುಕೊಳ್ಳುವರು. ಆದರೆ ನಮ್ಮ ದೇಶದಲ್ಲಾದರೋ ಸತ್ತಂತೆ ಇರುವ ಜನರನ್ನು ಜಾಗ್ರತಗೊಳಿಸಬೇಕು, ಇದಕ್ಕೆ ಕಾಲಬೇಕು.

ಸಮಾಧಾನ ಧೀಘ್ರಪ್ರಯತ್ನಗಳಿದ್ದರೆ ಜಯ ಬಂದೇ ಬರುವುದು. ಅದರಲ್ಲಿ ಸಂಶಯವಿಲ್ಲ.

ಇಂಗ್ಲೀಷ್ ಅಧಿಕಾರಿಗಳನ್ನು ದೂರುವುದೇಕೆ? ಯಾರ ಮನೆಯ ಅಸಾಧಾರಣ ಕ್ರೂರತನವನ್ನು ನೀನು ಬರೆದಿರುವೆಯೋ, ಅದು ಭರತ ಖಂಡದಲ್ಲಿ ಅಲ್ಲದೆ ಬೇರೆ ಎಲ್ಲಾದರೂ ಇದೆಯೇನು? ಅಥವಾ ಅಂತಹ ನಿದರ್ಶನಗಳು ಇನ್ನೂ ಹೇರಳವಾಗಿ ಇವೆಯೊ? ದೇಶದಲ್ಲೆಲ್ಲಾ ಒಂದೇ ಕಥೆ. ಆದರೆ ನಮ್ಮ ದೇಶದಲ್ಲಿ ಸಾಧಾರಣವಾಗಿ ಕಾಣಬರುವ ಸ್ವಾರ್ಥತೆ ಇರುವುದು, ಕೇವಲ ದುಷ್ಟತನದಿಂದಲ್ಲ. ಈ ಮೃಗೀಯತೆ ಅನೇಕ ಶತಮಾನಗಳ ಸೋಲು ಮತ್ತು ದಬ್ಬಾಳಿಕೆತನದಿಂದ ಬಂದಿದೆ. ಇದು ನಿಜವಾದ ಸ್ವಾರ್ಥತೆಯಲ್ಲ, ಅಂತರಾಳದಲ್ಲಿರುವ ನಿರಾಶೆ. ಜಯದ ಮೊದಲನೆಯ ಕುರುಹು ತೋರಿದ ಕೂಡಲೆ ಅದು ನಿವಾರಣೆಯಾಗುವುದು. ಎಲ್ಲಾ ಕಡೆಯಲ್ಲೂ ಆಂಗ್ಲೇಯ ಅಧಿಕಾರಿಗಳು ನೋಡುತ್ತಿರುವುದು ಇದನ್ನೇ. ಆದುದರಿಂದ ಮೊದಲಲ್ಲೇ ಅವರಿಗೆ ಹೇಗೆ ನಂಬಿಕೆ ಹುಟ್ಟಬೇಕು. ಆದರೆ ಅವರಿಗೆ ಕಾಣುವ ಯಾವುದಾದರೂ ನಿಜವಾದ ಕೆಲಸದಲ್ಲಿ ಅವರು ಸಹಾನುಭೂತಿಯನ್ನು ತೋರುವುದಿಲ್ಲವೆ ಹೇಳು?

ಇಂತಹ ಘೋರ ಕ್ಷಾಮ, ಪ್ರವಾಹ, ಖಾಯಿಲೆ, ಸಾಂಕ್ರಾಮಿಕ ಜಾಡ್ಯಗಳು ಇರುವ ಸಮಯದಲ್ಲಿ ನಿಮ್ಮ ಕಾಂಗ್ರೆಸ್ಸಿನವರು ಎಲ್ಲಿರುವರು ಹೇಳು! "ದೇಶದ ರಾಜ್ಯಾಡಳಿತವನ್ನು ನಮಗೆ ಕೊಟ್ಟುಬಿಡಿ" ಎಂದು ಸುಮ್ಮನೆ ಹೇಳಿಬಿಟ್ಟರೆ ಸಾಕೆ? ಅವರನ್ನು ಕೇಳುವುದಕ್ಕೆ ಯಾರು ಇರುವರು? ಮನುಷ್ಯನು ಕೆಲಸಮಾಡಿದರೆ, ಏನಾದರೂ ಅವನು ಬಾಯಿಬಿಟ್ಟು ಕೇಳಬೇಕೇನು? ನಿನ್ನಂತಹ ಎರಡು ಸಾವಿರ ಜನರು ಅನೇಕ ಜಿಲ್ಲೆಯಲ್ಲಿ ಕೆಲಸಮಾಡುತ್ತಿದ್ದರೆ, ರಾಜಕೀಯ ವಿಚಾರದಲ್ಲಿ ನಿಮ್ಮಿಂದ ಸಲಹೆಯನ್ನು ಕೇಳುವುದು ಇಂಗ್ಲಿಷರ ಸರದಿಯಲ್ಲವೇನು ?—"ಸ್ವಕಾರ್ಯಮುದ್ಧರೇತ್ ಪ್ರಾಜ್ಞಃ" ಬುದ್ಧಿವಂತನು ತನ್ನ ಕೆಲಸವನ್ನು ಸಾಗಿಸಬೇಕು. ಒಂದು

ಕೇಂದ್ರವನ್ನು ತೆರೆಯಲು ಅ—ಗೆ ಅವಕಾಶಕೊಡಲಿಲ್ಲ. ಆದರೆ ಅದರಿಂದ ಏನು? ಕೃಷ್ಣನಗರದವರು ಸಮ್ಮತಿಸಲಿಲ್ಲವೆ?—ಅವನು ಬಾಯಿ ಬಿಡದೆ ಸುಮ್ಮನೆ ಕೆಲಸಮಾಡಲಿ. ಇನ್ನೊಬ್ಬರೊಂದಿಗೆ ಹೇಳುವುದರಿಂದ ಅಥವಾ ಅವರೊಂದಿಗೆ ಜಗಳಕಾಯುವುದರಿಂದ ಪ್ರಯೋಜನವಿಲ್ಲ. ಈ ಜಗನ್ಮಾಯಿಯ ಕೆಲಸಕ್ಕೆ ಯಾರು ಸಹಾಯ ಮಾಡುವರೋ ಅವರ ಮೇಲೆ ಅವಳ ಕೃಪೆ ಬೀಳುವುದು. ಯಾರು ಇದನ್ನು ವಿರೋಧಿಸುವರೊ ಅವರು ಸುಮ್ಮನೆ ದೊಡ್ಡ ಹಗೆತನವನ್ನುಂಟುಮಾಡಿಕೊಳ್ಳುವುದು ಮಾತ್ರವಲ್ಲ; ತನ್ನ ಭವಿಷ್ಯದ ಬುಡಕ್ಕೆ ಕೊಡಲಿಯ ಪೆಟ್ಟನ್ನು ಕೊಡುವನು. ಎಲ್ಲಾ ಕಾಲಕ್ರಮೇಣ ಸರಿಹೋಗುವುದು. ಹನಿಗೂಡಿದರೆ ಹಳ್ಳ. ಒಂದು ಮಹತ್ ಕಾರ್ಯವಾಗುತ್ತಿರುವಾಗ, ತಳಹದಿಯನ್ನು ಹಾಕುವಾಗ, ಅಥವಾ ಒಂದು ದಾರಿಯನ್ನು ಮಾಡುವಾಗ, ಒಂದು ಅಮಾನುಷ ಶಕ್ತಿ ಬೇಕಾಗಿರುವಾಗ—ಒಬ್ಬರೋ ಇಬ್ಬರೋ ಮಹಾವ್ಯಕ್ತಿಗಳು ಮೌನವಾಗಿ ಗದ್ದಲವಿಲ್ಲದೆ ಅನೇಕ ತೊಂದರೆಗಳನ್ನು ಕಷ್ಟಗಳನ್ನು ವಿರೋಧಿಸಿ ಕೆಲಸಮಾಡುವರು. ಸಾವಿರಾರು ಜನರಿಗೆ ಒಂದು ಉಪಕಾರವಾದಾಗ ದೊಡ್ಡ ಗದ್ದಲವೇಳುವುದು. ಇಡೀ ದೇಶವೇ ಅವರನ್ನು ಘಂಟಾಘೋಷವಾಗಿ ಹೊಗಳುವುದು. ಆದರೆ ಯಂತ್ರವನ್ನು ಆಗಲೇ ಚಲಿಸುವಂತೆ ಮಾಡಿದೆ. ಈಗ ಒಬ್ಬ ಹುಡುಗ ಬೇಕಾದರೂ ನಡೆಸಬಲ್ಲ ಇದನ್ನು ತಿಳಿದುಕೊ, ನೀನು ಒಂದೋ ಅಥವಾ ಎರಡು ಹಳ್ಳಿಗೆ ಮಾಡಿದ ಉಪಕಾರ, ಇಪ್ಪತ್ತು ಜನ ಅನಾಶ್ರಿತರಿರುವ ಆ ಅನಾಥಾಲಯ, ಆ ಹತ್ತಿಪ್ಪತ್ತು ಕೆಲಸಗಾರರು—ಇವುಗಳೇ ಸಾಕು. ಎಂದಿಗೂ ನಾಶಮಾಡಲಾಗದ ಒಂದು ಕೇಂದ್ರವಾಗುವುದು. ಇವುಗಳಿಂದ ಕ್ರಮೇಣ ನೂರಾರು ಜನ ಸಾವಿರಾರು ಜನ ಉಪಕಾರ ಹೊಂದುವರು. ನಮಗೆ ಈಗ ಆರು ಜನ ಪುರುಷಸಿಂಹರು ಬೇಕಾಗಿದೆ. ನಂತರ ನೂರಾರು ಜನ ಸಾಮಾನ್ಯರಿಂದಲೂ ಶ್ಲಾಘನೀಯವಾದ ಕೆಲಸವನ್ನು ಮಾಡಬಹುದು.

ಅನಾಥ ಬಾಲಕಿಯರು ಸಂರಕ್ಷಣೆಗೆ ನಿನ್ನ ಹತ್ತಿರ ಬಂದರೆ, ಎಲ್ಲರಿಗಿಂತ ಹೆಚ್ಚಾಗಿ ಅವರನ್ನು ತೆಗೆದುಕೊಳ್ಳಬೇಕು. ಇಲ್ಲದೇ

ಇದ್ದರೆ, ಪಾಪ; ಅವರನ್ನು ಕ್ರೈಸ್ತ ಪಾದ್ರಿಗಳು ಕರೆದುಕೊಂಡು ಹೋಗುವರು ಅವರಿಗೆ ಪ್ರತ್ಯೇಕ ಸೌಕರ್ಯಗಳಿಲ್ಲದೇ ಇದ್ದರೆ ಏನಂತೆ. ಜಗನ್ಮಾಯಿಯ ದಯೆಯಿಂದ ಅವರಿಗೆ ಎಲ್ಲಾ ದೊರಕುವುದು. ಕುದುರೆ ಸಿಕ್ಕಿದಾಗ ಚಾವಟಿಗೆ ಪೇಚಾಡಬೇಡ. . . . . ಯಾರು ಸಿಕ್ಕುತ್ತಾರೊ ಅವರನ್ನೆಲ್ಲ ಒಟ್ಟಿಗೆ ಸೇರಿಸು. ಈಗ ಅವರನ್ನು ಆರಿಸುವುದಕ್ಕೆ ಆಗುವುದಿಲ್ಲ. ಕಾಲಕ್ರಮೇಣ ಎಲ್ಲಾ ಸರಿಹೋಗುವುದು. ಪ್ರತಿಯೊಂದು ಉದ್ಯಮದಲ್ಲಿಯೂ ನಿವಾರಿಸಬೇಕಾದ ಅನೇಕ ಅಡಚಣೆಗಳಿರುತ್ತವೆ. ಆದರೆ ದಿನ ಕಳೆದಂತೆ ದಾರಿಯು ಸುಗಮನವಾಗುವುದು.

ಆಂಗ್ಲೇಯ ಅಧಿಕಾರಿಗೆ ನನ್ನ ಅನೇಕ ವಂದನೆಗಳನ್ನು ತಿಳಿಸು. ಧೈರ್ಯದಿಂದ ಕೆಲಸ ಮಾಡು—ಶೂರನವನು—ಶಹಬಾಶ್—ಚೆನ್ನಾಗಿ ಕೆಲಸ ಮಾಡಿದೆ. ಬಾಗಲ್‌ಪುರದಲ್ಲಿ ಒಂದು ಕೇಂದ್ರವನ್ನು ಸ್ಥಾಪಿಸುವ ವಿಚಾರದಲ್ಲಿ ನೀನು ಬರೆದಿರುವುದು ನಿಸ್ಸಂದೇಹವಾಗಿ ಒಳ್ಳೆಯದೇ ಸರಿ—ಶಾಲೆಯ ಮಕ್ಕಳ ಜ್ಞಾನಾಭಿವೃದ್ಧಿ ಮುಂತಾದುವುಗಳು ಆಗುವುವು. ಆದರೆ ನಮ್ಮ ಸಂಘವಿರುವುದು ಅನಾಥರಿಗೆ, ದೀನರಿಗೆ, ನಿರಕ್ಷರಸ್ಥರಾದ ಬೇಸಾಯಗಾರರಿಗೆ ಮತ್ತು ಕೂಲಿಕಾರರಿಗೆ. ಮೊದಲು ಅವರಿಗೆ ಎಲ್ಲವನ್ನು ಮಾಡಿಯಾದಮೇಲೆ ಕಾಲಸಿಕ್ಕಿದರೆ ನಂತರ ಮೇಲುವರ್ಗದವರಿಗೆ. ರೈತರು ಮತ್ತು ಕೂಲಿಯವರನ್ನು ಪ್ರೀತಿಯಿಂದ ಜಯಿಸಬಹುದು. ನಂತರ ಸ್ವಲ್ಪ ಹಣವನ್ನು ಚಂದಾ ಎತ್ತಿ ತಮ್ಮ ಹಳ್ಳಿಯಲ್ಲೇ ಸಂಘವನ್ನು ಸ್ಥಾಪಿಸುವವರಾಗುವರು—ಕ್ರಮೇಣ ಅವರ ಗುಂಪಿನಿಂದಲೇ ಪ್ರಚಾರಕರೂ ಕೂಡ ಮುಂದೆ ಬರುವರು.

ರೈತಾಪಿ ಜನರ ಕೆಲವು ಬಾಲಕ ಬಾಲಕಿಯರಿಗೆ ಸ್ವಲ್ಪ ಓದು ಬರಹವನ್ನು ಕಲಿಸಿ ಅವರ ತಲೆಗೆ ಕೆಲವು ಮಹತ್ತರವಾದ ವಿಷಯಗಳನ್ನು ತುಂಬು. ನಂತರ ಪ್ರತಿ ಹಳ್ಳಿಯ ರೈತರೂ ಕೂಡ ಚಂದಾ ಎತ್ತಿ ತಮ್ಮ ಹಳ್ಳಿಯಲ್ಲೇ ಇಂತಹ ಒಂದು ಶಾಲೆ ತೆರೆಯುವರು. "ಉದ್ಧರೇ

ದಾತ್ಮನಾತ್ಮಾನಂ " ತನ್ನಿಂದ ತಾನೇ ಉದ್ಧಾರವಾಗಬೇಕು. ಇದು ಎಲ್ಲಾ ಕಾರ್ಯಕ್ಷೇತ್ರಕ್ಕೂ ಸಲ್ಲುತ್ತದೆ. ತಮ್ಮಿಂದ ತಾವೆ ಸಹಾಯ ಮಾಡಿಕೊಳ್ಳುವುದಕ್ಕೆ ನಾವು ಸಹಾಯ ಮಾಡುವುದು. ನಿನ್ನ ಪ್ರತಿ ದಿನದ ಆಹಾರವನ್ನು ಅವರು ಒದಗಿಸುತ್ತಿರುವುದೇ ನಿಜವಾಗಿ ಮಾಡಿದ ಕೆಲಸದ ಒಂದು ಭಾಗ. ಅವರು ತಮ್ಮ ಸ್ಥಿತಿಯನ್ನು ತಾವೆ ಎಂದು ತಿಳಿದುಕೊಳ್ಳುತ್ತಾರೊ, ಸಹಾಯ ಮತ್ತು ಮುಂದುವರಿಯಬೇಕೆಂಬ ಆವಶ್ಯಕತೆಯನ್ನು ತಿಳಿಯುವರೋ, ಅಂದೇ ನಿನ್ನ ಕೆಲಸ ಪರಿಣಾಮಕಾರಿ ಯಾಗುತ್ತದೆ. ಕೆಲಸ ಸರಿಯಾದ ದಾರಿಯಲ್ಲಿ ಹೋಗುತ್ತಿದೆ ಎಂದು ತಿಳಿ. ಐಶ್ವರ್ಯವಂತರು ದಯೆಯಿಂದ ದೀನರಿಗೆ ಮಾಡುವ ಅಲ್ಪ ಉಪಕಾರ ಬಹಳ ಕಾಲ ಬರುವುದಿಲ್ಲ. ಕೊನೆಗೆ ಅದು ಇಬ್ಬರಿಗೂ ಕೇಡನ್ನಲ್ಲದೇ ಮತ್ತೇನನ್ನೂ ಮಾಡದು. ರೈತರು ಮತ್ತು ಕೂಲಿ ಕಾರರು ಮರಣೋನ್ಮುಖರಾಗಿದ್ದಾರೆ. ಆದುದರಿಂದ, ಬೇಕಾಗಿರುವುದೇ ನೆಂದರೆ ಐಶ್ವರ್ಯವಂತರು ಅವರಿಗೆ ತಮ್ಮ ಸತ್ವವನ್ನು ಪುನಃ ಗಳಿಸುವಂತೆ ಮಾಡಬೇಕು ಅಷ್ಟೆ. ಹೆಚ್ಚು ಬೇಡ. ನಂತರ ರೈತರನ್ನು ಕೂಲಿಕಾರ ರನ್ನು ತಮ್ಮ ಜೀವನದ ಸಮಸ್ಯೆಯನ್ನು ಕಣ್ಣುಬಿಟ್ಟು ನೋಡಿ ಅದನ್ನು ಎದುರಿಸಿ ನಿವಾರಿಸಿಕೊಳ್ಳುವುದಕ್ಕೆ ಬಿಡಿ. ಆದರೆ ನೀನು ಜೋಪಾನ ವಾಗಿರಬೇಕು. ಬಡರೈತರು, ಕೂಲಿಕಾರರು, ಶ್ರೀಮಂತರು ಇವರುಗಳ ಮಧ್ಯೆ ಅಂತಃಕಲಹವನ್ನು ತಂದೊಡ್ಡಕೂಡದು. ಶ್ರೀಮಂತರನ್ನು ಎಂದಿಗೂ ದೂರದಂತೆ ನಿರ್ಧಾರ ಮಾಡು—" ಸ್ವಕಾರ್ಯ ಮುದ್ಧರೇತ್ ಪ್ರಾಜ್ಞಃ " ಬುದ್ಧಿವಂತನಾದವನು ತನ್ನ ಕೆಲಸ ಮುಂದುವರಿಸುವುದನ್ನು ನೋಡಿಕೊಳ್ಳಬೇಕು.

ಜಯಗುರು ! ಜಯ ಜಗನ್ಮಯಿ ! ಯಾವ ಅಂಜಿಕೆ ! ಅವಕಾಶ, ಚಿಕಿತ್ಸೆ ಮತ್ತು ಅದರ ಪ್ರಯೋಗ ಎಲ್ಲಾ ತಮಗೆ ತಾವೇ ಬರುವುವು. ಪ್ರತಿ ಫಲಾಕಾಂಕ್ಷೆ ನನಗಿಲ್ಲ. ಚೆನ್ನಾಗಿರಲಿ ಇಲ್ಲದಿರಲಿ ನೀನು ಇಷ್ಟು ಕೆಲಸ ಮಾಡಿದರೆ ನಾನು ಸಂತೋಷಪಡುವೆನು. ತರ್ಕ, ಗ್ರಂಥ, ಸಿದ್ಧಾಂತ, ತತ್ತ್ವ, ಇವುಗಳೆಲ್ಲವನ್ನೂ ಈ ನನ್ನ ವೃದ್ಧಾಪ್ಯದಲ್ಲಿ ಜಿಗುಪ್ಸೆ

ಯಿಂದ ನೋಡುವೆನು. ಯಾರು ಕೆಲಸ ಮಾಡುತ್ತಾರೆಯೊ ಅವರು ನನ್ನ ತಲೆಯ ಮೇಲಿನ ಕಿರೀಟವಾಗುತ್ತಾರೆ. ಇದನ್ನು ನಿಜವಾಗಿ ತಿಳಿ. ಕೆಲಸ ಮಾಡುವುದಕ್ಕೆ ಬಾಯಿಮಾತು ಮತ್ತು ಗದ್ದಲ ಪ್ರಯೋಜನವಿಲ್ಲ ಇವು ನಮ್ಮ ಕಾಲವನ್ನು ವೃಥಾ ವ್ಯರ್ಥ ಮಾಡುವುದು. ಇದು ಪರೋಪ ಕಾರದ ಕೆಲಸವನ್ನು ಒಂದು ಹೆಜ್ಜೆಯೂ ಮುಂದಕ್ಕೆ ನೂಕದೆ ನಮ್ಮ ಜೀವನದ ಶಕ್ತಿಯನ್ನೆಲ್ಲ ಹೀರುವುದು. "ಮಾಭೈಃ," ಧೈರ್ಯತಾಳು ಭಲೆ! ನಿಜವಾದ ಶೂರನೇ ಸರಿ! ಶ್ರೀ ಗುರುದೇವನು ನಿನ್ನ ಹೃದಯದಲ್ಲಿ ನೆಲೆಸಲಿ! ಜಗನ್ಮಾಯಿ ನಿನಗೆ ದಾರಿ ತೋರಲಿ!

ನಿನ್ನ ವಿಶ್ವಾಸಪೂರ್ವಕ,
ವಿವೇಕಾನಂದ.

೯೪

ಅಲಮೀಡ, ಕ್ಯಾಲಿಫೋರ್ನಿಯ.
೧೨ನೇ ಏಪ್ರಿಲ್ ೧೯೦೦

ನನ್ನ ಪ್ರಿಯ ಜೊ,—

ಈಗತಾನೆ ನಿನ್ನ ಮತ್ತು ಶ್ರೀಮತಿ ಬಿ—ಅವರ ಸ್ವಾಗತ ಪತ್ರ ಕೈಸೇರಿತು. ಇದನ್ನು ಲಂಡನ್ನಿಗೆ ಕಳುಹಿಸುತ್ತೇನೆ. —ಶ್ರೀಮತಿಯು ಹುಷಾರಾಗುತ್ತಿರುವುದನ್ನು ಕೇಳಿ ತುಂಬಾ ಸಂತೋಷವಾಯಿತು.

ಶ್ರೀಸ್ಟರ್ಜ—ಅಧ್ಯಕ್ಷತನಕ್ಕೆ ರಾಜೀನಾಮೆ ಕೊಟ್ಟದ್ದನ್ನು ಕೇಳಿ ತುಂಬಾ ದುಃಖವಾಯಿತು.

ಒಳ್ಳೆಯದು. ಹೆಚ್ಚು ತೊಂದರೆಗಳು ಬರಬಹುದೆಂಬ ಅಂಜಿಕೆ ಯಿಂದ ನಾನು ಸುಮ್ಮನಾಗುತ್ತೇನೆ. ನನ್ನ ನಡತೆ ಬಹಳ ಒರಟಾ ದುದು. ಒಂದುಸರಿ ಕೋಪ ತಾಳಿದರೆ ಮಾತನಾಡಬೇಕಾಗಿಬರುತ್ತದೆ—ಅವನ ಮನಸ್ಸಿನ ಶಾಂತಿಗೆ ತುಂಬ ಕಷ್ಟಬರುತ್ತದೆ. ನಾನು ಅವನಿಗೆ—ಆತನ ವಿಷಯದಲ್ಲಿದ್ದ ಅಭಿಪ್ರಾಯ ಸಂಪೂರ್ಣ ತಪ್ಪೆಂದು ಹೇಳುವುದಕ್ಕೆ ಮಾತ್ರ ಪತ್ರವನ್ನು ಬರೆದೆನು.

ಕೆಲಸ ಯಾವಾಗಲೂ ಕಷ್ಟ. ನನ್ನ ಕೆಲಸ ಸಂಪೂರ್ಣವಾಗಿ ನಿಂತುಹೋಗಲಿ, ನನ್ನ ಮನಸ್ಸು ಜಗನ್ಮಯಿಯಲ್ಲಿ ತಲ್ಲೀನವಾಗಲೆಂದು, ಜೊ,—ನನಗಾಗಿ ಪ್ರಾರ್ಥಿಸು. ಅವಳ ಕೆಲಸ ಅವಳಿಗೆ ಗೊತ್ತಿದೆ.

ಲಂಡನ್ನಿನಲ್ಲಿ ನೀವು ಮತ್ತೊಮ್ಮೆ ಇರುವುದಕ್ಕೆ ಸಂತೋಷಿಸಬಹುದು—ಹಳೆಯ ಸ್ನೇಹಿತರುಗಳು—ಅವರೆಲ್ಲರಿಗೂ ನನ್ನ ಪ್ರೀತಿಯನ್ನು ಕೃತಜ್ಞತೆಯನ್ನು ಹೇಳು.

ನಾನು ಆರೋಗ್ಯದಿಂದ ಇರುವೆನು. ಮನಸ್ಸೂ ಕೂಡ ಸಮಾಧಾನ ದಲ್ಲಿರುವುದು. ದೇಹದ ಶಾಂತಿಗಿಂತ ಹೆಚ್ಚಾಗಿ ಆತ್ಮದ ಶಾಂತಿಯೇ ತೋರುತ್ತದೆ. ಕದನಗಳಲ್ಲಿ ಸೋಲುವೆವು ಮತ್ತು ಗೆಲ್ಲುವೆವು. ನನ್ನ ಸಾಮಾನನ್ನು ಮೂಟೆ ಕಟ್ಟಿ ಇಟ್ಟಿರುವೆನು. ಆ ಪರಮ ಬಂಧವಿಮೋಚಕನಿಗಾಗಿ ಕಾಯುತ್ತಿರುವೆನು.

"ಶಿವ, ಶಿವ, ಸಾಗಿಸು ಆಚೆಯ ತೀರಕ್ಕೆ ನನ್ನ ದೋಣಿಯನ್ನು"

ಏನಾದರೂ ಆಗಲಿ ಜೋಕೆ; ದಕ್ಷಿಣೇಶ್ವರದ ಆಲದ ಮರದ ಕೆಳಗೆ ಶ್ರೀರಾಮಕೃಷ್ಣರ ಅದ್ಭುತ ಉಪದೇಶಾಮೃತವನ್ನು ಆಶ್ಚರ್ಯಚಕಿತನಾಗಿ ಕೇಳುತ್ತಿದ್ದ ಬಾಲಕನು ಇನ್ನೂ ನಾನು. ಅದೇ ನನ್ನ ಸಹಜ ಸ್ವಭಾವ. ಕೆಲಸ ಪರೋಪಕಾರ ಮುಂತಾದುವುಗಳೆಲ್ಲ ತೋರಿಕೆ ಮಾತ್ರ. ಈಗ ಪುನಃ ಅವರ ವಾಣಿಯನ್ನು ಕೇಳುತ್ತಿರುವೆನು; ನನ್ನ ಆತ್ಮೋದ್ದೀಪನ ಮಾಡುತ್ತಿದ್ದ ಅದೇ ಆ ಹಳೆಯ ವಾಣಿ. ಬಂಧನಗಳು ಕಳಚಿಬೀಳುತ್ತಿವೆ. ಪ್ರೇಮ ಕುಗ್ಗುತ್ತಿದೆ. ಕೆಲಸ ಅರುಚಿಯಾಗುತ್ತಿದೆ. —ಜೀವನದ ಆಕರ್ಷಣೆ ಹೋಯಿತು. ಈಗ ಗುರುದೇವನ ವಾಣಿಯೊಂದೇ ಕರೆಯುತ್ತಿದೆ. "ಬರುತ್ತೇನೆ ಹೇ ಗುರುದೇವ! ಬರುತ್ತೇನೆ ಹೇ ಗುರುದೇವ! —"ಸತ್ತವರು ಸತ್ತವರನ್ನು ಹೊಗಳಲಿ—ನೀನು ನನ್ನನ್ನು ಹಿಂಬಾಲಿಸು." "ಹೇ ನನ್ನ ಪ್ರೇಮೇಶ್ವರನೇ ನಾನು ಬರುತ್ತೇನೆ, ನಾನು ಬರುತ್ತೇನೆ!"

ಹೌದು ನಾನು ಬರುತ್ತೇನೆ, ನಿರ್ವಾಣ ನನ್ನ ಮುಂದಿದೆ. ಕೆಲವು ವೇಳೆ ನಾನದನ್ನು ಅನುಭವಿಸುತ್ತೇನೆ. ಸ್ವಲ್ಪವೂ ಕದಲದ ಉಸಿರಾಡದ ಅದೇ ಅನಂತ ಶಾಂತಿ ಸಾಗರ.

ನಾನು ಹುಟ್ಟಿದೆ, ಸಂತೋಷ. ಕಷ್ಟಗಳನ್ನು ಅನುಭವಿಸಿದೆ, ಸಂತೋಷ. ದೊಡ್ಡ ತಪ್ಪುಗಳನ್ನು ಮಾಡಿದೆ ಸಂತೋಷ. ಶಾಂತಿ ಯಿಂದ ಹೊರಡುವುದಕ್ಕೆ ಸಂತೋಷ. ಯಾರನ್ನೂ ನಾನು ಬಂಧಿಸಿ ಹೋಗುವುದಿಲ್ಲ. ನಾನು ಯಾವ ಬಂಧನಗಳನ್ನೂ ತೆಗೆದುಕೊಂಡು ಹೋಗುವುದಿಲ್ಲ. ಈ ದೇಹ ಪತನವಾಗಿ ನನ್ನನ್ನು ಬಿಡುಗಡೆ ಮಾಡು ವುದೋ ಅಥವಾ ನಾನು ಜೀವನ್ಮುಕ್ತಿಯನ್ನು ಪಡೆಯುವೆನೋ. ಹಳೆಯ ಮನುಷ್ಯನು ಹೋದ. ಎಂದೋ ಹೋದ. ಪುನಃ ಹಿಂತಿರುಗಿ ಬರುವುದಿಲ್ಲ.

ದಾರಿ ತೋರಿಸುವವನು, ಗುರು, ನಾಯಕ, ಬೋಧಕ ಇವು ಹೊರಟುಹೋದವು; ಹುಡುಗ, ವಿದ್ಯಾರ್ಥಿ, ಸೇವಕ ಮಾತ್ರ ಹಿಂದೆ ಉಳಿದಿದೆ.

ಜೊ ! ನಾನು ಏತಕ್ಕೆ ಅನನ ತಂಟೆಗೆ ಹೋಗುವುದಿಲ್ಲ ಗೊತ್ತಾ ಯಿತೆ ? ಮತ್ತೊಬ್ಬರ ಕೆಲಸದಲ್ಲಿ ಕೈಹಾಕುವುದಕ್ಕೆ ನಾನು ಯಾರು ? ನಾಯಕನ ಸ್ಥಾನವನ್ನು ಎಂದೋ ತ್ಯಜಿಸಿದೆ. ಈಗ ನನಗೆ ಮಾತ ನಾಡುವುದಕ್ಕೆ ಅಧಿಕಾರವಿಲ್ಲ. ಈ ವರುಷದ ಆದಿಯಿಂದ ಇಂಡಿಯಾ ದೇಶದಲ್ಲಿ ನಾನು ಏನನ್ನೂ ಹೇಳಿ ಮಾಡಿಸಲಿಲ್ಲ. ಅದು ನಿನಗೆ ಗೊತ್ತಿದೆ. ಹಿಂದೆ ನೀನು ಮತ್ತು ಶ್ರೀಮತಿ ಬ—ಇವರುಗಳು ತೋರಿದ ಪ್ರೀತಿಗೆ ಅನೇಕ ವಂದನೆಗಳು. ಅನವರತವೂ ಎಲ್ಲಾ ಆಶೀರ್ವಾದಗಳೂ ನಿನಗೆ. ನನ್ನ ಜೀವನದ ಅತ್ಯಂತ ಮಧುರವಾದ ಸಮಯವೇ ನಾನು ಏನೂ ಕೆಲಸ ಮಾಡದೆ ಸುಮ್ಮನೆ ತೇಲುತ್ತಿದ್ದಾಗ. ಪುನಃ ನಾನೀಗ ತೇಲುತ್ತಿರುವೆನು—ಮೇಲೆ ಬೆಳಗುವ ಬೆಚ್ಚಗಿರುವ ಸೂರ್ಯ, ಸುತ್ತಲೂ ನಾನಾ ವಿಧದ ತರುಲತೆಗಳು—ಬಿಸಿಲಲ್ಲಿ ಎಲ್ಲವೂ ನಿಶ್ಯಬ್ಧವಾಗಿದೆ

ಶಾಂತವಾಗಿದೆ—ನಾನು ತೇಲುತ್ತಿರುವೆನು, ಮಂದವಾಗಿ ನದಿಯ ವಕ್ಷಸ್ಥಳದಲ್ಲಿ ತೇಲುತ್ತಿರುವೆನು. ನನ್ನ ಕೈಕಾಲುಗಳಿಂದ ಸ್ವಲ್ಪವೂ ಶಬ್ದ ಮಾಡಿ ನೀರನ್ನು ಅಲುಗಿಸ ಬಯಸೆನು. —ವಿಚಿತ್ರವಾದ ಮೌನ ವೆಲ್ಲಿ ಒಡೆಯುವುದೋ ಎಂಬ ಅಂಜಿಕೆ. ಇದು ನಿಜವಾಗಿಯೂ ಒಂದು ಕನಸು, ಎಂಬ ಭಾವವನ್ನು ಹೆಚ್ಚಿಸುವ ಮೌನ.

ನನ್ನ ಕೆಲಸದ ಹಿಂದೆ ಆಸೆ ಇತ್ತು. ನನ್ನ ಪ್ರೀತಿಯ ಹಿಂದೆ ವ್ಯಕ್ತಿತ್ವವಿತ್ತು. ನನ್ನ ಪವಿತ್ರತೆಯ ಹಿಂದೆ ಅಂಜಿಕೆ ಇತ್ತು. ನನ್ನ ನಾಯಕತ್ವದ ಹಿಂದೆ ಅಧಿಕಾರದ ಆಸೆ ಇತ್ತು. ಈಗ ಅವುಗಳೆಲ್ಲ ಮಾಯವಾಗುತ್ತಿವೆ. ನಾನು ಸುಮ್ಮನೇ ಸಿಕ್ಕಿದ ಕಡೆ ತೇಲುತ್ತೇನೆ. ನಾನು ಬರುತ್ತೇನೆ. ಜಗನ್ಮಾಯಿ ನಾನು ಬರುತ್ತೇನೆ. ನಿನ್ನ ಪ್ರೇಮಾ ಲಿಂಗನದಲ್ಲಿ ತೇಲುತ್ತ ನೀನು ಬಯಸಿದ ಕಡೆ ನನ್ನನ್ನು ಕರೆದೊಯ್ಯಿ. ನಿಶ್ಶಬ್ಧವಾದ ಆಶ್ಚರ್ಯಕರವಾದ, ಕಾತುರದ ಲೋಕಕ್ಕೆ ನಾನು ಬರುತ್ತೇನೆ. ಸಭಿಕನಾಗಿ ಮತ್ತೆಂದಿಗೂ ಪಾತ್ರಧಾರಿಯಾಗಿ ಅಲ್ಲ.

ಓಂ ! ಎಷ್ಟು ಶಾಂತವಾಗಿದೆ ! ನನ್ನ ಆಲೋಚನೆಗಳು ಎಲ್ಲೋ ದೂರದಿಂದ, ಬಹಳ ದೂರದಿಂದ ನನ್ನ ಹೃದಯಾಂತರಾಳದಿಂದ ಬರುವಂತೆ ತೋರುತ್ತಿದೆ. ಅಸ್ಪಷ್ಟವಾದಂತೆ ದೂರದಿಂದ ಬರುವ ಪಿಸು ಮಾತಿನಂತಿದೆ. ಮಧುರ, ಮಧುರ ಶಾಂತಿ ಎಲ್ಲೆಲ್ಲಿಯೂ. ಇದರಂತೆ ನಿದ್ರಾ ಪ್ರಪಂಚಕ್ಕೆ ಜಾರಿಹೋಗುವಾಗ ವಿಷಯಗಳನ್ನು ನೋಡಿ ನೆರಳಂತೆ ತೋರುವ ಕೆಲವು ಕ್ಷಣಗಳು ಕಾಣುವುವು—ಅಂಜಿಕೆ ಇಲ್ಲ— ಪ್ರೀತಿ ಇಲ್ಲ. ಉದ್ವೇಗವಿಲ್ಲ. ಮೂಕ ವಿಗ್ರಹ, ಚಿತ್ರಪಟ ಇವುಗಳ ಮಧ್ಯದಲ್ಲಿ ಒಬ್ಬನಿರುವಾಗ ತೋರುವ ಶಾಂತಿ, —ನಾನು ಬರುತ್ತೇನೆ. ಹೇ ದೇವ ನಾನು ಬರುತ್ತೇನೆ.

ಪ್ರಪಂಚವಿದೆ. ಆದರೆ ಸುಂದರವಾಗಿಯೂ ಇಲ್ಲ, ಕುರೂಪ ವಾಗಿಯೂ ಇಲ್ಲ. ಭಾವೋದ್ರೇಕವನ್ನು ಮಾಡದ ಇಂದ್ರಿಯ ಜ್ಞಾನ ದಂತೆ (Sensation) ಓ ! ಜೊ ! ಅದರ ಆನಂದ ! ಸರ್ವವೂ ಒಳ್ಳೆಯ

ದಾಗಿರುವುದು. ಸುಂದರವಾಗಿರುವುದು, ಏಕೆಂದರೆ ನನಗೆ ವಸ್ತುಗಳ ಸಂಬಂಧಾರ್ಥ ತಗ್ಗುತ್ತಿದೆ—ಇವುಗಳಲ್ಲಿ ನನ್ನ ದೇಹವೇ ಮೊದಲನೆಯದು—ಓಂ ತತ್ ಸತ್.

ನಿಮಗೆಲ್ಲರಿಗೂ ಲಂಡನ್ನಿನಲ್ಲಿ ಪ್ಯಾರಿಸಿನಲ್ಲಿ ಶುಭವಾಗುವದೆಂದು ನಾನೆಣಿಸುತ್ತೇನೆ. ಹೊಸ ಆನಂದ—ಮನಸ್ಸು ದೇಹಗಳಿಗೆ ಹೊಸ ಅನುಕೂಲ.

ನಿನಗೆ ಮತ್ತು ಶ್ರೀಮತಿ ಬ—ಗೆ ಎಂದಿನಂತೆ ಪ್ರೀತಿಗಳು.

ನಿನ್ನ ವಿಶ್ವಾಸಪೂರ್ವಕ
ವಿವೇಕಾನಂದ.

೯೫

ಪ್ಯಾರಿಸ್
೨೮ನೇ ಆಗಸ್ಟ್ ೧೯೦೦

ಪ್ರಿಯ,—

ಜೀವನವೆ ಹೀಗೆ, ದುಡಿತ ಬರೀ ದುಡಿತ. ನಮಗೆ ಇಷ್ಟು ಏನು ಮಾಡುವುದಕ್ಕೆ ಸಾಧ್ಯ. ದುಡಿತ ದುಡಿತ! ಏನಾದರೂ ಲಭಿಸುವುದು. ಎಲ್ಲಿಯಾದರೂ ದಾರಿ ಕಾಣುವುದು. ಹಾಗೆ ಇಲ್ಲದೇ ಇದ್ದರೆ (ಬಹುಶಃ ಹಾಗೆ ಎಂದಿಗೂ ಆಗಲಾರದು) ಆಗ ಮಾಡುವುದೇನು? ನಮ್ಮ ಹೋರಾಟವೆಲ್ಲ ಕೆಲವು ಕಾಲ ನಮ್ಮ ಜೀವನದ ಅಂತ್ಯ ಸಾವನ್ನು ತಡೆಯುವುದಕ್ಕೆ. ಹೇ ಮೃತ್ಯು! ಜೀವನದ ಪರಮ ಉಪಶಮನಕಾರಿ. ನೀನಿಲ್ಲದೇ ಇದ್ದರೆ ಪ್ರಪಂಚ ಏನು ಮಾಡುತ್ತಿತ್ತು.

ಈಗ ನಮ್ಮ ಕಣ್ಣಿಗೆ ಕಾಣುವ ಪ್ರಪಂಚ ಸತ್ಯವಲ್ಲ ಶಾಶ್ವತವಲ್ಲ. ದೇವರಿಗೆ ಅನಂತ ಧನ್ಯವಾದಗಳು! ಭವಿಷ್ಯ ಹೇಗೆ ಇದಕ್ಕಿಂತ ಉತ್ತಮವಾಗಿರಬಲ್ಲದು? ಅದು ಈ ಪ್ರಪಂಚದ ಪರಿಣಾಮವಾಗಿರಬೇಕು— ಇದಕ್ಕಿಂತ ಕೇಡಿಲ್ಲದೇ ಇದ್ದರೆ ಇದರಂತೆ ಆದರೂ ಇರಬೇಕು.

ಸ್ವಪ್ನ ಹೇ ಸ್ವಪ್ನ! ಸ್ವಪ್ನ ಕಾಣೆ. ಸ್ವಪ್ನ, ಈ ಮಾಯಾ ಸ್ವಪ್ನ, ಜೀವನಕ್ಕೆ ಕಾರಣ. ಇದಕ್ಕೆ ಚಿಕಿತ್ಸೆಯೂ ಇದೆ. ಸ್ವಪ್ನ ಸ್ವಪ್ನ ಬರೀ ಸ್ವಪ್ನ! ಸ್ವಪ್ನವನ್ನು ಸ್ವಪ್ನದಿಂದ ಛೇದಿಸಿ.

ನಾನು ಫ್ರೆಂಚ್ ಭಾಷೆಯನ್ನು ಕಲಿಯುತ್ತಿರುವೆನು. ಇಲ್ಲಿ ಮಾತನಾಡುವುದಕ್ಕೂ ಪ್ರಯತ್ನಿಸುತ್ತಿರುವೆನು. ಕೆಲವರು ಆಗಲೆ ಅದನ್ನು ಮೆಚ್ಚಿರುವರು. ಈ ಪ್ರಪಂಚದಲ್ಲಿ ಎಲ್ಲರಿಗೂ ಈ ಆದಿ ಅಂತ್ಯ ವಿಲ್ಲದ ಸಮಸ್ಯೆಯನ್ನು ಕುರಿತು, ಮಾತನಾಡಿ. ಅದೃಷ್ಟದ ದಾರದುಂಡೆ ಯಲ್ಲಿ ತುದಿ ಯಾರಿಗೂ ಕಾಣುವುದಿಲ್ಲ. ಆದರೂ ತಾತ್ಕಾಲಿಕವಾಗಿ ತನ್ನ ತೃಪ್ತಿಯುಮಟ್ಟಿಗಾದರೂ ಸಿಕ್ಕೀತೆಂದು ಭ್ರಮೆಪಡುವನು !

ಆಗಲಿ ಈಗ ಮಹಾ ಕಾರ್ಯಗಳನ್ನು ಮಾಡಬೇಕಾಗಿದೆ. ಮಹಾ-ಕಾರ್ಯಗಳನ್ನು ಯಾರು ಲೆಕ್ಕಿಸುವರು ? ಸಣ್ಣ ಕೆಲಸಗಳನ್ನು ಏತಕ್ಕೆ ಮಾಡಬಾರದು ? ಒಂದು ಮತ್ತೊಂದರಷ್ಟೆ ಒಳ್ಳೆಯದು. ಸಣ್ಣ ಕೆಲಸ ಗಳ ಮಹತ್ವ ಗೀತೆ ಬೋಧಿಸುವುದು ಇದನ್ನು. ಈ ಪುರಾತನ ಗ್ರಂಥಕ್ಕೆ ಅನಂತ ಧನ್ಯವಾದಗಳು !

ದೇಹದ ವಿಷಯವನ್ನು ಕುರಿತು ಆಲೋಚಿಸುವುದಕ್ಕೆ ನನಗೆ ಹೆಚ್ಚು ಸಮಯ ಸಿಕ್ಕಲಿಲ್ಲ. ಆದಕಾರಣ ಅದು ಸರಿಯಾಗಿಯೇ ಇರಬೇಕು. ಇಲ್ಲಿ ಯಾವುದೂ ಸರಿಯಾಗಿರುವುದಿಲ್ಲ. ಕೆಲವು ವೇಳೆ ಅದನ್ನು ಮರೆಯುವೆವು. ಅದನ್ನೇ ಚೆನ್ನಾಗಿರುವುದು, ಆರೋಗ್ಯವೆನ್ನು ವುದು !

ಒಳ್ಳೆಯದೊ ಕೆಟ್ಟದ್ದೊ ನಮ್ಮ ಪಾತ್ರವನ್ನು ಇಲ್ಲಿ ನಾವೂ ನಟಿಸಬೇಕಾಗಿದೆ. ಕನಸು ಚಾರಿದಮೇಲೆ, ರಂಗಭೂಮಿಯಿಂದ ಸರಿದಾದ ಮೇಲೆ ಇದನ್ನೆಲ್ಲ ನೋಡಿ ಮನದಣಿಯ ನಗುವೆವು. ಇದೊಂದೆ ನನಗೆ ನಿಶ್ಚಯವಾಗಿ ಕಾಣುವುದು.

೯೬

ಸ್ಯಾನ್‌ಫ್ರಾನ್ಸಿಸ್ಕೊ
೨೬ನೇ ಮೇ ೧೯೦೦

ಅನಂತ ಆಶೀರ್ವಾದಗಳು ನಿನಗೆ. ಸ್ವಲ್ಪವೂ ನಿರಾಶನಾಗಬೇಡ. "ಶಿವಗುರು ! ಶಿವಗುರು !" ನೀನು ಕ್ಷತ್ರಿಯನ ರಕ್ತದಿಂದ ಉದಯಿಸಿ ದವನು. ನಮ್ಮ ಗೈರಿಕವಸನ ರಣಕ್ಷೇತ್ರದ ಸಾವಿನ ಹೊದಿಕೆ.

ಮಹದಾಶಯಕ್ಕೆ ಸಾಯುವುದು ನಮ್ಮ ಗುರಿ, ಜಯವಲ್ಲ. ಶಿವಗುರು !

ಕ್ರೂರ ವಿಧಿಯ ತೆರೆಗಳು ಕಪ್ಪು ಮತ್ತು ಮಂದವಾಗಿರುವುವು. ಆದರೆ ನಾನು ಯಜಮಾನ. ನಾನು ಕೈಯ್ಯನ್ನು ಎತ್ತುತ್ತೇನೆ, ನೋಡು ಅವು ಮಾಯವಾಗುವುವು. ಇವುಗಳೆಲ್ಲ ಕೆಲಸಕ್ಕೆ ಬಾರದ ಅಂಜಿಕೆ. ಅಂಜಿಕೆಗೆ ಅಂಜಿಕೆ ನಾನು. ಭಯಕ್ಕೆ ಭಯ ನಾನು. ನಿರ್ಭೀತನು ನಾನು. ಅದ್ವೈತಿಯು ನಾನು. ವಿಧಿಯನ್ನಾಳುವವನು ನಾನು. ಇರುವುದನ್ನು ಅಳಿಸುವವನು ನಾನು. ಶಿವಗುರು ! ಸ್ಥಿರನಾಗು. ಮಗು ! ಹೊನ್ನು ಮತ್ತು ಇತರ ಪ್ರಲೋಭನಗಳಿಗೆ ಮರುಳಾಗಬೇಡ. ನಾವು ಜಯಿಸುತ್ತೇವೆ !

೯೭

ದೇವಘರ್.
ಬಾಬು ಪ್ರಿಯನಾಥ ಮುಖರ್ಜಿ.
೨೩ನೇ ಡಿಸೆಂಬರ್ ೧೯೦೦.

ಪ್ರಿಯ ಮಾತೆ,—

ನಿನ್ನ ಪತ್ರ ಸೇರಿ ಸಂತೋಷವಾಯಿತು. ನೀವು ತಿಳಿದುಕೊಂಡಿರುವುದು ಸರಿ. ಆ ಈಶ್ವರನು ಅನಿರ್ವಚನೀಯ ಪ್ರೇಮ ಸ್ವರೂಪನು. ನಾರದ ಹೇಳಿದ ಈ ದೇವರ ಲಕ್ಷಣ ಜಗತ್ತಿನಲ್ಲಿ ಕಾಣುವುದು, ಮತ್ತು ಎಲ್ಲರೂ ಒಪ್ಪಿಕೊಂಡಿರುವುದೆಂಬುದೇ ನನ್ನ ದೃಢ ನಂಬಿಕೆ. ಅನೇಕ ವಸ್ತುಗಳ ಮೊತ್ತವನ್ನೇ ಸಮಷ್ಟಿ ಎನ್ನುವುದು. ಪ್ರತಿಯೊಂದು ವ್ಯಕ್ತಿಗೂ ವ್ಯಷ್ಟಿ ಎನ್ನುವುದು. ನೀನು ನಾನು ಪ್ರತಿಯೊಬ್ಬರೂ ವ್ಯಷ್ಟಿ. ಸಮಾಜ ಸಮಷ್ಟಿ. ನೀನು ನಾನು ಪ್ರಾಣಿ, ಹಕ್ಕಿ, ಹುಳು, ಹುಪ್ಪಟೆ, ಮರ, ಬಳ್ಳಿ, ಭೂಮಿ, ಗ್ರಹ, ತಾರೆ— ಪ್ರತಿಯೊಂದೂ ವ್ಯಷ್ಟಿ. ವಿಶ್ವವೇ ಸಮಷ್ಟಿ. ಇದನ್ನೇ ವೇದಾಂತದಲ್ಲಿ ವಿರಾಟ್, ಹಿರಣ್ಯಗರ್ಭ, ಅಥವಾ ಈಶ್ವರ ಎನ್ನುವುದು. ಪುರಾಣದಲ್ಲಿ ಬ್ರಹ್ಮ, ವಿಷ್ಣು, ದೇವಿ, ಇನ್ನೂ ಮುಂತಾದ ಹೆಸರುಗಳಿಂದ ಇದನ್ನು

ಕರೆಯುವರು. ವ್ಯಷ್ಟಿಗೆ ಸ್ವಾತಂತ್ರ್ಯವಿದೆಯೇ ಇಲ್ಲವೆ, ಇದ್ದರೆ ಅದು ಎಷ್ಟು ಇರಬಹುದು. ವ್ಯಷ್ಟಿ ತನ್ನ ಸ್ವಂತ ಇಚ್ಛೆಯನ್ನು ಮತ್ತು ಸುಖವನ್ನು ಸಮಷ್ಟಿಗೋಸುಗ ತ್ಯಾಗ ಮಾಡಬೇಕೆ ಬೇಡವೆ, ಎಂಬುದೇ ಪ್ರತಿಯೊಂದು ಸಮಾಜದ ಮುಂದೆ ಇರುವ ನಿತ್ಯ ಪ್ರಶ್ನೆ. ಸಮಾಜ ಎಲ್ಲಾ ಕಡೆಯಲ್ಲಿಯೂ ಈ ಸಮಸ್ಯೆಯನ್ನು ಬಗೆಹರಿಸುವದರಲ್ಲಿ ತಲ್ಲೀನವಾಗಿರುವದು. ಆಧುನಿಕ ಪಾಶ್ಚಾತ್ಯ ಸಮಾಜದಲ್ಲಿ ಇವು ಪ್ರಬಲವಾದ ತರಂಗದಂತೆ ಘೋಷಿಸುತ್ತಿವೆ. ಸಾಮಾಜಿಕ ಉನ್ನತಿಗೆ ವ್ಯಕ್ತಿ ತನ್ನ ಸ್ವಾತಂತ್ರ್ಯವನ್ನು ತ್ಯಾಗ ಮಾಡಬೇಕು ಎಂಬ ಸಿಧ್ಧಾಂತವೇ ಸಮತಾವಾದ (Socialism). ಯಾವುದು ವ್ಯಕ್ತಿಯ ಸ್ವಾತಂತ್ರ್ಯದ ಪರವಾಗಿ ವಾದಿಸುವುದೋ ಅದೇ ವೈಯಕ್ತಿಕ ವಾದ (Individulism).

ನಿಯಮ ಶಿಕ್ಷೆ, ಶಾಸನ ಇವುಗಳ ಮೂಲಕ ಸಮಾದಲ್ಲಿ ವ್ಯಕ್ತಿಗೆ ನಿರಂತರ ದಾಸತ್ವ, ಬಲಾತ್ಕಾರದಿಂದ ಆತ್ಮವಿಸರ್ಜನೆ ಇವುಗಳ ಫಲ ಮತ್ತು ಪರಿಣಾಮಗಳಾವುದೆಂಬುದಕ್ಕೆ, ನಮ್ಮ ಭರತಖಂಡವೇ ಪ್ರಮುಖವಾದ ಉದಾಹರಣೆ. ಈ ದೇಶದಲ್ಲಿ ಶಾಸ್ತ್ರೋಕ್ತ ವಿಧಿಗನುಸಾರವಾಗಿ ಜನಗಳು ಹುಟ್ಟುವರು. ಬದುಕಿರುವವರೆಗೂ ನಿಯಮಾನುಸಾರವಾಗಿ ಭೋಜನ, ಪಾನ, ವಿವಾಹಾದಿ ಕರ್ಮಗಳೂ ಈ ಪ್ರಕಾರವಾಗಿಯೇ ನಡೆಯುವುವು. ಇನ್ನು ಸಾಯುವದು ಕೂಡ ಶಾಸ್ತ್ರೋಕ್ತ ರೀತಿಯಲ್ಲಿ. ಈ ಬಗೆಯ ಕಠೋರ ಶಿಕ್ಷೆಯಲ್ಲಿ ಒಂದು ದೊಡ್ಡ ಗುಣ ಬಿಟ್ಟರೆ ಉಳಿದ ಎಲ್ಲವೂ ದೋಷಮಯ. ಗುಣವೇನೆಂದರೆ ಒಂದೆರಡು ಕಾರ್ಯಗಳನ್ನು ಪ್ರತಿನಿತ್ಯವೂ ಅನೇಕ ತಲೆ ತಲಾಂತರದಿಂದ ಮಾಡಿಮಾಡಿ ಅಭ್ಯಾಸವಾಗಿ ಈಗ ಅಲ್ಪಾಯಾಸದಿಂದ ಜನರು ಅದನ್ನು ಮಾಡಬಲ್ಲರು.

ಮೂರು ಮಣ್ಣಿನ ಉಂಡೆಗಳನಿಟ್ಟು ನಾಲ್ಕೈದು ಕಡ್ಡಿಗಳನ್ನುರಿಸಿ ಈ ದೇಶದ ಅಡಿಗೆಯವನು ಮಾಡುವ ರುಚಿಕರವಾದ ಅನ್ನ ಪಲ್ಯ ಇನ್ನೆಲ್ಲಿಯೂ ದೊರೆಯದು. ಒಂದು ರೂಪಾಯಿ ಬೆಲೆ ಬಾಳುವಂತಹ ಮಾಂಧಾತನ ಕಾಲದ ಮಗ್ಗದಿಂದ ಹಳ್ಳದಲ್ಲಿ ಕಾಲಿಟ್ಟುಕೊಂಡು ಗಜ ಒಂದಕ್ಕೆ ಇಪ್ಪತು ರೂಪಾಯಿ ಬೆಲೆ ಬಾಳುವ ಕಿಂಕಾಪು ಈ ದೇಶದಲ್ಲಿ ಮಾತ್ರವೇ ತಯಾರಿಸಲು ಸಾಧ್ಯ. ಹರಕು ಚಾಪೆ, ಹರಳೆಣ್ಣೆ,

ಮಣ್ಣಿನ ಹಣತೆ, ಇವುಗಳ ಸಹಾಯದಿಂದ ಘನ ಪಂಡಿತನಾಗುವದು ಈ ದೇಶದಲ್ಲಿ ಮಾತ್ರ ಸಾಧ್ಯ. ಸೊಟ್ಟ ಮೋರೆಯ ಕುರೂಪಿ ಹೆಂಡತಿಯಮೇಲೆ ಸಕಲವನ್ನೂ ಸಹಿಸುವ ಪ್ರೇಮ, ಗುಣಹೀನನೂ ದುಷ್ಟನೂ ಆದ ಗಂಡನಲ್ಲಿ ಆಜನ್ಮ ಪತಿಭಕ್ತಿ—ಇದು ಈ ದೇಶದಲ್ಲಿ ಮಾತ್ರ ಸಾಧ್ಯ. ಇಷ್ಟೂ ಒಳ್ಳೆಯ ಗುಣಗಳಾಯಿತು.

ಆದರೆ ಇವೆಲ್ಲವನ್ನೂ ಮನುಷ್ಯರು ಹೇಗೆ ಮಾಡುತ್ತಾರೆಂದರೆ, ಪ್ರಾಣವಿಲ್ಲದ ಯಂತ್ರ ಕೆಲಸ ಮಾಡುವಂತೆ. ಇದರಿಂದ ಮನೋಸ್ಫೂರ್ತಿಯಿಲ್ಲ, ಹೃದಯ ವಿಕಾಸವಿಲ್ಲ, ಚೇತನದ ಚಿಹ್ನೆ ಇಲ್ಲ ಆಶಾತರಂಗವಿಲ್ಲ, ಶಕ್ತಿಯ ಪ್ರಬಲ ಉತ್ತೇಜನವಿಲ್ಲ, ತೀವ್ರ ಸುಖಾನುಭೂತಿಯಿಲ್ಲ, ನಿಕಟ ದುಃಖ ಸ್ಪರ್ಶವೂ ಇಲ್ಲ. ಹೊಸ ಹೊಸ ವಿಷಯಗಳನ್ನು ಕಂಡುಹಿಡಿಯಬೇಕೆಂಬ ಬುದ್ಧಿ ವೈಭವದ ಚಲನೆ ಇಲ್ಲ. ನೂತನತ್ವದ ಇಚ್ಛೆಯಿಲ್ಲ. ನೂತನ ವಸ್ತುಗಳ ಆದರಣೆ ಇಲ್ಲ, ಇದಕ್ಕಿಂತಲೂ ಉತ್ಕೃಷ್ಟವಾದ ಅವಸ್ಥೆ ಇದೆಯೆ ಇಲ್ಲವೆ ಎಂಬುದು ಮನಸ್ಸಿಗೇ ಬರುವದಿಲ್ಲ. ಅದು ಎಲ್ಲಿದೆಯೊ ಅಲ್ಲಿ ನಂಬಿಕೆಯನ್ನು ಉಂಟುಮಾಡುವದಿಲ್ಲ. ನಂಬಿಕೆ ಇದ್ದರೂ ಪ್ರಯತ್ನವಿಲ್ಲ. ಪ್ರಯತ್ನವಿದ್ದರೂ ಉತ್ಸಾಹಭಂಗ ಅದನ್ನು ನಾಶ ಮಾಡುವದು.

ನಿಯಮಾನುಸಾರ ನಡೆಯುವುದೇ ಒಳ್ಳೆಯದಾದಲ್ಲಿ, ಚಿರಕಾಲದಿಂದ ಕ್ರಮವಾಗಿ ಬಂದ ರೀತಿನೀತಿಗಳ ಸಂಪೂರ್ಣ ಅನುಸರಣವೇ ಧರ್ಮವಾದಲ್ಲಿ, ಮರಕ್ಕಿಂತಲೂ ಧಾರ್ಮಿಕವಾವುದು ? ರೈಲುಗಾಡಿಗಿಂತಲೂ ಭಕ್ತ ಸಾಧು ಪ್ರಾಣಿ ಯಾವುದು ? ನೀವೆ ಹೇಳಿದ ಕಲ್ಲಿನ ಚೂರು, ಪ್ರಕೃತಿ ನಿಯಮವನ್ನು ಎಂದಾದರೂ ಉಲ್ಲಂಘಿಸುವುದನ್ನು ನೋಡಿರುವರೆ ? ಆಕಳು, ಎಮ್ಮೆ, ಎಂದಾದರೂ ಪಾಪ ಮಾಡುವುದನ್ನು ಕಂಡಿರುವರೆ ?

ದೊಡ್ಡದಾದ ಹಡಗು, ಬಲವಾದ ರೈಲ್ವೆ ಎಂಜಿನ್ ಇವು ಜಡ. ಅವು ನಡೆಯುತ್ತವೆ, ತಿರುಗುತ್ತವೆ, ಓಡುತ್ತವೆ. ಆದರೂ ಅಚೇತನ. ಆದರೆ ಆತ್ಮರಕ್ಷಣಾರ್ಥವಾಗಿ ರೈಲುಮಾರ್ಗದಿಂದ ತಪ್ಪಿಸಿಕೊಳ್ಳಲು

ಸ್ವಾ. ಕೃ. ಸರಿದ ಸಣ್ಣದೊಂದು ಕೀಟ ಚೈತನ್ಯಶಾಲಿಯಾಗಿರು

ವುದೇಕೆ ? ಯಂತ್ರದಲ್ಲಿ ಇಚ್ಛಾಶಕ್ತಿ ವಿಕಾಸವಿಲ್ಲ. ಯಂತ್ರವು ನಿಯಮವನ್ನು ಅತಿಕ್ರಮಿಸಲೊಲ್ಲದು. ಕೀಟವಾದರೋ ನಿಯಮವನ್ನು ಅತಿಕ್ರಮಿಸಲು ಇಚ್ಛೆಯುಳ್ಳದ್ದು. ಆಗಲಿ ಹೋಗಲಿ ಅದು ನಿಯಮವನ್ನು ಎದುರಿಸುವುದು. ಅದು ಚೇತನ. ಈ ಇಚ್ಛಾಶಕ್ತಿಯ ವಿಕಾಸ ಎಷ್ಟು ಹೆಚ್ಚೋ ಅಷ್ಟೇ ಸುಖ ಹೆಚ್ಚು. ಅಷ್ಟು ದೊಡ್ಡದು ಜೀವ. ಈಶ್ವರನ ಇಚ್ಛಾಶಕ್ತಿ ಪೂರ್ಣ ಸಫಲವಾದುದರಿಂದಲೇ ಅದು ಸರ್ವೋಚ್ಚ.

ವಿದ್ಯಾಭ್ಯಾಸವೆಂದರೇನು ? ಪುಸ್ತಕ ಪಾಠವೇನು ? ಅಲ್ಲ ಹಲವು ವಿಧದ ಜ್ಞಾನಾರ್ಜನೆಯೇನು ? ಅದು ಅಲ್ಲ. ಯಾವ ಶಿಕ್ಷೆಯ ಮೂಲಕ ಇಚ್ಛಾಶಕ್ತಿಯು ವೇಗ ಸ್ಫೂರ್ತಿಗಳು ಆತ್ಮಾಧೀನವಾಗಿ ಫಲಿಸುವುದೋ ಅದೇ ಶಿಕ್ಷಣ. ಯಾವುದರ ಫಲವಾಗಿ ಈ ಇಚ್ಛಾಶಕ್ತಿಯು ಅನೇಕ ತಲಾಂತರಗಳಿಂದ ಬಲಾತ್ಕಾರವಾಗಿ ನಿರೋಧಿಸಲ್ಪಟ್ಟು ಈಗ ಮೃತಪ್ರಾಯವಾಗಿರುವುದೋ ಅದು ಶಿಕ್ಷಣವೆ ನೀವೇ ಆಲೋಚಿಸಿರಿ ? ಯಾವುದರ ಪ್ರಭುತ್ವದಲ್ಲಿ ನೂತನ ಭಾವಗಳ ಮಾತೆ ದೂರವಾಗಿವೆಯೊ, ಇನ್ನು ಪುರಾತನ ಭಾವಗಳು ಕೂಡ ಒನ್ನೊಂದಾಗಿ ಅದೃಶವಾಗುತ್ತ ಹೋಗುತ್ತಿವೆಯೋ, ಮತ್ತಾವುದು ಮನುಷ್ಯನನ್ನು ಯಂತ್ರಪ್ರಾಯನನ್ನಾಗಿ ಮಾಡಿರುವುದೋ ಅದೆಂತಹ ಶಿಕ್ಷಣ ? ಚಾಲಿತ ಯಂತ್ರದಂತೆ ಒಳ್ಳೆಯದಾಗಿರುವುದಕ್ಕಿಂತಲೂ ಸ್ವಾಧೀನ ಇಚ್ಛಾ ಶಕ್ತಿ, ಇವುಗಳ ಪ್ರೇರಣೆಯಿಂದ ದಾರಿತಪ್ಪಿ ಹೋಗುವುದು ಕಲ್ಯಾಣಕರ.

ಪುನಃ, ಮಣ್ಣಿನ ಮುದ್ದೆಗಳಂತೆಯೂ, ಚೈತನ್ಯಶೂನ್ಯವಾದ ಯಂತ್ರಗಳಂತೆಯೂ, ರಾಶಿ ಹಾಕಿದ ಕಲ್ಲುಗಳಂತೆಯೂ ಇರುವ ಮನುಷ್ಯರಿಂದ ತುಂಬಿದ ಸಮಷ್ಟಿಗೆ ಸಮಾಜವೆಂಬ ಹೆಸರು ಸಲ್ಲುವುದೇನು ? ಅಂತಹ ಸಮಾಜಕ್ಕೆ ಕಲ್ಯಾಣವೆಲ್ಲಿಯದು. ಕಲ್ಯಾಣ ಉಂಟಾಗಿದ್ದ ಪಕ್ಷದಲ್ಲಿ ಸಾವಿರಾರು ವರುಷಗಳಿಂದಲೂ ಗುಲಾಮಗಿರಿಯಲ್ಲಿ ನರಳದೆ ಜಗದಲ್ಲಿ ಸರ್ವೋತ್ಕೃಷ್ಟ ಜನಾಂಗವಾಗಿ, ವಿದ್ಯೆಯ ನಿತ್ಯ ಚಿಲುಮೆಯಾಗುತ್ತಿತ್ತು ಈ ಭಾರತಭೂಮಿ.

ಹಾಗಾದರೆ ಆತ್ಮತ್ಯಾಗ ಧರ್ಮವಲ್ಲವೇನು? ಓರ್ವನ ಸುಖವನ್ನು ಅನೇಕರಿಗಾಗಿ ತ್ಯಾಗ ಮಾಡುವುದು ಮಹಾ ಪುಣ್ಯಕಾರ್ಯವಲ್ಲವೇನು? ಸರಿ. ನಮ್ಮ ವಂಗ ಭಾಷೆಯ ನಾಣ್ಣುಡಿಯಂತೆ, ಉಜ್ಜಿ ತಿಕ್ಕುವದ ರಿಂದ ಅಂದವಾದೀತೆ? ಪ್ರಯತ್ನದಿಂದಲೂ ಬಲಾತ್ಕಾರದಿಂದಲೂ, ಪ್ರೀತಿ ಹುಟ್ಟುವುದೆ! ನಿತ್ಯ ತಿರುಕನ ತ್ಯಾಗದಲ್ಲಿರುವ ಮಹಿಮೆ ಏನು? ನಿರಿಂದ್ರಿಯನ ಇಂದ್ರಿಯ ನಿಗ್ರಹದಲ್ಲಿ ಪುಣ್ಯವೇನು? ಭಾವಹೀನ, ಹೃದಯಹೀನ, ಉಚ್ಚ ಆಶಾಹೀನ, ಸಮಾಜದಲ್ಲಿ ಇರುವದೇನು ಇಲ್ಲದೆ 'ಇರುವದೇನು ಎಂದು ತಿಳಿಯದ ಜ್ಞಾನಹೀನನ ತ್ಯಾಗವೆಂತಹುದು? ಬಲಾತ್ಕಾರವಾಗಿ ಸತಿ ಮಾಡಿಸುವದರಲ್ಲಿ ಆಕೆಯ ಪತಿ ಭಕ್ತಿ ಏನು? ಮೂಢ ನಂಬಿಕೆಯ ಮೂಲಕ ಜನರಿಂದ ಪುಣ್ಯ ಕೆಲಸಗಳನ್ನು ಏಕೆ ಮಾಡಿಸಬೇಕು? ಅವರನ್ನು ಸ್ವಾತಂತ್ರ್ಯರನ್ನಾಗಿ ಮಾಡಿ ಜನಗಳ ಬಂಧನಗಳನ್ನು ಸಾಧ್ಯವಾದಷ್ಟು ಬಿಡಿಸಿ ಎಂದು ನಾನು ಹೇಳುವುದು. ಕೊಳೆಯಿಂದ ಕೊಳೆಯನ್ನು ತೊಳೆಯಲಾದೀತೆ? ಬಂಧನದಿಂದ ಬಂಧನ ವನ್ನು ಬಿಡಿಸಲಾಗುವದೆ? ಉದಾಹರಣೆ ಎಲ್ಲಿ? ಸಮಾಜದ ಹಿತಕ್ಕಾಗಿ, ಎಂದು ತಮ್ಮ ಸಮಸ್ತ ಸುಖವನ್ನು ತ್ಯಾಗ ಮಾಡುವಿರೋ, ಅಂದು ನಾವು ಬುದ್ಧರು, ಮುಕ್ತರು. ಆ ಗುರಿ ಬಹಳ ದೂರವಿದೆ. ಬಲಾತ್ಕಾರದ ಮೂಲಕ ಆ ಮಾರ್ಗಾವಲಂಬನೆಯು ಸಾಧ್ಯವಾದೀತೆ? ಅಹಾ! ನಿಸ್ವಾರ್ಥ ತ್ಯಾಗಕ್ಕೆ ಎಂತಹ ಉದಾಹರಣೆ ನಮ್ಮ ವಿಧವೆಯರು! ಅಹಾ! ಬಾಲ್ಯ ವಿವಾಹದ ಸವಿಯೆಷ್ಟು! ಇಂತಹ ರೀತಿ ಬೇರೊಂದುಂಟೆ? ಅಂತಹ ವಿವಾಹದಲ್ಲಿ ಗಂಡಹೆಂಡರಿಗೆ ಪ್ರೇಮವಿಲ್ಲದೆ ಮತ್ತೇನಿರುವುದು? ಇದೇ ಎಲ್ಲರ ಮಾತಿನ ಪಲ್ಲವಿ ಇಂದು. ಇನ್ನು ಯಾರ ಕೈ ಮೇಲಾಗು ವುದೋ ಆ ಪುರುಷರಿಗೆ ಆತ್ಮತ್ಯಾಗದ ಆವಶ್ಯಕತೆ ಕೊಂಚವೂ ಇಲ್ಲ. ಸೇವಾ ಧರ್ಮಕ್ಕಿಂತಲೂ ಮೇಲಾದುದು ಮತ್ತೊಂದುಂಟೆ? ಆದರೆ ಇದು ಬ್ರಾಹ್ಮಣರಿಗೆ ಅನ್ವಯಿಸುವುದಿಲ್ಲ—ಉಳಿದವರು ಮಾಡಲಿ! ನಿಜವೇ ನೆಂದರೆ, ನಮ್ಮ ದೇಶದಲ್ಲಿನ ತಾಯಿತಂದೆಗಳು, ಬಂಧುಬಳಗದವರು, ತಮ್ಮ ಸ್ವಾರ್ಥಕ್ಕಾಗಿ, ಸಮಾಜದಿಂದ ಅವಮಾನವನ್ನು ತಪ್ಪಿಸಿಕೊಳ್ಳು ವುದಕ್ಕಾಗಿ ಸುಮ್ಮನೆ ಇಲದೆ ಮಕ್ಕಳನ್ನು (ಹುಡುಗ ಹುಡುಗಿಯರನ್ನು)

ಎಲಿಕೊಡಬಲ್ಲರು. ಅನೇಕ ಶತಮಾನಗಳಿಂದಲೂ ಬಂದಿರುವ ಶಿಕ್ಷಣ ಅವರನ್ನು ನಿರ್ದಯರನ್ನಾಗಿ ಮಾಡಿ, ಈ ಕೆಲಸವನ್ನು ಮಾಡಲು ಬಹಳ ಸುಲಭವಾಗಿ ಮಾಡಿದೆ. ಯಾರು ವೀರನೋ ಆತನೇ ತ್ಯಾಗ ಮಾಡ ಬಲ್ಲ. ಹೇಡಿಯು ಚಾವಟಿಗೆ ಅಂಜಿ, ಒಂದು ಕೈಯ್ಯಿಂದ ಕಣ್ಣೊರಿಸಿ ಕೊಳ್ಳುತ್ತ ಮತ್ತೊಂದರಿಂದ ದಾನ ಮಾಡುತ್ತಾನೆ. ಇಂತಹ ದಾನ ದಿಂದ ಫಲವೇನು ? ವಿಶ್ವಪ್ರೇಮ ಬಹಳ ದೂರ. ವಿಶಯ ಸಸಿಗೆ ಬೇಲಿ ಹಾಕಿ ಕಾಪಾಡಬೇಕಷ್ಟೆ ! ಸ್ವಾರ್ಥವಿಲ್ಲದೆ ಒಂದು ವಸ್ತುವನ್ನು ಪ್ರೀತಿ ಸಲು ಕಲಿತರೆ, ಮುಂದೆ ಕ್ರಮವಾಗಿ ವಿಶ್ವಪ್ರೇಮವನ್ನು ಪಡೆಯಲು ಆಸೆ ಹುಟ್ಟಬಲ್ಲದು. ಒಂದು ಇಷ್ಟದೇವತೆಯ ಮೇಲೆ ಭಕ್ತಿ ಹುಟ್ಟಿದರೆ ಕ್ರಮವಾಗಿ ವಿರಾಟ ಬ್ರಹ್ಮನಲ್ಲಿ ಪ್ರೀತಿ ಹುಟ್ಟಬಲ್ಲದು.

ಆದುದರಿಂದ ಒಬ್ಬನಿಗಾಗಿ ಆತ್ಮತ್ಯಾಗ ಮಾಡುವುದಕ್ಕಾದರೆ, ಆಗ ಸಮಾಜಕ್ಕಾಗಿ ಆತ್ಮತ್ಯಾಗದ ಮಾತು ಸರಿ. ಅದಕ್ಕೆ ಮುಂಚೆ ಅಲ್ಲ—ಸಕಾಮದಿಂದ ನಿಶ್ಕಾಮ. ಮೊದಲು ಕಾಮವಿಲ್ಲದೆ ನಿಶ್ಕಾಮ ವೆಂದರೇನು ? ಅದರ ಅರ್ಥವೇನು ? ಕತ್ತಲು ಇಲ್ಲದೇಇದ್ದರೆ ಬೆಳಕು ಎಂಬುದಕ್ಕೆ ಅರ್ಥವೇನಾಗುತ್ತದೆ.

ಮೊದಲು ಸಕಾಮ. ಸಪ್ರೇಮ ಪೂಜೆ. ಸಣ್ಣದರ ಪೂಜೆ ಯಿಂದ ಮೊದಲು ಮಾಡಿ. ತರುವಾಯ ದೊಡ್ಡದು ತಾನಾಗಿಯೇ ಬರುವುದು.

ತಾಯೆ ! ತಮಗೆ ಚಿಂತೆ ಬೇಡ. ಬಿರುಗಾಳಿಯ ಪೆಟ್ಟು ದೊಡ್ಡ ಮರಕ್ಕೆ. "ಬೆಂಕಿಯನ್ನು ಕೆದಕುವುದರಿಂದ ಚೆನ್ನಾಗಿ ಉರಿಯುತ್ತದೆ" "ತಲೆಯ ಮೇಲೆ ಪೆಟ್ಟು ಬಿದ್ದರೆ ಹಾವು ಹೆಡೆ ಎತ್ತುವುದು" ಇತ್ಯಾದಿ. ಎಂದು ಹೃದಯದಲ್ಲಿ ಮಹಾ ವೇದನೆ ಉಂಟಾಗುವುದೋ, ಎಂದು ನಾಲ್ಕು ದಿಕ್ಕುಗಳಲ್ಲಿಯೂ ದುಃಖವೆಂಬ ಬಿರುಗಾಳಿ ಎದ್ದು ಬೀಸು ವುದೋ, ಎಂದು ಬೆಳಕು ಕಾಣದೆ ಹೋಗುವಂತೆ ತೋರುವುದೋ, ಎಂದು ಆಸೆ ಧೈರ್ಯ ಬತ್ತಿಹೋದಂತಿರುವುದೋ, ಆಗತಾನೆ ಈ ಮಹಾ ಆಧ್ಯಾತ್ಮಿಕ ಅಂದೋಲನದಲ್ಲಿ ಆಂತರಿಕ ಬ್ರಹ್ಮಜ್ಯೋತಿಯ ಸ್ಫೂರ್ತಿ ಮಿನುಗುವುದು. ಸುಖದಲ್ಲಿ ಹುಟ್ಟಿ, ಮಲ್ಲಿಗೆಯ ಹಾಸಿಗೆಯ ಮೇಲೆ

ಮಲಗಿ, ಒಂದು ತೊಟ್ಟು ಕಣ್ಣೀರನ್ನೂ ಸುರಿಸದೆ ಯಾರು ಬೆಳೆದು ದೊಡ್ಡವರಾಗಿರುವರು ? ಇಂತಹವರಲ್ಲಿ ಅಂತರ್ಗತವಾಗಿರುವ ಬ್ರಹ್ಮನನ್ನು ಯಾರು ಪ್ರಕಾಶಗೊಳಿಸಿರುವರು ? ಅಳುವುದಕ್ಕೆ ಏಕಮ್ಮ ಭಯ : ಅಳು. ಅತ್ತು, ಅತ್ತು, ಕಣ್ಣು ಚೊಕ್ಕಟವಾಗಿ ತರುವಾಯ ಒಳಗಣ್ಣು ತೆರೆಯುವುದು. ಆಗ ಮೆಲ್ಲನೆ ಮನುಷ್ಯ, ಪಶು, ಮರ ಎಂಬ ಬೇಧ ತೊಲಗಿ ಸರ್ವತ್ರ ಬ್ರಹ್ಮ ದರ್ಶನವಾಗುವದು.

ಸಮಂ ಪಶ್ಯನ್ ಹಿ ಸರ್ವತ್ರ ಸಮವಸ್ಥಿತಮೀಶ್ವರಂ||
ನ ಹಿ ನಸ್ತ್ಯಾತ್ಮನಾತ್ಮಾನಂ ತತೋ ಯಾತಿ ಪರಾಂ ಗತಿಂ||

ಈಶ್ವರನನ್ನು ಎಲ್ಲಾ ಕಡೆಯಲ್ಲೂ ಸಮವಾಗಿರುವಾತನೆಂದು ನೋಡಿ ತನ್ನಿಂದ ತನ್ನನ್ನು ಕೆಡಿಸಿಕೊಳ್ಳದೆ ಶ್ರೇಷ್ಠವಾದ ಗತಿಯನ್ನು ಹೊಂದುವನು.

ಅನವರತ ತಮ್ಮ ಹಿತಚಿಂತಕ
ವಿವೇಕಾನಂದ.

೯೮

ಬೇಲೂರು ಮಠ
೬ನೇ ಜುಲೈ ೧೯೦೧.

ನನಗೆ ವಿಷಯಗಳು ಅಕಸ್ಮಾತ್ತಾಗಿ ಬರುವವು. ನಾನು ಇಂದು ಬರೆಯುವ ಹುಚ್ಚಿನಲ್ಲಿರುವೆನು. ಅದಕ್ಕೆ ನಾನು ಮೊದಲು ಮಾಡಬೇಕೆಂದು ಇಚ್ಛಿಸುವದೆ ನಿನಗೆ ಕೆಲವು ಪಂಕ್ತಿಗಳನ್ನು ಬರೆಯುವುದು. ನನ್ನನ್ನು ತುಂಬಾ ಉದ್ವೇಗಪರನೆನ್ನುವರು. ನಾನು ತುಂಬಾ ಮನಸ್ಸಿಗೆ ಹಚ್ಚಿಕೊಳ್ಳುವೆನು. ಆದರೆ ಪ್ರಿಯ ಸೋದರಿ ಕ್ರಿಶ್ಚಿಯನ್ ನೀನು ಕೂಡ ಈ ಅಪಾಯದಿಂದ ಪಾರಾಗಿಲ್ಲ. ನಮ್ಮ ಒಬ್ಬ ಕವಿ ಹೀಗೆ ಹೇಳುವನು. "ಬೆಟ್ಟ ಹಾರಬಹುದು, ಬೆಂಕಿ ತಣ್ಣಗಾಗಬಹುದು, ಆದರೆ ಮಹಾ ಪುರುಷರ ಹೃದಯ ಮಾತ್ರ ಬದಲಾಗುವದಿಲ್ಲ." ನಾನು ಸಣ್ಣವನು, ತುಂಬಾ ಸಣ್ಣವನು. ಆದರೆ ನೀನು ದೊಡ್ಡವಳೆಂದು ನನಗೆ ಗೊತ್ತಿದೆ. ನಿನ್ನ ಹೃದಯ ವೈಶಾಲ್ಯತೆಯನ್ನು ನಾನು

ಯಾವಾಗಲೂ ಮೆಚ್ಚುವೆನು. ನಾನು ನಿನ್ನನ್ನು ಬಿಟ್ಟು ಉಳಿದವರೆಲ್ಲರ ವಿಷಯದಲ್ಲಿಯೂ ಕಾತರನಾಗುವೆನು. ನಾನು ನಿನ್ನನ್ನು ಜಗನ್ಮಾತೆಗೆ ಅರ್ಪಿಸಿರುವೆನು. ಅವಳೇ ನಿನ್ನ ರಕ್ಷಕಳು ಮಾರ್ಗದರ್ಶಕಳು. ಯಾವ ಅಪಾಯುವೂ ನಿನ್ನ ಹತ್ತಿರ ಬರಲಾರದು. ಯಾವದೂ ನಿನ್ನನ್ನು ಕ್ಷಣಕಾಲವಾದರೂ ನಿಲ್ಲಿಸಲಾರದು. ನನಗೆ ಇದು ಗೊತ್ತಿದೆ.

ಅನವರತವೂ ಭಗವಂತನಲ್ಲಿ ನಿನ್ನ

ವಿವೇಕಾನಂದ.

೯೯

ಬೇಲೂರು ಮಠ.
೩ನೇ ಸೆಪ್ಟೆಂಬರ್ ೧೯೦೧.

ಪ್ರಿಯ, . . . .

ಈ ಮಹಾ ಕಾರ್ಯದಲ್ಲಿ ನಾವೆಲ್ಲ ಸ್ವಲ್ಪಸ್ವಲ್ಪ ಕೆಲಸ ಮಾಡುವೆವು. ನಾನು ಸ್ಪ್ರಿಂಗ್ ಒತ್ತಿ ಹಿಡಿಯಲು ಯತ್ನಿಸುವೆ. ಆದರೆ ಏನಾದರೂ ಆಗುವುದು. ಅದು ಸಡಿಲವಾಗುವುದು. ನೋಡಿ, ಯೋಚನೆ ಜ್ಞಾಪಕ, ಬರೆಯುವುದು, ಎಲ್ಲಾ ಮೊದಲಾಗುವುದು.

ಈಗ ಮಳೆಯ ಸಮಾಚಾರ—ಈಗ ಚೆನ್ನಾಗಿ ಮಳೆ ಆಗಿದೆ. ಹಗಲು ರಾತ್ರಿ ಒಂದು ಪ್ರಳಯ. ಮಳೆ, ಮಳೆ, ಮಳೆ. ನದಿ ದಡ ಮೀರಿ ಹರಿಯುತ್ತಿದೆ. ಕೊಳ ಕಟ್ಟೆ ತುಂಬಿ ತುಳುಕಾಡುತ್ತಿದೆ. ಈಗತಾನೆ ಮಠದ ಆವರಣದೊಳಗೆ ನಿಂತ ನೀರನ್ನು ಹೊರಗೆ ಬಿಡಲು ಒಂದು ಚರಂಡಿ ಮಾಡುವುದಕ್ಕೆ ನಾನೂ ಸಹಾಯ ಮಾಡಿ ಬಂದಿರುವೆನು. ಮಳೆಯ ನೀರು ಹಲವು ಕಡೆ ಕೆಲವು ಅಡಿಗಳಷ್ಟು ನಿಂತಿರುವದು. ನನ್ನ ದೊಡ್ಡ ಕೊಕ್ಕರೆಗಂತೂ ಪರಮಾನಂದ. ಹಾಗೆಯೇ, ಬಾತಿಗೂ. ನನ್ನ ಪಳಗಿದ ಜಿಂಕೆಯ ಮರಿ ಮಠದಿಂದ ತಪ್ಪಿಸಿಕೊಂಡುಹೋಗಿ, ಅದನ್ನು ಹುಡುಕುವದಕ್ಕೆ ಕೆಲವು ದಿನ ತುಂಬಾ ಕಾತುರನಾಗಬೇಕಾಯಿತು. ದುರದೃಷ್ಟವಶಾತ್ ನೆನ್ನೆ ನನ್ನ ಬಾತೊಂದು ಸತ್ತಿತು. ಒಂದು ವಾರಕ್ಕಿಂತ ಹೆಚ್ಚು ಅದು ಉಸಿರಿಗೆ ಒದ್ದಾಡುತ್ತಿತ್ತು. ನನ್ನ

ವಿನೋದ ಪ್ರಿಯ ಸ್ವಾಮಿಗಳೊಬ್ಬರು "ಸ್ವಾಮಿ, ಬಾತಿಗೆ ಚಳಿ ಮಳೆಯಿಂದ ನೆಗಡಿ ಬರುವುದು, ಕಪ್ಪೆ ಸೀನುವುದು, ಆದರೆ ಈ ಕಲಿಯುಗದಲ್ಲಿ ಬಾಳಿ ಪ್ರಯೋಜನವಿಲ್ಲ!" ಎನ್ನುವರು.

ನನ್ನ ಒಂದು ಬಾತಿಗೆ ಪುಕ್ಕ ಉದುರಿಹೋಗುತ್ತಿತ್ತು. ಮತ್ತೆ ಯಾವ ದಾರಿಯೂ ಕಾಣದೆ, ಒಂದು ಟಬ್ಬು ನೀರಿನಲ್ಲಿ ಸ್ವಲ್ಪ ಕಾರ್ಬಾಲಿಕ್ ಆಸಿಡ್ ಹಾಕಿ ಸಾಯಲಿ, ಇಲ್ಲದೆ ಇದ್ದರೆ ಗುಣವಾಗಲಿ ಎಂದು ಬಿಟ್ಟೆ. ಈಗ ಅದು ಚೆನ್ನಾಗಿರುವುದು.

ನಿನ್ನ ವಿವೇಕಾನಂದ.

೧೦೦

ಕಾಶಿ.
೧೨ನೇ ಫೆಬ್ರವರಿ ೧೯೦೨

ನಿನಗೆ ಸರ್ವ ಶಕ್ತಿ ಪ್ರಾಪ್ತವಾಗಲಿ! ಜಗನ್ಮಾತೆಯೆ ನಿನ್ನ ಕೈಗಳಾಗಲಿ, ಮನಸ್ಸಾಗಲಿ! ಎದುರಿಸಲು ಅಸಾಧ್ಯವಾದ ಅನಂತ ಶಕ್ತಿಯನ್ನು, ಅದರೊಡನೆ ಸಾಧ್ಯವಾದರೆ ಅನಂತಶಾಂತಿ ಇವನ್ನು ನಿನಗಾಗಿ ಪ್ರಾರ್ಥಿಸುವೆನು.

ಶ್ರೀರಾಮಕೃಷ್ಣರಲ್ಲಿ ಸತ್ಯವೇನಾದರೂ ಇದ್ದರೆ, ಅವರು ನಿನ್ನನ್ನು ಸ್ವೀಕರಿಸಲಿ. ಅವರು ನನ್ನನ್ನು ಸ್ವೀಕರಿಸಿದಂತೆ; ಇಲ್ಲ, ಅದಕ್ಕಿಂತ ಸಾವಿರ ಪಾಲು ಹೆಚ್ಚಾಗಿ!

೧೦೧

ಬೇಲೂರು ಮಠ.
ಜೂನ್ ೧೯೦೨.

ಪ್ರಿಯ—

ನನ್ನ ದೃಷ್ಟಿಯಲ್ಲಿ ಜನಾಂಗ, ಸಂಪೂರ್ಣ ಬ್ರಹ್ಮಚರ್ಯದ ಆದರ್ಶವನ್ನು ಪಡೆಯುವುದಕ್ಕೆ ಮುಂಚೆ ವಿವಾಹದ ಪವಿತ್ರತೆ ಮತ್ತು ಅದರ ಅಚ್ಛೇದ್ಯತೆ ಇವುಗಳ ಮೂಲಕ ಮಾತೃಸ್ಥಾನಕ್ಕೆ ಹೆಚ್ಚು

ಗೌರವ ಕೊಡುವುದನ್ನು ಕಲಿಯಬೇಕು. ರೋಮನ್ ಕ್ಯಾಥೊಲಿಕ್ ಮತ್ತು ಹಿಂದೂಗಳಿಗೆ, ಮದುವೆಯು ಪವಿತ್ರವಾದುದೆಂದೂ, ಅದನ್ನು ಅಲ್ಲಗಳೆಯುವುದಕ್ಕೆ ಆಗುವುದಿಲ್ಲವೆಂದೂ, ತಿಳಿದುದರಿಂದ ವಿಶೇಷ ಶಕ್ತಿ ಯಿಂದ ಕೂಡಿದ ಸಂಯಮಿಗಳಾದ ಪುರುಷರು ಮತ್ತು ಸ್ತ್ರೀಯರುಗಳಿಗೆ ಜನ್ಮವಿತ್ತಿದೆ. ಅರಬ್ಬೀ ದೇಶೀಯರಿಗೆ ಮದುವೆ ಒಂದು ಕರಾರು. ಬಲವಂತದಿಂದ ಒಬ್ಬಳನ್ನು ಹೊಂದಿರುವುದು, ಇಚ್ಛೆ ಬಂದಾಗ ಅವಳನ್ನು ಅಲ್ಲಗಳೆಯಬಹುದು. ಅವರಲ್ಲಿ ಬ್ರಹ್ಮಚಾರಿ ಮತ್ತು ಬ್ರಹ್ಮಚಾರಿಣಿ ಯರ ಆದರ್ಶದ ಬೆಳವಣಿಗೆ ನಮಗೆ ಕಾಣುವದಿಲ್ಲ. ಆಧುನಿಕ ಬೌದ್ಧ ಧರ್ಮವು ಮದುವೆಯ ಆದರ್ಶವನ್ನೇ ಇನ್ನೂ ಮುಟ್ಟದ ಜನಾಂಗಗಳ ಮಧ್ಯದಲ್ಲಿ ಬಿದ್ದುದರಿಂದ—ಸಂನ್ಯಾಸಾಶ್ರಮವನ್ನು ಹಾಸ್ಯಾಸ್ಪದವನ್ನಾಗಿ ಮಾಡಿದೆ. ಆದುದರಿಂದ ಜಪಾನಿನಲ್ಲಿ ಮೊದಲು ವಿವಾಹವು (ಪರಸ್ಪರ ಅನುರಾಗ ಆಕರ್ಷಣೆಗಳನ್ನು ಉಳಿದು) ಒಂದು ಉತ್ತಮವಾದ ಪವಿತ್ರವಾದ ಆದರ್ಶವಾಗುವ ತನಕ ಹೇಗೆ ಪ್ರಖ್ಯಾತರಾದ ಭಿಕ್ಷು ಮತ್ತು ಭಿಕ್ಷುಣಿ ಗಳು ಆಗುತ್ತಾರೊ ನನಗೆ ತಿಳಿಯದು. ಜೀವನದ ಮಹಿಮೆ ಇರುವುದು ಸಂಯಮದಲ್ಲಿ ಎಂದು ನಿನಗೆ ಹೇಗೆ ಗೊತ್ತಾಗಿದೆಯೋ, ಹಾಗೆಯೇ ನನಗೂ ಕೂಡ, ಕೆಲವು ಆಜನ್ಮ ಬ್ರಹ್ಮಚರ್ಯ ವ್ರತವನ್ನು ಪಾಲಿಸುವವ ರಿಗೆ ಜನ್ಮವೀಯುವದಕ್ಕಾಗಿ ಬಹುಪಾಲು ಮಂದಿಗೆ ಈ ಮದುವೆಯ ಪವಿತ್ರತೆಯು ಆವಶ್ಯಕವೆಂದು ಗೊತ್ತಾಗಿದೆ. . . . .

ವಿವೇಕಾನಂದ.



# ಶ್ರೀ ರಾಮಕೃಷ್ಣಾಶ್ರಮದ ಪ್ರಕಟನೆಗಳು, ಮೈಸೂರು

| | | | |
|---|---|---|---|
| ಸ್ವಾಮಿ ವಿವೇಕಾನಂದ (ಕುವೆಂಪು) | ೩ | ೮ | ೦ |
| ಪತ್ರಮಾಲೆ | ೩ | ೦ | ೦ |
| ಶ್ರೀ ಶಾರದಾ ದೇವಿ | ೨ | ೦ | ೦ |
| ಶ್ರೀ ರಾಮಕೃಷ್ಣ | ೧ | ೮ | ೦ |
| ರಾಜಯೋಗ | ೨ | ೧೦ | ೦ |
| ಕರ್ಮಯೋಗ | ೧ | ೮ | ೦ |
| ಭಕ್ತಿಯೋಗ | ೧ | ೦ | ೦ |
| ತ್ರಿವೇಣೀ | ೧ | ೦ | ೦ |
| ಶ್ರೀ ಗುರುದೇವರ ವಚನಗಳು | ೧ | ೦ | ೦ |
| ವಿದ್ಯಾಭ್ಯಾಸ | ೦ | ೧೦ | ೦ |
| ಹಿಂದೂ ಧರ್ಮಸಾರ | ೦ | ೧೦ | ೦ |
| ವರ್ತಮಾನ ಭಾರತ | ೦ | ೧೦ | ೦ |
| ವಿವೇಕವಾಣಿ | ೦ | ೧೦ | ೦ |
| ನನ್ನ ಗುರುದೇವ | ೦ | ೮ | ೦ |
| ಚಿಕಾಗೊ ಉಪನ್ಯಾಸ | ೦ | ೬ | ೦ |
| ಆರತಿ | ೦ | ೪ | ೦ |
| ನನ್ನ ಜೀವನ ಮತ್ತು ಧ್ಯೇಯ | ೦ | ೪ | ೦ |
| ಈಶ್ವರಾನುರಾಗ | ೦ | ೪ | ೦ |
| ನೊಂದ ಜೀವಕ್ಕೆ ಭರವಸೆ | ೦ | ೪ | ೦ |
| ಭಾರತ ಮಹಿಳೆ | ೦ | ೪ | ೦ |
| ಕರ್ಮರಹಸ್ಯ | ೦ | ೪ | ೦ |
| ಸಾಧನ | ೦ | ೪ | ೦ |
| ಶಿವಶ್ಯಾಮ ನಾಮ | ೦ | ೨ | ೦ |
| ಶ್ರೀ ರಾಮಕೃಷ್ಣ ಲೀಲಾಪ್ರಸಂಗ (ಗುರುಭಾವ) | ೩ | ೦ | ೦ |
| ನಾಗಮಹಾಶಯ | ೧ | ೮ | ೦ |
| ದಿವ್ಯವಾಣಿ | ೨ | ೦ | ೦ |
| ಶ್ರೀ ರಾಮಕೃಷ್ಣ ವಚನಾಮೃತ ಭಾಗ ೧ | ೨ | ೦ | ೦ |
| ,, ,, ಭಾಗ ೨ | ೨ | ೦ | ೦ |
| Drig Drishya Viveka | ೨ | ೦ | ೦ |
| Mandukya Upanishad with Goudapada karika | ೮ | ೦ | ೦ |